ಅಂತರ ಭಾರತೀಯ ಪುಸ್ತಕ ಮಾಲೆ

# ಪ್ರೇಮಚಂದರ ಕಥೆಗಳು

ಸಂಪಾದಕ
ರಾಧಾಕೃಷ್ಣ
ಅನುವಾದ
ಶಾ. ಬಾಲುರಾವ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪ್ರೇಮಚಂದರು

ಹಿಂದೀ ಕಥಾಸಾಹಿತ್ಯ ಮಾಯಾಮಂತ್ರ, ಇಂದ್ರಜಾಲ, ಚಮತ್ಕಾರ, ವೈಚಿತ್ರ್ಯಗಳ ನಡುವೆ ತೊಳಲಾಡುತ್ತ ವಾಸ್ತವಿಕೆಯ ಸಾಕ್ಷಾತ್ಕಾರ ಮಾಡಲು ಹೆದರುತ್ತಿದ್ದ ಕಾಲ ಅದು. ಅಗರು-ಚಂದನದ ಕಂಪು ಸೂಸುವ ಉಪ್ಪರಿಗೆಗಳಲ್ಲಿ ಮುದ್ದು-ಪ್ರೀತಿಗಳ ಮೇಲೆ, ವಜ್ರ-ಮುತ್ತುಗಳ ಮೇಲೆ ಬೆಳೆದ ರಾಜಕುಮಾರಿಯರು ವಾಸಿಸುತ್ತಿದ್ದರು. ಪ್ರೀತಿಸುವುದು, ವಿರಹದಿಂದ ಗೋಳಾಡುವುದು ಇವುಗಳ ವಿನಹ ಪ್ರಪಂಚದಲ್ಲಿ ಬೇರೊಂದು ಕೆಲಸವೂ ಅವರಿಂದ ಸಾಧ್ಯವಿರಲಿಲ್ಲ. ಬಿಲ್ಲುಬಾಣ ಹಿಡಿದು ಕಟ್ಟಡವಿಯಲ್ಲಿ ಅಲೆದಾಡುವ ರಾಜಕುಮಾರರಿರುತ್ತಿದ್ದರು; ರಾಜಕುಮಾರಿಯರ ಪ್ರೀತಿಗೆ ಸಿಕ್ಕಿದ ಕಾರಣ ಅವರು ಅಸಂಭವವೆನಿಸುವ ಶೌರ್ಯವನ್ನು ಪ್ರದರ್ಶಿಸುತ್ತಿದ್ದರು. ನಾಯಕನ ಮಿತ್ರರೂ ನಾಯಕಿಯ ಸಖಿಯರೂ ತಮ್ಮ ಇಚ್ಛಾನುಸಾರ ಹೇಗೆಂದರೆ ಹಾಗೆ, ಯಾರದ್ದೆಂದರೆ ಅವರ ರೂಪಧಾರಣೆ ಮಾಡಿ, ದೂರದೂರದ ಪ್ರಯಾಣ ಕೈಗೊಂಡು ಪ್ರಿಯಪ್ರೇಯಸಿಯರ ಪ್ರೇಮಕ್ಕೆ ನೆರವಾಗುತ್ತಿದ್ದರು; ತಮ್ಮ ತಮ್ಮ ನಡುವೆಯೂ ಒಂದಿಷ್ಟು ಪ್ರೇಮ ನಡೆಸುತ್ತಿದ್ದರು. ರಹಸ್ಯಕಾರ್ಯಗಳನ್ನು ಮಾಡುವ ಭೀಮಕಾಯನಾದ ಒಬ್ಬ ಎದುರಾಳಿಯಿರುತ್ತಿದ್ದ. ಅವನು ತುಂಬ ಶಕ್ತಿಶಾಲಿ; ಅಷ್ಟೇ ಕುರೂಪಿ. ನಾಯಕಿಯನ್ನು ವಶಪಡಿಸಿಕೊಳ್ಳಲು ಅವನು ಅಸಾಧ್ಯವಾದಂತಹ ಕುಟಿಲತೆ, ಮೂರ್ಖತನಗಳನ್ನು ಪ್ರದರ್ಶಿಸಿ, ಕ್ರೂರವಾಗಿ ಅಟ್ಟಹಾಸ ಬೀರುತ್ತಿದ್ದ, ಅಲೀಫ್-ಲೈಲಾ, ಕಥಾಸರಿತ್ಸಾಗರ ಮತ್ತು ಪುರಾಣಗಳಲ್ಲಿನ ಪಾತ್ರಗಳು ತಮ್ಮ ಹೆಸರು, ರೂಪಗಳನ್ನು ಬದಲಿಸಿಕೊಂಡು ಸ್ವಪ್ನಲೋಕಕ್ಕೆ ಇಳಿದು ಬಂದು, ಯಾವ ಉದ್ದೇಶವೂ ಇಲ್ಲದೆ ಅಲೆದಾಡುತ್ತಿವೆಯೇನೋ ಎನ್ನುವಂತಿರುತ್ತಿತ್ತು. ಹಿಂದಿಯ ಓದುಗರು ಆ ಕಥೆಯನ್ನು ಓದಿ, ಒಂದು ಅದ್ಭುತ, ಅಸಂಭವ ವಾತಾವರಣವನ್ನು ಅನುಭವಿಸುತ್ತಿದ್ದರು; ಆದರೆ ಅವರಿಗೆ ಅವರಲ್ಲಿ ತಮ್ಮನ್ನು ತಾವು ಕಾಣುವುದಾಗಿರಲಿಲ್ಲ.

ಪ್ರೇಮಚಂದರು ತಮ್ಮ ಕಥೆಗಳೊಂದಿಗೆ ಹಿಂದೀ ಪ್ರಪಂಚಕ್ಕೆ ಬಂದದ್ದು ಇಂತಹ ಸಮಯದಲ್ಲಿ. ಅದರಿಂದ ವಾಸ್ತವಿಕತೆಯ ಕತ್ತಲಿನಲ್ಲಿ ಪ್ರಭಾತದ ಕಿರಣವೊಂದು ಬಂದಿಳಿಯಿತೇನೋ ಎಂಬಂತಾಯಿತು. ಕಲ್ಪನೆಯ ಕಣ್ಣ ಮುಂದೆ ಹಳ್ಳಿಯ ವಾಸ್ತವಿಕ

ಚಿತ್ರ ಮೂಡಿಬಂದಿತು. ಪಿತ ಎಳೆಯುತ್ತಿದೆ; ಕಬ್ಬಿನ ಸಸಿಗಳು ಹುಲುಸಾಗಿ ಬೆಳೆದು ದೊಡ್ಡದಾಗುತ್ತಿವೆ. ಹರಿದು ತೇಪೆ ಹಾಕಿದ ಸೀರೆಯುಟ್ಟ ರೈತ ಹೆಂಗಸೊಬ್ಬಳು ತಲೆಯ ಮೇಲೆ ದವಸ ತುಂಬಿದ ಕುಕ್ಕೆ ಹೊತ್ತು ಹಳ್ಳಿಯ ಬೀದಿಗಳಲ್ಲಿ ಹೋಗುತ್ತಿದ್ದಾಳೆ. ಅವಳ ಕಂಕುಳ ಮಗು ಹೊಲದಲ್ಲಿ ಬಳುಕುತ್ತಿರುವ ಬಟಾಣಿಯ ಗೊಂಚಲುಗಳನ್ನು ನೋಡನೋಡುತ್ತ ತಾನೂ ಬೆರಳನ್ನು ಹಾಗೆಯೇ ಬಳುಕಿಸುತ್ತದೆ. ಹಳ್ಳಿಯ ಸಾಹುಕಾರ ಕುದುರೆ ಹತ್ತಿ ಹೋಗುತ್ತಿದ್ದಾನೆ. ಶೇಖ್ ಜುಮ್ಮನ್ ಹಾಗೂ ದಮಡೀ ರಾಮರು ಯಾವದೋ ಪಡಸಾಲೆಯಲ್ಲಿ ಕುಳಿತು ಲೋಕ ವ್ಯವಹಾರದ ಬಗ್ಗೆ ಚರ್ಚೆ ಮಾಡುತ್ತಿದ್ದಾರೆ; ಎಂದೆಂದಿಗೂ ಮುಗಿಯದ ಚರ್ಚೆ ಅದು. ಮನೆಮನೆಯಿಂದಲೂ ಹಾಲು ಕರೆಯುವ ಶಬ್ದ, ಅಕ್ಕಿ ಕುಟ್ಟುವ ಶಬ್ದ ಕೇಳಿ ಬರುತ್ತಿದೆ. ಬೇಸಾಯ–ಕಂದಾಯ, ಸಾಲ–ಆಧಾರ, ರೈತ – ಸಾಹುಕಾರ, ಜಮೀನುದಾರ – ಅವನ ಜನ. ದುಃಖ ಅನುಭವಿಸುತ್ತ ಅದರಿಂದ ವಿಮುಕ್ತಿ ಪಡೆಯುವ ಕನಸು ಕಾಣುತ್ತಿರುವ, ಶಕ್ತಿ ದೌರ್ಬಲ್ಯಗಳೇ ಬೆಸೆದು ಆದ ಜೀವಂತ ಗ್ರಾಮೀಣ ಜನ. ದೃಢಸಂಕಲ್ಪ, ಅಜೇಯ ವಿಶ್ವಾಸಗಳೊಂದಿಗೆ ಆ ಜನ ಹೋರಾಡುತ್ತಿದ್ದಾರೆ; ಒಳಗಿಂದೊಳಗೇ ಮುರಿದುಬೀಳುತ್ತಿದ್ದಾರೆ. ಪ್ರೇಮಚಂದರ ಕಥೆಗಳು ಅಲೆಅಲೆಯಾಗಿ ಹೊರಬರುತ್ತಿದ್ದವು. ಅವುಗಳಲ್ಲೆಲ್ಲಾ ಎದ್ದು ಕಾಣುತ್ತಿದ್ದ ಒಂದು ಮಾತೆಂದರೆ ಗ್ರಾಮೀಣ ಜನಜೀವನ ಕ್ಷಯಿಸುತ್ತ ಹೋಗುತ್ತಿದೆ, ಸಮಾಜ ತತ್ತರಿಸುತ್ತಿದೆ, ದಾರಿದ್ರ್ಯದ ಮಹಾಸಾಗರ ನಮ್ಮನ್ನು ನುಂಗುತ್ತಿದೆ; ರೈತ ತನ್ನ ನಂಬಿಕೆಗೆ ಅನುಸಾರವಾಗಿ ತನ್ನನ್ನು ತಾನು ಉತ್ತಮಗೊಳಿಸಿಕೊಂಡು ಸುಖಿಯಾಗ ಬಯಸಿದ್ದಾನೆ. ಇಡೀ ಗ್ರಾಮೀಣ ಜೀವನ ಹಾಗೂ ಅದರ ವಾತಾವರಣ ಪ್ರೇಮಚಂದರ ಕಥೆಗಳಲ್ಲಿ ಚಿತ್ರಿತವಾದವು. 'ಹೌದು, ವಾಸ್ತವಿಕ ಕಥೆಯೆಂದರೆ ವಾಸ್ತವಿಕತೆಯದೇ ಆಗಿರುತ್ತದೆ' ಎಂದು ಉದ್ಗರಿಸುತ್ತ ಜನ ಅವನ್ನು ಆಶ್ಚರ್ಯದಿಂದ ಸ್ವೀಕರಿಸಿದರು.

ಪ್ರೇಮಚಂದರು ಉಪಾಧ್ಯಾಯ ವೃತ್ತಿ ಮಾಡುತ್ತಿದ್ದರು. ಆ ಕಾರಣದಿಂದಾಗಿ ಅವರ ಒಲವು ಸ್ವಾಭಾವಿಕವಾಗಿ ಆದರ್ಶವಾದ, ಚಾರಿತ್ರ್ಯ ನಿರ್ಮಾಣಗಳ ಕಡೆಗೇ ಇತ್ತು. ಅವರು ಮಹಾತ್ಮಾ ಗಾಂಧಿ, ಟಾಲ್‌ಸ್ಟಾಯ್‌ರಿಂದ ತುಂಬ ಪ್ರಭಾವಿತರಾಗಿದ್ದರು. ಆ ಕಾರಣದಿಂದಾಗಿ ಅವರ ಕಥೆಗಳಲ್ಲಿ ಸಾಮಾನ್ಯ ಭಾರತೀಯರೆಲ್ಲರಂತೆಯೇ ಪ್ರೇಮಚಂದರ ಹೃದಯದಲ್ಲಿಯೂ ಸ್ವಾತಂತ್ರ್ಯ ಬಂದೊಡನೆಯೇ ನಮ್ಮ ಸಮಸ್ತ ದುಃಖಗಳೂ ಅಳಿದು ಹೋಗುತ್ತವೆಂಬ ನಂಬಿಕೆ ಬೇರುಬಿಟ್ಟಿತ್ತು. ಗ್ರಾಮದ ಪಂಚಾಯಿತರ ಕೈಯಲ್ಲಿ ನ್ಯಾಯಾಧಿಕಾರ ಬಂದೊಡನೆಯೇ ಹಳ್ಳಿಯ ಜನ ನ್ಯಾಯತೀರ್ಮಾನ ಮಾಡತೊಡಗುತ್ತಾರೆ. ಪರಮೇಶ್ವರ ಬಂದು ಹಳ್ಳಿಯ ಪಂಚರಲ್ಲಿ ನೆಲೆಸುತ್ತಾನೆ ಎಂದು ಅವರು ಅಂದುಕೊಂಡಿದ್ದರು. ಆಮೇಲೆ ಪ್ರೇಮಚಂದರ ಒಲವು ಗಾಂಧೀವಾದದಿಂದ ಸರಿದು ಪ್ರಗತಿವಾದದ ಕಡೆಗೆ ತಿರುಗುವ ಕಾಲವೂ ಬಂದಿತು. ಅವರು ಇನ್ನೊಂದು ಸ್ವಲ್ಪ ದಿನ ಬದುಕಿದ್ದಿದ್ದರೆ ಪ್ರಪಂಚದ ಅತ್ಯಂತ ಮಹಾನ್ ಪ್ರಗತಿಶೀಲ ಲೇಖಕರೊಬ್ಬರು

ನಮಗೆ ದೊರೆಯುವಂತಾಗುತ್ತಿತ್ತು. 1926–27ರಲ್ಲಿ ಜನಿಸಿದ ಗೆನ್ನಾದಿ ಕಲಿನೋವಸ್ಕಿ ನಿಕೊಲಾಯಿ ವೊರೊನಾವ್ ಮತ್ತು ಯೂರಿ ಕಜಾಕೋವ್ ಅವರು ಇವತ್ತು ಸೋವಿಯತ್ ರಷ್ಯಾದಲ್ಲಿ ಬರೆಯುತ್ತಿರುವ ಮಾದರಿಯ ಕಥೆಗಳನ್ನೇ ಪ್ರೇಮಚಂದರು ಆ ಕಾಲದಲ್ಲಿ ಬರೆಯುತ್ತಿದ್ದರೆಂಬುದನ್ನು ನೆನೆದಾಗ ನಮಗೆ ಆಶ್ಚರ್ಯವಾಗುತ್ತದೆ. ಯೂರಿ ಕಜಾಕೋವ್ (ಜನನ:1927) ಒಂದು ಬೇಟೆ ನಾಯಿಯ ಕಥೆ ಬರೆದಿದ್ದಾರೆ; ಅದು ಪ್ರೇಮಚಂದರ ಒಂದು ನಾಯಿಯ ಕಥೆಯೊಂದಿಗೆ ಅದ್ಭುತವಾಗಿ ಹೋಲುತ್ತದೆ. 1930ರಲ್ಲಿ ಜನ್ಮವೆತ್ತಿದ ಸೋವಿಯತ್ ಲೇಖಕರಾದ ವಲೇರಿ ಓಸಿಪೋವ್ ಮತ್ತು ಅನಾತೋಲಿ ಕುಜನೋತ್ಸೋವ್ ಅವರು ಪ್ರೇಮಚಂದರು ಆ ಕಾಲದಲ್ಲಿ, ಅಂದರೆ ಅವರುಗಳಿನ್ನೂ ತಮ್ಮ ತಾಯಂದಿರ ಮಡಿಲಲ್ಲಿ ಅಳುವುದು, ನಗುವುದರ ವಿನಹ ಮಾನವಜಾತಿಯ ಯಾವ ಭಾಷೆಯನ್ನೂ ಅರಿಯದಿದ್ದ ಕಾಲದಲ್ಲಿ, ಬರೆಯುತ್ತಿದ್ದಂತಹ ಕಥೆಗಳನ್ನೇ ಇವತ್ತು ಬರೆಯುತ್ತಿದ್ದಾರೆ. ಇಂಗ್ಲಿಷ್ ಭಾಷಾ ಜನರಲ್ಲಿ ಪ್ರಭುತ್ವದ ಅಹಂಕಾರ ತುಂಬಿತ್ತು. ಅವರು ಭಾರತೀಯ ಭಾಷೆಗಳ ಮುಖಾಂತರ ಏಳಿಗೆಗೆ ಬರಬಯಸಿದ ಲೇಖಕರಿಗೆ ಉತ್ತೇಜನ ಕೊಡಲಿಲ್ಲ. ಅವರ ಅಂದಿನ ಆ ಉಪೇಕ್ಷೆ ಈಗಲೂ ಪ್ರಚಲನೆಯಲ್ಲಿದೆ. ಆದರೆ ರಷ್ಯಾ ಪ್ರೇಮಚಂದರನ್ನು ಆಶ್ಚರ್ಯವೆನಿಸುವ ಮಟ್ಟಿಗೆ ತನ್ನದಾಗಿಸಿಕೊಂಡಿತು. ಇವತ್ತು ಸಹ ರವೀಂದ್ರನಾಥ ಠಾಕೂರ್, ಪ್ರೇಮಚಂದ್, ಯಶಪಾಲ್ ಮತ್ತು ಖ್ವಾಜಾ ಅಹಮದ್ ಅಬ್ಬಾಸರ ಕಥೆಗಳ ಮುಖಾಂತರವೇ ತಮಗೆ ಭಾರತೀಯ ಜನಜೀವನದ ಇಣುಕು ನೋಟ ದೊರೆತಿದೆಯೆಂದು ಅಲ್ಲಿನ ಪ್ರಜ್ಞಾವಂತ ಜನ ಹೇಳುತ್ತಾರೆ.

ಆದರೆ ಪ್ರೇಮಚಂದರು ಬಹುಕಾಲ ಬದುಕಲಿಲ್ಲ. ಕೇವಲ ಐವತ್ತೈದು ವರ್ಷ, ಮೇಲೆ ಕೆಲವು ತಿಂಗಳು ಬದುಕಿದ್ದು, 1926ರ ಅಕ್ಟೋಬರ್ 8 ರಂದು ಈ ಪ್ರಪಂಚದಿಂದ ವಿದಾಯ ಪಡೆದರು. ಹಿಂದೀ ಸಾಹಿತ್ಯ ಜಗತ್ತಿನಲ್ಲಿ ಪ್ರೇಮಚಂದರಿಗೆ ಸಿಗಬೇಕಾದಷ್ಟು ಸನ್ಮಾನ ಅವರ ಜೀವನ ಕಾಲದಲ್ಲಿ ಸಿಗಲಿಲ್ಲವೆಂದೂ ನಾವು ಒಪ್ಪಬೇಕಾಗುತ್ತದೆ. ಅವರನ್ನು 'ಕಾದಂಬರೀ ಸಾಮ್ರಾಟ್' ಎಂದು ಕರೆಯುತ್ತಿದ್ದರೂ ಅವರಿಗೆ ದೊರೆತ ಮಹತ್ವ ಇಷ್ಟೀಟು ರಾಜನದಕ್ಕಿಂತ ಹೆಚ್ಚೇನೂ ಇರಲಿಲ್ಲ. ಅವರ ಕಾಲಾನಂತರವೇ ಜನ ಅವರ ಬಗ್ಗೆ ಉತ್ಸುಕತೆ ತೋರಿಸತೊಡಗಿದರು. ಅವರು ಇಲ್ಲದಾಗಲೇ ತೀರಾ ಉಚ್ಚ ಪೀಠವನ್ನು ಅವರಿಗೆ ನೀಡಲಾಯಿತು!

ಆ ಕಾಲದಲ್ಲಿ ಬಂಗಾಳದಲ್ಲಿ ಶರಚ್ಚಂದ್ರ ಚಟ್ಟೋಪಾಧ್ಯಾಯರೂ ಹಿಂದಿಯಲ್ಲಿ ಪ್ರೇಮಚಂದರೂ ತುಂಬ ಪ್ರಸಿದ್ಧರಾಗಿದ್ದರು. ಪ್ರೇಮಚಂದರು ತಮ್ಮ ಕಥೆಗಳಲ್ಲಿ ವ್ಯಕ್ತಿಗಳನ್ನು ಮುಂದಿಟ್ಟುಕೊಂಡು ಸಮಸ್ತ ಸಮಾಜ ಹಾಗೂ ತತ್ಕಾಲೀನ ಇತಿಹಾಸಗಳನ್ನು ಜೀವಂತರೂಪದಲ್ಲಿ ಚಿತ್ರಿಸುತ್ತಿದ್ದರೆ ಶರಚ್ಚಂದ್ರರು ತತ್ಕಾಲೀನ ಇತಿಹಾಸ ಸಮಾಜಗಳಿಂದ ವ್ಯಕ್ತಿಗಳನ್ನಾಯ್ದು ತಮ್ಮ ಕಥೆಗಳಲ್ಲಿ ಅವರ ಸುಖ–ದುಃಖ, ಅವರ ಮನಸ್ಸಿನ ಆಗುಹೋಗುಗಳನ್ನು ಬಿಡಿಸುವುದರಲ್ಲಿಯೇ ತಲ್ಲೀನರಾಗಿ ಬಿಡುತ್ತಿದ್ದರು. ಶರಚ್ಚಂದ್ರರು ಇದ್ದಕ್ಕಿದ್ದಂತೆ ಬಂಗಾಳೀ ಸಾಹಿತ್ಯದಲ್ಲಿ

ಪ್ರವೇಶ ಮಾಡಿ ಅದನ್ನು ಆವರಿಸಿಕೊಂಡರು. ಅವರು ಬಂಗಾಳೀ ಸಾಹಿತ್ಯದಲ್ಲಿ ಕಾಣಿಸಿಕೊಂಡದ್ದು ಒಂದು ದೊಡ್ಡ ಘಟನೆಯಾಗಿತ್ತು. ಬಂಗಾಳೀ ಜನ ಇದ್ದಕ್ಕಿದ್ದಂತೆ ಅವರನ್ನು ತಮ್ಮ ಮುಂದೆ ಕಂಡರು; ಸಂತೋಷದಿಂದ ಅವರನ್ನು ಅಂಗೈ ಮೇಲೆ ಕೂರಿಸಿಕೊಂಡು ಮೇಲೆತ್ತಿದರು. ಇದಕ್ಕೆ ವ್ಯತಿರಿಕ್ತವಾಗಿ ಹಿಂದೀ ಸಾಹಿತ್ಯದಲ್ಲಿ ಪ್ರೇಮಚಂದರ ಆಗಮನ ಒಂದು ಘಟನೆಯಂತಾಗಲಿಲ್ಲ. ಅವರು ತಮ್ಮ ನಿರಂತರ ಪ್ರಯತ್ನ, ಸತತ ಸಾಧನೆಗಳ ಮೂಲಕ ಸಾಹಿತ್ಯ ಜಗತ್ತಿನಲ್ಲಿ ಪ್ರತಿಷ್ಠಿತರಾದರು. ಪ್ರೇಮಚಂದರು ತಮ್ಮ ಮೊದಲ ಕಥಾಸಂಕಲನ 'ಸಪ್ತ ಸರೋಜ'ಕ್ಕೆ ಶರಚ್ಚಂದ್ರರಿಂದ ಮುನ್ನುಡಿ ಬರೆಸಲು ಆಸೆ ಪಟ್ಟಿದ್ದರೆಂದು ಹೇಳುತ್ತಾರೆ. ಅದಕ್ಕಾಗಿ ಅವರು ಕಲ್ಕತ್ತೆಗೆ ಪ್ರಯಾಣ ಮಾಡಿ ಶರಚ್ಚಂದ್ರರನ್ನು ಕಂಡರು. ಶರಚ್ಚಂದ್ರರು ಅವರ ಕಥೆಗಳನ್ನು ಓದಿಸಿ ಕೇಳಿ ಅವುಗಳಿಂದ ತುಂಬ ಪ್ರಭಾವಿತರಾಗಿ ಹೇಳಿದರಂತೆ – "ಬಂಗಾಳದಲ್ಲಿ ರವೀಂದ್ರರ ಹೊರತು ಬೇರೆ ಯಾರೂ ಇಂಥ ಕಥೆಗಳನ್ನು ಬರೆಯಲಾರರು. ಕನಿಷ್ಠ ನನಗಂತೂ ನಿಮ್ಮ ಕಥಾಸಂಗ್ರಹಕ್ಕೆ ಮುನ್ನುಡಿ ಬರೆಯುವ ಯೋಗ್ಯತೆಯಿಲ್ಲ".

ಪ್ರೇಮಚಂದರು ಹುಟ್ಟಿದುದು 1880ರ ಜುಲೈ 20 ರಂದು. ತಂದೆಯ ಹೆಸರು ಮುನಿಷಿ ಅಜಾಯಿಬ್ ಲಾಲ್. ಅವರು ಅಂಚೆ ಕಚೇರಿಯಲ್ಲಿ ಗುಮಾಸ್ತರಾಗಿದ್ದರು. ಮಾಮೂಲೀ ನೌಕರಿ, ಮಾಮೂಲೀ ಬೇಸಾಯ – ಎರಡೂ ಹೆಸರಿಗೆಷ್ಟೋ ಅಷ್ಟೇ. ಹಾಗೂ ಹೀಗೂ ಸಂಸಾರ ರಥ ನಡೆಯುತ್ತಿತ್ತು. ಸಂಸಾರ ನಿರ್ವಹಣೆಯಲ್ಲಿ ಬೇಸಾಯಕ್ಕಿಂತ ಹೆಚ್ಚಾಗಿ ನೌಕರಿಯೇ ಹೆಚ್ಚು ಉಪಯೋಗಕ್ಕೆ ಬರುತ್ತಿತ್ತು. ಪ್ರೇಮಚಂದರ ನಿಜವಾದ ಹೆಸರು ಧನಪತರಾಯರೆಂದು; ಪ್ರೀತಿಗೆ 'ನವಾಬ' ರೆಂದು ಅವರನ್ನು ಕರೆಯುತ್ತಿದ್ದರು. ಅವರು ಎಂಟು ವರ್ಷದವರಿದ್ದಾಗ ತಾಯಿ ತೀರಿಕೊಂಡರು. ತಾಯಿಯ ಪ್ರೀತಿಯ ಅಭಾವ ಅವರ ಮನಸ್ಸಿನಲ್ಲಿ ಬಲವಾಗಿ ಬೇರೂರಿತ್ತು. ತಮ್ಮ ಮಕ್ಕಳಿನ್ನೂ ಚಿಕ್ಕವರಿರುವಾಗಲೇ ತಾಯಂದಿರು ತೀರಿಕೊಂಡು ಆ ಮಕ್ಕಳು ತಬ್ಬಲಿಗಳಾಗುವ ಅವೆಷ್ಟು ಪಾತ್ರಗಳು ಅವರ ಕಥೆಗಳಲ್ಲಿ ಬರುತ್ತವೆ. ಉದಾಹರಣೆಗೆ ಈ ಸಂಗ್ರಹದ 'ಹಾಲಿನ ಋಣ' ('ದೂಧ್ ಕೀ ದಾವ್') ಕಥೆಯನ್ನು ನೋಡಬಹುದು.

ಏನೇ ಆಗಲಿ, ಬಾಲ್ಯ ಬಾಲ್ಯವೇ. ಬಾಲ್ಯದ ಜಗತ್ತೇ ಬೇರೆ ತರನಾದುದು. ಅಭಾವ ಬಂದು ಮುತ್ತುತ್ತದೆ; ಸ್ವಭಾವ ಅದರೊಡನೆ ಸೆಣಸಿ ಗೆಲ್ಲುತ್ತದೆ. ಪ್ರೇಮಚಂದರು ಬಾಲ್ಯದಲ್ಲಿ ಕಡಿಮೆ ತುಂಟರೇನೂ ಆಗಿರಲಿಲ್ಲ. ಅವರು ಮಾವಿನಮರದಲ್ಲಿ ಕಾಯಿ ಮೂಡಿದಾಗ ತೋಪಿನಲ್ಲಿ ಕಲ್ಲು ಬೀರುತ್ತ ಓಡಾಡಿದ್ದಾರೆ; ಕರಡಿ ಆಡಿಸುವವರನು ಬಂದಾಗ ಅವನ ಹಿಂದೆ ಹಿಂದೆ ಹೋಗಿದ್ದಾರೆ. ಆಟಗಳಲ್ಲಿ ಚಿನ್ನಿ–ದಾಂಡು ಅವರಿಗೆ ಬಹು ಪ್ರಿಯವಾಗಿತ್ತು. ಒಮ್ಮೆ ಆಟದಲ್ಲಿ ಅವರು ಒಬ್ಬ ಜೊತೆಗಾರನ ಕಿವಿ ಕತ್ತರಿಸಿ ಹಾಕಿದರು; ಕೇಳಿದರೆ ಮುಗ್ಧತೆಯಿಂದ 'ನಾನು ಅವನಿಗೆ ಕ್ಷೌರ ಮಾಡ್ತಿದ್ದೆ, ಅಷ್ಟೆ' ಅಂದುಬಿಟ್ಟರು. ಇನ್ನೊಮ್ಮೆ ಮನೆಯಿಂದ ಪೂರಾ ಒಂದು ರೂಪಾಯಿ ಕದ್ದು ಜಾತ್ರೆ ನೋಡಲು ಹೋದರು. ಉರ್ದೂ ಪಾರಸಿ ಕಲಿಯುತ್ತಿದ್ದರು; ಬಟಾಣಿಯ ಹೊಲದಲ್ಲಿ ಅಲೆಯುತ್ತ ಮನಸ್ಸಿಗೆ ಬಂದಷ್ಟು ಕಾಳು ಬಿಡಿಸಿ ತಿನ್ನುತ್ತಿದ್ದರು; ಕಬ್ಬಿನ

ಜಲ್ಲಿ ಆಗಿಯುತ್ತಿದ್ದರು. ಮನೆಯಲ್ಲಿ ಅಜ್ಜಿ ಈ ತಬ್ಬಲಿಯ ಮೇಲೆ ತನ್ನೆಲ್ಲಾ ಪ್ರೀತಿಯನ್ನೂ ಮಳೆಗರೆದಿದ್ದಳು; ಬಗೆಬಗೆಯ ಕಥೆ ಹೇಳುತ್ತಿದ್ದಳು. ಪ್ರೇಮಚಂದರು ತಮ್ಮ ಕಥೆಗಳಲ್ಲಿ ಈ ಬಾಲ್ಯದ ದಿನಗಳನ್ನು ತುಂಬ ಸರಸವಾಗಿ ವರ್ಣಿಸಿದ್ದಾರೆ. ಲೇಖಕ ತಾನು ಬರೆಯುವುದೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ತನ್ನ ಬಗ್ಗೆಯೇ. ಪ್ರೇಮಚಂದರ ಕಥೆಗಳಲ್ಲಿ ಪಾತ್ರಗಳು ದೂರದ ಕ್ಷಿತಿಜದಿಂದ ಬಂದು, ಸ್ವಲ್ಪ ಸ್ವಲ್ಪವಾಗಿ ಪ್ರಕಟವಾಗುವುದಿಲ್ಲ; ಅವನ್ನು ಗುರುತಿಸಲು ನಮಗೆ ಹೊತ್ತು ಹಿಡಿಯುವುದಿಲ್ಲ. ಅವು ನೇರವಾಗಿ ಕಣ್ಣೆದುರಿಗೆ ಬಂದು ಕಾಣಿಸಿಕೊಳ್ಳುತ್ತವೆ; ಅವನ್ನು ಗುರುತಿಸುವುದು ನಮಗೆ ಕಷ್ಟವಾಗುವುದಿಲ್ಲ. ಯಾಕೆಂದರೆ ಪ್ರೇಮಚಂದರು ಬಹುಮಟ್ಟಿಗೆ ತಮ್ಮ ಅಂತಃಕರಣದಲ್ಲಿ ಸೇರಿಕೊಂಡಿರುವುದನ್ನೇ ಬರೆಯುತ್ತಾರೆ: ತಾವು ಕಂಡ ಜನ, ಅದೇ ಘಟನೆಗಳು, ಪರಿಸ್ಥಿತಿಗಳು, ಸ್ವತಃ ಅನುಭವಿಸಿದ ಯಥಾರ್ಥದ ಪುನರಾವರ್ತನೆ.

ಪ್ರೇಮಚಂದರು ಹದಿಮೂರು ವರ್ಷದ ವಯಸ್ಸಿನಲ್ಲಿ ಉರ್ದೂವಿನ ಇಂದ್ರಜಾಲದ ಕಾದಂಬರಿಗಳನ್ನು ಓದತೊಡಗಿದರು. ಆ ಕಾಲದಿಂದಲೇ ಅವರ ಮನಸ್ಸಿನಲ್ಲಿ ಸಾಹಿತ್ಯದ ಬಗ್ಗೆ ಪ್ರೀತಿ ಬೆಳೆಯಿತು. 1898ರಲ್ಲಿ ಅವರು ಮೆಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಚುನಾರ್‌ನ ಲಂಡನ್ ಮಿಷನ್ ಸ್ಕೂಲಿನಲ್ಲಿ ಉಪಾಧ್ಯಾಯರಾದರು. ಆಮೇಲೆ ಸರಕಾರೀ ನೌಕರಿ ಸೇರಿ ಬಹರಾಯಚ್‌ನಲ್ಲಿ ಶಿಕ್ಷಕರಾದರು. ಆಮೇಲೆ ಕೆಲ ತಿಂಗಳ ಮೇಲೆ ಅವರಿಗೆ ಪ್ರತಾಪಗಢಕ್ಕೆ ವರ್ಗವಾಯಿತು. ಅವರು ತಮ್ಮ ಮೊದಲ ಕಾದಂಬರಿಯನ್ನು 1901ರಲ್ಲಿ ಬರೆದರು. ಅದು ಉರ್ದೂ ಕಾದಂಬರಿ; ಹೆಸರು 'ಅಸರಾರೇ ಮಅಬಿದ್' ('ದೇವಸ್ಥಾನದ ರಹಸ್ಯ'). ಆ ಕಾದಂಬರಿ ಬನಾರಸ್ಸಿನಿಂದ ಹೊರಡುತ್ತಿದ್ದ ವಾರಪತ್ರಿಕೆಯೊಂದರಲ್ಲಿ 1903ರಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು.

ಆದರೆ ಪ್ರೇಮಚಂದರಿಗೆ ಸಾಹಿತಿಯ ಪಟ್ಟ ದೊರೆತದ್ದು ಕಾನಪುರದಲ್ಲಿ. ಕಾಲ ಅವರನ್ನು ಕಾನಪುರಕ್ಕೆ ಕರೆತಂದಿತ್ತು. ಅಲ್ಲಿ ಮುನಿಷಿ ದಯಾನಾರಾಯಣ ನಿಗಮರು ಉರ್ದೂವಿನಲ್ಲಿ 'ಜಮಾನಾ' ಎಂಬ ಮಾಸಪತ್ರಿಕೆ ಹೊರಡಿಸುತ್ತಿದ್ದರು. ನಿಗಮರ ಜೊತೆ ಪ್ರೇಮಚಂದರ ಸ್ನೇಹವಾಯಿತು. ಆ ಕಾಲದಲ್ಲಿ ರವೀಂದ್ರನಾಥ ಠಾಕೂರರ ಕಥೆಗಳ ಇಂಗ್ಲಿಷ್ ಅನುವಾದವೊಂದು ಅವರ ಕೈಗೆ ಸಿಕ್ಕಿತು. ಆ ಕಾಲದಲ್ಲೇ, ಅಂದರೆ 1907ರಲ್ಲಿ, ಅವರು ತಮ್ಮ ಮೊದಲ ಕಥೆಯಾದ 'ಸಂಸಾರ್ ಕಾ ಸಬ್‌ಸೆ ಅನಮೋಲ್ ರತನ್' ('ಪ್ರಪಂಚದ ಅತ್ಯಮೂಲ್ಯ ರತ್ನ')ವನ್ನು ಬರೆದರು. ಆ ಕಥೆ 'ಜಮಾನಾ'ದಲ್ಲಿ ಅಚ್ಚಾಯಿತು. ಅದು ವಂಗಭಂಗ ವಿರೋಧ ಆಂದೋಲನದ ಕಾಲ. ಅದೇ ಕಾಲದಲ್ಲಿ ಪ್ರೇಮಚಂದರು ದೇಶಭಕ್ತಿ ಪೂರ್ಣವಾದ ಐದು ಕಥೆಗಳ ಒಂದು ಸಂಗ್ರಹವನ್ನು ಪ್ರಕಟಮಾಡಿದರು. ಸಂಗ್ರಹದ ಹೆಸರೇ 'ಸೋಜೇ ವತನ್' ('ದೇಶದ ದುಃಖ'). ಈ ಸಂಗ್ರಹ 1909ರಲ್ಲಿ ಪ್ರಕಾಶಿತವಾಯಿತು. ಪುಸ್ತಕ ಪ್ರಕಟವಾದ ಆರು ತಿಂಗಳ ಮೇಲೆ ಸರಕಾರ ಅವರ ಮೇಲೆ ಕೋಪದ ಮಳೆಗರೆಯಿತು. ಸರಕಾರೀ ನೌಕರಿಯೇನೋ ಹೇಗೋ ಉಳಿದುಕೊಂಡಿತು. ಆದರೆ 'ಸೋಜೇ ವತನ್'ದ ಪ್ರತಿಗಳೆಲ್ಲವನ್ನೂ

ಸರಕಾರ ಮುಟ್ಟುಗೋಲು ಹಾಕಿಕೊಂಡಿತು. ಇದಾದ ಮೇಲೆ ಅವರು ತಮ್ಮ ಹೆಸರನ್ನು 'ಪ್ರೇಮಚಂದ್' ಎಂದು ಇಟ್ಟುಕೊಂಡರು. ಈ ಹೊಸ ಹೆಸರಿನಲ್ಲಿ ಅವರ ಮೊದಲ ಕಥೆ ಪ್ರಕಟವಾದದ್ದು 1910ರಲ್ಲಿ; ಹೆಸರು 'ಬಡೇ ಘರ್ ಕೀ ಬೇಟಿ' ('ದೊಡ್ಡ ಮನುಷ್ಯರ ಮನೆಯ ಮಗಳು').

ನೌಕರಿಯ ಸಂಬಂಧದಲ್ಲಿ ಪ್ರೇಮಚಂದರು ಚುನಾರ್, ಮಹೋಟ, ಅಲಹಾಬಾದ್, ಕಾನಪುರ, ಬಸ್ತೀ, ಗೋರಖ್‌ಪುರ ಮುಂತಾದ ಸ್ಥಳಗಳಲ್ಲಿದ್ದರು. ಅವರಿಗೆ ಓಡಾಡುವ ಷೋಕಿ ಬಹಳ. ಅವರು ಒಮ್ಮೆ ಒಂದು ಪತ್ರದಲ್ಲಿ ತಮಗೆ ರೈಲ್ವೇ ಗಾರ್ಡ್ ಆಗಬೇಕೆಂದು ತುಂಬ ಆಸೆಯಿತ್ತು ಎಂದು ಬರೆದಿದ್ದರು. ಹಾಗಾಗಿದ್ದರೆ ಊರೂರು ಸುತ್ತುತ್ತಿರಬಹುದಾಗಿತ್ತು. ತರಹತರಹೆಯ ಜನರ ಭೇಟಿಯಾಗುತ್ತಿತ್ತು, ಹೊಸ ಹೊಸ ಪಾತ್ರಗಳು ಕಾಣಸಿಗುತ್ತಿದ್ದವು. ಅಸಹಯೋಗ ಆಂದೋಲನದ ಹೊತ್ತಿನಲ್ಲಿ ಅವರು ಗೋರಖ್‌ಪುರದ ನಾರ್ಮಲ್ ಸ್ಕೂಲಿನಲ್ಲಿದ್ದರು. ಅಲ್ಲಿ ಒಂದು ದಿನ ಅವರು ಮಹಾತ್ಮಗಾಂಧಿಯವರ ಭಾಷಣ ಕೇಳಿ ಪ್ರಭಾವಿತರಾಗಿ, ತಮ್ಮ ಇಪ್ಪತ್ತು ವರ್ಷಗಳ ನೌಕರಿಗೆ ತಿಲಾಂಜಲಿಯಿತ್ತು ಬನಾರಸ್ಸಿಗೆ ಬಂದು ನೆಲೆಸಿದರು; ಸಾಹಿತ್ಯ ಸೇವೆಯೊಂದನ್ನೇ ತಮ್ಮ ಬದುಕಿಗೆ ಆಧಾರವನ್ನಾಗಿ ಮಾಡಿಕೊಂಡರು. ಆದರೆ ಜೀವನೋಪಾಯಕ್ಕಾಗಿ ಸಾಹಿತ್ಯಕ್ಕೆ ಮೊರೆಹೋಗುವುದರಲ್ಲಿ ಅಂದೂ ಸುಖವಿರಲಿಲ್ಲ; ಇಂದೂ ಸುಖವಿಲ್ಲ. ಆದರೂ ಸಹ ಪ್ರೇಮಚಂದರ ಲೇಖನಿ ಅಡೆತಡೆಯಿಲ್ಲದೆ ಹರಿಯುತ್ತಿತ್ತು; ಕಥೆಗಳೂ ಕಾದಂಬರಿಗಳೂ ಒಂದೇ ಸಮನೆ ಅಚ್ಚಾಗುತ್ತ ಹೋದವು. ಅವರು ಕೆಲವು ನಾಟಕಗಳನ್ನೂ ಬರೆದರು. ಹಣವಂತೂ ಸಿಗಲಿಲ್ಲ; ಆದರೆ ಪ್ರಸಿದ್ಧಿ ಪ್ರಚಾರಗಳು ದೊರೆತವು. ಸರಕಾರ ಅವರಿಗೆ 'ರಾಯ್ ಬಹಾದ್ದೂರ್' ಬಿರುದನ್ನು ಕೊಡಲು ಅಪೇಕ್ಷಿಸಿತು. ಆದರೆ ಅವರು ಅದನ್ನು ತಿರಸ್ಕರಿಸಿದರು. ವಿದೇಶೀ ಸರಕಾರದಿಂದ ಸನ್ಮಾನ ಪಡೆಯುವುದು ಅವರಿಗೆ ರುಚಿಸಲಿಲ್ಲ.

ಪ್ರೇಮಚಂದರು ಬನಾರಸ್ಸಿನಲ್ಲಿ ಮುದ್ರಣಾಲಯ ತೆರೆದರು. 1930ರಲ್ಲಿ 'ಹಂಸ' ಎಂಬ ಮಾಸಪತ್ರಿಕೆಯನ್ನು ಹೊರಡಿಸಿದರು. 1932ರಲ್ಲಿ 'ಜಾಗರಣ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಆದರೆ ಮುದ್ರಣಾಲಯ, ಪತ್ರಿಕೆಗಳು ಅವರ ಪಾಲಿಗೆ ನಷ್ಟದ ಬಾಬತ್ತುಗಳೇ ಆಗಿದ್ದವು. ಒಂದು ಸಲ ವರ್ಷಕಾಲ ಸಿನಿಮಾ ಕ್ಷೇತ್ರದಲ್ಲೂ ಇದ್ದರು. ಅವರ ಒಂದೆರಡು ಚಲಚ್ಚಿತ್ರಗಳೂ ತಯಾರಾದವು. ಆದರೂ ಅವುಗಳಿಂದ ಪ್ರಯೋಜನವಾಗಲಿಲ್ಲ. ವಾಪಸು ಬನಾರಸ್ಸಿಗೆ ಬಂದರು. ಹೊಸ ಲೇಖಕರಿಗೆ ಅವರು ಮುಂದೆ ಬಂದು ಆಸರೆ ನೀಡುತ್ತಿದ್ದರು. ಪ್ರೇಮಚಂದರ 'ಹಂಸ' 'ಜಾಗರಣ'ಗಳು ಹಿಂದೀ ಜಗತ್ತಿಗೆ ಎಷ್ಟೋ ಮಂದಿ ಹೊಸ ಲೇಖಕರನ್ನು ತಂದುಕೊಟ್ಟವು.

ಸಾಹಿತಿಗಳಲ್ಲಿ ಎರಡು ಬಗೆ. ಒಂದು ಬಗೆಯವರು ಮಾನ್ಯತೆ ಪಡೆಯುತ್ತಾರೆ. ಆದರೆ ಜನಪ್ರಿಯರಾಗುವುದಿಲ್ಲ. ಇನ್ನೊಂದು ಬಗೆಯವರು ಜನಪ್ರಿಯರಾಗುತ್ತಾರೆ, ಆದರೂ ಅವರಿಗೆ ಮಾನ್ಯತೆ ಇರುವುದಿಲ್ಲ. ಆದರೆ ಪ್ರೇಮಚಂದರೊಬ್ಬರು ಮಾತ್ರ ಒಮ್ಮೆಲೇ ಜನಪ್ರಿಯತೆ, ಮಾನ್ಯತೆಗಳೆರಡನ್ನೂ ಪಡೆದ ಸಾಹಿತಿಯಾಗಿದ್ದರು.

ವೈಯಕ್ತಿಕವಾಗಿ ಪ್ರೇಮಚಂದರು ತುಂಬ ಸರಳ ಸ್ವಭಾವದವರು, ನಿಸ್ಪೃಹರು, ನಮ್ರರು, ನಿರಹಂಕಾರಿಗಳು, ಎಲ್ಲರೊಡನೆಯೂ ಬೆರೆಯುವವರು. ವ್ಯವಹಾರ, ಮಾತುಕತೆಗಳಲ್ಲಿ ಯಾವ ತರಹದ ತೋರಿಕೆಯೂ ಇಲ್ಲ. ಸಾಕ್ಷಾತ್ ಸರಳತೆಯ ಅವತಾರ. ಅವರ ಮಾತಿನ ಧಾಟಿ ರೈತಜನರ ಮಾತಿನಂತೆ ಸರಳ. ಅವರೊಡನೆ ಮಾತನಾಡುವಾಗ ಹಿಂದಿಯ ಮಹಾನ್ ಕಥೆಗಾರರೊಂದಿಗೆ ಮಾತನಾಡುತ್ತಿದ್ದೇವೆಂದೇ ಅನಿಸುತ್ತಿರಲಿಲ್ಲ. ಬೇಸಾಯ ಪಶುಪಾಲನೆಗಳ ಬಗ್ಗೆ ತುಂಬ ಸ್ವಾರಸ್ಯವಾಗಿ ಮಾತಾಡುತ್ತಿದ್ದರು. ಹಸುವನ್ನಂತೂ ಅವರು ಸಾಕಿಯೇ ಇದ್ದರು; ಆದರೆ ಬೇಸಾಯ ಷೋಕಿ ತೀರಿಸಿಕೊಳ್ಳುವುದು ಅವರಿಗೆ ಕಷ್ಟವಾಗಿತ್ತು. ಬರವಣಿಗೆಯ ಕೆಲಸವನ್ನಂತೂ ಅವರು ನಿಯಮದಂತೆ ಮಾಡುತ್ತಿದ್ದರು. 'ಐಡಿಯಾ'ದ ಚಿಂತೆಯಿಲ್ಲ; 'ಮೂಡ್'ನ ಬಂಧನವಿಲ್ಲ. ಸಮಯ ಸಿಕ್ಕಿತೆಂದರೆ ಸರಿ, ಲೇಖನಿಯೆತ್ತಿಕೊಂಡು ಬರೆಯಲು ಮೊದಲು ಮಾಡುವರು. ಎಲ್ಲಿ ನಿಲ್ಲಿಸಿದ್ದರೋ ಅಲ್ಲಿಂದ ಆರಂಭಿಸಿ, ಮುಂದಿನ ಕಥೆಯನ್ನು ಮುಂದುವರಿಸುವರು. ಬರೆಯುತ್ತಿರುವಾಗ ಯಾರಾದರೂ ಬಂದರೆಂದರೆ ಬರೆಯುವುದನ್ನು ನಿಲ್ಲಿಸಿ ಮಾತಿಗೆ ತೊಡಗುವರು. ಅವರು ಹೋದನಂತರ ನಿರ್ವಿಕಾರರಾಗಿ ಮತ್ತೆ ಬರೆಯಲು ತೊಡಗುವರು. ಪ್ರೇಮಚಂದರ ನಗೆ ತುಂಬಿದ ನಗೆ. ಮಾತು ಬಂದಾಗ ಅವರು ಸುಮ್ಮನೆ ನಗುತ್ತಿರಲಿಲ್ಲ; ಗೊಳ್ಳನೆ ನಗುತ್ತಿದ್ದರು.

ಈಗ ಪ್ರೇಮಚಂದರಿಲ್ಲ; ಅವರ ಸ್ಥಾನ ಖಾಲಿಯಾಗಿದೆ. ಅದು ಚಿರಕಾಲ ಶೂನ್ಯ ವಾಗಿಯೇ ಉಳಿಯುವುದೇನೋ ಅನಿಸುತ್ತದೆ.

ರಾಂಚಿ **ರಾಧಾಕೃಷ್ಣ**
14 ಫೆಬ್ರವರಿ 1972

# ಪರಿವಿಡಿ

# 1. ಮುರಿದ ಮನೆ

ಭೋಲಾ ಮಹತೋನ* ಮೊದಲ ಹೆಂಡತಿ ಸತ್ತು ಅವನು ಎರಡನೆಯ ಸಂಬಂಧ ಗೊತ್ತು ಮಾಡಿಕೊಂಡಾಗ ಮಗ ರಗ್ಘುವಿಗೆ ಕಷ್ಟದ ದಿನಗಳು ಮೊದಲಾದವು. ರಗ್ಘುವಿಗೆ ಆಗ ಕೇವಲ ಹತ್ತು ವರ್ಷ ವಯಸ್ಸು. ಹಳ್ಳಿಯಲ್ಲಿ ಮಜವಾಗಿ ಚಿನ್ನಿ-ದಾಂಡು ಆಡುತ್ತ ಓಡಾಡಿಕೊಂಡಿದ್ದವನು ಮಲತಾಯಿ ಬಂದೊಡನೆಯೇ ಬೀಸುವ ಕಲ್ಲಿಗೆ ಅಂಟಿಕೊಂಡಿರಬೇಕಾಗಿ ಬಂತು. ಪನ್ನಾ ರೂಪವತಿ; ರೂಪಕ್ಕೂ ಗರ್ವಕ್ಕೂ ಸೀರೆ – ರವಿಕೆಯ ನಂಟು. ಅವಳು ಕೈಯಾರೆ ಯಾವ ಕಷ್ಟದ ಕೆಲಸವನ್ನೂ ಮಾಡುತ್ತಿರಲಿಲ್ಲ. ಕೊಟ್ಟಿಗೆಯಲ್ಲಿ ಸಗಣಿ ಬಳಿಯುವವನೂ ರಗ್ಘುವೇ; ದನಗಳಿಗೆ ಹಿಂಡಿ – ಕಲಗಚ್ಚು ಕೊಡುವವನೂ ರಗ್ಘುವೇ. ರಗ್ಘುವೇ ಈಗ ಎಂಜಲ ಪಾತ್ರೆಗಳನ್ನೂ ತೊಳೆಯುತ್ತಿದ್ದ. ಈಗ ಭೋಲಾನ ಕಣ್ಣಿಗೆ ರಗ್ಘುವಿನ ದುರ್ಗುಣಗಳಷ್ಟೇ ಎದ್ದು ಕಾಣತೊಡಗಿದವು. ಭೋಲಾ ಹಿಂದಿನ ಕಾಲದ ಮರ್ಯಾದೆಗೆ ತಕ್ಕಂತೆ ಪನ್ನಾ ಹೇಳಿದುದೆಲ್ಲವನ್ನೂ ಕಣ್ಣು ಮುಚ್ಚಿಕೊಂಡು ಒಪ್ಪಿಕೊಳ್ಳುತ್ತಿದ್ದ. ರಗ್ಘೂ ಏನಾದರೂ ದೂರು ಹೇಳಿದರೆ ಅದಕ್ಕೆ ಗಮನವನ್ನೇ ಕೊಡುತ್ತಿರಲಿಲ್ಲ. ಇದರ ಫಲವಾಗಿ ರಗ್ಘೂ ದೂರು ಹೇಳುವುದನ್ನೇ ನಿಲ್ಲಿಸಬೇಕಾಯಿತು. ಯಾರ ಮುಂದೆಂದು ಗೋಳು ಹೇಳಿಕೊಳ್ಳುವುದು? ಅಪ್ಪನಷ್ಟೇ ಅಲ್ಲ, ಹಳ್ಳಿಗೆ ಹಳ್ಳಿಯೇ ಅವನಿಗೆ ಶತ್ರುವಾಗಿತ್ತು. "ಮಹಾ ಹಟಮಾರಿ ಹುಡುಗ. ಪನ್ನಳನ್ನು ಅರ್ಥವೇ ಮಾಡಿಕೊಳ್ಳೋಲ್ಲ. ಆ ಬಡಪಾಯಿ ಅವನನ್ನು ಮುದ್ದು ಮಾಡುತ್ತಾಳೆ, ಕುಡಿಯಲು, ತಿನ್ನಲು ಕೊಡುತ್ತಾಳೆ. ಇದು ಅದರ ಫಲ. ಬೇರೆ ಯಾವಳಾದರೂ ಆಗಿದ್ದರೆ ನಿಭಾಯಿಸೋಕ್ಕೆ ಆಗ್ತಿರಲಿಲ್ಲ. ಪನ್ನಾ ಸರಳ ಸ್ವಭಾವದವಳಾದ್ದರಿಂದ ಹೇಗೋ ನಿಭಾಯಿಸಿಕೊಂಡು ಹೋಗ್ತಿದಾಳೆ ಅಂತ ಅನ್ನಿ. ಬಲಶಾಲಿಗಳ ದೂರು ಅಂದರೆ ಎಲ್ಲರೂ ಕೇಳ್ತಾರೆ; ಮೆದುಕಲಿಗಳು ಗೋಗರೆದರೂ ಕೇಳೋರಿಲ್ಲ" ಎಂದು ಜನ ಆಡಿಕೊಳ್ಳತೊಡಗಿದರು. ರಗ್ಘುವಿನ ಮನಸ್ಸು ದಿನೇ ದಿನೇ ತಾಯಿಯಿಂದ ದೂರವಾಗುತ್ತ ಬಂತು. ಹೀಗೆಯೇ ಎಂಟು ವರ್ಷ ಕಳೆದುವು. ಒಂದು ದಿನ ಭೋಲಾನಿಗೆ ಸಾವಿನ ಕರೆ ಬಂತು.

---

* ಮಹತೋ - ಹಳ್ಳಿಯ ಯಜಮಾನನನ್ನು ಗೌರವಾತ್ಮಕವಾಗಿ ಸಂಬೋಧಿಸುವ ರೀತಿ.

ಪನ್ನಳಿಗೆ ನಾಲ್ಕು ಮಕ್ಕಳು – ಮೂರು ಗಂಡು, ಒಂದು ಹೆಣ್ಣು, ಖರ್ಚು ಒಂದು ಹೊರೆ, ಆದರೆ ಸಂಪಾದನೆ ಮಾಡುವವರು ಯಾರೂ ಇಲ್ಲ. ರಗ್ಘೂ ಇನ್ನು ಯಾಕೆ ಅವಳ ಮಾತು ಕೇಳುತ್ತಾನೆ! ಇದು ಗೊತ್ತಿದ್ದ ವಿಷಯವೇ. ಲಗ್ನ ಮಾಡಿಕೊಂಡು ಬೇರೆ ಇರುತ್ತಾನೆ. ಆ ಹೆಂಡತಿ ಬಂದು ಇದ್ದಿದ್ದೂ ಬೆಂಕಿ ಹೊತ್ತಿಸುತ್ತಾಳೆ. ಪನ್ನಳಿಗೆ ಎಲ್ಲೆಲ್ಲೂ ಕತ್ತಲೆಯೇ ಕಾಣಿಸುತ್ತಿತ್ತು. ಏನೇ ಆಗಲಿ, ಅವಳು ರಗ್ಘುವನ್ನು ಆಶ್ರಯಿಸಿಕೊಂಡು ಮನೆಯಲ್ಲಿರುವವಳಲ್ಲ. ಯಾವ ಮನೆಯಲ್ಲಿ ತಾನು ರಾಜ್ಯಭಾರ ಮಾಡಿದ್ದಳೋ ಅಲ್ಲಿ ಈಗ ಆಳಾಗಿ ದುಡಿಯುವುದಿಲ್ಲ. ಯಾವನನ್ನು ತನ್ನ ಆಳಂತೆ ಕಾಣುತ್ತಿದ್ದಳೋ ಅವನ ಕಡೆ ಮುಖವೆತ್ತಿ ನೋಡುವುದಿಲ್ಲ. ಎಷ್ಟೇ ಆದರೂ ತಾನು ರೂಪವತಿ, ವಯಸ್ಸು ಅಷ್ಟೇನೂ ಹೆಚ್ಚಲ್ಲ. ಯೌವನವಿನ್ನೂ ತುಂಬು ಬೀಸಿನಲ್ಲಿದೆ. ಏನು, ತಾನು ಇನ್ನೊಂದು ಸಂಸಾರ ಹೂಡಲಾರೆನೇ ? ಹೆಚ್ಚೆಂದರೆ ಜನ ನಗಬಹುದು. ನಕ್ಕರೆ ನಗಲಿ, ಅದಕ್ಕೆ ಯಾರು ಸೊಪ್ಪು ಹಾಕುತ್ತಾರೆ! ತನ್ನ ಕುಲದಲ್ಲಿ ಇಂಥದು ನಡೆದಿಲ್ಲವೆ? ಅದರಿಂದ ಮರ್ಯಾದೆ ಹೋಗುತ್ತದೆ ಎನ್ನುವುದಕ್ಕೆ ತಾನೇನು ಬ್ರಾಹ್ಮಣಿಳೆ, ಠಾಕೂರಳೆ? ಆ ಉಚ್ಚ ಜಾತಿಗಳಲ್ಲಾದರೆ ಮನೆಯೊಳಗೆ ಏನನ್ನು ಬೇಕಾದರೂ ಮಾಡಬಹುದು; ಹೊರಗೆ ಮಾತ್ರ ಮುಖಕ್ಕೆ ಪರದೆ ಕವಿದುಕೊಂಡು ಓಡಾಡಬೇಕು. ತಾನು ಜಗತ್ತಿಗೆ ಕಾಣುವಂತೆಯೇ ಇನ್ನೊಂದು ಮನೆ ಹೂಡುವುದು ಸಾಧ್ಯ ಅಂದ ಮೇಲೆ ರಗ್ಘುವಿಗೆ ಯಾಕೆ ಅಡಿಯಾಳಾಗಿರಬೇಕು ?

ಭೋಲಾ ಸತ್ತು ತಿಂಗಳಾಗಿತ್ತು. ಒಂದು ಸಂಜೆ ಪನ್ನಾ ಇದೇ ಯೋಚನೆಯಲ್ಲಿ ಮುಳುಗಿದ್ದಾಗ ಇದ್ದಕ್ಕಿದ್ದಂತೆ ಮಕ್ಕಳು ಮನೆಯಲ್ಲಿಲ್ಲವೆಂಬುದು ನೆನಪಾಯಿತು. ದನಕರುಗಳು ಮನೆಗೆ ಹಿಂದಿರುಗುವ ಹೊತ್ತು; ಹುಡುಗರಾರೂ ಅವುಗಳ ಕಾಲಿಗೆ ಸಿಗಬಾರದು. ಬಾಗಿಲ ಬಳಿ ಕುಳಿತು ಅವರನ್ನು ನೋಡಿಕೊಳ್ಳುವವರು ಯಾರಿದ್ದಾರೆ? ರಗ್ಘುವಂತೂ ತನ್ನ ಮಕ್ಕಳನ್ನು ಕುರುಡುಗಣ್ಣಿಂದಲೂ ನೋಡುವುದಿಲ್ಲ; ಒಮ್ಮೆಯಾದರೂ ನಗುತ್ತ ಮಾತಾಡಿಸುವುದಿಲ್ಲ. ಪನ್ನಾ ಮನೆಯಿಂದ ಹೊರಬಂದು ನೋಡಿದರೆ ರಗ್ಘೂ ಎದುರಿನ ಜೋಪಡಿಯಲ್ಲಿ ಕೂತು ಕಬ್ಬು ಕತ್ತರಿಸುತ್ತಿದ್ದಾನೆ. ಮೂವರು ಗಂಡುಮಕ್ಕಳೂ ಅವನ ಸುತ್ತ ಮುತ್ತಿಕೊಂಡಿದ್ದಾರೆ; ಚಿಕ್ಕ ಮಗಳು ಅವನ ಕೊರಳಿಗೆ ಜೋತುಬಿದ್ದು ಬೆನ್ನಿನ ಮೇಲೆ ಸವಾರಿ ಮಾಡಲು ಪ್ರಯತ್ನಿಸುತ್ತಿದ್ದಾಳೆ. ಪನ್ನಳಿಗೆ ತನ್ನ ಕಣ್ಣನ್ನು ತಾನೇ ನಂಬಲಾಗಲಿಲ್ಲ. ಇವತ್ತೇನು ಈ ಹೊಸದು! ತಮ್ಮ ತಂಗಿಯರೆಂದರೆ ತನಗೆ ಅದೆಷ್ಟು ಮೆಚ್ಚೆಂದು ಲೋಕಕ್ಕೆ ತೋರಿಸಹೊರಟಿದ್ದಾನೋ ಏನೋ! ಆದರೆ ಎದೆಯೊಳಗೆ ಚೂರಿಯಿದ್ದೇ ಇದೆ. ಅವಕಾಶ ಸಿಕ್ಕಿದರೆ ಪ್ರಾಣ ತೆಗೆದುಕೊಳ್ಳಲು ಹೇಸುವುದಿಲ್ಲ. ನಾಗರ, ಕಪ್ಪು ನಾಗರ! ಪನ್ನ ಕಠೋರ ಸ್ವರದಲ್ಲಿ ಹೇಳಿದಳು – "ಇಲ್ಲಿ ಎಲ್ಲರೂ ಏನು ಮಾಡ್ತಿದೀರಿ. ನಡೀರಿ ಮನೇಗೆ. ಸಂಜೆಯಾಯ್ತು, ದನಕರು ಬರೋ ಹೊತ್ತು."

ರಗ್ಘೂ ಹೇಳಿದ – "ನಾನಿಲ್ಲೇ ಇರೋವಾಗ ಹೆದರಿಕೆ ಯಾತರದು. ಚಿಕ್ಕವ್ವ ?" ಅವನ ಕಣ್ಣಿನಲ್ಲಿ ವಿನಯ ತುಂಬಿತ್ತು.

ದೊಡ್ಡ ಹುಡುಗ ಕೇದಾರ ಹೇಳಿದ – "ಚಿಕ್ಕವ್ವ, ರಗ್ಘೂ ಅಣ್ಣ ನಮಗೆ ಅಂತ

ಎರಡು ಗಾಡಿ ಮಾಡಿದಾನೆ. ಇದು ನೋಡು. ಒಂದರ ಮೇಲೆ ನಾನೂ ಖುನ್ನೂ ಕೂತ್ಕೋತೀವಿ, ಇನ್ನೊಂದರ ಮೇಲೆ ಲಛ್‌ಮನ, ಝುನಿಯಾ ಕೂತ್ಕೊತಾರೆ. ಅಣ್ಣ ಎರಡು ಗಾಡೀನೂ ಎಳೀತಾನೆ."

ಹೀಗನ್ನುತ್ತ ಅವನು ಜೋಪಡಿಯ ಮೂಲೆಯಿಂದ ಎರಡು ಪುಟ್ಟ ಪುಟ್ಟ ಗಾಡಿಗಳನ್ನು ಹೊರತೆಗೆದು ತಂದ. ಅವಕ್ಕೆ ನಾಲ್ಕು ನಾಲ್ಕು ಗಾಲಿ ಜೋಡಿಸಿತ್ತು; ಕೂತುಕೊಳ್ಳಲು ಮೆತ್ತೆಗಳಿದ್ದವು; ಕೂತರೆ ಬೀಳದಂತೆ ಎರಡೂ ಕಡೆ ಪಕ್ಕಗಳಿದ್ದವು.

ಪನ್ನಾ ಆಶ್ಚರ್ಯದಿಂದ ಕೇಳಿದಳು – "ಈ ಗಾಡಿಗಳನ್ನು ಯಾರು ಮಾಡಿದರು ?"

ಕೇದಾರ ಸಿಡುಕಿ ಹೇಳಿದ – "ಮತ್ಯಾರು ? ರಗ್ಘೂ ಅಣ್ಣ, ಭಗತನ ಮನೆಯಿಂದ ಉಳಿ ಬಾಚಿ ಇಸಕೊಂಡು ಬಂದು, ಕಣ್ಣುಮುಚ್ಚಿ ಬಿಡೋದರಲ್ಲಿ ಮಾಡಿಕೊಟ್ಟ. ಚೆನ್ನಾಗಿ ಓಡುತ್ವೆ, ಚಿಕ್ಕವ್ವ ನೀ ಕೂತುಕೋ, ಖುನ್ನು. ನಾನು ಎಳೀತೀನಿ."

ಖುನ್ನೂ ಗಾಡಿಯಲ್ಲಿ ಕೂತುಕೊಂಡ. ಕೇದಾರ ಎಳೆಯತೊಡಗಿದ. ಗಾಡಿಯೂ ಮಕ್ಕಳ ಈ ಆಟದಲ್ಲಿ ಒಂದಾಗಿದೆಯೋ ಎಂಬಂತೆ ಚರಚರನೆ ಶಬ್ದ ಮಾಡತೊಡಗಿತು.

ಲಛ್‌ಮನ ಗಾಡಿಯಲ್ಲಿ ಕೂತುಕೊಂಡು ಹೇಳಿದ – "ಎಳೆಯಣ್ಣ".

ರಗ್ಘೂ ಝುನಿಯಾಳನ್ನೂ ಗಾಡಿಯಲ್ಲಿ ಕೂರಿಸಿ ಎಳೆದುಕೊಂಡು ಓಡಿದ. ಮೂವರು ಹುಡುಗರೂ ಚಪ್ಪಾಳೆ ತಟ್ಟತೊಡಗಿದರು. ಪನ್ನಾ ಚಕಿತಳಾಗಿ ಈ ದೃಶ್ಯವನ್ನು ನೋಡುತ್ತ ನಿಂತು 'ಇವನು ಅದೇ ರಗ್ಘುವೇ' ಎಂದು ಯೋಚಿಸತೊಡಗಿದಳು.

ಸ್ವಲ್ಪ ಹೊತ್ತಿನ ಮೇಲೆ ಗಾಡಿಗಳೆರಡೂ ವಾಪಸು ಬಂದವು. ಮಕ್ಕಳು ಮನೆ ತಲುಪಿ ತಮ್ಮ ಪ್ರಯಾಣದ ಅನುಭವವನ್ನು ವಿವರಿಸತೊಡಗಿದರು. ಅವರೆಲ್ಲರೂ ವಿಮಾನದಲ್ಲಿ ಹೋಗಿಬಂದರೋ ಎಂಬಷ್ಟು ಸಂತೋಷದಲ್ಲಿದ್ದರು.

ಖುನ್ನೂ ಹೇಳಿದ – "ಮರಗಳೆಲ್ಲಾ ಓಡ್ತಾ ಇದ್ದವು ಕಣ್ ಚಿಕ್ಕವ್ವ."

ಲಛ್‌ಮನ – "ಕರುಗಳು ಹೇಗೆ ಓಡಿದವು ? ಎಲ್ಲವೂ ಓಟ ಕಿತ್ತವು."

ಕೇದಾರ – "ಚಿಕ್ಕವ್ವ, ರಗ್ಘೂ, ಅಣ್ಣ ಎರಡು ಗಾಡೀನೂ ಒಂದೇ ಸಲ ಎಳೆದು ಬಿಡ್ತಾನೆ !"

ಝುನಿಯಾ ಎಲ್ಲರಿಗಿಂತ ಚಿಕ್ಕವಳು. ಅವಳ ವರ್ಣನಾಶಕ್ತಿ ಕುಣಿದು ಕುಪ್ಪಳಿಸಿ, ಕಣ್ಣಿನ ಮೂಲಕ ತೋರಿಸುವ ಮಟ್ಟಿಗೆ ಮಾತ್ರ ಸೀಮಿತವಾಗಿತ್ತು. ಅವಳು ಚಪ್ಪಾಳೆ ಬಡಿಯುತ್ತ ಕುಣಿಯತೊಡಗಿದಳು.

ಖುನ್ನೂ – "ಇನ್ನು ಮೇಲೆ ನಮಗೊಂದು ಹಸೂನೂ ಬರುತ್ತೆ ಚಿಕ್ಕವ್ವ. ನಮಗೊಂದು ಹಸು ತಂದುಕೊಡು ಅಂತ ರಗ್ಘೂ ಅಣ್ಣ ಗಿರಧಾರೀಗೆ ಹೇಳಿದಾನೆ. ಗಿರಧಾರಿ ನಾಳೆ ತರ್ತೀನಿ ಅಂದಿದಾನೆ."

ಕೇದಾರ – "ಮೂರು ಸೇರು ಹಾಲು ಕರೆಯುತ್ತಂತೆ, ಚಿಕ್ಕವ್ವ. ಚೆನ್ನಾಗಿ ಹಾಲು

ಕುಡಿಯೋಣ.''

ಇಷ್ಟರಲ್ಲಿ ರಗ್ಘೂ, ಒಳಗೆ ಬಂದ. ಪನ್ನಾ ಅವನನ್ನು ಅಟ್ಟಿಕೊಳ್ಳುವವಳಂತೆ ನೋಡುತ್ತ ಕೇಳಿದಳು – ''ಏನು ರಗ್ಘೂ, ನೀನು ಗಿರಿಧಾರೀಗೆ ಹಸು ತಂದುಕೊಡು ಅಂತ ಹೇಳಿದೀಯಾ ?''

ರಗ್ಘೂ ತಪ್ಪಿಗೆ ಕ್ಷಮೆ ಯಾಚಿಸುವವನಂತೆ ಹೇಳಿದ – ''ಹೌದು, ಹೇಳಿರೋದು ನಿಜ. ನಾಳೆ ತರ್ತಾನೆ.''

ಪನ್ನಾ – ''ಅದಕ್ಕೆ ಹಣ ಎಲ್ಲಿದೆ ಅಂತ ಏನಾದರೂ ಯೋಚಿಸಿದೀಯಾ ?''

ರಗ್ಘೂ – ''ಎಲ್ಲಾನ್ನೂ ಯೋಚಿಸಿದೀನಿ, ಚಿಕ್ಕವ್ವ. ಈ ಕಾಸಿನ ಸರ ಇಲ್ಲವೆ ? ಇದಕ್ಕೆ ಇಪ್ಪತ್ತೈದು ರೂಪಾಯಿ ಸಿಗುತ್ತೆ. ಕರುವಿನ ಕಡೆಗೆ ಮೇಲೆ ಐದು ರೂಪಾಯಿ ಕೊಟ್ಟು ಬಿಡ್ತೀನಿ. ಹಸು ನಮ್ಮದಾಗುತ್ತೆ.''

ಪನ್ನಾ ಮೂಕಳಾದಳು. ಅವಳ ವಿಶ್ವಾಸಹೀನವಾದ ಮನಸ್ಸು ಸಹ ರಗ್ಘುವಿನ ಪ್ರೀತಿ ಸೌಜನ್ಯಗಳನ್ನು ತಿರಸ್ಕರಿಸುವಂತಿರಲಿಲ್ಲ. ಅವಳಂದಳು – ''ಸರಾನ ಯಾಕೆ ಮಾರಬೇಕು ? ಹಸು ತರೋಕ್ಕೆ ಏನಷ್ಟು ಅವಸರ ? ಮುಂದೆ ಯಾವಾಗಲಾದರೂ ಕೈಯಲ್ಲಿ ಕಾಸಿದ್ದಾಗ ಕೊಂಡುಕೊಂಡರಾಯಿತು. ಕತ್ತು ಬೋಳುಬೋಳಾಗಿದ್ದರೆ ಚೆನ್ನಾಗಿ ಕಾಣೋಲ್ಲ. ಇದುವರೆಗೆ ಮನೇಲಿ ಹಸುವಿಲ್ಲದೆ ಮಕ್ಕಳು ಬದುಕಿಲ್ಲವೆ ?''

ರಗ್ಘೂ, ವೇದಾಂತಿಯಂತೆ ಹೇಳಿದ – ''ಮಕ್ಕಳು ಉಣ್ಣೋ ತಿನ್ನೋ ಕಾಲ ಇದು. ಈ ವಯಸ್ಸಿನಲ್ಲಿ ತಿನ್ನದೇ ಮತ್ತೆ ಯಾವಾಗ ತಿನ್ನಬೇಕು ? ನಾನು ಸರ ಹಾಕ್ಕೊಂಡು ಓಡಾಡೋದು ಸರಿಯಲ್ಲ. ಜನ ಏನಂದಾರು ? ಅಪ್ಪ ಸತ್ತ, ಮಗನಿಗೆ ಸರ ಹಾಕ್ಕೊಂಡು ಓಡಾಡಬೇಕು ಅಂತ ಅನ್ನಿಸಿದೆ ಅಂದಾರು.''

ಭೋಲಾ ಮಹತೋ ಹಸು ಕೊಳ್ಳುವ ಚಿಂತೆಯಲ್ಲಿಯೇ ಕಣ್ಣು ಮುಚ್ಚಿದ್ದ. ಕೊಳ್ಳಲು ಕೈಯಲ್ಲಿ ಹಣವಿಲ್ಲದೆ, ಸರಿಯಾದ ಹಸುವೂ ದೊರೆಯದೆ ಅವನು ಅಸಹಾಯನಾಗಿ ಹೋಗಿದ್ದ. ಆ ಸಮಸ್ಯೆಯನ್ನು ರಗ್ಘೂ ಎಷ್ಟು ಸುಲಭವಾಗಿ ಬಗೆಹರಿಸಿದ್ದ. ಇವತ್ತು ಪನ್ನಳಿಗೆ ಜೀವನದಲ್ಲಿ ಮೊದಲ ಬಾರಿಗೆ ರಗ್ಘುವಿನ ಮೇಲೆ ವಿಶ್ವಾಸ ಮೂಡಿತ್ತು. ಅವಳಂದಳು – ''ಒಡವೆ ಮಾರಲೇಬೇಕು ಅನ್ನೋದಾದರೆ ನಿನ್ನ ಸರ ಯಾಕೆ ಮಾರ್ತಿ ? ನನ್ನ ಅಡ್ಡಿಕೆ ತೊಗೊ''.

ರಗ್ಘೂ – ''ಇಲ್ಲ ಚಿಕ್ಕವ್ವ. ಅದು ನಿನ್ನ ಕತ್ತಲ್ಲಿ ಚೆನ್ನಾಗಿ ಕಾಣುತ್ತೆ. ಗಂಡಸರು ಒಡವೆ ಹಾಕ್ಕೊಂಡರೆಷ್ಟು, ಬಿಟ್ಟರೆಷ್ಟು ?''

ಪನ್ನಾ – ''ಅಯ್ಯೋ ಹೋಗೋ, ನಾನು ಮುದುಕಿಯಾದೆ. ಈಗ ನನಗೆ ಅಡ್ಡಿಕೆ ಹಾಕ್ಕೊಂಡು ಏನಾಗಬೇಕಾಗಿದೆ ? ನೀನಿನ್ನು ಹುಡುಗ. ನಿನ್ನ ಕತ್ತು ಬರಿದಾಗಿದ್ದರೆ ಚೆನ್ನಾಗಿ ಕಾಣೋಲ್ಲ.''

ರಗ್ಘೂ ನಸುನಗುತ್ತ ಹೇಳಿದ – ''ನೀನು ಎಂಥ ಮುದುಕಿ, ಚಿಕ್ಕವ್ವ ? ಈ ಹಳ್ಳೀಲಿ ನಿನ್ನಷ್ಟು ಚಂದಾಗಿರೋರು ಯಾರಿದಾರೆ ?''

ರಗ್ಘುವಿನ ಈ ಮುಗ್ಧ ಆಲೋಚನೆ ಪನ್ನಳನ್ನು ನಾಚಿಸಿತ್ತು. ಬಾಡಿ ಸೊರಗಿದ್ದ ಅವಳ ಮುಖ ಸಂತೋಷದಿಂದ ಕೆಂಪಾಯಿತು.

# 2

ಐದು ವರ್ಷ ಕಳೆಯಿತು. ರಗ್ಘುವಿನಂತಹ ನಂಬಿಕಸ್ಥ ದುಡಿಮೆಗಾರ ಹಾಗೂ ಆಡಿದಂತೆ ನಡೆಯುವ ಇನ್ನೊಬ್ಬ ರೈತ ಇಡೀ ಹಳ್ಳಿಯಲ್ಲಿಯೇ ಇರಲಿಲ್ಲ. ಪನ್ನಳ ಇಚ್ಛೆಗೆ ವಿರುದ್ಧವಾಗಿ ಅವನು ಏನನ್ನೂ ಮಾಡುತ್ತಿರಲಿಲ್ಲ. ಅವನಿಗೆ ಈಗ ಇಪ್ಪತ್ತುಮೂರು ವರ್ಷ ವಯಸ್ಸು. ಪನ್ನಾ ಮತ್ತೆ ಮತ್ತೆ ಹೇಳುತ್ತಿದ್ದಳು – "ಸೊಸೇನ ಮನೇಗೆ ಕರಕೊಂಡು ಬಾಪ್ಪ. ಎಷ್ಟು ದಿನಾ ಅವಳು ತವರಿನಲ್ಲಿರ್ತಾಳೆ. ಸೊಸೇನ ಕರಕೊಂಡು ಬರೋಕೆ ಇವಳು ಬಿಡೋಲ್ಲ ಅಂತ ಎಲ್ಲರೂ ನನ್ನ ಮೇಲೆ ಕೆಟ್ಟ ಹೆಸರು ಹೊರಸ್ತಾರೆ" ಆದರೆ ರಗ್ಘೂ ಏನಾದರೂ ನೆಪ ಒಡ್ಡುತ್ತಿದ್ದ. ಇಷ್ಟು ಬೇಗ ಏನು ಅವಸರ ಅಂದುಬಿಡುತ್ತಿದ್ದ. ಅವನಿಗೆ ಇತರರ ಮುಖಾಂತರ ತನ್ನ ಹೆಂಡತಿಯ ಸ್ವಭಾವ ಸ್ವಲ್ಪ ಪರಿಚಯವಾಗಿತ್ತು. ಅಂಥ ಹೆಂಗಸನ್ನು ಮನೆಗೆ ಕರೆದುಕೊಂಡು ಬಂದು ಸ್ವತಃ ತನ್ನ ಶಾಂತಿಯನ್ನು ಕೆಡಿಸಿಕೊಳ್ಳಲು ಅವನಿಗೆ ಇಷ್ಟವಿರಲಿಲ್ಲ.

ಕೊನೆಗೊಂದು ದಿನ ಪನ್ನಾ ಹಟಹಿಡಿದಳು – "ಏನು, ನೀನು ಕರಕೊಂಡು ಬರೋಲ್ವೆ ?"

"ಹೇಳಿದೆನಲ್ಲ, ಇಷ್ಟು ಬೇಗ ಏನು ಅವಸರ ಅಂತ."

"ನಿನಗೆ ಅವಸರ ಇಲ್ಲದೇ ಇರಬಹುದು. ಆದರೆ ನನಗೆ ಅವಸರ ಇದೆ. ನಾನು ಇವತ್ತು ಯಾರಾದರೂ ಜನ ಕಳಿಸಿ ಕರಸ್ತೀನಿ, ಬಿಡು."

"ಆಮೇಲೆ ಪಶ್ಚಾತ್ತಾಪಪಡ್ತಿ ನೋಡು, ಚಿಕ್ಕವ್ವ. ಅವಳ ಸ್ವಭಾವ ಚೆನ್ನಾಗಿಲ್ಲ"

"ಅದನ್ನ ಕಟ್ಟಿಕೊಂಡು ನಿನಗೇನು ? ನಾನು ಅವಳ ಕೂಡ ಬಾಯಿ ತೆಗೆಯೋಲ್ಲ ಅಂದ ಮೇಲೆ ಅವಳೇನು ಗಾಳಿ ಜೊತೆ ಜಗಳವಾಡ್ತಾಳೆಯೇ ? ಒಂದಿಷ್ಟು ರೊಟ್ಟಿಯಾದರೂ ಬಡೀತಾಳೆ. ಒಳ ಹೊರಗಿನ ಎಲ್ಲಾ ಕೆಲಸವೂ ನನ್ನೊಬ್ಬಳ ಕೈಯಲ್ಲಿ ಹರಿಯೋಲ್ಲ. ನಾನು ಇವತ್ತು ಅವಳಿಗೆ ಕರೆ ಕಳಸ್ತೀನಿ."

"ಕರಸಲೇಬೇಕು ಅನ್ನೋದಾದರೆ ಕರಸು. ಆಮೇಲೆ ಇವನು ಹೆಂಡತೀನ ತಿದ್ದಲಿಲ್ಲ, ಅವಳಿಗೆ ಗುಲಾಮನಾಗಿದಾನೆ ಅಂತ ಅನ್ನಬೇಡ, ನೋಡು".

"ಹಾಗ್ಯಾಕೆ ಅನ್ನಲಿ ? ಹೋಗಿ ಎರಡು ಸೀರೆ, ಮಿಠಾಯಿ ತಗೊಂಬಾ."

ಮಾರನೆಯ ದಿನ ಮುಲಿಯಾ ತವರಿನಿಂದ ಬಂದಳು. ಮನೆಯ ಮುಂದೆ ನಗಾರಿ ಬಡಿಯಿತು; ಸನಾದಿಯ ಮಧುರ ಧ್ವನಿ ಸುತ್ತಮುತ್ತಲೂ ಗುಂಜಿಸಿತು. ಗಂಡು ಹೆಣ್ಣು ಪರಸ್ಪರ ಮುಖ ನೋಡುವ ನಡವಳಿಕೆ ಆಯಿತು. ಮುಲಿಯಾ ಮರುಭೂಮಿಯಲ್ಲಿನ ನಿರ್ಮಲ ಜಲಧಾರೆಯಂತಿದ್ದಳು. ಗೋಧಿಯ ಬಣ್ಣ, ಹರಿತವಾದ ರೆಪ್ಪೆಗಳು, ಕೆನ್ನೆಗಳ ಮೇಲೆ ನಸುಗೆಂಪು, ಕಣ್ಣುಗಳಲ್ಲಿ ಪ್ರಬಲವಾದ ಆಕರ್ಷಣ ಶಕ್ತಿ – ರಗ್ಘೂ ಅವಳನ್ನು ನೋಡಿದೊಡನೆಯೇ ಮಂತ್ರಮುಗ್ಧನಾಗಿ ಹೋದ.

ಬೆಳಗಾಗಿ ನೀರಿನ ಗಡಿಗೆ ಹೊತ್ತು ಹೊರಟರೆ ಅವಳ ಗೋದಿಯ ಮೈಬಣ್ಣ ಪ್ರಭಾತದ ಹೊಂಗಿರಣದಲ್ಲಿ ಕುಂದಣವಿಟ್ಟಂತೆ ಕಾಣುತ್ತಿತ್ತು. ಉಷೆ ತನ್ನೆಲ್ಲ ಸುಗಂಧ, ವಿಕಾಸ, ಉನ್ಮಾದಗಳನ್ನು ಹೊತ್ತು ನಗುತ್ತ ಹೊರಟಿದ್ದಾಳೋ ಅನ್ನುವಂತಿರುತ್ತಿತ್ತು.

## 3

ಮುಲಿಯಾ ತವರಿನಿಂದ ಬರುವಾಗಲೇ ಕಾದ ಕೆಂಡವಾಗಿ ಬಂದಿದ್ದಳು. ತನ್ನ ಗಂಡ ಮೈಮುರಿಯ ದುಡಿಯಬೇಕು, ಪನ್ನಾ ರಾಣಿಯಂತೆ ಕೂತಿರಬೇಕು. ಅವಳ ಮಕ್ಕಳು ಶ್ರೀಮಂತಪುತ್ರರಂತೆ ಓಡಾಡಿಕೊಂಡಿರಬೇಕು. ಮುಲಿಯಾಳಿಗೆ ಇದನ್ನು ಸಹಿಸಲಾಗುತ್ತಿರಲಿಲ್ಲ. ಅವಳು ಯಾರ ಗುಲಾಮಗಿರಿಯನ್ನೂ ಮಾಡುವವಳಲ್ಲ. ಸ್ವಂತ ಮಕ್ಕಳೇ ನಮ್ಮವರಾಗುವುದಿಲ್ಲ, ಇನ್ನು ತಮ್ಮಂದಿರು ನಮ್ಮವರಾದಾರೆ ? ರೆಕ್ಕೆ ಬರುವವರೆಗೂ ರಗ್ಘುವಿನ ಸುತ್ತ ಮುತ್ತಿರುತ್ತಾರೆ. ವಯಸ್ಸಿಗೆ ಬಂದ ತಕ್ಷಣ ಕೊಡವಿಕೊಂಡು ಹೊರಟುಹೋಗುತ್ತಾರೆ. ಮಾತು ಸಹ ಕೇಳೋಲ್ಲ.

ಮುಲಿಯಾ ಒಂದು ದಿನ ರಗ್ಘುವಿಗೆ ಹೇಳಿದಳು – "ನಿಮಗೆ ಹೀಗೆ ಗುಲಾಮಗಿರಿ ಮಾಡಬೇಕೆನಿಸಿದರೆ ಮಾಡಿ, ನನ್ನಿಂದಂತೂ ಆಗೋಲ್ಲ."

ರಗ್ಘೂ – "ಏನು ಮಾಡಲಿ, ನೀನೇ ಹೇಳು. ಹುಡುಗರಿನ್ನೂ ಮನೆಗೆಲಸ ಮಾಡೋ ಅಷ್ಟು ಲಾಯಕ್ಕಾಗಿಲ್ಲ."

ಮುಲಿಯಾ – "ಹುಡುಗರು ದೊರೆ ಮಕ್ಕಳು, ನಿಮ್ಮವರೇನೂ ಅಲ್ಲವಲ್ಲ. ಇದೇ ಪನ್ನಾ ನಿಮಗೆ ಒಂದು ಕಾಳು ಅನ್ನ ಹಾಕದೆ ಉಪವಾಸ ಕೆಡವ್ತೋಳು. ನಾನೆಲ್ಲಾ ಕೇಳಿದೀನಿ. ನನಗಿಲ್ಲಿ ಹೆಣ್ಣಾಳಾಗಿ ಇರೋದು ಸಾಧ್ಯವಿಲ್ಲ. ಹಣಕಾಸಿನ ಒಂದು ಲೆಕ್ಕವೂ ನನಗೆ ಸಿಕ್ತಿಲ್ಲ. ನೀವು ಅದೇನು ತರ್ತೀರೋ, ಅವಳೇನು ಮಾಡ್ತಾಳೋ ಒಂದೂ ಗೊತ್ತಾಗೋಲ್ಲ. ಹಣವೆಲ್ಲಾ ಮನೇಲೇ ಇದೆ ಅಂತ ನೀವು ಅಂದುಕೊಂಡಿದೀರಿ. ನೋಡ್ತಿರಿ, ನಿಮಗೆ ಕುರುಡು ಕವಡೇನೂ ಸಿಗೋಲ್ಲ".

ರಗ್ಘೂ – "ಹಣಕಾಸನ್ನ ನಿನ್ನ ಕೈಲಿ ತಂದಿಡೋಕ್ಕೆ ಶುರು ಮಾಡಿದರೆ ಲೋಕ ಏನನ್ನುತ್ತೆ ಅದನ್ನಾದರೂ ಯೋಚಿಸು."

ಮುಲಿಯಾ – "ಲೋಕ ಬೇಕಾದ್ದು ಅನ್ನಲಿ. ಲೋಕಕ್ಕೇನೂ ನನ್ನನ್ನು ನಾನು ಮಾರಿಕೊಂಡಿಲ್ಲ. ನೋಡ್ತಿರಿ, ಒಲೆ ಸಾರಿಸಿ ಸಾರಿಸಿ ಕೈ ಹೀಗೇ ಕಪ್ಪಾಗೇ ಇರುತ್ತೆ. ನೀವು ಬೇಕಾದರೆ ನಿಮ್ಮ ತಮ್ಮಂದಿರಿಗಾಗಿ ಪ್ರಾಣಬಿಡಿ, ನಾನೇಕೆ ಪ್ರಾಣ ಕೊಡಲಿ ?"

ರಗ್ಘೂ ಏನೂ ಉತ್ತರ ಕೊಡಲಿಲ್ಲ. ಅವನು ಯಾವುದಕ್ಕೆ ಹೆದರಿದ್ದನೋ ಅದು ಇಷ್ಟು ಬೇಗನೆ ತಲೆಯ ಮೇಲೆ ಬಂದು ಕೂತಿತ್ತು. ತೂಗಿಸಿಕೊಂಡು ಹೋದರೆ ಇನ್ನೊಂದು ವರ್ಷ – ಆರು ತಿಂಗಳು ಹೀಗೆಯೇ ನಡೆಯಬಹುದೇನೋ, ಅಷ್ಟೆ. ಅಲ್ಲಿಂದಾಚೆಗೂ ಈ ದೋಣಿ ಹೀಗೆಯೇ ನಡೆಯುತ್ತಾ ಹೋಗುವುದೆಂಬ ಚಿಹ್ನೆ ಕಾಣಿಸುತ್ತಿರಲಿಲ್ಲ. ಕುರಿ ಎಲ್ಲಿಯವರೆಗೆ ಕ್ಷೇಮದಿಂದಿರುವುದು ಸಾಧ್ಯ !

ಒಂದು ದಿನ ಪನ್ನಾ ಅಂಗಳದಲ್ಲಿ ಕಾಳನ್ನು ಒಣಗಲು ಹಾಕಿದ್ದಳು. ಮಳೆಗಾಲ ಷುರುವಾಗಿತ್ತು. ಕಣಜದಲ್ಲಿ ಕಾಳಿಗೆ ತೇವ ಹತ್ತುತ್ತಿತ್ತು. ಸೊಸೆಗೆ ಹೇಳಿದಳು – "ಮಗೂ, ಸ್ವಲ್ಪ ನೋಡ್ಕೊತಿರು. ನಾನು ಕೆರೆಗೆ ಹೋಗಿ ಮೈತೊಳೆದು ಬರ್ತೀನಿ."

ಮುಲಿಯಾ ಉದಾಸೀನದಿಂದ ಉತ್ತರ ಕೊಟ್ಟಳು – "ನನಗೆ ನಿದ್ದೆ ಬರ್ತಿದೆ. ನೀವೇ ಕೂತುಕೊಂಡು ನೋಡ್ಕೊಳಿ. ಒಂದು ದಿನ ಮೈತೊಳೀದಿದ್ದರೆ ಏನಂತೆ?"

ಪನ್ನಾ ಕೆರೆಗೆ ಕೊಂಡು ಹೊರಟಿದ್ದ ಸೀರೆಯನ್ನು ಹಾಗೆಯೇ ತೆಗೆದಿಟ್ಟಳು. ಸ್ನಾನಕ್ಕೆ ಹೋಗಲಿಲ್ಲ. ಮುಲಿಯಳ ಏಟು ಗುರಿ ತಪ್ಪಿತು !

ಕೆಲ ದಿನಗಳ ಮೇಲೆ ಒಂದು ಸಂಜೆ ಪನ್ನಾ ಗದ್ದೆಯಲ್ಲಿ ಬೀಜ ಬಿತ್ತಿ ಹಿಂದಿರುಗಿದ್ದಳು. ಕತ್ತಲಾಗಿತ್ತು. ಇಡೀ ದಿನ ಹಸಿದಿದ್ದಳು. ಸೊಸೆ ರೊಟ್ಟಿ ಮಾಡಿಟ್ಟಿರುತ್ತಾಳೆಂದು ಆಸೆಯಿಂದಿದ್ದಳು. ನೋಡಿದರೆ ಮನೆಯಲ್ಲಿ ಒಲೆ ತಣ್ಣಗಾಗಿ ಕೂತಿದೆ. ಮಕ್ಕಳು ಹಸಿವಿನಿಂದ ತಳಮಳಿಸುತ್ತಿದ್ದಾರೆ. ಪನ್ನಾ ಮೃದುವಾಗಿ ಮುಲಿಯಳನ್ನು ಕೇಳಿದಳು – "ಇನ್ನೂ ಒಲೆ ಹಚ್ಚಿಲ್ಲವೆ ?"

ಕೇದಾರ ಬಾಯಿ ಹಾಕಿದ – "ಇವತ್ತು ಬೆಳಗ್ಗೆಯೂ ಒಲೆ ಹಚ್ಚಿರಲಿಲ್ಲ, ಚಿಕ್ಕವ್ವ. ಅತ್ತಿಗೆ ಇವತ್ತು ಅಡಿಗೇನೇ ಮಾಡಿಲ್ಲ."

ಪನ್ನಾ – "ಹಾಗಾದರೆ ನೀವೇನು ತಿಂದಿರಿ ?"

ಕೇದಾರ – "ಏನೂ ಇಲ್ಲ. ರಾತ್ರೀದು ಒಂದಿಷ್ಟು ರೊಟ್ಟಿ ಮಿಕ್ಕಿತ್ತು. ಖುನ್ನೂ ಲಛ್‌ಮನ ತಿಂದುಕೊಂಡರು. ನಾನು ಒಂದಿಷ್ಟು ತಂಬಿಟ್ಟು ತಿಂದೆ."

ಪನ್ನಾ – "ಸೊಸೆ ?"

ಕೇದಾರ – "ಅತ್ತಿಗೆ ಹಾಗೇ ಮಲಗೇ ಇದಾಳೆ. ಏನೂ ತಿಂದಿಲ್ಲ"

ಪನ್ನಾ ಆ ಕ್ಷಣ ಒಲೆ ಹೊತ್ತಿಸಿ ಅಡಿಗೆ ಮಾಡಲು ಕೂತಳು. ಹಿಟ್ಟು ಕಲಸುತ್ತ ಒಂದೇ ಸಮನೆ ಅಳತೊಡಗಿದಳು. ಇಡೀ ದಿನ ಗದ್ದೆಯಲ್ಲಿ ಉರಿದು ಮನೆಗೆ ಬಂದರೆ ಇಲ್ಲಿ ಒಲೆಯು ಮುಂದೆಯೂ ಉರಿಯುವುದು. ಇದೆಂತಹ ದುರದೃಷ್ಟ !

ಕೇದಾರನಿಗೆ ಹದಿನಾಲ್ಕನೆಯ ವರ್ಷ ನಡೆಯುತ್ತಿತ್ತು. ಅತ್ತಿಗೆಯ ವರ್ತನೆಯನ್ನು ನೋಡಿ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡಿದ್ದ. ಅವನಂದ – "ಚಿಕ್ಕವ್ವ, ಅತ್ತಿಗೇಗೆ ಇನ್ನು ನಿನ್ನ ಜೊತೆ ಇರೋಕೆ ಇಷ್ಟವಿಲ್ಲ"

ಪನ್ನಾ ಬೆಚ್ಚಿ ಬಿದ್ದು ಕೇಳಿದಳು – "ಯಾಕೆ, ಏನಾದರೂ ಹೇಳ್ತಿದ್ದಳೆ ?"

ಕೇದಾರ – "ಏನೂ ಹೇಳಲಿಲ್ಲ. ಆದರೆ ಅವಳ ಮನಸ್ಸಿನಲ್ಲಿರೋದು ಇದೇಯೇ. ನೀನು ಯಾಕೆ ಅವಳನ್ನು ಬಿಟ್ಟುಬಿಡೋಲ್ಲ. ಹೇಗೆ ಬೇಕೋ ಹಾಗಿರಲಿ. ನಮ್ಮ ಪಾಲಿಗೂ ದೇವರಿದಾನೆ."

ಪನ್ನಾ ತುಟಿ ಕಚ್ಚಿ ಹೇಳಿದಳು – "ಸುಮ್ಮನಿರು, ಮರೆತು ಸಹ ನನ್ನ ಮುಂದೆ ಹೀಗೆಲ್ಲಾ ಮಾತಾಡ್ಬೇಡ. ರಗ್ಘೂ ನಿಮ್ಮ ಅಣ್ಣನಲ್ಲ, ತಂದೆ. ಮುಲಿಯಳ ಜೊತೆ ಹೀಗೇನಾದರೂ ಮಾತನಾಡಿದೆ ಅಂದರೆ,ಚೆನ್ನಾಗಿ ತಿಳಕೋ, ನಾನು ವಿಷ ಕುಡಿದು ಸಾಯ್ತೀನಿ."

## 4

ದಸರಾ ಹಬ್ಬ ಬಂತು. ದಸರೆಯಲ್ಲಿ ಈ ಹಳ್ಳಿಗೆ ಸುಮಾರು ಕೋಸು ದೂರದಲ್ಲಿದ್ದ ಇನ್ನೊಂದು ಹಳ್ಳಿಯಲ್ಲಿ ಜಾತ್ರೆ ನಡೆಯುತ್ತಿತ್ತು. ಹಳ್ಳಿಯ ಹುಡುಗರೆಲ್ಲರೂ ಜಾತ್ರೆ ನೋಡಲು ಹೊರಟರು. ಪನ್ನಳೂ ಹುಡುಗರೊಡನೆ ಜಾತ್ರೆಗೆ ಹೋಗಲು ಸಿದ್ಧತೆ ಮಾಡಿಕೊಂಡಳು. ಆದರೆ ಖರ್ಚಿಗೆ ಹಣ ಎಲ್ಲಿಂದ ಬರಬೇಕು ? ಪೆಟ್ಟಿಗೆಯ ಬೀಗದ ಕೈ ಮುಲಿಯಳ ಕೈಲಿತ್ತು.

ರಗ್ಘೂ ಮುಲಿಯಳಿಗೆ ಹೇಳಿದ – "ಹುಡುಗರು ಜಾತ್ರೆಗೆ ಹೋಗ್ತಿದಾರೆ. ಎಲ್ಲರಿಗೂ ಎರಡೆರಡಾಣೆ ಕೊಡು."

ಮುಲಿಯಾ ಹುಬ್ಬು ಸಿಂಡರಿಸಿ ಹೇಳಿದಳು – "ದುಡ್ಡೆಲ್ಲಿದೆಯಂತೆ !"

ರಗ್ಘೂ – "ಮೊನ್ನೆ ಮೊನ್ನೆ ತಾನೇ ಎಣ್ಣೆ ಬೀಜ ಮಾರಿತಲ್ಲ, ಏನು ಇಷ್ಟು ಬೇಗ ದುಡ್ಡೆಲ್ಲಾ ಖರ್ಚಾಗಿ ಹೋಯ್ತು ?"

ಮುಲಿಯಾ – "ಹೌದು, ಖರ್ಚಾಗಿಹೋಯ್ತು."

ರಗ್ಘೂ – "ಎಲ್ಲಿ ಖರ್ಚಾಯಿತು ? ಇವತ್ತು ಹಬ್ಬ. ಹುಡುಗರು ಜಾತ್ರೆ ನೋಡೋಕ್ಕೆ ಹೋಗಬೇಡವೇ, ಹೇಳು ?"

ಮುಲಿಯಾ – "ನಿಮ್ಮ ಚಿಕ್ಕವ್ವಂಗೆ ಹೇಳಿ, ಕಾಸು ಬಿಚ್ಚು ಅಂತ. ಮುಚ್ಚಿಟ್ಟುಕೊಂಡು ಏನು ಮಾಡ್ತಾಳಂತೆ."

ಗೂಟದಲ್ಲಿ ಬೀಗದ ಕೈ ನೇತಾಡುತ್ತಿತ್ತು. ರಗ್ಘೂ ಅಲ್ಲಿಂದ ಬೀಗದ ಕೈ ಕಳಚಿ ಪೆಟ್ಟಿಗೆಯ ಬಾಗಿಲು ತೆಗೆಯಲು ಹೋದ. ಮುಲಿಯಾ ಅವನ ಕೈ ತಡೆದು ಹೇಳಿದಳು – "ಬೀಗದ ಕೈ ಇಲ್ಲಿ ಕೊಡಿ. ಇಲ್ಲದೇ ಹೋದರೆ ನೆಟ್ಟಗಿರೋಲ್ಲ, ನೋಡಿ. ಇವರ ಊಟ – ಬಟ್ಟೆಗೆ ಕೊಡಬೇಕು, ಕಾಗದ – ಪುಸ್ತಕಕ್ಕೆ ಕೊಡಬೇಕು, ಮೇಲೆ ಜಾತ್ರೆ ನೋಡೋಕ್ಕೂ ಕೊಡಬೇಕು. ಇನ್ನೊಬ್ಬರು ತಿಂದು ಮೀಸೆ ಹುರಿ ಮಾಡಿಕೊಂಡು ಓಡಾಡಲಿ ಅಂತ ಇದೆಯೋ ನಮ್ಮ ಸಂಪಾದನೆ !"

ಪನ್ನಾ ರಗ್ಘೂವಿಗೆ ಹೇಳಿದಳು – "ದುಡ್ಡಿಲ್ಲದೆ ಇದ್ದರೆ ಇಲ್ಲ. ಹುಡುಗರು ಜಾತ್ರೆ ನೋಡೋಕ್ಕೆ ಹೋಗೋದು ಬೇಡ, ಬಿಡು."

ರಗ್ಘೂ , ಗದರಿಕೆಯ ಧ್ವನಿಯಲ್ಲಿ ಹೇಳಿದ – "ಜಾತ್ರೆಗೆ ಹೋಗೋದು ಯಾಕೆ ಬೇಡ ? ಹಳ್ಳೀಗೆ ಹಳ್ಳೀನೇ ಹೋಗ್ತಿದೆ. ನಮ್ಮ ಹುಡುಗರು ಹೋಗೋದು ಬೇಡವೆ ?"

ಹೀಗೆಂದು ರಗ್ಘೂ ಕೈಬಿಡಿಸಿಕೊಂಡು ಸಂದೂಕದಿಂದ ಹಣ ತೆಗೆದು ಹುಡುಗರಿಗೆ ಕೊಟ್ಟ. ಮತ್ತೆ ಮುಲಿಯಳಿಗೆ ಬೀಗದ ಕೈ ಕೊಡಹೋದಾಗ ಅವಳು ಅದನ್ನು ಅಂಗಳಕ್ಕೆ ಎಸೆದು ಮುಖ ಮುಚ್ಚಿಕೊಂಡು ಮಲಗಿಕೊಂಡಳು. ಹುಡುಗರು ಜಾತ್ರೆ ನೋಡಲು ಹೋಗಲಿಲ್ಲ.

ಇದು ನಡೆದು ಎರಡು ದಿನವಾಯಿತು. ಮುಲಿಯಾ ಉಣ್ಣಲಿಲ್ಲ; ಪನ್ನಳೂ ಹಸಿದೇ ಇದ್ದಳು. ರಗ್ಘೂ, ಒಮ್ಮೆ ಚಿಕ್ಕವ್ವನನ್ನು, ಒಮ್ಮೆ ಹೆಂಡತಿಯನ್ನು ಸಂತೈಸಲು ಪ್ರಯತ್ನಿಸಿದ. ಇವಳೂ ಏಳಲೊಲ್ಲಳು; ಅವಳೂ ಏಳಲೊಲ್ಲಳು. ಕೊನೆಗೆ ಬೇಸತ್ತು ರಗ್ಘೂ, ಮುಲಿಯಾಳನ್ನು ಕೇಳಿದ – "ಬಾಯಿಬಿಟ್ಟು ಹೇಳಬಾರದೆ, ನಿನಗೆ ಏನು ಬೇಕು ಅಂತ ?"

ಮುಲಿಯಾ ನೆಲದ ಕಡೆ ನೋಡುತ್ತ ಯಾರಿಗೋ ಹೇಳುವಂತೆ ಹೇಳಿದಳು – "ನನಗೇನೂ ಬೇಡ. ನನ್ನನ್ನು ತವರಿಗೆ ಕರಕೊಂಡು ಹೋಗಿ ಬಿಡಿ."

ರಗ್ಘೂ –"ಒಳ್ಳೇದು, ಏಳು. ಉಣ್ಣೋಳು. ಕರಕೊಂಡು ಹೋಗಿ ಬಿಡ್ತೀನಿ".

ಮುಲಿಯಾ ರಗ್ಘುವಿನ ಕಡೆ ಕಣ್ಣೆತ್ತಿ ನೋಡಿದಳು. ರಗ್ಘೂ ಅವಳ ಮುಖ ನೋಡಿ ಹೆದರಿಬಿಟ್ಟ. ಆ ಮಾಧುರ್ಯ, ಆ ಮೋಹಕತೆ, ಆ ಲಾವಣ್ಯ ಎಲ್ಲವೂ ಮಾಯವಾಗಿದ್ದವು. ಹಲ್ಲುಗಳು ಹೊರಚಾಚಿದ್ದವು. ಕಣ್ಣುಗಳಲ್ಲಿ ಯಾವುದೋ ಶೂನ್ಯವಿತ್ತು, ಮೂಗಿನ ತುದಿ ಅದುರುತ್ತಿತ್ತು. ಮುಲಿಯಾ ಕಣ್ಣುಗಳನ್ನು ಕೆಂಡದಂತೆ ಕೆಂಪಾಗಿ ಮಾಡಿಕೊಂಡು ಹೇಳಿದಳು– "ಒಳ್ಳೇದು, ನಿಮ್ಮ ಚಿಕ್ಕವ್ವ ಈ ಸಲಹೆ ಕೊಟ್ಟಳೋ ? ಈ ಮಂತ್ರಾನ ಅವಳಿಂದ ಕಲಿತಿದ್ರೋ ? ನಾನೇನೂ ತಿಳಿಯದವಳು ಅಂದುಕೋಬೇಡಿ. ನಿಮ್ಮಿಬ್ಬರ ಎದೆಯ ಮೇಲೂ ಗಾಣ ಅರೆದೇನು. ಏನು ಯುಕ್ತಿ ನಡೆಸಿದೀರಿ ?"

ರಗ್ಘೂ – "ಒಳ್ಳೇದು, ಗಾಣ ಅರೆಯೋವಂತೆ. ಮೊದಲು ಎದ್ದು ಒಂದಿಷ್ಟು ಉಣ್ಣು. ಆಗ ಗಾಣ ಅರೆಯೋಕ್ಕೆ ಶಕ್ತಿ ಬರುತ್ತೆ !"

ಮುಲಿಯಾ –"ಇನ್ನು ಈ ಮನೆ ಬೇರೆ ಬೇರೆ ಆಗೋ ತನಕ ಬಾಯಲ್ಲಿ ಒಂದು ಹನಿ ನೀರು ಹಾಕ್ಕೋಲ್ಲ. ಸಾಕಷ್ಟು ಸಹಿಸಿದ್ದಾಯಿತು, ಇನ್ನು ನನ್ನಿಂದ ಸಹಿಸೋಕ್ಕಾಗೋಲ್ಲ."

ರಗ್ಘೂ ಮೂಕನಾದ. ಒಂದು ಕ್ಷಣ ಅವನ ಬಾಯಿಂದ ಮಾತು ಹೊರಡದಾಯಿತು. ಮನೆ ಒಡೆದು ಎರಡಾಗುವುದನ್ನು ಅವನು ಕನಸಿನಲ್ಲಿಯೂ ಕಲ್ಪಿಸಿರಲಿಲ್ಲ. ಒಂದೆರಡು ಸಂಸಾರಗಳು ಹೀಗೆ ಒಡೆದು ಬೇರೆ ಬೇರೆಯಾದುದನ್ನು ಅವನು ನೋಡಿದ್ದ. ಅಡಿಗೆಯ ಒಲೆ ಎರಡಾಗುವುದರ ಜೊತೆಗೇ ಜನರ ಮನಸ್ಸೂ ಎರಡಾಗುವುದೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ನಮ್ಮವರಾಗಿದ್ದವರು ಎಂದೆಂದಿಗೂ ಅನ್ಯರಾಗಿ ಬಿಡುತ್ತಾರೆ. ಅವರ ಜೊತೆಗಿನ ಸಂಬಂಧ ಹಳ್ಳಿಯಲ್ಲಿ ಇತರರ ಜೊತೆಗಿನ ಸಂಬಂಧದಷ್ಟೇ ಆಗಿಬಿಡುತ್ತದೆ. ಈ ವಿಪತ್ತು ಮನೆಯೊಳಗೆ ಕಾಲಿಡದಂತೆ ಮಾಡುತ್ತೇನೆಂದು ರಗ್ಘೂ ಮನಸ್ಸಿನಲ್ಲಿಯೇ ನಿಶ್ಚಯಿಸಿಕೊಂಡಿದ್ದ. ಆದರೆ ಏನು ಆಗಬೇಕಿತ್ತೋ ಅದರ ಮುಂದೆ ಅವನದೇನೂ ನಡೆಯಲಿಲ್ಲ. ಅಯ್ಯೋ, ನನಗೆ ಅಪಖ್ಯಾತಿ ಬರುತ್ತೆ. ಅಪ್ಪ ಸತ್ತ ಮೇಲೆ ಹತ್ತು ವರ್ಷ ಸಹ ಇವರಿಗೆ ಒಟ್ಟಾಗಿರುವುದಕ್ಕಾಗಲಿಲ್ಲ ಎಂದು ಲೋಕ ಅನ್ನುತ್ತೆ. ಈಗ ಬೇರೆಯಾಗುವುದಾದರೂ ಯಾರಿಂದ ? ಯಾರನ್ನು ತೊಡೆಯ ಮೇಲೆತ್ತಿ ಆಡಿಸಿದ್ದೆನೋ, ಯಾರನ್ನು ಮಕ್ಕಳಂತೆ ಪೋಷಿಸಿದ್ದೇನೋ, ಯಾರಿಗಾಗಿ ಬಗೆಬಗೆಯ ಕಷ್ಟಗಳನ್ನು ಸಹಿಸಿದ್ದೆನೋ ಅವರಿಂದ

ಬೇರೆಯಾಗುವುದೆ ? ತನಗೆ ಪ್ರಿಯರಾದವರನ್ನು ಮನೆಯಿಂದ ಹೊರಗಟ್ಟುವುದೆ ? ರಗ್ಘುವಿನ ಕಂಠ ಬಿಗಿಯಿತು. ಅವನು ನಡುಗುವ ಧ್ವನಿಯಲ್ಲಿ ಹೇಳಿದ – "ನಾನು ತಮ್ಮಂದಿರಿಂದ ಬೇರೆಯಾಗಬೇಕು ಅಂತ ನಿನ್ನಾಸೆಯೆ ? ಚೆನ್ನಾಗಿದೆ ಯೋಚನೆ ! ಆಮೇಲೆ ಯಾರಿಗಾದರೂ ಮುಖ ತೋರಿಸೋಕ್ಕಾಗುತ್ತೆಯೇ ?"

ಮುಲಿಯಾ – "ನನಗೆ ಇವರ ಜೊತೆ ನಿಭಾಯಿಸೋಕ್ಕೆ ಆಗೋಲ್ಲ".

ರಗ್ಘೂ – "ಹಾಗಾದರೆ ನೀನು ಬೇರೆ ಹೋಗು. ನಿನ್ನ ಜೊತೆ ನನ್ನನ್ನೂ ಯಾಕೆ ಎಳೀತಿದಿ ?"

ಮುಲಿಯಾ – "ನಿಮ್ಮ ಮನೇಲಿ ನನಗೇನು ಮಿಠಾಯಿ ತಿನ್ನಿಸ್ತಿದೀರ ? ಜಗತ್ತಿನಲ್ಲಿ ನನಗೆ ಇನ್ನೆಲ್ಲೂ ಜಾಗ ಇಲ್ಲವೆ ?"

ರಗ್ಘೂ – "ನಿನ್ನಿಷ್ಟ. ಎಲ್ಲಿ ಬೇಕೋ ಅಲ್ಲಿ ಹೋಗಿರು. ನಾನಂತೂ ನಮ್ಮ ಮನೆ ಮಕ್ಕಳಿಂದ ಬೇರೆಯಾಗೋಲ್ಲ. ಯಾವತ್ತು ಈ ಮನೇಲಿ ಎರಡು ಒಲೆ ಉರಿಯುತ್ತೋ ಅವತ್ತು ನನ್ನೆದೆ ಎರಡು ಹೋಳಾಗುತ್ತೆ. ಆ ಗಾಯಾನ ನನ್ನಿಂದ ಸಹಿಸೋಕ್ಕಾಗೋಲ್ಲ. ನಿನಗೇನಾದರೂ ಕಷ್ಟವಿದ್ದರೆ ಅದನ್ನ ದೂರ ಮಾಡಬಲ್ಲೆ. ಆಸ್ತಿಪಾಸ್ತಿಗೆ ನೀನೇ ಯಜಮಾನಿಯಾಗಿದಿ, ಕಾಳು ನೀರು ನಿನ್ನ ಕೈಯಲ್ಲಿದೆ. ಇನ್ನು ಉಳಿದಿರೋದಾದರೂ ಏನು ? ಕೆಲಸ ಬೊಗಸೆ ಮಾಡೋಕ್ಕೆ ಇಷ್ಟವಿಲ್ಲದಿದ್ದರೆ ಮಾಡಬೇಡ. ದೇವರು ನನಗೆ ಸಾಮರ್ಥ್ಯ ಕೊಟ್ಟಿದ್ದಿದ್ದರೆ ನಿನ್ನ ಕೈಯಲ್ಲಿ ಒಂದು ಹುಲ್ಲುಕಡ್ಡಿ ಸಹ ಎತ್ತಿಸ್ತಿರಲಿಲ್ಲ. ನಿನ್ನ ಈ ಹೂವಿನಂಥ ಕೈಕಾಲು ಕೂಲಿಗೆಲಸಕ್ಕೋಸ್ಕರ ಮಾಡಿದ್ದಲ್ಲ. ಆದರೆ ಏನು ಮಾಡಲಿ, ವಿಧಿಯಿಲ್ಲ. ಆದರೂ ಸಹ, ನಿನಗೆ ಏನಾದರೂ ಕೆಲಸ ಮಾಡೋಕ್ಕೆ ಮನಸ್ಸಿಲ್ಲದಿದ್ದರೆ ಮಾಡಬೇಡ. ಆದರೆ ನನ್ನನ್ನು ಮಾತ್ರ ಬೇರೆಯಾಗು ಅನ್ನಬೇಡ. ನಿನ್ನ ಕಾಲಿಗೆ ಬೀಳ್ತೀನಿ."

ಮುಲಿಯಾ ತಲೆಯಿಂದ ಸೆರಗು ಸರಿಸಿ, ಕೊಂಚ ಹತ್ತಿರ ಸರಿದು ಹೇಳಿದಳು – "ನಾನೇನೂ ಕೆಲಸಕ್ಕೆ ಹೆದರೋಳಲ್ಲ. ಸುಮ್ಮನೆ ಕೂತುಕೊಂಡು ತಿನ್ನೋದು ನನಗೇನೂ ಇಷ್ಟವಿಲ್ಲ. ಆದರೆ ನಾನು ಯಾರ ಜೋರನ್ನೂ ಸಹಿಸೋಳಲ್ಲ. ನಿಮ್ಮ ಚಿಕ್ಕವ್ವ ಮನೆಗೆಲಸ ಮಾಡ್ತಿದ್ದರೆ ತನಗೋಸ್ಕರ ಮಾಡ್ಕೋತಾಳೆ, ತನ್ನ ಮಕ್ಕಳಿಗೋಸ್ಕರ ಮಾಡ್ತಾಳೆ. ನನ್ನ ಉಪಕಾರಕ್ಕೇನೂ ಮಾಡೋಲ್ಲ. ಮತ್ತೆ ನನ್ನ ಮೇಲೆ ಯಾಕೆ ತನ್ನ ಜೋರು ತೋರಿಸಬೇಕು ? ಅವಳಿಗೆ ತನ್ನ ಮಕ್ಕಳು ಮೆಚ್ಚಿರಬಹುದು; ನನಗೆ ಇರೋ ಒಂದು ಆಸರೆ ಅಂದರೆ ನೀವು. ಇಡೀ ಮನೆಯೋರೆಲ್ಲಾ ಹಾಲು ಕುಡುಕೊಂಡು ಮಜಾ ಮಾಡ್ತಿರಲಿ, ಯಾರ ಬಲದ ಮೇಲೆ ಸಂಸಾರ ನಡೀತಿದೆಯೋ ಅವರು ನೀರು ಮಜ್ಜಿಗೆಗೆ ಬಾಯಿ ಬಾಯಿ ಬಿಡಲಿ – ಇದನ್ನ ನನ್ನ ಕಣ್ಣಿಂದ ನೋಡೋಕ್ಕಾಗೋಲ್ಲ. ಹೇಳೋರು ಕೇಳೋರು ಯಾರೂ ಇಲ್ಲವೆ ? ಸ್ವಲ್ಪ ನಿಮ್ಮ ಮುಖ ನೋಡಿಕೊಳ್ಳಿ, ಹೇಗಾಗಿದೆ ಅಂತ. ಅವಳಿಗೆ ಇನ್ನೊಂದು ನಾಲ್ಕು ವರ್ಷದಲ್ಲಿ ಮಕ್ಕಳು ಬಲಿತು ಕೈಗೆ ಬರ್ತಾರೆ, ನೀವಿನ್ನು ಹತ್ತು ವರ್ಷದಲ್ಲಿ ಹಾಸಿಗೆ ಹಿಡೀತೀರಿ. ಕೂತುಕೊಳ್ಳಿ, ಯಾಕೆ ನಿಂತಿದೀರಿ ? ಏನು, ಹೊಡೆದು ಓಡಿಹೋಗಬೇಕು ಅಂತಿದೀರಾ ? ನಾನು ನಿಮ್ಮನ್ನೇನೂ ಬಲವಂತದಿಂದ

ಕಟ್ಟಿಹಾಕಿಲ್ಲ. ಯಜಮಾನಿ ಹಾಗೆ ಅಪ್ಪಣೆ ಮಾಡೋಲ್ಲ. ನಿಜ ಹೇಳಬೇಕು ಅಂದರೆ ನಿಮ್ಮದು ಕಲ್ಲುಗುಂಡಿಗೆ. ನಿಮ್ಮಂಥ ನಿರ್ಮೋಹಿ ಜೊತೆ ಏಗಬೇಕಾಗುತ್ತೆ ಅಂತ ಗೊತ್ತಿದ್ದಿದ್ದರೆ ನಾನು ಮರೆತು ಸಹ ಈ ಮನೆಗೆ ಕಾಲಿಡ್ತಿರಲಿಲ್ಲ. ಒಂದು ಪಕ್ಷ ವಿಧಿಯಿಲ್ಲದೆ ಬಂದರೂ ಇಲ್ಲಿರೋಕ್ಕೆ ಮನಸಾಗ್ತಿರಲಿಲ್ಲ. ಆದರೆ ಈಗ ನಿಮ್ಮ ಜೊತೆ ಮನಸ್ಸು ಒಂದುಗೂಡಿದೆ. ತವರಿಗೆ ಹೋದರೂ ಮನಸ್ಸು ಇಲ್ಲೇ ಇರುತ್ತೆ. ನೀವು ಮಾತ್ರ ನನ್ನ ಮಾತು ಕೇಳೋಲ್ಲ."

ಮುಲಿಯಾಳ ಈ ಇಂಪು ಮಾತು ರಗ್ಘೂವಿನ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ. ಅವನು ಅದೇ ಬಿರುಸಿನ ಧ್ವನಿಯಲ್ಲಿ ಹೇಳಿದ – "ಮುಲಿಯಾ, ಇದು ನನ್ನಿಂದ ಆಗೋಲ್ಲ. ಬೇರೆಯಾಗೋದನ್ನ ಯೋಚಿಸಿದರೆ ಸಾಕು, ನನ್ನ ಮನಸ್ಸು ಏನೋ ಒಂದು ತರಹ ಆಗುತ್ತೆ. ಈ ಗಾಯಾನ್ನ ನನ್ನ ಕೈಲಿ ಸಹಿಸೋಕ್ಕೆ ಆಗೋಲ್ಲ".

ಮುಲಿಯಾ ಗೇಲಿ ಮಾಡುತ್ತ ಹೇಳಿದಳು – "ಹಾಗಾದರೆ ಬಳೆ ತೊಟ್ಟುಕೊಂಡು ಒಳಗೆ ಕೂತುಕೊಳ್ಳಿ. ನಿಮ್ಮ ಮೀಸೇನ ನನಗೆ ಕೊಡಿ. ಕಟ್ಟಿಕೋತೀನಿ. ನಿಮ್ಮಲ್ಲೂ ಸ್ವಲ್ಪ ಶೌರ್ಯ ಇದೆ ಅಂತ ಅಂದುಕೊಂಡಿದ್ದೆ. ಈಗ ನೋಡಿದರೆ ಬರೀ ಮಣ್ಣಿನ ಮುದ್ದೆ".

ಪನ್ನಾ ಪಡಸಾಲೆಯಲ್ಲಿ ನಿಂತು ಇವರಿಬ್ಬರ ಮಾತುಕತೆಯನ್ನೂ ಕೇಳುತ್ತಿದ್ದಳು. ಅವಳಿಗೆ ತಡೆಯಲಾಗಲಿಲ್ಲ. ಮುಂದೆ ಬಂದು ರಗ್ಘೂವಿಗೆ ಹೇಳಿದಳು – "ಅವಳು ಬೇರೆಯಾಗಲೇಬೇಕು ಅಂತ ಹಟ ಹಿಡಿದಿರುವಾಗ ನೀನ್ಯಾಕೆ ಅವಳನ್ನ ಒಟ್ಟಿಗಿರೋಕ್ಕೆ ಬಲವಂತ ಮಾಡ್ತಿದಿ ? ನೀನೂ ಅವಳೂ ಒಟ್ಟಾಗಿರಿ, ನಮಗೆ ದೇವರಿದಾನೆ, ಮಹತೋ ಸತ್ತು ಒಂದು ಎಲೆ ನೆರಳು ಸಹ ಇರದಿದ್ದಾಗ ದೇವರು ಕಾಪಾಡಲಿಲ್ಲವೆ ? ಅಂದ ಮೇಲೆ ಈಗೇನು ಭಯ ? ದೇವರ ದಯದಿಂದ ಈಗ ಮೂರು ಮಕ್ಕಳೂ ವಯಸ್ಸಿಗೆ ಬಂದಿದಾರೆ. ಏನೂ ಚಿಂತೆಯಿಲ್ಲ".

ರಗ್ಘೂ ನೀರು ತುಂಬಿದ ಕಣ್ಣಿನಿಂದ ಪನ್ನಳ ಕಡೆ ನೋಡುತ್ತ ಹೇಳಿದ – "ನಿನಗೂ ಹುಚ್ಚು ಹಿಡೀತೇನು, ಚಿಕ್ಕವ್ವ ? ಮನೇಲಿ ಎರಡು ಒಲೆ ಆದ ತಕ್ಷಣ ಮನಸ್ಸೂ ಎರಡಾಗುತ್ತೆ ಅಂತ ಗೊತ್ತಿಲ್ಲವೆ ?"

ಪನ್ನಾ – "ಅವಳಿಗೆ ಬೇಡದೆ ಇರುವಾಗ ನಾನೇನು ಮಾಡೋಕ್ಕೆ ಆಗುತ್ತೆ ? ದೇವರ ಇಚ್ಛೆ ಹಾಗಿದ್ದರೆ ಯಾರು ತಾನೇ ಏನು ಮಾಡಬಹುದು. ಹಣೇಲಿ ಎಷ್ಟು ದಿನ ಒಟ್ಟಿಗಿರಬೇಕು ಅಂತ ಬರೆದಿತ್ತೋ ಅಷ್ಟು ದಿನ ಒಟ್ಟಿಗಿದ್ವಾಯ್ತು. ಈಗ ದೇವರ ಇಚ್ಛೆ ಇದಾದರೆ ಇದೇ ಸರಿ. ನೀನು ನನ್ನ ಮಕ್ಕಳಿಗೆ ಮಾಡಿದ್ದನ್ನ ನಾನು ಮರೆಯೋಲ್ಲ. ನೀನು ಇವರ ತಲೆ ಮೇಲೆ ಕೈಯಿಡದೇ ಹೋಗಿದ್ದಿದ್ದರೆ ಇವತ್ತು ಇವರಿಗೆ ಏನು ಗತಿಯಾಗ್ತಿತ್ತು ಅಂತ ಗೊತ್ತಿಲ್ಲ. ಯಾರ ಮನೇ ಮುಂದೆ ನಿಂತು ಏನು ಅವಸ್ಥೆ ಪಡಬೇಕಾಗಿರೋದೋ, ಎಲ್ಲೆಲ್ಲಿ ತಿರುಪೆ ಎತ್ತಿಕೊಂಡು ಅಲೀತಿರಬೇಕಾಗಿರೋದೋ. ಕೊನೇ ಉಸಿರಿರೋ ತನಕ ನಿನ್ನನ್ನ ನೆನೀತೀನಿ; ನನ್ನ

ವ್ಯೆ ನಿನ್ನ ಕಾಲಿನ ಮೆಟ್ಟಿಗೆ ಬರೋದಾದರೆ ಸಂತೋಷದಿಂದ ಹರಿದುಕೊಡ್ತೀನಿ. ನಿನ್ನಿಂದ ಬೇರೆಯಾದರೆ ಏನಂತೆ, ಯಾವ ಹೊತ್ತಿನಲ್ಲಿ ಕೂಗಿದರೂ ನಾಯಿಯ ಹಾಗೆ ಓಡಿ ಬರ್ತೀನಿ. ನಿನ್ನಿಂದ್ರ ಬೇರೆಯಾಗಿ ನಿನಗೆ ಕೆಟ್ಟದ್ದು ಬಯಸ್ತೀನಿ ಅಂತ ಮರೆತು ಸಹ ಯೋಚಿಸಬೇಡ. ಯಾವತ್ತು ನಿನಗೆ ಕೇಡಾಗಲಿ ಅನ್ನೋ ಯೋಚನೆ ಮನಸ್ಸಿಗೆ ಬರುತ್ತೋ ಅವತ್ತು ವಿಷ ತಗೊಂಡು ಸತ್ತು ಹೋಗ್ತೀನಿ. ನಿನ್ನ ಮನೆ ಹೂವಾಗಲಿ, ಹಣ್ಣಾಗಲಿ; ನೀನು ಹಾಲಿನಲ್ಲಿ ವ್ಯೆ ತೊಳೆಯೋ ಹಾಗಾಗಲಿ. ಕೊನೇ ಉಸಿರಿರೋತನಕ ನನ್ನ ರೋಮರೋಮವೂ ಅದನ್ನೇ ಹಾರೈಸುತ್ತೆ; ಈ ಹುಡುಗರು ಅವರಪ್ಪನ ಮಕ್ಕಳಾಗಿರೋದು ನಿಜವಾದರೆ ಅವರೂ ಸಾಯೋತನಕ ನೀನು ಸಾಕಿದ್ದನ್ನ ನೆನೀತಾರೆ."

## 5

ಪನ್ನಳ ಮಾತು ಕೇಳಿ ಮುಲಿಯ ಗೆದ್ದೆನೆಂದುಕೊಂಡಳು. ತಕ್ಷಣ ಎದ್ದು ಮನೆಯ ಕಸ ಗುಡಿಸಿ, ಒಲೆ ಹಚ್ಚಿ, ನೀರು ತರಲು ಬಾವಿಗೆ ಹೋದಳು. ಅವಳ ಹಟ ಸಾಧಿಸಿತ್ತು.

ಹಳ್ಳಿಯಲ್ಲಿ ಹೆಂಗಸರ ಎರಡು ದಳವಿರುತ್ತದೆ – ಒಂದು ಸೊಸೆಯರದು, ಇನ್ನೊಂದು ಅತ್ತೆಯರದು. ಇಬ್ಬರ ಪಂಚಾಯಿತಿಯೂ ಬೇರೆ ಬೇರೆ ಸೇರುತ್ತದೆ. ಮುಲಿಯಳಿಗೆ ಬಾವಿಯ ಹತ್ತಿರ ಇಬ್ಬರು ಮೂವರು ಸೊಸೆಯರ ಭೇಟಿಯಾಯಿತು.

ಒಬ್ಬಳು ಕೇಳಿದಳು – "ಇವತ್ತು ನಿನ್ನ ಮುದುಕಿ ಬಹಳ ಅತ್ತೂ ಕರೆದೂ ಮಾಡ್ತಿತ್ತಲ್ಲ, ಏನು ಸಮಾಚಾರ ?"

ಮುಲಿಯ ವಿಜಯದ ಅಟ್ಟಹಾಸದಲ್ಲಿ ಹೇಳಿದಳು – "ಇಷ್ಟು ದಿನ ಮನೆಗೆ ಯಜಮಾನಿಯಾಗಿದ್ದಳು. ರಾಜಪಟ್ಟ ಬಿಡೋದು ಅಂದರೆ ಯಾರಿಗೆ ತಾನೇ ಸುಖ ಅನ್ನಿಸುತ್ತೆ ? ಅವಳಿಗೆ ಕೆಟ್ಟದ್ದಾಗಲಿ ಅಂತ ನನ್ನ ಇಷ್ಟವಲ್ಲ. ಆದರೆ ಒಬ್ಬ ಮನುಷ್ಯನ ಸಂಪಾದನೆ ಮೇಲೆ ಎಲ್ಲೀತನಕ ನಡೆಯುತ್ತೆ, ಹೇಳಕ್ಕ. ನನಗೆ ಸಹ ಉಂಡು ತಿಂದು, ಉಟ್ಟು ತೊಡೋ ದಿನ ಅಂದರೆ ಇದು. ಈಗ ಅವಳಿಗೋಸ್ಕರ ಸಾಯಬೇಕು; ನಾಳೆ ಮಕ್ಕಳಾದ ಮೇಲೆ ಅವರಿಗೋಸ್ಕರ ಸಾಯಬೇಕು. ಇಡೀ ಬದುಕು ಗೋಳುಕರೇಲೇ ಕಳೆದುಹೋಗುತ್ತೆ."

ಒಬ್ಬ ಸೊಸೆ – "ನಾವುಗಳೆಲ್ಲಾ ಸಾಯೋತನಕ ಆಳುಗಳಾಗಿ, ಹಾಕಿದ ಒಣಕಲು ತಿಂದುಕೊಂಡು ಬಿದ್ದಿರಬೇಕು ಅಂತಾನೇ ಮುದುಕೀರ ಆಸೆ."

ಇನ್ನೊಬ್ಬ ಸೊಸೆ – "ಏನು ನೆಚ್ಚಿಕೆ ಇದೆ ಅಂತ ದುಡೀಬೇಕು, ಹೇಳು. ನಮ್ಮ ಮಕ್ಕಳೇ ನಮ್ಮ ಮಾತು ಕೇಳೋಲ್ಲ, ಇನ್ನೊಬ್ಬರ ಮಕ್ಕಳದ್ದು ಏನು ಭರವಸೆ ? ನಾಳೆ ತಮ್ಮ ಕಾಲಮೇಲೆ ತಾವು ನಿಂತುಕೊಂಡ ಮೇಲೆ ಇವರು ಯಾರನ್ನ ಕೇಳತಾರೆ ? ತಮ್ಮ ತಮ್ಮ ಹೆಂಡತೀರ ಮುಖ ನೋಡ್ತಾ ಕೂತ್ಕೊತಾರೆ. ಮೊದಲಿಂದಲೇ ದೂರ

ಮಾಡೋದು ಒಳ್ಳೇದು. ಆಮೇಲೆ ಯಾವ ಕೆಟ್ಟ ಹೆಸರೂ ಬರೋಲ್ಲ."

ಮುಲಿಯಾ ನೀರು ತೊಗೊಂಡು ಹೋದಳು. ಅಡಿಗೆ ಮಾಡಿ ರಗ್ಘೂವಿಗೆ ಹೇಳಿದಳು – "ಹೋಗಿ ಮೈ ತೊಳೆದು ಬನ್ನಿ. ರೊಟ್ಟಿ ತಯಾರಾಗಿದೆ."

ರಗ್ಘೂ ಕೇಳಿಸದವನಂತಿದ್ದ. ಅವನು ತಲೆಯ ಮೇಲೆ ಕೈ ಹೊತ್ತುಕೊಂಡು ಬಾಗಿಲ ಕಡೆ ನೋಡುತ್ತ ಕುಳಿತಿದ್ದ.

ಮುಲಿಯಾ – "ಹೇಳಿದ್ದು ಕೇಳಿಸಲಿಲ್ಲವೆ ? ರೊಟ್ಟಿ ತಯಾರಾಗಿದೆ. ಹೋಗಿ ಮೈ ತೊಳೆದು ಬನ್ನಿ."

ರಗ್ಘೂ – "ಕೇಳಿಸದೇ ಇರೋಕ್ಕೆ ನಾನೇನು ಕಿವುಡನೆ ? ರೊಟ್ಟಿ ತಯಾರಾಗಿದ್ದರೆ ಹೋಗಿ ತಿನ್ನು. ನನಗೇನೂ ಹಸಿವಿಲ್ಲ."

ಮುಲಿಯಾ ಮತ್ತೆ ಬಾಯಿ ತೆರೆಯಲಿಲ್ಲ. ಹೋಗಿ ಒಲೆ ಆರಿಸಿ, ರೊಟ್ಟಿಗಳನ್ನು ನೆಲುವಿನ ಮೇಲಿರಿಸಿ, ಮುಖ ಮುಚ್ಚಿಕೊಂಡು ಮಲಗಿಕೊಂಡಳು. ಕೊಂಚ ಹೊತ್ತಿನ ಮೇಲೆ ಪನ್ನಾ ಅವನಿದ್ದಲ್ಲಿಗೆ ಬಂದು ಹೇಳಿದಳು – "ಅಡಿಗೆಯಾಗಿದೆ. ಮೈತೊಳೆದುಕೊಂಡು ಬಂದು ಉಣ್ಣು. ಸೊಸೆಯೂ ಹಸಿದಿದಾಳೆ."

ರಗ್ಘೂ ಕಿಡಿಕಿಡಿಯಾಗಿ ಹೇಳಿದ – "ನೀನು ಮನೇಲಿರೋಕ್ಕೆ ಬಿಡ್ತೀಯೋ ಅಥವಾ ಎಲ್ಲಾದರೂ ಮುಖ ಮರೆಸಿಕೊಂಡು ಹೋಗಲೋ, ಚಿಕ್ಕವ್ವ ? ಊಟ ಊಟವೇ. ಇವತ್ತು ಉಣ್ಣದಿದ್ದರೆ ನಾಳೆ ಉಣ್ತೀನಿ. ಈಗ ನನಗೇನೂ ಊಟ ಸೇರೋ ಹಾಗಿಲ್ಲ..... ಕೇದಾರ ಇನ್ನೂ ಇಸ್ಕೂಲಿಂದ ಬಂದಿಲ್ಲವೆ ?"

ಪನ್ನಾ – "ಇನ್ನೂ ಬಂದಿಲ್ಲ. ಬರೋ ಹೊತ್ತಾಯ್ತು."

ಅಡಿಗೆ ಮಾಡಿ, ಮಕ್ಕಳಿಗೂ ಬಡಿಸಿ, ತಾನೂ ಊಟ ಮಾಡುವವರೆಗೆ ರಗ್ಘುವೂ ಊಟ ಮಾಡುವುದಿಲ್ಲವೆಂದು ಪನ್ನಳಿಗೆ ಗೊತ್ತಾಯಿತು. ಅಷ್ಟೇ ಅಲ್ಲ, ರಗ್ಘುವಿನ ಜೊತೆ ಜಗಳ ಹೂಡಿ, ಅಂದು, ಆಡಿ ಮಾಡಬೇಕಾಗುತ್ತದೆ. ಅವನಿಂದ ತಾನೇ ಬೇರೆಯಾಗ ಬಯಸಿರುವವಳಂತೆ ತೋರಿಸಿಕೊಳ್ಳಬೇಕಾಗುತ್ತದೆ. ಇಲ್ಲವಾದರೆ ಅವನು ಇದೇ ಚಿಂತೆಯಲ್ಲಿ ಕೊರಗಿ ಪ್ರಾಣ ಬಿಡುತ್ತಾನೆಂದು ಪನ್ನಳಿಗೆ ಗೊತ್ತಾಯಿತು. ಅವಳು ಬೇರೆಯೇ ಒಲೆ ಹೊತ್ತಿಸಿ ಅಡಿಗೆಗಿಟ್ಟಳು. ಅಷ್ಟರಲ್ಲಿ ಕೇದಾರ ಮತ್ತು ಖುನ್ನೂ ಶಾಲೆಯಿಂದ ಬಂದರು. ಪನ್ನಾ ಹೇಳಿದಳು – "ಬನ್ನಿ ಮಕ್ಕಳಾ, ಊಟ ಮಾಡಿ. ರೊಟ್ಟಿ ತಯಾರಾಗಿದೆ."

ಕೇದಾರ ಕೇಳಿದ – "ಅಣ್ಣನ್ನೂ ಕರೀಲೇ ?"

ಪನ್ನಾ – "ನೀನು ಉಣ್ಣು ಬಾ. ಅವನಿಗೆ ಸೊಸೆ ಬೇರೆ ಅಡಿಗೆ ಮಾಡಿದಾಳೆ."

ಖುನ್ನೂ – "ಹೋಗಿ ಅಣ್ಣನ್ನ ಕೇಳಿಕೊಂಡು ಬರಲೆ ?"

ಪನ್ನಾ – "ಅವನಿಗೆ ಮನಸ್ಸು ಬಂದಾಗ ಅವನೇ ಉಣ್ತಾನೆ. ನೀವು ಕೂತುಕೊಂಡು ಊಟ ಮಾಡಿ. ಇದನ್ನೆಲ್ಲಾ ಕಟ್ಟಿಕೊಂಡು ನಿಮಗೇನಾಗಬೇಕು. ಮನಸ್ಸಿದ್ದೋರು ಉಣ್ತಾರೆ, ಇಲ್ಲದೋರು ಬಿಡ್ತಾರೆ. ಅವನೂ ಅವನ ಹೆಂಡತಿ ಬೇರೆ ಇರಬೇಕೆಂದು ಹಟ ಹಿಡಿದು ಕೂತಿರೋವಾಗ ಅವರಿಗೆ ಯಾರು ಹೇಳೋಕ್ಕೆ ಆಗುತ್ತೆ."

ಕೇದಾರ – "ಹಾಗಾದರೆ ನಾವು ಇನ್ನು ಮೇಲೆ ಬೇರೆ ಬೇರೆ ಮನೇಲಿ ಇರ್ತೀವೇನವ್ವ ?"

ಪನ್ನಾ – "ಅವರಿಗೆ ಬೇಕಾದರೆ ಒಂದೇ ಮನೇಲಿರಲಿ, ಬೇಡವಾದರೆ ಅಂಗಳದಲ್ಲಿ ಅಡ್ಡಗೋಡೆ ಹಾಕಿಕೊಳ್ಳಲಿ."

ಖುನ್ನೂ ಬಾಗಿಲ ಹತ್ತಿರ ಬಂದು ಬಗ್ಗಿ ನೋಡಿದ. ಎದುರಿನ ಹುಲ್ಲುಜೋಪಡಿಯ ಬಳಿ ಕುಳಿತು ರಗ್ಘೂ ಹುಕ್ಕ ಕುಡಿಯುತ್ತಿದ್ದ.

ಖುನ್ನೂ – "ಅಣ್ಣ ಇನ್ನೂ ಹುಕ್ಕ ಇಟ್ಕೊಂಡು ಕೂತಿದಾನೆ."

ಪನ್ನಾ – "ಮನಸ್ಸು ಬಂದಾಗ ಉಣ್ತಾನೆ, ಬಿಡು."

ಕೇದಾರ – "ಅಣ್ಣ ಅತ್ತೀಗೇನ ಅಟ್ಟಿಕೊಳ್ಳಲಿಲ್ಲವೆ ?"

ತನ್ನ ಕೋಣೆಯಲ್ಲಿ ಕುಳಿತು ಇದನ್ನೆಲ್ಲಾ ಕೇಳುತ್ತಿದ್ದ ಮುಲಿಯಾ ಹೊರಬಂದು ಹೇಳಿದಳು – "ಅಣ್ಣ ಅಟ್ಟಿಕೊಳ್ಳಲಿಲ್ಲ, ನೀನು ಅಟ್ಟಿಕೋಳ್ಳೋವಂತೆ ಬಾ."

ಕೇದಾರನ ಮುಖ ಬಿಳಿಚಿಕೊಂಡಿತು. ಅವನು ಮತ್ತೆ ಬಾಯಿ ತೆರೆಯಲಿಲ್ಲ. ಮೂವರೂ ಹುಡುಗರೂ ಊಟ ಮುಗಿಸಿ ಹೊರಹೊರಟರು. ಹೊರಗೆ 'ಲೂ'* ಬೀಸತೊಡಗಿತ್ತು. ಹಳ್ಳಿಯ ಹುಡುಗ ಹುಡುಗಿಯರು ಮಾವಿನತೋಪಿನಲ್ಲಿ ಗಾಳಿಗೆ ಬಿದ್ದಿದ್ದ ಮಾವಿನ ಹಣ್ಣನ್ನು ಆರಿಸುತ್ತಿದ್ದರು. ಕೇದಾರ ಹೇಳಿದ – "ಇವತ್ತು ನಾವೂ ಮಾವಿನ ಹಣ್ಣು ಆರಿಸೋಣ ನಡೀರೀ. ತುಂಬಾ ಹಣ್ಣು ಬಿದ್ದಿದೆ."

ಖುನ್ನೂ – "ಅಣ್ಣಾ ಕೂತಿದಾನಲ್ಲ ?"

ಲಛ್‌ಮನ – "ನಾನು ಬರೋಲ್ಲ, ಅಣ್ಣ ಗದರಿಸಿಕೋತಾನೆ."

ಕೇದಾರ – "ಈಗ ಅವನು ಬೇರೆಯಾಗಿದಾನೆ."

ಲಛ್‌ಮನ – "ಹಾಗಾದರೆ ನಮಗೀಗ ಯಾರಾದರೂ ಹೊಡೆದರೂ ಅಣ್ಣ ಅವರಿಗೆ ಏನೂ ಅನ್ನೋಲ್ವೆ."

ಕೇದಾರ – "ವಾಹ್, ಆಗ ಯಾಕೆ ಅನ್ನೋಲ್ಲ !"

ರಗ್ಘೂ ಬಾಗಿಲ ಹತ್ತಿರ ನಿಂತು ಮೂವರು ಹುಡುಗರು ಹೊರಟದ್ದನ್ನೂ ನೋಡಿದ. ಆದರೂ ಏನೂ ಹೇಳಲಿಲ್ಲ. ಮೊದಲಾದರೋ ಅವರು ಮನೆಬಿಟ್ಟು ಹೊರಟೊಡನೆಯೇ ಗದರಿಸಿಕೊಳ್ಳುತ್ತಿದ್ದ. ಆದರೆ ಇವತ್ತು ವಿಗ್ರಹದಂತೆ ನಿಶ್ಚಲವಾಗಿ ಕೂತಿದ್ದಾನೆ. ಹುಡುಗರಿಗೆ ಸ್ವಲ್ಪ ಸಾಹಸವೆನಿಸಿತು. ಅವರು ಇನ್ನೂ ಸ್ವಲ್ಪ ಮುಂದೆ ಹೋದರು. ರಗ್ಘೂ ಆಗಲೂ ಏನೂ ಹೇಳಲಿಲ್ಲ. ಹೇಗೆ ತಾನೆ ಹೇಳುವುದು ? ಅವನು ಯೋಚಿಸುತ್ತಿದ್ದ: ಚಿಕ್ಕವ್ವ ಮಕ್ಕಳಿಗೆ ಊಟಕ್ಕಿಕ್ಕಿದಳು. ನನ್ನನ್ನು ಕೇಳಲೂ ಇಲ್ಲ. ಅವಳ ಕಣ್ಣೂ ಕುರುಡಾಯಿತೆ ? ನಾನು ಕೂಗು ಹಾಕಿ ಹುಡುಗರು ಬಾರದೇ ಹೋದರೆ ? ಅವರನ್ನು ನಾನು ಹೊಡೆಯುವುದಂತೂ ಸಾಧ್ಯವಿಲ್ಲ. 'ಲೂ'ನಲ್ಲಿ ಅವರು ಅಲೆಯುತ್ತಾರೆ ! ಕಾಯಿಲೆ ಬಿದ್ದರೆ ? ರಗ್ಘುವಿನ ಎದೆ ಕೊರೆಯುತ್ತಿತ್ತು, ಆದರೆ ಏನನ್ನು ಹೇಳಲೂ ಬಾಯಿ ಬರುತ್ತಿರಲಿಲ್ಲ. ಅಣ್ಣ ಖಂಡಿತ ಏನೂ

---

* ಉತ್ತರ ಭಾರತದಲ್ಲಿ ನಡು ಬೇಸಿಗೆಯಲ್ಲಿ ಬೀಸುವ ಸುಡುಗಾಳಿ.

ಹೇಳುವುದಿಲ್ಲವೆಂದು ಹುಡುಗರಿಗೆ ಗೊತ್ತಾಯಿತು. ಅವರು ನಿರ್ಭಯವಾಗಿ ಮುನ್ನಡೆದರು.

ಮುಲಿಯಾ ಅಕಸ್ಮಾತ್ತಾಗಿ ಅಲ್ಲಿಗೆ ಬಂದಳು. ಅವಳಂದಳು – "ಈಗಲಾದರೂ ಎಳ್ತೀರೋ ಇಲ್ಲವೋ ? ಯಾರಿಗಾಗಿ ನೀವು ಉಪವಾಸ ಮಾಡ್ತಿದೀರೋ ಅವಳು ಮಜವಾಗಿ ಮಕ್ಕಳಿಗೆ ಊಟ ಹಾಕಿದಳು, ತಾನೂ ಉಂಡಳು, ಈಗ ಆರಾಮವಾಗಿ ಮಲಗಿದಾಳೆ. 'ಹೆಸರಿಗೆ ಮುತ್ತೈದೆ, ಕೇಳೋಕ್ಕೆ ಗಂಡನಿಲ್ಲ' ಅಂದ ಹಾಗಾಯಿತು. 'ನಡಿ, ನೀನೂ ಊಟ ಮಾಡು' ಅಂತ ಒಂದು ಸಲವಾದರೂ ಅವಳ ಬಾಯಿಂದ ಹೊರಡಲಿಲ್ಲ."

ರಗ್ಘುವಿಗೆ ಮರ್ಮಘಾತಕವಾಗಿ ನೋವಾಗುತ್ತಿತ್ತು. ಮುಲಿಯಳ ಈ ಕಠೋರವಾದ ಮಾತಿನಿಂದ ಗಾಯಕ್ಕೆ ಉಪ್ಪುಜ್ಜಿದಂತಾಯಿತು. ದುಃಖದಿಂದ ನೋಡುತ್ತ ಅವನಂದ – "ನಿನ್ನ ಇಚ್ಛೆ ಏನಿತ್ತೋ ಅದು ಪೂರೈಸಿತು. ಈಗ ಹೋಗಿ ಸಂತೋಷದಿಂದ ಡೋಲು ಬಜಾಯಿಸು."

ಮುಲಿಯಾ – "ನಿಮಗೇ ಅಂತ ತಟ್ಟೇಲಿ ಬಡಿಸಿ ಕಾದುಕೊಂಡಿದೀನಿ."

ರಗ್ಘೂ – "ನನ್ನನ್ನ ರೇಗಿಸಬೇಡ. ನಿನ್ನಿಂದಾಗಿ ನನಗೂ ಕೆಟ್ಟ ಹೆಸರು ಬಂತು. ನಿನಗೆ ಚಿಕ್ಕವ್ವನ ಜೊತೆ ಒಂದಾಗಿ ಬಾಳೋಕ್ಕೆ ಇಷ್ಟವಿಲ್ಲದಿರೋವಾಗ ನನಗೆ ಖುಶಾಮತ್ತು ಮಾಡೋಕ್ಕೆ ಅವಳಿಗೇನು ತೀಟೆ ಹಿಡಿದಿದೆ ? ಹೋಗಿ ಚಿಕ್ಕವ್ವನ ಕೇಳು, ಹುಡುಗರು ಮಾವಿನ ಹಣ್ಣು ಆರಿಸೋಕ್ಕೆ ಅಂತ ತೋಪಿಗೆ ಓಡಿದರು, ಹೋಗಿ ಅವರನ್ನು ಹಿಡಕೊಂಡು ಬರಲೆ ಅಂತ."

ಮುಲಿಯಾ ತಿರಸ್ಕಾರದಿಂದ ಹೆಬ್ಬೆರಳು ತೋರಿಸುತ್ತ ಹೇಳಿದಳು – "ಹ್ಞೂ, ಹೋಗ್ತೀನಿ, ಬನ್ನಿ ! ನಿಮಗೆ ತೀಟೆ ಹಿಡಿದಿದ್ರೆ ಒಂದಲ್ಲ, ನೂರು ಸಲ ಕೇಳಿಕೊಂಡು ಬನ್ನಿ."

ಅಷ್ಟರಲ್ಲಿ ಪನ್ನಾ ಒಳಗಿನಿಂದ ಬಂದಳು. ರಗ್ಘೂ ಹೇಳಿದ – "ಹುಡುಗರು ತೋಪಿಗೆ ಹೋಗಿದಾರೆ, ಚಿಕ್ಕವ್ವ. 'ಲೂ' ಹೊಡೀತಿದೆ."

ಪನ್ನಾ – "ಈಗ ಅವರನ್ನ ಕೇಳೋರು ಯಾರಪ್ಪ ? ತೋಪಿಗೆ ಹೋಗಲಿ, ಮರ ಹತ್ತಲಿ, ನೀರಲ್ಲಿ ಮುಳುಗಿ ಸಾಯಲಿ ! ನಾನು ಒಬ್ಬಂಟಿ. ಏನೆಲ್ಲ ಅಂತ ನೋಡಲಿ."

ರಗ್ಘೂ – "ಹೋಗಿ ಎಳಕೊಂಡು ಬರಲೆ ?"

ಪನ್ನಾ – "ಹೋಗಬೇಕು ಅಂತ ನಿನಗಾಗಿಯೇ ಮನಸ್ಸಿಲ್ಲವಾದರೆ ನಾನೇಕೆ ಹೋಗು ಅಂತ ಹೇಳಲಿ ? ನಿನಗೆ ಬೇಕು ಅನ್ನಿಸಿದ್ದಿದ್ದರೆ ತಡೆಯೋಕ್ಕೆ ಆಗ್ತಿರಲಿಲ್ಲವೆ ? ಅವರು ನಿನ್ನ ಕಣ್ಣ ಮುಂದೆಯೇ ಹೋದರು ತಾನೆ ?"

ಇನ್ನೂ ಪನ್ನಾ ಮಾತು ಮುಗಿಸುವ ಮುಂಚೆಯೇ ಕುಡಿಯುತ್ತಿದ್ದ ಹುಕ್ಕವನ್ನು ಮೂಲೆಯಲ್ಲಿಟ್ಟು ರಗ್ಘೂ ತೋಪಿನ ಕಡೆಗೆ ಓಡಿದ.

## 6

ರಗ್ಘೂ ಹುಡುಗರನ್ನು ಕರೆದುಕೊಂಡು ತೋಪಿನಿಂದ ಹಿಂದಿರುಗಿ ಬಂದು ನೋಡಿದಾಗ ಮುಲಿಯಳಿನ್ನೂ ಜೋಪಡಿಯಲ್ಲೇ ನಿಂತಿದ್ದಳು. ರಗ್ಘೂ ಹೇಳಿದ – "ಹೋಗಿ ನೀನು ಊಟ ಯಾಕೆ ಮಾಡೋಲ್ಲ? ನನಗಂತೂ ಈಗ ಹೊಟ್ಟೆ ಹಸೀತಿಲ್ಲ."

ಮುಲಿಯಾ ಮುಖ ಬಿಗಿದುಕೊಂಡು ಹೇಳಿದಳು – "ಹೌದು, ಹೊಟ್ಟೆ ಯಾಕೆ ಹಸಿಯುತ್ತೆ? ತಮ್ಮಂದಿರು ಉಂಡರು, ನಿಮ್ಮ ಹೊಟ್ಟೆಯೂ ತುಂಬಿರಬೇಕು."

ರಗ್ಘೂ ಹಲ್ಲು ಕಡಿಯುತ್ತ ಹೇಳಿದ – "ನನ್ನ ಹೊಟ್ಟೆ ಉರಿಸಬೇಡ, ಮುಲಿಯಾ. ಚೆನ್ನಾಗಿರೋಲ್ಲ, ನೋಡು. ಊಟ ಎಲ್ಲೂ ಓಡಿಹೋಗೋಲ್ಲ. ಒಂದು ಹೊತ್ತು ಉಣ್ಣದಿದ್ದರೆ ನಾನೇನೂ ಸತ್ತು ಹೋಗೋಲ್ಲ. ಇವತ್ತು ಮನೇಲಿ ನಡೆದದ್ದು ಸಣ್ಣ ವಿಷಯ ಅಂತ ಅಂದುಕೊಂಡಿದೀಯಾ? ನೀನು ಇವತ್ತು ಹಚ್ಚಿದ್ದು ಇನ್ನೊಂದು ಒಲೆಯಲ್ಲ, ನನ್ನೆದೇಲಿ ಬೆಂಕಿ. ಏನೇ ಬರಲಿ, ನನ್ನ ಮನೆ ಒಡೆಯೋಲ್ಲ ಅಂತ ನಾನು ಗರ್ವದಿಂದಿದ್ದೆ. ನನ್ನ ಆ ಗರ್ವಾನ ಇವತ್ತು ನೀನು ಚೂರುಚೂರು ಮಾಡಿದೆ. ಇದೆಲ್ಲಾ ಹಣೆಬರಹ!"

ಮುಲಿಯಾ ಸಿಟ್ಟಿನಿಂದ ಹೇಳಿದಳು – "ನಿಮಗಿರೋ ಹಾಗೆ ಉಳಿದೋರಿಗೂ ಮೋಹ ಮಮತೆ ಇರುತ್ತೆ. ನಿಮ್ಮ ಹಾಗೆ ಗೋಳಾಡೋರನ್ನ ನಾನು ಇನ್ನೆಲ್ಲೂ ನೋಡಲಿಲ್ಲ."

ರಗ್ಘೂ ತಣ್ಣಗೆ ನಿಟ್ಟುಸಿರು ಬಿಡುತ್ತ ಹೇಳಿದ – "ಗಾಯದ ಮೇಲೆ ಉಪ್ಪು ಚಿಮುಕಿಸಬೇಡ, ಮುಲಿಯಾ. ನಿನ್ನಿಂದಾಗಿ ನನ್ನ ಮರ್ಯಾದೆ ಹೋಯಿತು. ಈ ಸಂಸಾರದ ಬಗ್ಗೆ ನನಗಲ್ಲದೆ ಮತ್ತೆ ಯಾರಿಗೆ ಮೋಹ ಇರಬೇಕು? ಜೀವ ತೇದು ತೇದು ನಾನು ಈ ಸಂಸಾರ ಕಟ್ಟಿದೀನಿ. ಯಾರನ್ನ ತೊಡೆ ಮೇಲೆ ಎತ್ತಿಕೊಂಡು ಆಡಿಸಿದ್ದೆನೋ ಅವರೇ ಈಗ ನನಗೆ ದಾಯಾದಿಗಳಾಗ್ತಾರೆ. ಯಾವ ಹುಡುಗರನ್ನ ನಾನು ಗದರಿಸಿಕೊಳ್ತಿದ್ದೆನೋ ಅವರನ್ನ ಇನ್ನು ಮೇಲೆ ದುರುಗುಟ್ಟಿಕೊಂಡು ಸಹ ನೋಡೋಕ್ಕಾಗೋಲ್ಲ. ಅವರ ಒಳ್ಳೇದಕ್ಕೆ ಏನಾದರೂ ಮಾಡಿದರೂ ಇವನು ತಮ್ಮಂದಿರ ಶೋಷಣೆ ಮಾಡ್ತಾನೆ ಅಂತ ಲೋಕ ಅನ್ನುತ್ತೆ. ನನ್ನ ಪಾಡಿಗೆ ನನ್ನನ್ನ ಬಿಟ್ಟು ನೀನು ಹೋಗು. ನನ್ನ ಕೈಲಿ ಇವತ್ತು ಊಟ ಮಾಡೋಕಾಗೋಲ್ಲ."

ಮುಲಿಯಾ – "ನೀವು ಬೇಗನೆ ಏಳದಿದ್ದರೆ ನಾನು ಆಣೆ ಇಡಬೇಕಾಗುತ್ತೆ ನೋಡಿ."

ರಗ್ಘೂ – "ನೋಡು, ನೀನಿನ್ನೂ ಪೂರ್ತಿ ಕೆಟ್ಟಿಲ್ಲ. ನಿನ್ನ ಹಟ ಬಿಡು."

ಮುಲಿಯಾ – "ನೀವು ಊಟಕ್ಕೇಳದಿದ್ದರೆ ನನ್ನ ರಕ್ತ ಕುಡಿದಾಣೆ!"

ರಗ್ಘೂ ಕಿವಿ ಮುಚ್ಚಿಕೊಳ್ಳುತ್ತ ಹೇಳಿದ – "ಇದೇನು ಮಾಡಿದೆ, ಮುಲಿಯಾ?

ನಾನು ಪಳೋಕ್ಕೆ ಹೊರಟಿದ್ದೆ. ಆಯ್ತು, ನಡಿ, ಉಣ್ತೇನಿ. ಈಗ ಇನ್ನು ಸ್ನಾನ – ಮಡೀಗೆ ಯಾರು ಹೋಗೋರು. ಆದರೆ ಇಷ್ಟು ಹೇಳ್ತೀನಿ, ಕೇಳು. ನಾನು ನಾಲ್ಕು ರೊಟ್ಟಿ ಬದಲು ಆರು ರೊಟ್ಟಿ ತಿನ್ನಬಹುದು. ನೀನು ನನ್ನನ್ನ ತುಪ್ಪದ ಮಡಕೇಲೇ ಮುಳುಗಿಸಬಹುದು. ಆದರೆ ಈ ಗಾಯ ಮಾತ್ರ ಮಾಯೋಲ್ಲ.''

ಮುಲಿಯಾ – ''ಗಾಯ–ಗೀಯ ಎಲ್ಲಾ ಮಾಯುತ್ತೆ. ಮೊದಮೊದಲಲ್ಲಿ ಎಲ್ಲರಿಗೂ ಹೀಗೇ ಆಗೋದು. ಕಾಣೋಲ್ಲವೆ ಅಲ್ಲಿ ಅವರು ಎಷ್ಟು ಮಜವಾಗಿದಾರೆ ಅಂತ . ಹೇಗಾದರೂ ಬೇರೆಬೇರೆಯಾದರೆ ಸಾಕು ಅಂತ ಬಯಸ್ತಿದ್ದಳು. ಮನೆಗೆ ಬಂದದ್ದನ್ನೆಲ್ಲಾ ಅಡಗಿಸಿಡೋಕ್ಕೆ ಈಗ ಮೊದಲಿನ ಹಾಗೆ ಸ್ವಾತಂತ್ರ್ಯ ಇರಲಿಲ್ಲ! ಅಂದಮೇಲೆ ನಮ್ಮ ಜೊತೆ ಯಾಕಿರ್ತಾಳೆ, ಹೇಳಿ.''

ರಗ್ಘೂ ನೊಂದ ಧ್ವನಿಯಲ್ಲಿ ಹೇಳಿದ – ''ಇದೇ ನನಗೆ ನೋವಾಗೋದು. ಚಿಕ್ಕವ್ವ ಹೀಗೆ ಮಾಡ್ತಾಳೆ ಅಂತ ನಾನಂದುಕೊಂಡಿರಲಿಲ್ಲ.''

ರಗ್ಘೂ ಊಟಕ್ಕೆ ಕುಳಿತ. ಒಂದೊಂದು ತುತ್ತೂ ವಿಷದ ಉಂಡೆಯಂತಿತ್ತು. ರೊಟ್ಟಿ ತವಡಿನಲ್ಲಿ ಮಾಡಿದಂತಿತ್ತು, ತೊವ್ವೆ ನೀರಿನಂತಿತ್ತು. ಕುಡಿದ ನೀರು ಗಂಟಲೊಳಗೆ ಇಳಿಯುತ್ತಿರಲಿಲ್ಲ. ಅವನು ಹಾಲಿನ ಕಡೆ ನೋಡಲೂ ಇಲ್ಲ. ಯಾರೋ ಪ್ರಿಯಜನರ ಶ್ರಾದ್ಧದ ಊಟವೋ ಎಂಬಂತೆ ಹೇಗೋ ಎರಡು ತುತ್ತುಂಡು ರಗ್ಘೂ ಎದ್ದ.

ರಾತ್ರಿಯ ಊಟವನ್ನು ಸಹ ಅವನು ಹಾಗೆಯೇ ಮಾಡಿದ. ಊಟವೇನು, ಆಣೆ ಪೂರೈಸಲು ಎಷ್ಟೋ ಅಷ್ಟು ಮಾಡಿದ. ಇಡೀ ರಾತ್ರಿ ಅವನ ಮನಸ್ಸು ಕುದಿಯುತ್ತಿತ್ತು. ಯಾವದೋ ಅಜ್ಞಾತ ಭಯ ಅವನ ಮನಸ್ಸನ್ನು ಕವಿದಿತ್ತು. ಅಪ್ಪ ಭೋಲಾ ಮಹತೋ ಬಾಗಿಲ ಬಳಿ ಕುಳಿತು ಅಳುತ್ತಿದ್ದಾನೇನೋ ಅನ್ನಿಸಿತು. ಅನೇಕ ಬಾರಿ ಅವನು ಬೆಚ್ಚಿ ಎದ್ದ. ಅಪ್ಪ ಅವನ ಕಡೆ ತಿರಸ್ಕಾರದಿಂದ ನೋಡುತ್ತಿದ್ದಾನೆಯೋ ಎನ್ನಿಸಿತು.

ಅವನು ಎರಡೂ ಹೊತ್ತು ಊಟವನ್ನೇನೋ ಮಾಡುತ್ತಿದ್ದ. ಆದರೆ ಯಾರೋ ಶತ್ರುಗಳ ಮನೆಯಲ್ಲಿ ಮಾಡಿದಂತೆ. ಅಪ್ಪನ ಶೋಕಮಗ್ನ ಮೂರ್ತಿ ಕಣ್ಣಿಂದ ಮರೆಯಾಗುತ್ತಿರಲಿಲ್ಲ. ರಾತ್ರಿಯ ವೇಳೆ ನಿದ್ರೆ ಬರುತ್ತಿರಲಿಲ್ಲ. ಅವನು ಹಳ್ಳಿಯಲ್ಲಿ ಓಡಾಡುತ್ತಿದ್ದುದು ತಾನು ಗೋಹತ್ಯೆ ಮಾಡಿದ್ದೇನೇನೋ ಎಂಬಂತೆ, ಮುಖ ಮರೆಸಿಕೊಂಡು, ತಲೆ ತಗ್ಗಿಸಿಕೊಂಡು.

## 7

ಐದು ವರ್ಷ ಕಳೆಯಿತು. ರಗ್ಘೂ ಈಗ ಇಬ್ಬರು ಮಕ್ಕಳ ತಂದೆಯಾಗಿದ್ದ. ಅಂಗಳದಲ್ಲಿ ನಡುಗೋಡೆಯೆದ್ದಿತ್ತು. ಗದ್ದೆ ಎರಡಾಗಿ ನಡುವೆ ಬಾಂಧು ಕಟ್ಟಲಾಗಿತ್ತು. ಎತ್ತುಕರುಗಳ ಹಂಚಿಕೆಯಾಗಿತ್ತು. ಕೇದಾರನಿಗೆ ಈಗ ಹದಿನಾರು ವರ್ಷ. ಅವನು ಓದು ಬಿಟ್ಟು ಗದ್ದೆಯ ಕೆಲಸ ಮಾಡುತ್ತಿದ್ದ. ಖುನ್ನೂ ಹಸು ಮೇಯಿಸುತ್ತಿದ್ದ.

ಲಛ್‌ಮನನಿನ್ನೂ ಶಾಲೆಗೆ ಹೋಗುತ್ತಿದ್ದ. ಪನ್ನಾ ಮುಲಿಯರು ಒಬ್ಬರ ಮುಖ ನೋಡಿ ಇನ್ನೊಬ್ಬರು ಉರಿಯುತ್ತಿದ್ದರು. ಮುಲಿಯಳ ಇಬ್ಬರು ಮಕ್ಕಳೂ ಬಹುವಾಗಿ ಪನ್ನಳ ಹತ್ತಿರವೇ ಇರುತ್ತಿದ್ದರು. ಅವಳೇ ಅವರ ಮೈಗೆ ಎಣ್ಣೆ ಹಚ್ಚುತ್ತಿದ್ದಳು, ಕಣ್ಣಿಗೆ ಕಾಡಿಗೆ ಬಳಿಯುತ್ತಿದ್ದಳು, ಕಂಕುಳಲ್ಲೆತ್ತಿ ತಿರುಗಾಡಿಸುತ್ತಿದ್ದಳು. ಆದರೆ ಮುಲಿಯಳ ಬಾಯಿಂದ ಒಮ್ಮೆಯಾದರೂ ಒಂದು ಕೃತಜ್ಞತೆಯ ಶಬ್ದ ಹೊರಡುತ್ತಿರಲಿಲ್ಲ. ಪನ್ನಾ ಅದನ್ನು ಅಪೇಕ್ಷಿಸುತ್ತಲೂ ಇರಲಿಲ್ಲ. ಅವಳು ಏನನ್ನೇ ಮಾಡಲಿ, ನಿರ್ವ್ಯಾಜ ಭಾವನೆಯಿಂದ ಮಾಡುತ್ತಿದ್ದಳು. ಸ್ವತಃ ತಾನು ಹೊರಗೆಲಸ ನೋಡಿಕೊಳ್ಳುತ್ತಿದ್ದಳು. ಇದಕ್ಕೆ ಪ್ರತಿಯಾಗಿ ಅಲ್ಲಿ ರಗ್ಘೂ ಏಕಾಕಿಯಾಗಿದ್ದ – ಅದೂ ದುರ್ಬಲನಾಗಿ, ಅಶಕ್ತನಾಗಿ, ಯೌವನದಲ್ಲೇ ಮುದುಕನಾಗಿ, ವಯಸ್ಸು ಮೂವತ್ತಕ್ಕಿಂತ ಹೆಚ್ಚಿರಲಿಲ್ಲ. ಆದರೆ ಆಗಲೇ ಬಿಳಿಗೂದಲು ಕಾಣಿಸಿಕೊಳ್ಳತೊಡಗಿತ್ತು; ಸೊಂಟವೂ ಬಗ್ಗುತ್ತಿತ್ತು. ಕೆಮ್ಮು ಅವನನ್ನು ಜೀರ್ಣಗೊಳಿಸಿತ್ತು. ಅವನನ್ನು ನೋಡಿದರೆ ಯಾರಿಗಾದರೂ ಕನಿಕರ ಹುಟ್ಟುತ್ತಿತ್ತು. ಜೊತೆಗೆ ಸಾಗುವಳಿಯೆಂದರೆ ಹಿಟ್ಟು ಬೀಸಿದಂತೆ. ಅದಕ್ಕೆ ಅಗತ್ಯವಾದ ಶ್ರಮ ಅವನಿಂದ ಸಾಧ್ಯವಿರಲಿಲ್ಲ. ಅಂದ ಮೇಲೆ ಒಳ್ಳೆಯ ಫಸಲು ಎಲ್ಲಿಂದ ಬರಬೇಕು ? ಅವನು ಕೊಂಚ ಸಾಲವನ್ನೂ ಮಾಡಿಕೊಂಡಿದ್ದ. ಆ ಚಿಂತೆ ಅವನನ್ನು ಇದ್ದಿದ್ದೂ ತಿಂದು ಹಾಕಿತ್ತು. ಅವನಿಗೆ ಈಗ ಬೇಕಾಗಿದ್ದುದು ಕೊಂಚ ಆರಾಮ. ಇಷ್ಟು ವರ್ಷಗಳ ಎಡೆಬಿಡದ ದುಡಿಮೆಯ ನಂತರ ಈಗ ಹೆಗಲ ಹೊರೆ ಸ್ವಲ್ಪ ಕಡಿಮೆಯಾಗಿದ್ದಿದ್ದರೆ ! ಆದರೆ ಮುಲಿಯಳ ಸ್ವಾರ್ಥಪರತೆ, ಅದೂರದೃಷ್ಟಿಗಳಿಂದಾಗಿ ನಳನಳಿಸುತ್ತಿದ್ದ ಗದ್ದೆ ಪಾಳುಬಿದ್ದಿತ್ತು. ಎಲ್ಲರೂ ಒಟ್ಟಿಗೆ ಇದ್ದಿದ್ದರೆ ಇಷ್ಟು ಹೊತ್ತಿಗೆ ಅವನಿಗೆ ಪಿಂಚಣಿ ದೊರೆಯುತ್ತಿತ್ತು. ಮನೆ ಬಾಗಿಲಲ್ಲಿ ಕುಳಿತು ಮಜವಾಗಿ ಹುಕ್ಕ ಕುಡಿಯುತ್ತಿರಬಹುದಾಗಿತ್ತು. ತಮ್ಮಂದಿರು ಕೆಲಸ ಮಾಡುತ್ತಿದ್ದರು, ಅವನು ಬುದ್ಧಿ ಹೇಳಿಕೊಂಡಿರುತ್ತಿದ್ದ. ಮನೆಯ ಹಿರಿಯನಾಗಿ ಓಡಾಡಿಕೊಂಡಿರುತ್ತಿದ್ದ. ಇಲ್ಲಿ ಯಾರದೋ ಜಗಳ ತೀರ್ಮಾನ ಮಾಡಿ, ಅಲ್ಲಿ ಯಾರೋ ಸಾಧುಸಂತರ ಸೇವೆ ಮಾಡಿಕೊಂಡು ಕಾಲ ಹಾಕುತ್ತಿದ್ದ. ಆದರೆ ಆ ಅವಕಾಶ ಕೈಯಿಂದ ಜಾರಿ ಹೋಗಿತ್ತು. ಈಗಂತೂ ಚಿಂತೆಯ ಭಾರ ದಿನದಿನಕ್ಕೆ ಹೆಚ್ಚುತ್ತ ಹೋಗುತ್ತಿತ್ತು.

ಕೊನೆಕೊನೆಗೆ ಅವನಿಗೆ ಸ್ವಲ್ಪ ಸ್ವಲ್ಪ ಜ್ವರ ಬರಲಾರಂಭಿಸಿತು. ಚಿಂತೆ, ಕಠೋರ ದುಡಿಮೆ ಹಾಗೂ ಅಭಾವಗಳ ಫಲ ಅದು. ಮೊದಮೊದಲಲ್ಲಿ ಅವನು ಅದಕ್ಕೆ ಗಮನ ಕೊಡಲಿಲ್ಲ. ತಾನಾಗಿಯೇ ಸರಿಹೋಗುವುದೆಂದುಕೊಂಡ. ಆದರೆ ನಿಶ್ಶಕ್ತಿ ಹೆಚ್ಚುತ್ತ ಹೋದಾಗ ಔಷಧಿಯ ಯೋಚನೆ ಬಂತು. ಯಾರು ಏನು ಮದ್ದು ಹೇಳಿದರೂ ಅದನ್ನು ಮಾಡತೊಡಗಿದ. ಡಾಕ್ಟರರ ಇಲ್ಲವೇ ವೈದ್ಯರ ಹತ್ತಿರ ಹೋಗುವ ಸಾಮರ್ಥ್ಯ ಎಲ್ಲಿ ಬರಬೇಕು ? ಹಾಗೆ ಆ ಸಾಮರ್ಥ್ಯವಿದ್ದರೂ ಅದರಿಂದ ಹಣ ಖರ್ಚಾಗುವುದರ ವಿನಹ ಬೇರೆ ಏನಾದರೂ ಫಲವಿರುತ್ತಿತ್ತೆ ? ಜೀರ್ಣಜ್ವರಕ್ಕೆ ಔಷಧವೆಂದರೆ ವಿಶ್ರಾಂತಿ, ಪುಷ್ಟಿಕರವಾದ ಭೋಜನ. 'ವಸಂತಮಾಲತಿ'ಯನ್ನು

ಸೇವನೆ ಮಾಡುವುದಾಗಲೀ ಆರಾಮವಾಗಿ ಕುಳಿತ ಪುಷ್ಟಿಕರವಾದ ಭೋಜನ ಮಾಡುವುದಾಗೀ ಅವನಿಗೆ ಶಕ್ಯವಿರಲಿಲ್ಲ. ನಿತ್ರಾಣ ಹೆಚ್ಚುತ್ತ ಹೋಯಿತು.

ಪನ್ನಳಿಗೆ ಅವಕಾಶ ಸಿಕ್ಕಿದ್ದಿದ್ದರೆ ಅವಳಾದರೂ ಒಂದು ಸ್ವಲ್ಪ ನೆಮ್ಮದಿ ಕೊಡುತ್ತಿದ್ದಳೇನೋ. ಆದರೆ ಅವಳ ಮಕ್ಕಳು ಈಗ ರಗ್ಘುವಿನ ಜೊತೆ ಮಾತು ಸಹ ಆಡುತ್ತಿರಲಿಲ್ಲ. ಔಷಧೋಪಚಾರ ಮಾಡುವುದು ಹಾಗಿರಲಿ, ಅವರು ಅವನನ್ನು ಇದ್ದಿದ್ದೂ ಗೇಲಿ ಮಾಡುತ್ತಿದ್ದರು – 'ನಮ್ಮಿಂದ ಬೇರೆಯಾಗಿ ಚಿನ್ನದ ಇಟ್ಟಿಗೆ ಇಡ್ತೀನಿ ಅಂತ ಅಂದುಕೊಂಡಿದ್ದ ಅಣ್ಣ. ಮೈತುಂಬ ಚಿನ್ನ ಹೇರಿಕೋತೀನಿ ಅಂತ ಅತ್ತಿಗೆ ತಿಳಕೊಂಡಿದ್ದಳು. ಈಗ ನೋಡೋಣ ಯಾರು ಕೇಳ್ತಾರೆ. ಕೊರಗಿ ಕೊರಗಿ ಸಾಯದೇ ಇದ್ದರೆ ಕೇಳಿ. ಮನುಷ್ಯ ಅತಿಯಾಗಿ ಕಷ್ಟಪಡೋದು ಒಳ್ಳೇದಲ್ಲ. ಕೈಯಲ್ಲಿ ಎಷ್ಟು ಹರಿಯುತ್ತೋ ಅಷ್ಟು ಮಾಡಬೇಕು. ಹಣದಾಸೆಗೆ ಪ್ರಾಣ ಕೊಡೋದು ಅಂದರೇನು ?'

ಪನ್ನಾ ಹೇಳುತ್ತಿದ್ದಳು – "ಪಾಪ, ಆ ಬಡಪಾಯೀದು ಏನು ತಪ್ಪು ?"

ಕೇದಾರ ಹೇಳುತ್ತಿದ್ದ – "ಅಯ್ಯೋ ಬಿಡವ್ವ, ನನಗೆ ಚೆನ್ನಾಗಿ ಗೊತ್ತಿದೆ. ಅಣ್ಣನ ಜಾಗದಲ್ಲಿ ನಾನಿದ್ದಿದ್ದರೆ ಕೈಯಲ್ಲಿ ದೊಣ್ಣೆ ಇಟ್ಟುಕೊಂಡು ಮಾತಾಡ್ತಿದ್ದೆ. ಹೆಣ್ಣು ಹೆಂಗಸಿಗೆ ಇಷ್ಟೆಲ್ಲಾ ಹಟ ಮಾಡೋಕ್ಕೆ ಸಾಮರ್ಥ್ಯ ಎಲ್ಲೀದು ? ಇದೆಲ್ಲಾ ಅಣ್ಣಂದೇ ಯುಕ್ತಿ, ಮೊದಲೇ ಗೊತ್ತು ಮಾಡಿಕೊಂಡಿದ್ದದ್ದು."

ಕೊನೆಗೊಂದು ದಿನ ರಗ್ಘುವಿನ ಮಿಣುಕು ದೀಪ ಆರಿಹೋಯಿತು. ಸಾವು ಅವನೆಲ್ಲ ಚಿಂತೆಯನ್ನೂ ಕೊನೆಗಾಣಿಸಿತು. ಕೊನೆಯ ಗಳಿಗೆಯಲ್ಲಿ ಕೇದಾರನಿಗೆ ಹೇಳಿಕಳಿಸಿದರೆ, ಇನ್ನೆಲ್ಲಿ ಔಷಧ ತರಹೇಳುವನೋ ಎಂಬ ಭಯದಿಂದ ಅವನು ಕಬ್ಬಿನ ಗದ್ದೆಗೆ ನೀರು ಹಾಯಿಸಬೇಕಾಗಿದೆಯೆಂದು ನೆಪ ಹೇಳಿಬಿಟ್ಟ.

## 8

ಮುಲಿಯಳ ಬದುಕು ಕತ್ತಲಾಯಿತು. ಅವಳು ಯಾವ ನೆಲದ ಮೇಲೆ ಯುಕ್ತಿಯ ಗೋಡೆ ಕಟ್ಟಿದ್ದಳೋ ಅದು ಬುಡದಲ್ಲಿಯೇ ಕುಸಿದುಕೊಂಡಿತ್ತು. ಯಾವ ಗೂಟ ಹಿಡಿದು ಅವಳು ಜಗಿಯ ಹೊರಟಿದ್ದಳೋ ಅದೇ ಕಿತ್ತು ಬಂದಿತ್ತು. ದೇವರು ಹೇಗೆ ಆ ಕ್ಷಣ ಶಿಕ್ಷೆ ಕೊಟ್ಟ ಎಂದು ಹಳ್ಳಿಯ ಜನ ಆಡಿಕೊಳ್ಳುತ್ತಿದ್ದರು. ಆ ಬಡಪಾಯಿ ನಾಚಿಕೆ ತಡೆಯಲಾರದೆ ಹಳ್ಳಿಯಲ್ಲಿ ಯಾರಿಗೂ ಮುಖ ತೋರಿಸುವ ಸಾಹಸ ಮಾಡುತ್ತಿರಲಿಲ್ಲ. ಇಬ್ಬರು ಮಕ್ಕಳನ್ನೂ ಎತ್ತಿಕೊಂಡು ಸುಮ್ಮನೆ ಅಳುತ್ತ ಕೂತಿರುತ್ತಿದ್ದಳು. 'ನೆಲದ ಮೇಲೆ ಕಾಲಿಡದಷ್ಟು ಅಹಂಕಾರದಿಂದ ಮೆರೀತಿದ್ದಳು. ಕೊನೆಗೂ ಶಿಕ್ಷೆಯಾಯಿತೋ ಇಲ್ಲವೋ' ಎಂದು ಪ್ರತಿಯೊಬ್ಬರೂ ತನ್ನ ಬಗ್ಗೆ ಆಡಿಕೊಳ್ಳುತ್ತಿದ್ದಾರೋ ಅನ್ನಿಸುತ್ತಿತ್ತು. ಇನ್ನು ಈ ಮನೆಯಲ್ಲಿ ನಿಭಾಯಿಸುವುದಾದರೂ ಹೇಗೆ ? ಜಮೀನು ಸಾಗುವಳಿ ಯಾರು ಮಾಡಬೇಕು ?

ಬಡಪಾಯಿ ರಗ್ಘು ಕಾಯಿಲೆಯಿಂದ ನರಳುತ್ತ ದುರ್ಬಲನಾಗಿದ್ದರೂ ಜೀವಿಸಿರುವವರೆಗೂ ತನ್ನ ಕೆಲಸ ಮಾಡುತ್ತಿದ್ದ. ನಿಶ್ಶಕ್ತಿ ತಡೆಯಲಾರದೆ ಒಮ್ಮೊಮ್ಮೆ ತಲೆಯ ಮೇಲೆ ಕೈಹೊತ್ತುಕೊಂಡು ಕುಳಿತುಬಿಡುತ್ತಿದ್ದ; ಸ್ವಲ್ಪ ಸುಧಾರಿಸಿಕೊಂಡು ಮತ್ತೆ ಕೆಲಸಕ್ಕೆ ಕೈ ಹಚ್ಚುತ್ತಿದ್ದ. ಈಗ ಬೇಸಾಯವೆಲ್ಲ ಹಾಳಾಗುತ್ತಿದೆ. ಅದನ್ನು ಸಂಬಾಳಿಸುವವರು ಯಾರು ? ಕಣದಲ್ಲಿ ಕಾಳು ಒಟ್ಟುಬಿದ್ದಿದೆ; ಕಬ್ಬು ಒಣಗುತ್ತಿದೆ. ಅವಳು ಒಬ್ಬಂಟಿ ಏನೇನನ್ನೆಂದು ಮಾಡುವುದು ? ಇನ್ನು ನೀರು ಹಾಯಿಸುವುದಂತೂ ಒಬ್ಬರಿಂದಾಗುವ ಕೆಲಸವಲ್ಲ. ಮೂರು ಮೂರು ಕೂಲಿಯವರನ್ನು ಎಲ್ಲಿಂದ ತರುವುದು ? ಹಳ್ಳಿಯಲ್ಲಿದ್ದ ಕೂಲಿಯವರಾದರೂ ಎಷ್ಟು ಮಂದಿ ? ಕೆಲಸಕ್ಕೆ ಜನ ಸಾಲದೆ ಗುದ್ದಾಟವಾಗುತ್ತಿತ್ತು. ಮಾಡುವುದೇನು, ಬಿಡುವುದೇನು ?

ಹೀಗೆ ಹದಿಮೂರು ದಿನ ಕಳೆಯಿತು. ಕ್ರಿಯಾಕರ್ಮಗಳೆಲ್ಲವೂ ಮುಗಿದು ಬಿಡುವು ದೊರೆಯಿತು. ಮಾರನೆಯ ದಿನ ಬೆಳಗಿನಲ್ಲೇ ಮುಲಿಯಾ ಇಬ್ಬರು ಮಕ್ಕಳನ್ನೂ ಕಂಕುಳಲ್ಲೆತ್ತಿಕೊಂಡು ಕಾಳು ಬಡಿಯಲು ಹೊರಟಳು. ಕಣಕ್ಕೆ ಬಂದು ಒಂದು ಮಗುವನ್ನು ಮರದ ಕೆಳಗೆ ಮೆತ್ತನೆಯ ಹುಲ್ಲಿನ ಮೇಲೆ ಮಲಗಿಸಿದಳು. ಇನ್ನೊಂದನ್ನು ಬದಿಯಲ್ಲಿ ಕೂರಿಸಿಕೊಂಡು ಕಾಳು ಬಡಿಯತೊಡಗಿದಳು. ಎತ್ತುಗಳಿಗೆ ಕೂಗು ಹಾಕುವುದು, ಅಳುವುದು – ಹೀಗೆಯೇ ನಡೆದಿತ್ತು. ಏನು, ದೇವರು ಇದಕ್ಕಾಗಿಯೇ ತನಗೆ ಜನ್ಮವಿತ್ತನೆ ? ನೋಡನೋಡುತ್ತಿರುವಂತೆಯೇ ಏನಿದ್ದುದು ಏನಾಯಿತು ? ಕಳೆದ ವರ್ಷವೂ ಇದೇ ಹೊತ್ತಿನಲ್ಲಿ ಕಾಳು ಬಡಿದಿದ್ದರು. ಅವಳು ರಗ್ಘುವಿಗೆಂದು ಬಟಾಣಿಯ ಉಸಲಿ, ಲೋಟದಲ್ಲಿ ಶರಬತ್ತು ತಂದಿದ್ದಳು. ಇವತ್ತು ಅವಳಿಗೆ ಹಿಂದಿಲ್ಲ, ಮುಂದಿಲ್ಲ. ಆದರೆ ತಾನು ಯಾರಿಗೂ ಆಳಲ್ಲ. ಬೇರೆಯಾದುದಕ್ಕೆ ಅವಳಿಗೆ ಇವತ್ತಿಗೂ ಪಶ್ಚಾತ್ತಾಪವೆನಿಸಿರಲಿಲ್ಲ.

ಇದ್ದಕ್ಕಿದ್ದಂತೆ ಚಿಕ್ಕ ಮಗು ಅಳುತ್ತಿರುವುದು ಕೇಳಿಸಿತು. ಆ ಕಡೆ ಕಣ್ಣಾಡಿಸಿದಳು. ದೊಡ್ಡವನು ಅದಕ್ಕೆ ಮುದ್ದಿಡುತ್ತ ಹೇಳುತ್ತಿದ್ದ – "ಸುಮ್ಕಿರು ಮಗಾ, ಸುಮ್ಕಿರು". ಕೈಯಿಂದ ಮೆಲ್ಲಮೆಲ್ಲಗೆ ಅದರ ಮುಖವನ್ನು ಸವರುತ್ತ ಅದನ್ನು ಸುಮ್ಮನಾಗಿಸಲು ಸಾಹಸ ಮಾಡುತ್ತಿದ್ದ. ಯಾವುದಕ್ಕೂ ಮಗು ಸುಮ್ಮನಾಗದುದನ್ನು ನೋಡಿ, ತಾನೇ ಅದರ ಹತ್ತಿರ ಮಲಗಿಕೊಂಡ. ಅದನ್ನು ಎದೆಗೆ ಅಪ್ಪಿಕೊಂಡು ಮುದ್ದಿಸತೊಡಗಿದ. ಅದರಿಂದಲೂ ಪ್ರಯೋಜನವಾಗದಿದ್ದಾಗ ತಾನೂ ಅಳತೊಡಗಿದ.

ಅದೇ ಹೊತ್ತಿಗೆ ಪನ್ನಾ ಓಡಿಬಂದಳು. ಚಿಕ್ಕ ಮಗುವನ್ನು ತೊಡೆಯ ಮೇಲೆತ್ತಿಕೊಂಡು ಮುದ್ದಾಡುತ್ತ ಹೇಳಿದಳು – "ಮಕ್ಕಳನ್ನು ನನ್ನ ಹತ್ತಿರ ಯಾಕೆ ಬಿಟ್ಟುಬರಬಾರದಾಗಿತ್ತು ? ಪಾಪ, ನೆಲದ ಮೇಲೆ ಬಿದ್ದುಕೊಂಡು ಉರುಳಾಡ್ತಿದೆ. ನಾನು ಸತ್ತ ಮೇಲೆ ಏನು ಬೇಕಾದರೂ ಮಾಡೋವಂತೆ. ನಾನಿನ್ನೂ ಬದುಕಿದೀನಿ. ನಾವು ಬೇರೆಯಾದ ಮಾತ್ರಕ್ಕೆ ಮಕ್ಕಳು ಬೇರೆಯಾದವೆ ?"

ಮುಲಿಯಾ –"ನಿನಗೆ ಸಹ ಬಿಡುವು ಎಲ್ಲಿತ್ತವ್ವ ? ನೀನು ತಾನೇ ಏನು ಮಾಡ್ತಿ ?"

ಪನ್ನಾ –"ನಿನಗೆ ಇಲ್ಲಿ ಕಣಕ್ಕೆ ಬರೋಕ್ಕೆ ಏನು ಅವಸರವಾಗಿತ್ತು. ಒಬ್ಬರಲ್ಲ ಅಂತ ಮೂರು ಮಕ್ಕಳಿದಾರೆ, ಅವರು ಕಾಳು ಬಡೀತಿರಲಿಲ್ಲವೆ ? ಈಗಲ್ಲದೇ ಮತ್ತೆ ಯಾವಾಗ ಅವರು ಕೆಲಸಕ್ಕೆ ಆಗೋದು ? ಕೇದಾರ ನಿನ್ನೆಯೇ ಕಾಳು ಬಡೀತೀನಿ ಅಂದ. ನಾನು ಹೇಳಿದೆ, ಕಬ್ಬಿಗೆ ನೀರು ಹಾಯಿಸು, ಆಮೇಲೆ ಕಾಳು ಬಡಿಯುವಿಯಂತೆ ಅಂತ. ಕಾಳನ್ನ ಬೇಕಾದರೆ ಹತ್ತು ದಿನದ ಮೇಲೆ ಬಡಿದರೂ ಆಗುತ್ತೆ. ಆದರೆ ಕಬ್ಬಿಗೆ ನೀರು ಬಿಡದೆ ಹೋದರೆ ಒಣಗಿಹೋಗುತ್ತೆ. ನಿನ್ನೆಯಿಂದ ನೀರು ಬಿಟ್ಟಿದೆ, ನಾಡಿದ್ದಿನ ಹೊತ್ತಿಗೆ ಗದ್ದೆ ತುಂಬಿರುತ್ತೆ. ಆಮೇಲೆ ಕಾಳು ಬಡಿಯೋಣವಂತೆ. ನೀನು ನಂಬೋಲ್ಲೆ, ಅವರ ಅಣ್ಣ ಸತ್ತಾಗಿನಿಂದ ಕೇದಾರನಿಗೆ ತುಂಬ ಚಿಂತೆಯಾಗಿದೆ. ದಿನಕ್ಕೆ ನೂರು ಸಲ ಕೇಳ್ತಾನೆ, ಅತ್ತಿಗೆ ತುಂಬ ಅಳ್ತಿದಾಳಾ ಅಂತ. ಹೋಗಿ ನೋಡು ಮಕ್ಕಳು ಹಸಿದಿವೆಯೋ ಏನೋ ಅಂತಾನೆ. ಯಾವುದಾದರೂ ಮಗು ಅತ್ತಿದ್ದು ಕೇಳಿಸಿದರೆ ಓಡಿ ಬಂದು 'ಮಗು ಯಾಕೆ ಅಳುತ್ತೆ, ಏನಾಯಿತು ನೋಡವ್ವ' ಅಂತಾನೆ. ನಿನ್ನೆ ಕಣ್ಣಲ್ಲಿ ನೀರು ಹಾಕ್ಕೊಂಡು ಹೇಳ್ತಿದ್ದ – 'ಅಣ್ಣ ಇಷ್ಟು ಬೇಗ ಸಾಯ್ತಾನೆ ಅಂತ ಗೊತ್ತಿದ್ದಿದ್ದರೆ ಒಂದು ಸ್ವಲ್ಪ ಅವನ ಸೇವೇನೂ ಮಾಡ್ತಿದ್ದೆ.' ಮೊದಲು ಎಷ್ಟು ಎಬ್ಬಿಸಿದರೂ ಏಳದಿದ್ದವನು ಈಗ ನೋಡಿದರೆ ಬೆಳಕು ಹರಿಯುವ ಮೊದಲೇ ಎದ್ದು ಕೆಲಸ ಮಾಡ್ತಿರ್ತಾನೆ. ನಿನ್ನೆ ಖುನ್ನೂ 'ಮೊದಲು ನಮ್ಮ ಕಬ್ಬಿಗೆ ನೀರು ಹಾಯಿಸೋಣ, ಆಮೇಲೆ ಅಣ್ಣಂದಕ್ಕೆ ಹಾಯಿಸೋಣ' ಅಂತ ಏನೋ ಅಂದಿದ್ದಕ್ಕೆ ಕೇದಾರ ಅವನನ್ನ ಹೇಗೆ ಗದರಿಸಿಕೊಂಡ ಅಂತಿ. ಖುನ್ನೂ ಮತ್ತೆ ಬಾಯಿ ತೆಗೀಲಿಲ್ಲ. ಹೇಳಿದ – 'ನಿನ್ನ ಕಬ್ಬು ಬೇರೆ, ಅವರ ಕಬ್ಬು ಬೇರೇನೆ ! ಅಣ್ಣ ನಮ್ಮ ಜೀವ ಕಾಪಾಡದೇ ಹೋಗಿದ್ದಿದ್ದರೆ ಇವತ್ತು ಸತ್ತಿರ್ತಿದ್ದೆ, ಇಲ್ಲವೇ ಎಲ್ಲಾದರೂ ಭಿಕ್ಷೆ ಬೇಡಿಕೊಂಡು ಅಲೀತಾ ಇರ್ತಿದ್ದೆ. ಇವತ್ತು ನೀನು ಮಹಾ ಕಬ್ಬಿನ ದಣಿ ಆಗಿಬಿಟ್ಟೆಯೋ ? ಇವತ್ತು ನೀನು ಒಬ್ಬ ಮನುಷ್ಯ ಅಂತ ಆಗಿರೋದು ಅಣ್ಣನ ಪುಣ್ಯದ ಪ್ರತಾಪದಿಂದ.' ಮೊನ್ನೆ ಊಟಕ್ಕೆ ಕರೆಯೋಕ್ಕೆ ಹೋದರೆ ಕೂತುಕೊಂಡು ಅಳ್ತಿದ್ದ. ಯಾಕೆ ಅಳ್ತಿದಿ ಅಂದರೆ 'ಈ ಮನೆ ಮುರೀತು ಅನ್ನೋ ದುಃಖದಿಂದಲೇ ಕಣವ್ವಾ ಅಣ್ಣ ಸತ್ತದ್ದು. ಅವನಿಗೆ ಏನು ಮಹಾ ವಯಸ್ಸಾಗಿತ್ತು. ಇದು ಆಗಲೇ ಹೊಳೆದಿದ್ದಿದ್ದರೆ ಅವನ ಜತೆ ಜಗಳಾನೇ ಕಾಯ್ತಿರಲಿಲ್ಲ."

ಹೀಗಂದು ಪನ್ನಾ ಮುಲಿಯಾಳ ಕಡೆ ಅರ್ಥಪೂರ್ಣವಾಗಿ ನೋಡುತ್ತ ಮುಂದುವರಿಸಿದಳು – "ಕೇದಾರ ನಿನ್ನನ್ನ ಬೇರೆ ಇರೋಕ್ಕೆ ಬಿಡೋಲ್ಲ. 'ಅಣ್ಣ ನಮಗೋಸ್ಕರ ಸತ್ತ; ನಾವು ಅವನ ಮಕ್ಕಳು ಮರೀಗಾಗಿ ಸಾಯೋಣಂತೆ' ಅಂತಾನೆ."

ಮುಲಿಯಾಳ ಕಣ್ಣಿಂದ ನೀರು ಹರಿಯುತ್ತಿತ್ತು. ಪನ್ನಳ ಮಾತಿನಲ್ಲಿ ಇವತ್ತು ನಿಜವಾದ ಚಿಂತೆ, ವೇದನೆ, ಸಾಂತ್ವನ ತುಂಬಿತ್ತು. ಮುಲಿಯಾಳ ಮನಸ್ಸು ಹಿಂದೆಂದೂ ಪನ್ನಳ ಕಡೆ ಇಷ್ಟು ಸೆಳೆದಿರಲಿಲ್ಲ. ಯಾರು ವ್ಯಂಗ್ಯ, ಪ್ರತೀಕಾರಗಳನ್ನು ತೋರಿಸಬಹುದೆಂದು ಹೆದರಿದ್ದಳೋ ಅವಳೇ ಇಷ್ಟೊಂದು ದಯಾಳುವೂ

ಹಿತಾಕಾಂಕ್ಷಿಯೂ ಆಗಿದ್ದಳು.

ಇವತ್ತು ಮೊದಲ ಬಾರಿಗೆ ಮುಲಿಯಾಳಿಗೆ ತನ್ನ ಸ್ವಾರ್ಥಪರತೆಯ ಬಗ್ಗೆ ನಾಚಿಕೆಯಾಯಿತು; ಮೊದಲ ಬಾರಿಗೆ ಅವಳ ಮನಸ್ಸು ಮನೆ ಮುರಿದುದಕ್ಕೆ ಧಿಕ್ಕಾರ ಹಾಕಿತು.

## 9

ಈ ಘಟನೆ ನಡೆದು ಐದು ವರ್ಷ ಕಳೆಯಿತು. ಪನ್ನಾ ಈಗ ಮುದುಕಿಯಾಗಿದ್ದಾಳೆ. ಕೇದಾರ ಮನೆಯ ಯಜಮಾನನಾಗಿದ್ದಾನೆ. ಖುನ್ನೂ, ಲಛ್ಮನರ ಲಗ್ನವಾಗಿದೆ. ಆದರೆ ಕೇದಾರನಿನ್ನೂ ಅವಿವಾಹಿತನಾಗಿಯೇ ಇದ್ದಾನೆ. ಕೇಳಿದರೆ ತನಗೆ ಮದುವೆ ಬೇಡ ಎನ್ನುತ್ತಾನೆ. ಎಷ್ಟೋ ಕಡೆ ಮಾತುಕತೆ ನಡೆಯಿತು; ಎಷ್ಟೋ ಕಡೆಯಿಂದ ಸಂಬಂಧ ಕೇಳಿ ಬಂದರು. ಆದರೆ ಅವನು ಮಾತ್ರ ಒಪ್ಪಲಿಲ್ಲ. ಪನ್ನಾ ಏನೇನೋ ಆಟ ಹೂಡಿದಳು, ಬಲೆ ಬೀಸಿದಳು. ಆದರೆ ಅವನು ಮಾತ್ರ ಅದಕ್ಕೆ ಬೀಳಲಿಲ್ಲ. ಅವನನ್ನುತ್ತಿದ್ದ – "ಹೆಂಗಸರಿಂದ ಏನು ಸುಖ? ಹೆಂಡತಿ ಮನೇಗೆ ಬಂದಳು ಅಂದರೆ ಗಂಡಸಿನ ಸ್ವಭಾವ ಬದಲಾಗಿ ಬಿಡುತ್ತೆ. ಆಮೇಲೆ ಉಳಿಯೋದು ಅಂದರೆ ಹೆಂಡತಿ ಒಬ್ಬಳೇ. ಅಪ್ಪ – ಅಮ್ಮ ಅಣ್ಣ–ತಮ್ಮ ಎಲ್ಲರೂ ಪರಕೀಯರಾಗ್ತಾರೆ. ಸ್ವತಃ ರಗ್ಘೂ ಅಣ್ಣನಂಥವನ ಸ್ವಭಾವವೇ ಬದಲಾಯಿತು ಅಂದ ಮೇಲೆ ಉಳಿದವರದ್ದು ಏನು ಲೆಕ್ಕ? ದೇವರು ಕೊಟ್ಟ ಇಬ್ಬರು ಮಕ್ಕಳಿವೆ ಅಂದ ಮೇಲೆ ಇನ್ನೇನು ಬೇಕು? ಮದುವೆಯಾಗದೇನೇ ಎರಡು ಮಕ್ಕಳು ಸಿಕ್ಕಿವೆ. ಇದಕ್ಕಿಂತ ಹೆಚ್ಚಿನದೇನಿದೆ? ಯಾರನ್ನ ನಮ್ಮವರು ಅಂದುಕೊಂಡರೆ ಅವರೇ ನಮ್ಮವರು; ಯಾರನ್ನ ಅನ್ಯರು ಅಂದುಕೊಂಡರೆ ಅವರೇ ಅನ್ಯರು."

ಒಂದು ದಿನ ಪನ್ನಾ ಕೇಳಿದಳು – "ಹೀಗಾದರೆ ನಿನ್ನ ವಂಶ ಹೇಗೆ ಬೆಳೆಯುತ್ತೆ?"

ಕೇದಾರ – "ನನ್ನ ವಂಶ ಬೆಳೀತಾನೇ ಇದೆ. ಆ ಇಬ್ಬರು ಹುಡುಗರನ್ನೂ ನನ್ನ ಮಕ್ಕಳು ಅಂತಾನೇ ಅಂದುಕೊಂಡಿದೀನಿ."

ಪನ್ನಾ – "ಎಲ್ಲಾ ಅಂದುಕೊಳ್ಳೋದರ ಮೇಲೆಯೇ ಇದ್ದರೆ ನೀನು ಮುಲಿಯಾಳನ್ನ ನಿನ್ನ ಹೆಂಡತಿ ಅಂತಾನೇ ಅಂದುಕೊಂಡಿದೀಯೇನೋ!"

ಕೇದಾರ ಬೆಚ್ಚಿಬಿದ್ದ – "ನೀನು ಕೆಟ್ಟ ಮಾತಾಡ್ತಿದಿ, ಹೋಗವ್ವಾ?.

ಪನ್ನಾ – "ಕೆಟ್ಟ ಮಾತು ಹೇಗಾಯಿತು. ಎಷ್ಟಾದರೂ ನಿನ್ನ ಅತ್ತಿಗೆಯೇ ತಾನೆ."

ಕೇದಾರ – "ನನ್ನಂಥ ಹಳ್ಳಿ ಗಮಾರನ್ನ ಅವಳು ಯಾಕೆ ಕೇಳ್ತಾಳೆ?"

ಪನ್ನಾ – "ನೀನು ಹ್ಞೂ ಅಂದರೆ ನಾನು ಅವಳ ಜೊತೆ ಮಾತಾಡ್ತೀನಿ."

ಕೇದಾರ – "ಅದೆಲ್ಲಾ ಬೇಡಾ ಕಣವ್ವಾ. ಎಲ್ಲಾದರೂ ಅಳೋಕ್ಕೆ ಷುರುಮಾಡ್ತಾಳು".

ಪನ್ನಾ – "ನಿನಗೆ ಇಷ್ಟ ಇರೋದಾದರೆ ನಾನು ಮಾತು ಮಾತಿನಲ್ಲಿ ಅವಳ

ಮನಸ್ಸು ಹೇಗಿದೆ ಅಂತ ಅಂದಾಜು ಮಾಡಿ ನೋಡ್ತೀನಿ."

ಕೇದಾರ – "ನನಗೆ ಗೊತ್ತಿಲ್ಲ, ನಿನಗೆ ಬೇಕಾದ ಹಾಗೆ ಮಾಡು".

ಪನ್ನಳಿಗೆ ಕೇದಾರನ ಮನಸ್ಸು ಅರ್ಥವಾಯಿತು. ಮಗನಿಗೆ ಮುಲಿಯಳ ಮೇಲೆ ಮನಸ್ಸಾಗಿದೆ. ಆದರೆ ಸಂಕೋಚ ಭಯಗಳಿಂದಾಗಿ ಏನೂ ಹೇಳುತ್ತಿಲ್ಲ.

ಆವತ್ತೇ ಅವಳು ಮುಲಿಯಳ ಹತ್ತಿರ ಮಾತು ತೆಗೆದಳು – "ಏನು ಮಾಡೋದು, ಮಗು. ಆಸೆ ಆಸೆಯಾಗಿಯೇ ಉಳಿದುಬಿಡುತ್ತೆ. ಕೇದಾರನಿಗ ಒಂದು ನೆಲೆಯಾಗಿದ್ದರೆ ಮನಸ್ಸು ನಿಶ್ಚಿಂತವಾಗಿರೋದು."

ಮುಲಿಯಾ – "ಅವನು ಮಾಡಿಕೋತೀನಿ ಅಂತಾನೇ ಅನ್ನೋಲ್ಲ."

ಪನ್ನಾ – "ಮನೇಲಿ ಹೊಂದಿಕೊಂಡು ಇರೋ ಹೆಣ್ಣಾದರೆ ಮಾಡಿಕೋತೀನಿ ಅಂತಾನೆ."

ಮುಲಿಯಾ – "ಅಂತ ಹೆಣ್ಣು ಎಲ್ಲಿದಾಳೆ ಅಂತ ಹುಡುಕು".

ಪನ್ನಾ – "ನಾನೇನೋ ಹುಡುಕಿದೀನಿ."

ಮುಲಿಯಾ – "ನಿಜವೇ ? ಯಾರು ? ಯಾವ ಹಳ್ಳಿಯವಳು ?"

ಪನ್ನಾ – "ಬೇಕು ಅಂದರೆ ನೀನು ಅವಳನ್ನ ಒಪ್ಪಿಸಬಹುದು. ಅದು ನಿನ್ನ ಮೇಲೆಯೇ ಇದೆ."

ಮುಲಿಯಾ – "ನಾನು ಇವತ್ತೇ ಹೋಗ್ತೀನವ್ವ. ಅವಳ ಕಾಲಿಗೆ ಬಿದ್ದು ಒಪ್ಪಿಸಿಕೊಂಡು ಬರ್ತೀನಿ."

ಪನ್ನಾ – "ಅವಳು ಯಾರು ಅಂತ ಹೇಳಲೆ ? ಅವಳು ನೀನೇ !"

ಮುಲಿಯಾ ನಾಚಿಕೆಯಿಂದ ಹೇಳಿದಳು – "ನೀನು ಕೆಟ್ಟ ಮಾತಾಡ್ತಿದಿ, ಹೋಗವ್ವ."

ಪನ್ನಾ – "ಕೆಟ್ಟ ಮಾತೇನು ಬಂತು. ನಿನ್ನ ಮೈದುನನೇ ಅಲ್ಲವೆ ?"

ಮುಲಿಯಾ – "ನನ್ನಂಥ ಮುದುಕೀನ ಅವನು ಯಾಕೆ ಕೇಳ್ತಾನೆ ?"

ಪನ್ನಾ – "ಅವನು ನಿನಗೆ ಬಾಯಿ ಚಪ್ಪರಿಸಿಕೊಂಡೇ ಕೂತಿದಾನೆ. ಅವನಿಗೆ ನಿನ್ನ ಸಮಾನ ಇನ್ನೊಬ್ಬರಿಲ್ಲ. ಭಯಪಟ್ಟುಕೊಂಡು ಅವನು ಏನನ್ನೂ ಹೇಳೋಲ್ಲ. ಆದರೆ ಅವನ ಮನಸ್ಸಿನಲ್ಲಿ ಏನಿದೆ ಅಂತ ನನಗೆ ಚೆನ್ನಾಗಿ ಗೊತ್ತು."

ವೈಧವ್ಯದ ದುಃಖದಿಂದ ಕಂದಿ ಬಿಳಿಚಿಕೊಂಡಿದ್ದ ಮುಲಿಯಳ ಮುಖ ಕಮಲದಂತೆ ಕೆಂಪಾಯಿತು. ಹತ್ತು ವರ್ಷಗಳಲ್ಲಿ ಅವಳು ಕಳೆದುಕೊಂಡಿದ್ದುದೆಲ್ಲವೂ ಅವಳಿಗೆ ಆ ಕ್ಷಣ ಬಡ್ಡಿ ಸಮೇತ ಹಿಂದಿರುಗಿ ಬಂದಂತಾಯಿತು – ಅದೇ ಲಾವಣ್ಯ, ಅದೇ ಆಕರ್ಷಣೆ, ಅದೇ ಅರಳು, ಅದೇ ಬಳುಕು !

# 2. ಅಧಿಕಾರದ ಚಿಂತೆ

ಟಾಮಿ ನೋಡುವುದಕ್ಕೆ ದಡೂತಿಯಾದ ನಾಯಿ. ಅದು ಬೊಗಳಿದರೆ ಕೇಳುವವರ ಕಿವಿ ಹರಿದು ಹೋಗಬೇಕು. ಕತ್ತಲ ರಾತ್ರಿಯಲ್ಲಿ ನೋಡಿದರೆ ಕತ್ತೆಯೇನೋ ಎಂದು ಭ್ರಮೆ ಹುಟ್ಟಿಸುವಂತಹ ಮೈಕಟ್ಟು ಅದರದ್ದು. ಆದರೆ ಅದರ ಶ್ವಾನೋಚಿತವಾದ ಶೌರ್ಯ ಯಾವ ರಣರಂಗದಲ್ಲೂ ಪ್ರಮಾಣಪೂರ್ವಕವಾಗಿ ಸಾಧಿತವಾಗಿರಲಿಲ್ಲ. ಒಂದೆರಡು ಸಲ ಬೀದಿನಾಯಿಗಳು ಅದಕ್ಕೆ ಸವಾಲು ಹಾಕಿದಾಗ ಅದು ಅವುಗಳ ಗರ್ವ ಮುರಿಯುವುದಕ್ಕಾಗಿ ರಂಗಕ್ಕಿಳಿಯಿತು. ನೋಡಿದವರ ಪ್ರಕಾರ ಅದೇನೋ ಹೋರಾಡುವವರೆಗೂ ಸಾಹಸದಿಂದಲೇ ಹೋರಾಡಿತು. ಹಲ್ಲು ಉಗುರುಗಳಿಗಿಂತ ಹೆಚ್ಚಾಗಿ ಬಾಲದಿಂದ ಘಾತ ಮಾಡಿತು. ಕೊನೆಗೆ ಗೆದ್ದವರು ಯಾರೆಂದು ನಿಶ್ಚಿತವಾಗಿ ಹೇಳಲಾಗದಿದ್ದರೂ ಎದುರು ಗುಂಪಿಗೆ ಹೊರಗಿನ ಸಹಾಯ ದೊರೆತದ್ದರಿಂದ ರಣಶಾಸ್ತ್ರದ ನಿಯಮಾನುಸಾರ ವಿಜಯದ ಶ್ರೇಯಸ್ಸನ್ನು ಟಾಮಿಗೇ ಕೊಡುವುದು ಉಚಿತ ಹಾಗೂ ನ್ಯಾಯವೆನಿಸುತ್ತದೆ. ಆ ಸಂದರ್ಭದಲ್ಲಿ ಟಾಮಿ ಕೌಶಲದಿಂದ ಕೆಲಸ ಮಾಡಿತು. ಸಂಧಿಯಾಚನೆಯ ಸಂಕೇತವಾಗಿ ಹಲ್ಲು ಕಿರಿಯಿತು. ಆದರೆ ಆವತ್ತಿನಿಂದ ನೀತಿರಹಿತರಾದ ಎದುರಾಳಿಗಳೊಡನೆ ಹದ್ದು ಮೀರಿ ವರ್ತಿಸುವುದು ಉಚಿತವಲ್ಲವೆಂದು ಅದಕ್ಕೆ ಅರಿವಾಯಿತು.

ಟಾಮಿ ಇಷ್ಟು ಶಾಂತಿಪ್ರಿಯ ಪ್ರಾಣಿಯಾದರೂ ಅದರ ಶತ್ರುಗಳ ಸಂಖ್ಯೆ ದಿನದಿನಕ್ಕೆ ಬೆಳೆಯುತ್ತ ಹೋಯಿತು. ಅದು ಇಷ್ಟು ಹೇಡಿಯಾದರೂ ಹೃಷ್ಟಪುಷ್ಟವಾಗಿದೆಯಲ್ಲ ಎಂದು ಅದರ ಓರಗೆಯ ನಾಯಿಗಳು ಅಸೂಯೆಪಡುತ್ತಿದ್ದವು. ಪೇಟೆಯ ಹಿಂಡು ಅಸೂಯೆ ಪಡಲು ಕಾರಣವೆಂದರೆ ಟಾಮಿಯಿಂದಾಗಿ ತಿಪ್ಪೆಯ ರಾಶಿಗಳಲ್ಲಿ ಒಂದಾದರೂ ಮೂಳೆಯ ತುಂಡು ಉಳಿಯುತ್ತಿರಲಿಲ್ಲ. ಬೆಳಕು ಹರಿಯುವ ಮೊದಲೇ ಅದು ಎದ್ದು ಮಿಠಾಯಿ ಅಂಗಡಿಯ ಮುಂದಿನ ಎಲೆ ದೊನ್ನೆಗಳನ್ನೂ ಕಸಾಯಿಖಾನೆಯ ಮುಂದಿನ ಮೂಳೆಮಾಂಸಗಳ ತುಂಡುಗಳನ್ನೂ ಅಗಿದು ಮುಗಿಸುತ್ತಿತ್ತು. ಇಷ್ಟೊಂದು ವೈರಿಗಳ ಮಧ್ಯೆ ಟಾಮಿಯ ಬದುಕು ಕಷ್ಟವಾಗುತ್ತ ಹೋಗುವುದಕ್ಕೆ ಇದೇ ಕಾರಣ. ಕೊನೆಗೆ ತಿಂಗಳುಗಳು ಕಳೆದರೂ ಅದಕ್ಕೆ ಹೊಟ್ಟೆಯ ತುಂಬ ಊಟ ಸಿಕ್ಕದಂತಾಯಿತು. ಒಂದೆರಡು ಬಾರಿ ಮನಸೋ ಇಚ್ಛೆ ಹೊಟ್ಟೆ ತುಂಬಿಕೊಳ್ಳಬೇಕೆಂದು ಅದಕ್ಕೆ

ಪ್ರಬಲವಾಗಿ ಆಸೆಯಾಯಿತು. ಆ ಆಸೆಯ ಪೂರೈಕೆಗಾಗಿ ಅದು ಅನುಮಾನಾಸ್ಪದ ಮಾರ್ಗಗಳನ್ನು ಅನುಸರಿಸತೊಡಗಿತು. ಆದರೆ ಇದರ ಪರಿಣಾಮ ಬಯಸಿದಂತಾಗಲಿಲ್ಲ. ಸ್ವಾದಿಷ್ಟ ಪದಾರ್ಥಗಳಿಗೆ ಬದಲಾಗಿ ತಿನ್ನಲಾರದ ಅರುಚಿಕರವಾದ ವಸ್ತುಗಳೇ ಹೊಟ್ಟೆ ತುಂಬ ತಿನ್ನಲು ಸಿಕ್ಕಿದವು. ಆದರಿಂದಾಗಿ ಎಷ್ಟೋ ದಿನಗಳವರೆಗೆ ಹೊಟ್ಟೆಯು ಬದಲು ಬೆನ್ನಿನಲ್ಲಿ ವಿಷಮ ವೇದನೆಯಾಗುತ್ತಿತ್ತು. ಆಗ ಅದು ಬೇರೆ ದಾರಿಯಿಲ್ಲದೆ ಮತ್ತೊಮ್ಮೆ ಸನ್ಮಾರ್ಗವನ್ನೇ ಆಶ್ರಯಿಸಬೇಕಾಯಿತು. ಎಷ್ಟೇ ಹೊಡೆತ ಬೀಳಲಿ, ಅದರ ಬಯಕೆ ಮಾತ್ರ ತಪ್ಪಲಿಲ್ಲ. ಎಲ್ಲಾದರೂ ತುಂಬ ಬೇಟೆ ಸಿಗಬೇಕು, ಮೊಲ, ಜಿಂಕೆ ಮತ್ತು ಕುರಿಯ ಮರಿಗಳು ಓಡಾಡುತ್ತಿರುವ ಮೈದಾನವಾಗಬೇಕು; ಅಲ್ಲಿ ಮಾಲಿಕರಿರಕೂಡದು, ಎದುರಾಳಿಗಳ ವಾಸನೆ ಸಹ ಇರಕೂಡದು; ಉಂಡ ಮೇಲೆ ವಿಶ್ರಾಂತಿಗೆ ದಟ್ಟವಾಗಿ ಬೆಳೆದ ಮರಗಳ ನೆರಳಿರಬೇಕು; ಕುಡಿಯಲು ನದಿಯ ಪವಿತ್ರವಾದ ನೀರಿರಬೇಕು – ಅಂತಹ ಒಂದು ಜಾಗವನ್ನು ಅದು ಹುಡುಕುತ್ತಿತ್ತು. ಅಲ್ಲಿ ಮನಸೋ ಇಚ್ಛೆ ಬೇಟೆಯಾಡಿ, ತಿಂದು, ಕುಡಿದು, ಚೆನ್ನಾಗಿ ನಿದ್ರೆ ಮಾಡುತ್ತೇನೆ; ಅಲ್ಲಿ ಎಲ್ಲೆಲ್ಲೂ ನನ್ನದೇ ಪ್ರತಾಪ ನಡೆಯುತ್ತದೆ; ನನ್ನನ್ನೇ ತಮ್ಮ ದೊರೆಯೆಂದುಕೊಳ್ಳುವಂತೆ ಅಲ್ಲಿ ಎಲ್ಲರ ಮೇಲೆಯೂ ಪ್ರಭಾವ ಬೀರುತ್ತೇನೆ. ಬರುಬರುತ್ತ ಅಲ್ಲಿ ಯಾವ ವೈರಿಗೂ ಕಾಲಿಡುವ ಸಾಹಸವಾಗದಂತೆ ನನ್ನ ಅಧಿಕಾರ ಸ್ಥಾಪಿಸುತ್ತೇನೆ ಎಂದುಕೊಂಡಿತು ಟಾಮಿ.

ಒಂದು ದಿನ ಅದು ಈ ಕಲ್ಪನೆಗಳ ಸುಖಸ್ವಪ್ನ ಕಾಣುತ್ತ ತಲೆತಗ್ಗಿಸಿಕೊಂಡು ದೊಡ್ಡ ದಾರಿ ಬಿಟ್ಟು ಗಲ್ಲಿಯಲ್ಲಿ ನಡೆದಿರುವಾಗ ಇದ್ದಕ್ಕಿದ್ದಂತೆ ಇನ್ನೊಂದು ನಾಯಿ ಎದುರಾಯಿತು. ಟಾಮಿ ಅದರಿಂದ ತಪ್ಪಿಸಿಕೊಂಡು ಹೋಗಬಯಸಿತು. ಆದರೆ ಆ ಇನ್ನೊಂದು ನಾಯಿ ಇವರಷ್ಟು ಶಾಂತಿಪ್ರಿಯವಾಗಿರಲಿಲ್ಲ. ಅದು ಫಕ್ಕನೆ ಹಾರಿ ಟಾಮಿಯ ಕುತ್ತಿಗೆ ಹಿಡಿಯಿತು. ಟಾಮಿ ಬಹಳವಾಗಿ ಬೇಡಿಕೊಂಡಿತು, ಗೋಗರೆದು ಹೇಳಿತು – "ದಯವಿಟ್ಟು ನನಗೆ ಇಲ್ಲಿಂದ ಹೋಗಲು ಬಿಡು. ಇನ್ನು ಈ ಕಡೆ ಕಾಲಿಡೋಲ್ಲ ಅಂತ ಆಣೆ ಮಾಡ್ತೀನಿ. ಯಾವುದೋ ಕೇಡುಗಾಲ ಬಂದು ನಾನು ನಿನ್ನ ಅಧಿಕಾರ ಕ್ಷೇತ್ರದಲ್ಲಿ ಕಾಲಿಡೋ ಹಾಗಾಯಿತು." ಆದರೆ ಆ ನಿರ್ದಯಿಯಾದ ಮದಾಂಧ ಪ್ರಾಣಿ ಕೊಂಚವಾದರೂ ಕರುಣೆ ತೋರಿಸಲಿಲ್ಲ. ಕೊನೆಗೆ ಟಾಮಿ ಸೋತು ಕತ್ತೆಯಂತೆ ಕಿರುಚುತ್ತ ದೂರಿಟ್ಟಿತು. ಆ ಕೋಲಾಹಲವನ್ನು ಕೇಳಿ ಮೊಹಲ್ಲಾದ ಒಂದೆರಡು ಮುಖಂಡ ನಾಯಿಗಳು ಗುಂಪುಗೂಡಿದವು. ಆದರೆ ಅವು ಸಹ ದೀನ ಟಾಮಿಗೆ ದಯೆ ತೋರುವ ಬದಲು ಅದರ ಮೇಲೆಯೇ ದಂತಪ್ರಹಾರ ಮಾಡತೊಡಗಿದುವು. ಈ ಅನ್ಯಾಯದ ವರ್ತನೆಯಿಂದಾಗಿ ಟಾಮಿಯ ಎದೆಯೊಡೆಯಿತು. ಅದು ಜೀವದ ಹಂಗು ತೊರೆದು ಓಡಿತು. ಆ ಅತ್ಯಾಚಾರಿ ಪ್ರಾಣಿಗಳು ತುಂಬ ದೂರದವರೆಗೆ ಟಾಮಿಯನ್ನು ಅಟ್ಟಿಸಿಕೊಂಡು ಹೋದವು. ಟಾಮಿ ದಾರಿಯಲ್ಲಿ ಎದುರಾದ ನದಿಯೊಂದನ್ನು ಹಾರಿ ಪ್ರಾಣ ಉಳಿಸಿಕೊಳ್ಳಬೇಕಾಯಿತು.

ಎಲ್ಲರಿಗೂ ಅವರವರದೇ ಒಂದೊಂದು ದಿನ ಕೂಡಿ ಬಂದಿತ್ತೆನ್ನಬೇಕು. ಅದು ನದಿಗೆ ಹಾರಿದ್ದು ಪ್ರಾಣ ಉಳಿಸಿಕೊಳ್ಳಲೆಂದು; ಆದರೆ ಅದರ ಕೈಗೆ ಸಿಕ್ಕಿದ್ದು ಮುತ್ತು. ಈಜುತ್ತ ಈಜುತ್ತ ಟಾಮಿ ನದಿಯ ಎದುರು ದಂಡೆ ತಲುಪಿತು. ಅಲ್ಲಿ ಅದು ಹಿಂದಿನಿಂದ ಕನಸು ಕಾಣುತ್ತ ಬಂದಿದ್ದ ಬಯಕೆಗಳೆಲ್ಲವೂ ಮೂರ್ತಗೊಂಡವು.

## 2

ನದಿಯ ಎದುರು ದಂಡೆಯ ಮೇಲೊಂದು ವಿಸ್ತಾರವಾದ ಮೈದಾನವಿತ್ತು. ಕಣ್ಣು ಹಾಯುವವರೆಗೂ ಹಸಿರಿನ ಸಿರಿ ಕಾಣಿಸುತ್ತಿತ್ತು. ಒಂದು ಕಡೆ ಝರಿಗಳ ಮಧುರ ಕಲರವ, ಇನ್ನೊಂದು ಕಡೆ ಜಲಪಾತಗಳ ಮಂದಗಾನ. ಇಲ್ಲಿ ಸುಖವೆರೆಯುವ ಮರಗಳ ಗುಂಪು; ಅಲ್ಲಿ ಮಟ್ಟಸವಾದ ಮರಳಿನ ಮೈದಾನ. ದೃಶ್ಯ ಸುರಮ್ಯವೂ ಮನೋಹರವೂ ಆಗಿತ್ತು.

ಅಲ್ಲಿ ಬಲು ಚೂಪಾದ ಉಗುರುಳ್ಳ ಪ್ರಾಣಿಗಳಿದ್ದವು. ಅವುಗಳ ಮುಖ ನೋಡಿಯೇ ಟಾಮಿಯ ಎದೆಯಲ್ಲಿ ಕಂಪನವೇಳುತ್ತಿತ್ತು. ಆದರೆ ಅವು ಟಾಮಿಯ ತಂಟೆಗೆ ಬರಲಿಲ್ಲ. ತಮ್ಮ ನಡುವೆಯೇ ದಿನವೂ ಜಗಳ ಕಾದುಕೊಳ್ಳುತ್ತಿದ್ದವು; ದಿನವೂ ರಕ್ತದ ಹೊಳೆ ಹರಿಯುತ್ತಿತ್ತು. ಆ ಭಯಂಕರ ಪ್ರಾಣಿಗಳೊಡನೆ ಯಾವ ವ್ಯವಹಾರ ಇಟ್ಟುಕೊಳ್ಳುವುದೂ ಸಾಧ್ಯವಿಲ್ಲವೆಂದು ಟಾಮಿಗೆ ಗೊತ್ತಾಯಿತು. ಅದು ಜಾಣತನದಿಂದ ಕೆಲಸ ನಡೆಸಲು ಷುರುಮಾಡಿತು. ಎರಡು ಪ್ರಾಣಿಗಳು ಹೋರಾಡಿದಾಗ ಅವುಗಳಲ್ಲೊಂದು ಗಾಯಗೊಂಡು ಸತ್ತು ಬಿದ್ದರೆ ಟಾಮಿ ಥಟ್ಟನೆ ನುಗ್ಗಿ ಮಾಂಸದ ತುಂಡೊಂದನ್ನು ಕಚ್ಚಿಕೊಂಡು ಓಡುತ್ತಿತ್ತು. ಏಕಾಂತದಲ್ಲಿ ಕುಳಿತು ತಿನ್ನುತ್ತಿತ್ತು. ಜಯ ಗಳಿಸಿದ ಪ್ರಾಣಿ ತನ್ನ ವಿಜಯದ ಮತ್ತಿನಲ್ಲಿ ಟಾಮಿಯನ್ನು ತುಚ್ಛವೆಂದು ತಿಳಿದು ಏನೂ ಹೇಳಹೋಗುತ್ತಿರಲಿಲ್ಲ.

ಇದರ ಪರಿಣಾಮವಾಗಿ ಟಾಮಿಗೇ ಲಾಭವಾಯಿತು. ದಿನವೂ ದೀಪಾವಳಿಯೇ! ಗೋದಿಯೆಂದರೆ ಗೋದಿ, ಬೆಲ್ಲವೆಂದರೆ ಬೆಲ್ಲ! ಯಾವುದಕ್ಕೂ ಕೊರತೆಯಿರಲಿಲ್ಲ. ಟಾಮಿ ದಿನವೂ ಹೊಸ ಹೊಸ ಪದಾರ್ಥಗಳನ್ನು ಹಾರಿಸಿಕೊಂಡು ಬಂದು, ತಿಂದು, ತೇಗಿ, ಮರದ ಕೆಳಗೆ ಮಲಗುತ್ತಿತ್ತು. ಅದು ಅಂತಹ ಸ್ವರ್ಗಸುಖದ ಕಲ್ಪನೆಯನ್ನೂ ಮಾಡಿರಲಿಲ್ಲ. ಕೆಲವೇ ದಿನಗಳಲ್ಲಿ ಪೌಷ್ಟಿಕ ಪದಾರ್ಥಗಳ ಸೇವನೆಯಿಂದಾಗಿ ಟಾಮಿಯ ವರ್ತನೆಯೇ ಬೇರೆಯಾಯಿತು. ಅದರ ದೇಹ ದೃಢಕಾಯವಾಗಿ ತೇಜಸ್ಸಿನಿಂದ ಕೂಡಿತು. ಈಗ ಅದು ಸಣ್ಣಪುಟ್ಟ ಪ್ರಾಣಿಗಳ ಮೇಲೆ ತಾನೇ ಕೈ ಮಾಡಿ ಹಿಡಿಯತೊಡಗಿತು. ಕಾಡುಪ್ರಾಣಿಗಳು ಈಗ ಎಚ್ಚರಗೊಂಡು ಟಾಮಿಯನ್ನು ಅಲ್ಲಿಂದ ಓಡಿಸಲು ಪ್ರಯತ್ನಿಸಿದವು. ಟಾಮಿ ಒಂದು ಹೊಸ ಉಪಾಯ ಹೂಡಿತು. ಒಮ್ಮೆ ಒಂದು ಪ್ರಾಣಿಗೆ ನಿನ್ನ ಇಂತಹ ಆ ವೈರಿ ನಿನ್ನನ್ನು ಕೊಲ್ಲಲು ತಯಾರಿ ನಡಸುತ್ತಿದೆ ಎಂದು ಹೇಳುವುದು; ಇನ್ನೊಂದಕ್ಕೆ ಇಂತಹ ಈ ವೈರಿ ಬಯ್ಯುತ್ತಿತ್ತು

ಎನ್ನುವುದು. ಕಾಡುಪ್ರಾಣಿಗಳು ಟಾಮಿಯ ಕಪಟಕ್ಕೆ ಸಿಕ್ಕು ತಮ್ಮತಮ್ಮಲ್ಲಿ ಕಾದಾಡುತ್ತಿದ್ದವು; ಟಾಮಿಯ ಭಾಗ್ಯ ಬೆಳಗುತ್ತಿತ್ತು. ಇದು ಎಲ್ಲಿಯವರೆಗೆ ಹೋಯಿತೆಂದರೆ ಕಾಡಿನ ದೊಡ್ಡ ದೊಡ್ಡ ಪ್ರಾಣಿಗಳೆಲ್ಲವೂ ನಾಶವಾಗಿ ಹೋದವು. ಚಿಕ್ಕ ಚಿಕ್ಕ ಪ್ರಾಣಿಗಳಿಗೆ ಟಾಮಿಯನ್ನು ಎದುರಿಸುವ ಧೈರ್ಯವಿರುತ್ತಿರಲಿಲ್ಲ. ಟಾಮಿಯ ಶಕ್ತಿ ಉನ್ನತಿಗಳನ್ನು ಕಂಡು ಈ ವಿಚಿತ್ರ ಪ್ರಾಣಿ ನಮ್ಮ ಮೇಲೆ ಅಧಿಕಾರ ನಡೆಸಲು ಆಕಾಶದಿಂದ ಇಳಿದುಬಂದಿದೆ ಎಂದು ಅವು ತಿಳಿಯತೊಡಗಿದವು. ಟಾಮಿಯೂ ತನ್ನ ಬೇಟೆಯ ಪ್ರತಿಭೆಯನ್ನು ಪ್ರದರ್ಶಿಸಿ ಅವುಗಳ ಆ ಭ್ರಾಂತಿಗೆ ಪುಷ್ಟಿ ಕೊಡುತ್ತಿತ್ತು. ಟಾಮಿ ಬಲು ಜಂಬದಿಂದ ಹೇಳುತ್ತಿತ್ತು – "ಪರಮಾತ್ಮ ನಿಮ್ಮನ್ನು ಆಳಲು ನನ್ನನ್ನು ಕಳಿಸಿಕೊಟ್ಟಿದ್ದಾನೆ. ಇದು ಈಶ್ವರನ ಇಚ್ಛೆ. ನೀವು ಆರಾಮವಾಗಿ ನಿಮ್ಮ ನಿಮ್ಮ ಗೂಡುಬಿಲಗಳಲ್ಲಿರಿ. ನಾನು ನಿಮಗೆ ಏನೂ ಹೇಳುವುದಿಲ್ಲ. ನಾನು ನಿಮಗೆ ಮಾಡುವ ಈ ಸೇವೆಗೆ ಪ್ರತಿಫಲವಾಗಿ ನಿಮ್ಮಲ್ಲಿ ಒಬ್ಬೊಬ್ಬರನ್ನು ಬೇಟೆಯಾಡುತ್ತಿರುತ್ತೇನೆ. ನನಗೂ ಹೊಟ್ಟೆಯೆಂಬುದೊಂದಿದೆ. ಆಹಾರವಿಲ್ಲದೆ ನಾನು ಹೇಗೆ ಬದುಕಲಿ; ಹೇಗೆ ನಿಮ್ಮ ರಕ್ಷಣೆ ಮಾಡಲಿ" ಟಾಮಿ ಈಗ ತುಂಬ ಗತ್ತಿನಿಂದ ಸುತ್ತಲೂ ಪ್ರತಿಷ್ಠೆಯ ದೃಷ್ಟಿ ಬೀರುತ್ತ ಕಾಡಿನಲ್ಲೆಲ್ಲಾ ವಿಹರಿಸುತ್ತಿತ್ತು.

ಈ ನಾಡಿನಲ್ಲಿ ತನಗೆ ವಿರುದ್ಧವಾಗಿ ಯಾರಾದರೂ ಶತ್ರುಗಳು ತಲೆಯೆತ್ತಿ ನಿಂತರೆ ಹೇಗೆ ಎಂಬ ಒಂದೇ ಒಂದು ಚಿಂತೆ ಟಾಮಿಯನ್ನು ಕಾಡುತ್ತಿತ್ತು. ಅದು ಸದಾ ಎಚ್ಚರದಿಂದ ಓಡಾಡುತ್ತಿತ್ತು. ದಿನ ಕಳೆದಂತೆ ಅದರ ಸುಖಭೋಗಗಳ ಚಟ ಹೆಚ್ಚಿದಂತೆಯೇ ಚಿಂತೆಯೂ ಹೆಚ್ಚುತ್ತ ಹೋಯಿತು. ಈಗ ಅದು ಹೆಚ್ಚಾಗಿ ರಾತ್ರಿಯ ಹೊತ್ತು ಬೆಚ್ಚಿ ಬೀಳುತ್ತಿತ್ತು; ಯಾವದೋ ಅಜ್ಞಾತ ಶತ್ರುವಿನ ಬೆನ್ನಟ್ಟಿ ಓಡುತ್ತಿತ್ತು. ಅದು ಬಹು ಮಟ್ಟಿಗೆ 'ಕುರುಡು ನಾಯಿ ಗಾಳಿಗೆ ಬೊಗಳಿತು' ಎಂಬ ಗಾದೆಯನ್ನು ಸಾಧಿಸಿ ತೋರಿಸುತ್ತಿತ್ತು. ಕಾಡಿನ ಪ್ರಾಣಿಗಳಿಗೆ ಅದು ಹೇಳುತ್ತಿತ್ತು – "ನೀವು ಬೇರೆ ಯಾವದಾದರೂ ದಣಿಯ ಬಲೆಗೆ ಬೀಳದಂತೆ ದೇವರು ನಿಮ್ಮನ್ನು ಕಾಪಾಡಲಿ. ಇನ್ಯಾರಾದರೂ ಆದರೆ ನಿಮ್ಮನ್ನು ಅರೆದುಬಿಡುತ್ತಾರೆ. ನಾನು ನಿಮ್ಮ ಹಿತೈಷಿ. ಸದಾ ನಿಮಗೆ ಶುಭ ಕೋರುವುದೇ ನನ್ನ ಕೆಲಸ. ಬೇರೆ ಯಾರಿಂದಲೂ ಇದನ್ನು ಅಪೇಕ್ಷಿಸಬೇಡಿ". ಪ್ರಾಣಿಗಳು ಒಕ್ಕೊರಲಿನಿಂದ ಹೇಳುತ್ತಿದ್ದವು – "ಬದುಕಿರುವವರೆಗೆ ನಾವು ನಿಮಗೇ ಅಧೀನರಾಗಿರುತ್ತೇವೆ".

ಕೊನೆಕೊನೆಗೆ ಟಾಮಿ ಒಂದು ಕ್ಷಣ ಸಹ ಶಾಂತಿಯಿಂದ ಕೂಡುವುದು ಕಷ್ಟವಾಯಿತು. ಹಗಲೂ ರಾತ್ರಿ ಅದು ನದಿಯ ದಂಡೆಯ ಮೇಲೆ ಅತ್ತಿಂದಿತ್ತ ಓಡಾಡುತ್ತಿತ್ತು. ಓಡಿ ಓಡಿ ಅದಕ್ಕೆ ಏದುಸಿರು ಬಂದು, ಉಸಿರು ಕಟ್ಟಿದಂತಾಗುತ್ತಿತ್ತು. ಚಿತ್ತಕ್ಕೆ ಶಾಂತಿಯಿರುತ್ತಿರಲಿಲ್ಲ. ಎಲ್ಲಿ ಯಾರಾದರೂ ಶತ್ರುಗಳು ನುಸುಳಿ ಬಂದರೆ?

ಆದರೆ ಆಶ್ವೀಜಮಾಸ ಬಂದೊಡನೆಯೇ ಟಾಮಿಯ ಮನಸ್ಸು ಮತ್ತೆ ತನ್ನ ಹಿಂದಿನ ಜೊತೆಗಾರರೊಡನೆ ಕೂಡಲು ಬಯಸುತ್ತಿತ್ತು. ಏನೇ ಮಾಡಲಿ ಅದಕ್ಕೆ ಮನಸ್ಸನ್ನು ಬಿಗಿಹಿಡಿಯಲಾಗದಂತಾಯಿತು. ಒಬ್ಬಿಬ್ಬರು ಗೆಳೆಯರೊಡನೆ ಕೂಡಿ,

ಯಾವಳೋ ಪ್ರೇಮಿಯನ್ನು ಬೆನ್ನಟ್ಟಿ, ಗಲ್ಲಿಗಲ್ಲಿ, ಸಂದಿಗೊಂದಿಗಳಲ್ಲಿ ಅಲೆದಾಡುತ್ತಿದ್ದ ಹಳೆಯ ದಿನಗಳು ಅದಕ್ಕೆ ನೆನಪಿಗೆ ಬಂದವು. ಒಂದೆರಡು ದಿನ ಅದು ಹೇಗೋ ತಾಳಿಕೊಂಡಿತು. ಆದರೆ ಕೊನೆಗೆ ಒತ್ತಡ ತಾಳಲಾರದೆ ಅದೃಷ್ಟವನ್ನು ಆ ಕಡೆ ಒದ್ದು ಟಾಮಿ ಎದ್ದುನಿಂತಿತು. ಈಗ ಅದಕ್ಕೆ ತನ್ನ ಶಕ್ತಿ ತೇಜಸ್ಸುಗಳ ಬಗ್ಗೆಯೂ ಅಭಿಮಾನ ಬಂದಿತ್ತು. ಒಂದಿಬ್ಬರಿಗೆ ಅದು ಅಲ್ಲೇ ರುಚಿ ತೋರಿಸಬಲ್ಲದಾಗಿತ್ತು.

ಆದರೆ ನದಿಯ ಈ ಕಡೆ ಬಂದೊಡನೆಯೇ ಅದರ ಆತ್ಮವಿಶ್ವಾಸ ಪ್ರಾತಃಕಾಲದ ಕತ್ತಲಿನಂತೆ ಕರಗಿಹೋಯಿತು. ಅದರ ನಡೆ ಮಂದವಾಯಿತು. ತಾನೇತಾನಾಗಿ ತಲೆ ತಗ್ಗಿತು,ಬಾಲ ಮುದುಡಿಕೊಂಡಿತು. ಆದರೆ ಯಾವದೋ ಹೆಣ್ಣುನಾಯಿ ಬರುತ್ತಿರುವುದನ್ನು ಕಂಡೊಡನೆಯೇ ಟಾಮಿಯ ಮನಸ್ಸು ಕದಡಿ ಅದನ್ನು ಹಿಂಬಾಲಿಸತೊಡಗಿತು. ಟಾಮಿಯ ಚೇಷ್ಟೆ ಹೆಣ್ಣುನಾಯಿಗೆ ಅಪ್ರಿಯವೆನಿಸಿತು. ಅದು ಜೋರಾಗಿ ಟಾಮಿಯನ್ನು ಅವಹೇಳನ ಮಾಡಿತು. ಅದರ ಧ್ವನಿಯನ್ನು ಕೇಳಿ ಆ ಹೆಣ್ಣುನಾಯಿಯ ಅವೆಷ್ಟೋ ಪ್ರೇಮಿಗಳು ಬಂದು ಸೇರಿದುವು. ಟಾಮಿಯನ್ನು ನೋಡಿದೊಡನೆಯೇ ಅವು ಎಗರಿಬಿದ್ದವು. ಟಾಮಿಗೆ ಕಕ್ಕಾಬಿಕ್ಕಿಯಾಯಿತು. ಅದು ಮುಂದೇನು ಮಾಡಬೇಕೆಂದು ನಿಶ್ಚಯಿಸುತ್ತಿರುವಾಗಲೇ ನಾಲ್ಕೂ ಕಡೆಯಿಂದ ಅದರ ಮೇಲೆ ಉಗುರು ಹಲ್ಲುಗಳ ಮಳೆಗರೆಯಿತು. ಅದಕ್ಕೆ ಓಡಿ ಹೋಗುವುದು ಸಹ ಆಗಲಿಲ್ಲ. ದೇಹ ರಕ್ತದಿಂದ ತೋಯ್ದುಹೋಯಿತು. ಓಡಿದರೂ ಆ ಸೈತಾನಗಳ ಒಂದು ಗುಂಪು ಹಿಂದೆಯೇ ಬಂದಿತ್ತು.

ಆವತ್ತಿನಿಂದ ಅದರ ಎದೆಯಲ್ಲಿ ಯಾವದೋ ಶಂಕೆ ಕವಿಯಿತು. ಆಕ್ರಮಣಕಾರಿಗಳ ದಳ ತನ್ನ ಸುಖಶಾಂತಿಯನ್ನು ಕೆಡಿಸಿ, ತನ್ನ ಸ್ವರ್ಗವನ್ನು ವಿಧ್ವಂಸ ಮಾಡಲು ಹಿಂದೆ ಬರುತ್ತಿದೆಯೆಂಬ ಅಂಜಿಕೆ ಒಂದೊಂದು ಗಳಿಗೆಯೂ ಇರುತ್ತಿತ್ತು. ಮೊದಲು ಈ ಭಯವೇನೂ ಕಡಿಮೆಯಿರಲಿಲ್ಲ; ಈಗ ಇದ್ದಿದ್ದೂ ಹೆಚ್ಚಾಯಿತು.

ಒಂದು ದಿನ ಅದರ ಮನಸ್ಸು ಭಯದಿಂದ ಎಷ್ಟರಮಟ್ಟಿಗೆ ವ್ಯಾಕುಲವಾಯಿತೆಂದರೆ ಶತ್ರುದಳ ಬಂದೇಬಿಟ್ಟಿತೆಂದು ಅದು ತಿಳಿಯಿತು. ಬೇಗನೆ ನದಿಯ ದಂಡೆಗೆ ಬಂದು ಅತ್ತಿಂದಿತ್ತ ಓಡತೊಡಗಿತು.

ಹಗಲು ಕಳೆಯಿತು, ರಾತ್ರಿ ಕಳೆಯಿತು. ಆದರೆ ಟಾಮಿಗೆ ವಿಶ್ರಾಂತಿಯಿಲ್ಲ. ಮರುದಿನ ಬಂತು, ಹೋಯಿತು. ಟಾಮಿ ಅನ್ನ ನೀರಿಲ್ಲದೆ ನದಿಯ ದಂಡೆಯ ಮೇಲೆ ಶತಪಥ ಹಾಕುತ್ತಿತ್ತು.

ಹೀಗೆ ಐದು ದಿನ ಕಳೆಯಿತು. ಟಾಮಿಯ ಕಾಲು ನಡುಗತೊಡಗಿತು. ಕಣ್ಣಿಗೆ ಕತ್ತಲು ಕವಿಯಿತು. ಹಸಿವಿನಿಂದ ನರಳುತ್ತ ಕೆಳಗೆ ಬೀಳುತ್ತಿತ್ತು. ಆದರೆ ಏನೇ ಆಗಲಿ, ಅದರ ಶಂಕೆ ಮಾತ್ರ ಆರಲಿಲ್ಲ.

ಕೊನೆಗೆ ಏಳನೆಯ ದಿನ ನಿರ್ಭಾಗ್ಯ ಟಾಮಿ ಅಧಿಕಾರದ ಚಿಂತೆ ಹಚ್ಚಿಕೊಂಡು, ಜರ್ಜರವಾಗಿ ಶಿಥಿಲವಾಗಿ ಪರಲೋಕಯಾತ್ರೆ ಮಾಡಿತು. ಕಾಡಿನ ಯಾವ ಪ್ರಾಣಿಯೂ ಅದರ ಹತ್ತಿರ ಸುಳಿಯಲಿಲ್ಲ. ಯಾರೂ ಅದರ ಚರ್ಚೆ ಮಾಡುವ

ಗೋಜಿಗೂ ಹೋಗಲಿಲ್ಲ. ಯಾರೂ ಆದರ ಹೆಣದ ಮೇಲೆ ಕಣ್ಣೀರು ಸುರಿಸಲಿಲ್ಲ. ಎಷ್ಟೋ ದಿನಗಳವರೆಗೆ ಆದರ ಹೆಣದ ಮೇಲೆ ಹದ್ದುಕಾಗೆಗಳು ಸುತ್ತು ಹೊಡೆಯುತ್ತಿದ್ದವು. ಕಟ್ಟಕಡೆಗೆ ಟಾಮಿಯ ಅಸ್ಥಿಪಂಜರದ ಹೊರತು ಬೇರೇನೂ ಉಳಿಯಲಿಲ್ಲ.

# 3. ಅಮಾವಾಸ್ಯೆಯ ರಾತ್ರಿ

ದೀಪಾವಳಿಯ ಸಂಜೆ. ಶ್ರೀನಗರದ ತಿಪ್ಪೆಯ ರಾಶಿಯ ಹಾಗೂ ಪಾಳುಗಳ ಭಾಗ್ಯ ಸಹ ಬೆಳಗಿತ್ತು. ಊರಿನ ಹುಡುಗ ಹುಡುಗಿಯರು ಬೆಳ್ಳಿಯ ತಟ್ಟೆಗಳಲ್ಲಿ ದೀಪವಿಟ್ಟುಕೊಂಡು ದೇಗುಲದ ಕಡೆ ಹೊರಟಿದ್ದರು. ಆ ದೀಪಗಳಿಂದ ಅವರ ಮುಖಾರವಿಂದ ಬೆಳಗುತ್ತಿತ್ತು. ಮನೆಮನೆಯೂ ಬೆಳಕಿನಿಂದ ಥಳಥಳಿಸುತ್ತಿತ್ತು. ಆದರೆ ಪಂಡಿತ ದೇವದತ್ತರ ಸಪ್ತದ್ವಾರಗಳ ಭವನವೊಂದು ಮಾತ್ರ ಕಗ್ಗತ್ತಲಲ್ಲಿ ಗಂಭೀರ ಹಾಗೂ ಭಯಂಕರ ರೂಪತಾಳಿ ನಿಂತಿತ್ತು. ಅದು ತನ್ನ ಹಿಂದಿನ ಉನ್ನತಿಯ ದಿನಗಳನ್ನು ಮರೆತಿರಲಿಲ್ಲವೆಂಬ ಕಾರಣದಿಂದಾಗಿ ಗಂಭೀರವಾಗಿತ್ತು. ದೀಪಾವಳಿಯ ಬೆಳಕು ಅದನ್ನು ಗೇಲಿ ಮಾಡುತ್ತಿದೆಯೋ ಎಂಬಂತಿದ್ದುದರಿಂದ ಅದು ಭಯಂಕರವಾಗಿತ್ತು. ಸ್ವತಃ ಈರ್ಷ್ಯೆಯೇ ಅದನ್ನು ನೋಡಿ ಕೈಕೈ ಹಿಸುಕಿಕೊಳ್ಳುತ್ತಿದ್ದ ಕಾಲ ಒಂದಿತ್ತು. ಈಗ ಇನ್ನೊಂದು ಕಾಲದಲ್ಲಿ ಸ್ವತಃ ತಿರಸ್ಕಾರವೇ ಅದರ ಕಡೆ ವ್ಯಂಗ್ಯ ಬೀರಿತ್ತು. ಬಾಗಿಲಲ್ಲಿ ಕಾವಲಾಳುಗಳ ಬದಲು ಮಂದಾರದ ಗಿಡಗಳೂ ಹರಳಿನ ಗಿಡಗಳೂ ಬೆಳೆದು ನಿಂತಿದ್ದುವು. ದಿವಾನಖಾನೆಯಲ್ಲಿ ಈಗ ಗೂಳಿಯೊಂದು ಸದಾ ಮಲಗಿರುತ್ತಿತ್ತು. ಮಹಡಿಯ ಮೇಲೆ ಸುಂದರ ರಮಣಿಯರು ಇಂಪಾಗಿ ಸಂಗೀತ ಹಾಡುತ್ತಿರುತ್ತಿದ್ದಲ್ಲಿ ಈಗ ಕಾಡು ಪಾರಿವಾಳಗಳು ಕಿರುಚುತ್ತಿದ್ದವು. ಇಂಗ್ಲಿಷ್ ಶಾಲೆಯಲ್ಲಿ ಕಲಿಯುವ ವಿದ್ಯಾರ್ಥಿಗಳ ನಡವಳಿಕೆಯಂತೆ ಆ ಭವನದ ಬುಡವೇ ಸಡಿಲವಾಗಿತ್ತು. ಗೋಡೆಗಳು ವಿಧವೆಯರ ಹೃದಯದಂತೆ ಒಡೆದು ಚೂರುಚೂರಾಗಿದ್ದವು. ಆದರೆ ಕಾಲಕ್ಕೆ ಯಾರೇನು ಹೇಳಲಾದೀತು ? ಕಾಲವನ್ನು ನಿಂದಿಸುವುದು ವ್ಯರ್ಥ ಹಾಗೂ ತಪ್ಪು. ಅದು ಮೂರ್ಖತೆ ಹಾಗೂ ಅದೂರದೃಷ್ಟಿಯ ಫಲ.

ಅಮಾವಾಸ್ಯೆಯ ರಾತ್ರಿ. ಕತ್ತಲೆ ಬೆಳಕಿಗೆ ಸೋತು ಆ ವಿಶಾಲ ಭವನದಲ್ಲಿ ಆಶ್ರಯ ಪಡೆದಂತಿತ್ತು. ಪಂಡಿತ ದೇವದತ್ತರು ತಮ್ಮ ಅರೆಗತ್ತಲ ಕೋಣೆಯಲ್ಲಿ ಮೌನವಾಗಿ, ಆದರೂ ಚಿಂತಾಮಗ್ನರಾಗಿ ಕುಳಿತಿದ್ದರು. ಈಗ್ಗೆ ಒಂದು ತಿಂಗಳಿನಿಂದ ಅವರ ಹೆಂಡತಿ ಗಿರಿಜಳ ಜೀವನದೊಂದಿಗೆ ನಿರ್ದಯಿಯಾದ ಕಾಲ ಆಟವಾಡತೊಡಗಿತ್ತು. ಪಂಡಿತಜೀ ದುಃಖದಾರಿದ್ರ್ಯಗಳನ್ನು ಅನುಭವಿಸಲು ಸಿದ್ಧರಿದ್ದರು. ಅದೃಷ್ಟದಲ್ಲಿನ ನಂಬಿಕೆ ಅವರಿಗೆ ಧೈರ್ಯ ಕೊಟ್ಟಿತ್ತು. ಆದರೆ ಈಗ ಬಂದಿದ್ದ ಹೊಸ ವಿಪತ್ತು ಅವರ

ಸಹನಶಕ್ತಿಗೆ ಮೀರಿದುದಾಗಿತ್ತು. ಪಾಪ, ಆ ಬಡಪಾಯಿ ದಿನವೂ ಗಿರಿಜಳ ತಲೆದಸಿಯ ಹತ್ತಿರ ಕುಳಿತು ಅವಳ ಸೊರಗಿದ ಮುಖ ನೋಡಿ ಒಳಗಿಂದೊಳಗೇ ಕುದಿಯುತ್ತಿದ್ದರು, ಅಳುತ್ತಿದ್ದರು. ಗಿರಿಜಳು ಜೀವನದಲ್ಲಿ ನಿರಾಶೆಗೊಂಡು ಅತ್ತರೆ ಅವರು ಅವಳಿಗೆ ಸಮಾಧಾನ ಹೇಳುತ್ತಿದ್ದರು – "ಗಿರಿಜಾ, ಅಳಬೇಡ ಬೇಗನೆ ಗುಣವಾಗುತ್ತೆ".

ಪಂಡಿತ ದೇವದತ್ತರ ಪೂರ್ವಜರ ವ್ಯವಹಾರ ಬಹು ವಿಶಾಲವಾಗಿ ಹರಡಿತ್ತು. ಅವರು ಲೇವಾದೇವಿ ಮಾಡುತ್ತಿದ್ದರು. ಅವರ ವ್ಯವಹಾರ ಹೆಚ್ಚಾಗಿ ದೊಡ್ಡ ದೊಡ್ಡ ಜಮೀನುದಾರರುಗಳೊಡನೆ, ರಾಜಮನೆತನದವರೊಡನೆ. ಆಗಿನ್ನೂ ಜನರ ನಿಯತ್ತು ಈಗಿನಂತೆ ಅಗ್ಗಕ್ಕೆ ಮಾರುವ ವಸ್ತುವಾಗಿರಲಿಲ್ಲ. ಬರಿಯ ಕಾಗದದ ಆಧಾರದ ಮೇಲೆ ಲಕ್ಷಾಂತರ ರೂಪಾಯಿಗಳ ವ್ಯವಹಾರ ನಡೆಯುತ್ತಿತ್ತು. ಆದರೆ ಸನ್ ಸಾವಿರದೆಂಟನೂರ ಐವತ್ತೇಳರ ದಂಗೆ ಎಷ್ಟೋ ರಾಜ್ಯ ಸಂಸ್ಥಾನಗಳನ್ನು ಅಳಿಸಿಹಾಕಿತು. ಅವುಗಳ ಜೊತೆಗೇ ಸಾಹುಕಾರರ ಅನ್ನಧನ ಪೂರ್ಣವಾದ ಪರಿವಾರಗಳೂ ಮಣ್ಣುಗೂಡಿದವು. ಖಜಾನೆಗಳು ಲೂಟಿಯಾದವು; ಲೆಕ್ಕದ ಪುಸ್ತಕಗಳು ಚಿಲ್ಲರೆ ಅಂಗಡಿಯಲ್ಲಿ ಪೊಟ್ಟಣ ಕಟ್ಟುವ ಕೆಲಸಕ್ಕೆ ಬಂದವು. ಮತ್ತೆ ಶಾಂತಿ ಸ್ಥಾಪಿತವಾಗಿ ರಾಜ್ಯಗಳು ಚೇತರಿಸಿಕೊಳ್ಳುವ ಹೊತ್ತಿಗೆ ಕಾಲ ತಲೆಕೆಳಗಾಗಿತ್ತು. ಮಾತಿನ ಬದಲು ಬರವಣಿಗೆ ಚಾಲತಿಗೆ ಬಂದಿತ್ತು; ಬರವಣಿಗೆಯಲ್ಲಿಯೂ ಸಾಧಾರಣ ಬರವಣಿಗೆ, ಬಣ್ಣದ ಬರವಣಿಗೆ ಎಂಬ ಭೇದವುಂಟಾಗಿತ್ತು.

ದೇವದತ್ತರು ವಯಸ್ಸಿಗೆ ಬರುವ ಹೊತ್ತಿಗೆ ಅವರ ಹತ್ತಿರ ಈ ಪಾಳುಮನೆಯ ಹೊರತು ಬೇರೇನೂ ಆಸ್ತಿಯಿರಲಿಲ್ಲ. ಈಗ ಅವರಿಗೆ ಜೀವನ ನಿರ್ವಹಣೆಗೆ ಯಾವ ಮಾರ್ಗವೂ ಇರಲಿಲ್ಲ. ಬೇಸಾಯ ಶ್ರಮ ಹಾಗೂ ಕಷ್ಟದ ಕೆಲಸ; ವ್ಯಾಪಾರಕ್ಕೆ ಹಣ ಹಾಗೂ ಬುದ್ಧಿಯ ಅವಶ್ಯಕತೆಯಿತ್ತು. ಎಲ್ಲಾದರೂ ನೌಕರಿ ಮಾಡೋಣವೆಂದರೆ ಅದಕ್ಕೆ ಬೇಕಾದ ವಿದ್ಯೆಯೂ ಅವರಿಗಿರಲಿಲ್ಲ. ದಾನ ಪಡೆಯಲು ಮನೆತನದ ಪ್ರತಿಷ್ಠೆ ಅಡ್ಡಿಯಾಗುತ್ತಿತ್ತು. ಆದರೂ ವರ್ಷದಲ್ಲಿ ಎರಡು ಮೂರು ಬಾರಿ ಹಿಂದೆ ತನ್ನೊಡನೆ ವ್ಯವಹಾರವಿರಿಸಿಕೊಂಡಿದ್ದವರ ಮನೆಗೆ ಕರಸಿಕೊಳ್ಳದ ಅತಿಥಿಯಂತೆ ಹೋಗುತ್ತಿದ್ದರು; ಹೊರಡುವ ಹೊತ್ತಿನಲ್ಲಿ ಅವರಿಂದ ದಾರಿಯ ಖರ್ಚು ಗಿಟ್ಟಿಸಿ ಅದರಲ್ಲೇ ಕಾಲ ಹಾಕುತ್ತಿದ್ದರು. ಮನೆಯ ಹಿರಿಯರ ಪ್ರತಿಷ್ಠೆಯ ಚಿಹ್ನೆಯೇನಾದರೂ ಉಳಿದಿದ್ದರೆ ಅದು ಹಳೆಯ ಕಾಗದ ಪತ್ರಗಳ ಗುಡ್ಡೆಯ ಹಾಗೂ ಸಾಲಪತ್ರಗಳ ಕಟ್ಟಿನ ರೂಪದಲ್ಲಿ ಮಾತ್ರ; ಅವುಗಳ ಶಾಯಿ ಸಹ ಅವರ ಮಂದಭಾಗ್ಯದಂತೆಯೇ ಮಂಕಾಗಿತ್ತು. ಪಂಡಿತ ದೇವದತ್ತರು ಅವನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರು. ಬಿದಿಗೆಯ ದಿನ ಮನೆಮನೆಯಲ್ಲಿ ಲಕ್ಷ್ಮಿಯ ಪೂಜೆ ನಡೆಯುವಾಗ ಪಂಡಿತಜೀ ತುಂಬ ಆಡಂಬರದಿಂದ ಈ ಕಟ್ಟುಗಳನ್ನು ಪೂಜಿಸುತ್ತಿದ್ದರು. ಲಕ್ಷ್ಮಿಯಿಲ್ಲದಿದ್ದರೆ ಏನಂತೆ, ಲಕ್ಷ್ಮಿಯ ಸ್ಮಾರಕ ಚಿಹ್ನೆಯೊ! ಬಿದಿಗೆಯ ದಿನ ಪಂಡಿತಜೀಯ ಪ್ರತಿಷ್ಠೆಯ ಶ್ರಾದ್ಧದ ದಿನವಾಗಿತ್ತು. ಅದನ್ನು ವಿಡಂಬನೆಯೆನ್ನಿ, ಮೂರ್ಖತನವೆನ್ನಿ, ಪಂಡಿತ ಮಹಾಶಯರಿಗೆ ಆ ಪತ್ರಗಳ ಬಗ್ಗೆ ತುಂಬ

ಅಭಿಮಾನವಿತ್ತು. ಊರಿನಲ್ಲಿ ಯಾರೊಡನೆಯಾದರೂ ಜಗಳವಾದರೆ ಈ ಹರಿದು ಮುಗ್ಗಿದ ಕಾಗದದ ಸೇನೆಯೇ ತುಂಬ ಕೆಲಸ ಮಾಡುತ್ತಿತ್ತು; ಪ್ರತಿವಾದಿ ಶತ್ರು ಸೋಲೊಪ್ಪಲೇಬೇಕಾಗುತ್ತಿತ್ತು. ಎಪ್ಪತ್ತು ತಲೆಮಾರಿನಿಂದ ಆಯುಧದ ಮುಖ ನೋಡದಿದ್ದರೂ ಜನ ತಾವು ಕ್ಷತ್ರಿಯರೆಂದು ಅಭಿಮಾನ ಪಡುವಾಗ ಪಂಡಿತ ದೇವದತ್ತರು ಎಪ್ಪತ್ತುಲಕ್ಷ ರೂಪಾಯಿಗಳನ್ನು ಅಡಗಿಸಿಟ್ಟುಕೊಂಡಿದ್ದ ಆ ಕಾಗದ ಪತ್ರಗಳ ಬಗ್ಗೆ ಅಭಿಮಾನ ಹೊಂದಿದ್ದುದು ಅನುಚಿತವೇನಲ್ಲ.

## 2

ಅದೇ ಅಮಾವಾಸ್ಯೆಯ ರಾತ್ರಿ. ಆದರೆ ದೀಪಮಾಲೆಗಳು ತಮ್ಮ ಅಲ್ಪಾಯುಷ್ಯವನ್ನು ಮುಗಿಸಿದ್ದವು. ಕಳ್ಳರಿಗೂ ಜೂಜುಕೋರರಿಗೂ ಇದು ಶಕುನದ ರಾತ್ರಿ. ಯಾಕೆಂದರೆ ಇವತ್ತಿನ ಸೋಲು ವರ್ಷಪೂರ್ತಿಯ ಸೋಲಾಗುತ್ತದೆ. ಲಕ್ಷ್ಮಿಯ ಆಗಮನದ ಕೋಲಾಹಲ. ಕವಡೆ ಬಿಟ್ಟು ಚಿನ್ನದ ನಾಣ್ಯಗಳ ಲೂಟಿ ನಡೆದಿತ್ತು; ಭಟ್ಟಿಯಲ್ಲಿ ಮದ್ಯದ ಬದಲು ನೀರು ಮಾರಾಟವಾಗುತ್ತಿತ್ತು. ಪಂಡಿತ ದೇವದತ್ತರ ಹೊರತು ಉಳಿದ ಎಲ್ಲರಿಗೂ ಇನ್ನೊಬ್ಬರ ಸಂಪಾದನೆಯನ್ನು ಕಸಿದುಕೊಳ್ಳುವ ಚಿಂತೆಯೇ. ಅವತ್ತು ಬೆಳಗಿನಿಂದಲೇ ಗಿರಿಜಳ ಸ್ಥಿತಿ ಶೋಚನೀಯವಾಗಿತ್ತು. ಕ್ಷಣಕ್ಷಣಕ್ಕೂ ಅವಳು ವಿಷಮಜ್ವರದಿಂದ ಮೂರ್ಛೆ ಹೋಗುತ್ತಿದ್ದಳು. ಇದ್ದಕ್ಕಿದ್ದಂತೆ ಅವಳೊಮ್ಮೆ ಬೆಚ್ಚಿ ಕಣ್ಣು ತೆರೆದು, ತುಂಬ ಕ್ಷೀಣವಾದ ಧ್ವನಿಯಲ್ಲಿ ಹೇಳಿದಳು – "ಇವತ್ತು ದೀಪಾವಳಿ !"

ದೇವದತ್ತರಿಗೆ ಎಷ್ಟರಮಟ್ಟಿಗೆ ನಿರಾಶೆಯಾಗಿತ್ತೆಂದರೆ ಗಿರಿಜಳಿಗೆ ಪ್ರಜ್ಞೆ ಬಂದದ್ದನ್ನು ನೋಡಿಯೂ ಅವರಿಗೆ ಆನಂದವಾಗಲಿಲ್ಲ. ಅವರಂದರು – "ಹೌದು, ಇವತ್ತು ದೀಪಾವಳಿ".

ಗಿರಿಜಾ ನೀರು ತುಂಬಿ ಕಣ್ಣಿನಿಂದ ಈ ಕಡೆ ಆ ಕಡೆ ನೋಡುತ್ತ ಹೇಳಿದಳು – "ನಮ್ಮ ಮನೇಲಿ ಏಕೆ ದೀಪ ಉರೀತಿಲ್ಲ ?"

ದೇವದತ್ತರು ಬಿಕ್ಕಿ ಬಿಕ್ಕಿ ಅಳತೊಡಗಿದರು. ಗಿರಿಜಾ ಮತ್ತೆ ಅದೇ ಸ್ವರದಲ್ಲಿ ಹೇಳಿದಳು – "ನೋಡಿ, ವರ್ಷಕ್ಕೊಂದು ಸಲ ಒಂದೇ ದಿನ ಇವತ್ತು ಮನೆ ಕತ್ತಲಾಗಿದೆ.ನನ್ನನ್ನು ಹಿಡಿದೆಬ್ಬಿಸಿ; ನಾನೂ ನಮ್ಮ ಮನೇಲಿ ದೀಪ ಹಚ್ತೀನಿ."

ಈ ಮಾತು ದೇವದತ್ತರ ಎದೆಗೆ ನಾಟಿತು.ಮನುಷ್ಯನ ಅಂತಿಮ ಕ್ಷಣವೂ ಆಸೆ ಭಾವನೆಗಳಲ್ಲಿ ಕಳೆಯುತ್ತದೆ.

ಲಾಲಾ ಶಂಕರದಾಸ ಆ ಪಟ್ಟಣದ ಪ್ರಸಿದ್ಧ ವೈದ್ಯ. ತನ್ನ ಪ್ರಾಣಸಂಜೀವನೀ ಔಷಧಾಲಯದಲ್ಲಿ ಔಷಧಿಗಳ ಬದಲು ಮುದ್ರಣಾಲಯವನ್ನಿಟ್ಟಿದ್ದ. ಔಷಧಿ ತಯಾರಾಗುತ್ತಿದ್ದುದು ಕಡಿಮೆ, ಆದರೆ ಜಾಹೀರಾತು ಅಚ್ಚಾಗುತ್ತಿದ್ದುದು ಹೆಚ್ಚು.

ಲಾಲಾ ಶಂಕರದಾಸನ ಪ್ರಕಾರ 'ಕಾಹಿಲೆ' ಅನ್ನುವುದು ಶ್ರೀಮಂತರ ಬೂಟಾಟಿಕೆ.

'ಪೊಲಿಟಿಕಲ್ ಎಕಾನಮಿ'ಯ ಪ್ರಕಾರ ಭೋಗವಸ್ತುಗಳ ಮೇಲೆ ಸಾಧ್ಯವಿದ್ದಷ್ಟೂ ತೆರಿಗೆ ಹಾಕಬೇಕು. ಆದರಿಂದ ಜನ ದರಿದ್ರರಾದರೂ ಸರಿಯೇ, ಸತ್ತರೂ ಸರಿಯೇ. ಕಾಹಿಲೆ ಬಿದ್ದು ಬಿಟ್ಟಿ ಔಷಧ ಚಿಕಿತ್ಸೆ ಮಾಡಿಸಲು ಯಾರಿಗೇನು ಹಕ್ಕಿದೆ? ಹೀಗೆ ಬಿಟ್ಟಿ ಔಷಧೋಪಚಾರ ಮಾಡಿಸುವುದರಿಂದಲೇ ಭಾರತ ದೇಶಕ್ಕೆ ಈ ದುಸ್ಥಿತಿ ಬಂದಿರೋದು. ಇದು ಮನುಷ್ಯನನ್ನು ಬಲಹೀನನನ್ನಾಗಿ, ಅಜಾಗರೂಕನನ್ನಾಗಿ ಮಾಡಿಬಿಟ್ಟಿದೆ.

ದೇವದತ್ತರು ತಿಂಗಳುಗಟ್ಟಲೆ ಶಂಕರದಾಸನ ಬಳಿಗೆ ಔಷಧಿಗೆಂದು ಬರುತ್ತಿದ್ದರು. ಅವನಿಗೆ ತಮ್ಮ ಶೋಚನೀಯ ಸ್ಥಿತಿಯನ್ನು ತೋರಿಸೋಣವೆಂದರೆ ವೈದ್ಯನೆಂದೂ ಅವರ ಕಡೆ ಅಷ್ಟಾಗಿ ಗಮನವನ್ನೇ ಕೊಡುತ್ತಿರಲಿಲ್ಲ. ವೈದ್ಯನ ಹೃದಯದ ಮೃದುವಾದ ಭಾಗವನ್ನು ಮುಟ್ಟಲು ದೇವದತ್ತರು ಸಾಕಷ್ಟು ಪ್ರಯತ್ನ ಮಾಡಿದರು. ಬರುವಾಗಲೇ ಕಣ್ಣಿನಲ್ಲಿ ನೀರು ತುಂಬಿಕೊಂಡು ಬರುತ್ತಿದ್ದರು. ಆದರೆ ವೈದ್ಯನ ಹೃದಯವನ್ನು ಕೆದಕಿ ಹುಡುಕಿದರೆ ಸಹ ಅದರಲ್ಲಿ ಮೃದುವಾದ ಭಾಗವೆಂಬುದೇ ಇರಲಿಲ್ಲ.

ಅದೇ ಅಮಾವಾಸ್ಯೆಯ ಭಯಂಕರ ರಾತ್ರಿ. ನಡುರಾತ್ರಿ ಕಳೆದ ಮೇಲೆ ಗಗನಮಂಡಲದಲ್ಲಿ ನಕ್ಷತ್ರಗಳು ಇದ್ದಿದ್ದೂ ಹೆಚ್ಚಾಗಿ ಪ್ರಕಾಶಿಸುತ್ತಿದ್ದವು, ಮುಗಿದು ನಂದಿದ ಶ್ರೀನಗರದ ದೀಪಾವಳಿಯನ್ನು ನೋಡಿ ವ್ಯಂಗ್ಯಪೂರ್ಣವಾದ ಆನಂದದಿಂದ ನಗುತ್ತಿವೆಯೋ ಎಂಬಂತೆ. ದೇವದತ್ತರು ಚಿಂತೆಯ ಸ್ಥಿತಿಯಲ್ಲಿ ಗಿರಿಜಳ ತಲೆದಸಿ ಬಿಟ್ಟೆದ್ದು ವೈದ್ಯನ ಮನೆಯ ಕಡೆ ಹೊರಟರು. ವೈದ್ಯ ಶಂಕರದಾಸ ಫೀಸಿಲ್ಲದೆ ಎಂದೂ ರೋಗಿಯನ್ನು ನೋಡಲು ಬರುವವನಲ್ಲವೆಂಬುದು ಗೊತ್ತಿತ್ತು. ಆದರೆ ನಾವು ಎಷ್ಟೇ ಹತಾಶರಾದರೂ ಆಶೆ ನಮ್ಮ ಬೆನ್ನು ಬಿಡದು. ದೇವದತ್ತರು ಮುಂದೆ ಮುಂದೆ ಹೆಜ್ಜೆ ಹಾಕುತ್ತ ಹೊರಟರು.

## 3

ಲಾಲಾ ಶಂಕರದಾಸ ಆ ಹೊತ್ತು ತನ್ನ 'ರಾಮಬಾಣ ಬಿಂದು'ವಿನ ಜಾಹೀರಾತು ಬರೆಯುವುದರಲ್ಲಿ ಮಗ್ನನಾಗಿದ್ದ. ಆ ಜಾಹೀರಾತಿನ ಭಾವಪ್ರದ ಭಾಷೆಯನ್ನೂ ಆಕರ್ಷಣ ಶಕ್ತಿಯನ್ನು ನೋಡಿದರೆ ಅವನು ವೈದ್ಯಶಿರೋಮಣಿಯೋ ವಿದ್ಯಾವಾರಿಧಿಯೋ ಎಂದು ಹೇಳಲಾಗುತ್ತಿರಲಿಲ್ಲ. ಆ ಜಾಹೀರಾತನ್ನು ಓದುಗರೇ ಸಾಕ್ಷಾತ್ ನೋಡಲಿ:

"ವಾಚಕ ಮಹಾಶಯರೇ, ನಾನು ಯಾರೆಂದು ನೀವು ಬಲ್ಲಿರಾ? ನಿಮ್ಮ ಬಿಳಿಚಿದ ಮುಖ, ಸೊರಗಿದ ದೇಹ, ಅಲ್ಪ ಶ್ರಮಕ್ಕೆಲ್ಲಾ ಉಸಿರು ಕಟ್ಟಿದಂತಾಗುವುದು, ಪ್ರಪಂಚದ ಸುಂದರ ವಸ್ತುಗಳನ್ನು ಅನುಭವಿಸಲಾಗದೇ ಇರುವುದು, ಮಕ್ಕಳು ಮರಿ ಕಾಣದ ನಿಮ್ಮ ಮನೆ – ನಾನು ಯಾರೆಂಬ ಪ್ರಶ್ನೆಗೆ ನೀವು ಉತ್ತರ ಕಾಣೆರೆಂದು

ಇವೇ ಸಾರಿ ಹೇಳುತ್ತಿವೆ. ಕೇಳಿ, ನಾನು ಯಾರು? ರೋಗಿಷ್ಠರಾದವರು ಈ ಪ್ರಪಂಚದಲ್ಲೇ ಇಲ್ಲದಂತೆ ಮಾಡಬೇಕೆಂದು ಪಣ ತೊಟ್ಟಿರುವವನು ನಾನು. ಹಿಟ್ಟು ತೋರಿಸಿ ಬೂದಿ ಮಾರುತ್ತ ಜಾಹೀರಾತಿನ ಬೆಂಬಲದ ಮೇಲೆ ಬದುಕುವ ಹಕೀಮರನ್ನು ಅವರ ಸುದ್ದಿಯಿಲ್ಲದಂತೆ ಬೇರು ಸಹಿತ ಕಿತ್ತುಹಾಕಿ ಈ ಪ್ರಪಂಚವನ್ನು ಶುದ್ಧಿಗೊಳಿಸಲು ಸಂಕಲ್ಪ ಮಾಡಿರುವವನು ನಾನು. ನನ್ನ ಶಕ್ತಿಸಾಮರ್ಥ್ಯಗಳಿಗೆ ಮಾತಿನ ಅಭಿವ್ಯಕ್ತಿ ಕೊಡಲಾಗದಿದ್ದರೂ ಅಸುಖಿಗಳನ್ನು ಸುಖಿಗಳನ್ನಾಗಿಸುವ, ಹತಾಶರಾದವರನ್ನು ಆಶಾವಾದಿಗಳನ್ನಾಗಿಸುವ, ಹೇಡಿಗಳನ್ನು ವೀರರನ್ನಾಗಿಸುವ, ನರಿಯನ್ನು ಹುಲಿಯನ್ನಾಗಿಸುವ ಜಗತ್ತಿನ ಮಹಾವಿಸ್ಮಯ ನಾನು. ಇವೆಲ್ಲವೂ ಸಾಧ್ಯವಾಗುವುದು ಯಾವ ಚಮತ್ಕಾರದಿಂದಲೂ ಅಲ್ಲ, ಯಾವ ಮಂತ್ರ ತಂತ್ರಗಳಿಂದಲೂ ಅಲ್ಲ. ಸ್ವತಃ ನಾನೇ ಕಂಡುಹಿಡಿದಿರುವ 'ಅಮೃತ ಬಿಂದು'ವಿನಿಂದ. 'ಅಮೃತಬಿಂದು' ಎಂದರೆ ಏನು? ಅದನ್ನು ನಾನೇ ಬಲ್ಲೆ. ಅಗಸ್ತ್ಯ ಮಹರ್ಷಿಗಳು ಧನ್ವಂತರಿಯ ಕಿವಿಯಲ್ಲಿ ಅದನ್ನು ತಯಾರಿಸುವ ವಿಧಿಯನ್ನು ಉಸುರಿ ಹೋಗಿದ್ದರು. ನೀವು ವಿ.ಪಿ.ಯು ಕಟ್ಟನ್ನೊಡೆದಾಗ ನಿಮಗೆ ಅದರ ಸತ್ಯ ಪ್ರಕಾಶವಾಗುವುದು. 'ಅಮೃತಬಿಂದು' ಜೀವನಸಿಂಧು. ಅದು ಪುರುಷತ್ವಕ್ಕೆ ರತ್ನ,ಬುದ್ಧಿಗೆ ರಸಾಯನ, ವಿವೇಕಕ್ಕೆ ಪಾಕ. ನೀವು ವರ್ಷಗಟ್ಟಲೆ ಕವಿಸಮ್ಮೇಳನದಲ್ಲಿ ಭಾಗವಹಿಸಿಯೂ ಕವಿಯಾಗದಿದ್ದಲ್ಲಿ, ಹಗಲೂ ರಾತ್ರಿ ಉರುಹೊಡೆದೂ ಪರೀಕ್ಷೆಯಲ್ಲಿ ಪಾಸಾಗದಿದ್ದಲ್ಲಿ, ದಲ್ಲಾಳಿಗಳಿಗೆ ಖುಶಾಮತ್ ಮಾಡಿ, ವಕೀಲರನ್ನು ಸಂತೋಷಗೊಳಿಸಿಯೂ ಕೋರ್ಟು ಕಚೇರಿಗಳ ಅಂಗಳದಲ್ಲಿ ಹಸಿದ ನಾಯಿಯಂತೆ ಅಲೆದಾಡುತ್ತಿದ್ದಲ್ಲಿ, ಗಂಟಲು ಕಿತ್ತುಹೋಗುವಂತೆ ಕಿರುಚಿಯೂ, ಮೇಜುಕುಟ್ಟಿಯೂ ಇತರರ ಮೇಲೆ ನಿಮ್ಮ ಮಾತಿನ ಪ್ರಭಾವವನ್ನು ಬೀರದವರಾಗಿದ್ದಲ್ಲಿ 'ಅಮೃತ ಬಿಂದು'ವನ್ನು ಸೇವಿಸಿ. ಮೊದಲನೆಯ ದಿನವೇ ಅದರಿಂದ ಮಹಾಲಾಭವನ್ನು ಪಡೆಯುವಿರಿ. ನಿಮ್ಮ ಕಣ್ಣು ತೆರೆಯುವುದು. ಜಾಹೀರಾತಿನ ಹಕೀಮರ ಮೋಸದ ಬಲೆಗೆ ನೀವು ಮತ್ತೆ ಎಂದೆಂದಿಗೂ ಬೀಳಲಾರಿರಿ."

ವೈದ್ಯ ಶಂಕರದಾಸ ಈ ಜಾಹೀರಾತನ್ನು ಬರೆದು ಮುಗಿಸಿ ಅದನ್ನು ಉಚ್ಚಸ್ವರದಲ್ಲಿ ಓದುತ್ತಿದ್ದ. ಅವನ ಕಣ್ಣು ಅಭಿಮಾನ ಹಾಗೂ ಆಸೆಯಿಂದ ಹೊಳೆಯುತ್ತಿತ್ತು. ಅಷ್ಟರಲ್ಲಿಯೇ ಪಂಡಿತ ದೇವದತ್ತರು ಹೊರಗಿನಿಂದ ಕೂಗುಹಾಕಿದರು. ಕೂಗು ಕೇಳಿ ವೈದ್ಯನಿಗೆ ಸಂತೋಷವಾಯಿತು. ರಾತ್ರಿಯ ಹೊತ್ತು ಅವನ ಶುಲ್ಕ ಎರಡು ಪಟ್ಟು. ಕೈಯಲ್ಲಿ ಲಾಟೀನು ಹಿಡಿದು ಹೊರಬಂದರೆ ದೇವದತ್ತರು ಅಳುತ್ತ ಅವರ ಕಾಲು ಹಿಡಿದುಕೊಂಡು ಹೇಳಿದರು – "ವೈದ್ಯರೇ, ಈ ಹೊತ್ತು ನನ್ನ ಮೇಲೆ ದಯೆ ತೋರಬೇಕು. ಗಿರಿಜಾ ಈಗಲೋ ಆಗಲೋ ಎನ್ನುವ ಸ್ಥಿತಿ ಮುಟ್ಟಿದ್ದಾಳೆ. ನೀವೊಬ್ಬರು ಅವಳನ್ನು ಉಳಿಸಬಲ್ಲಿರಿ. ನನ್ನ ಹಣೇಲಿ ಬರೆದಿರೋ ಹಾಗಾಗುತ್ತೆ, ಆದರೂ ಈಗ ಒಂದು ಕ್ಷಣ ನೀವು ಬಂದು ನೋಡಿದ್ದಾದರೆ ನನ್ನ ಎದೆಯ ತಾಪ ಕೊಂಚ ಕಡಿಮೆಯಾಗುತ್ತೆ. ಅವಳಿಗೆ ನನ್ನಿಂದ ಸಾಧ್ಯವಾದದ್ದನ್ನೆಲ್ಲಾ ಮಾಡಿದೆ ಅಂತ ಒಂದು ಧೈರ್ಯವಿರುತ್ತೆ. ನಿಮಗೆ ಯಾವ ರಿತೀಲೂ ನಾನು ಸೇವೆ ಮಾಡಲಾರೆ

ಅಂತ ಪರಮಾತ್ಮ ಬಲ್ಲ. ಆದರೆ ಬದುಕಿರೋವರೆಗೂ ನಿಮ್ಮ ಗುಣಗಾನ ಮಾಡ್ತೀನಿ, ನಿಮ್ಮ ಗುಲಾಮನಾಗಿರ್ತೀನಿ.''

ವೈದ್ಯನಿಗೆ ಮೊದಲು ಒಂದಿಷ್ಟು ಕರುಣೆಯುಂಟಾಯಿತು. ಆದರೆ ಅದು ಮಿಂಚು ಹುಳದ ಬೆಳಕಷ್ಟೇ ! ಅದು ಬೇಗನೆ ಸ್ವಾರ್ಥದ ಗಾಢಾಂಧಕಾರದಲ್ಲಿ ಕರಗಿಹೋಯಿತು.

## 4

ಅದೇ ಅಮಾವಾಸ್ಯೆಯ ರಾತ್ರಿ. ಗಿಡಮರಗಳೆಲ್ಲೆಲ್ಲಾ ಸ್ತಬ್ಧತೆ ಕವಿದಿತ್ತು. ಜೂಜಿನಲ್ಲಿ ಗೆಲ್ಲುತ್ತಿದ್ದವರು ಮಲಗಿದ್ದ ಮಕ್ಕಳನ್ನೆಬ್ಬಿಸಿ ಇನಾಮು ಕೊಡುತ್ತಿದ್ದರು. ಸೋಲುತ್ತಿದ್ದವರು ತಮ್ಮ ಕೋಪಿಷ್ಠ ಹೆಂಡಿರ ಕ್ಷಮೆ ಯಾಚಿಸುತ್ತಿದ್ದರು. ಅಷ್ಟರಲ್ಲಿ ಒಂದಾದ ಮೇಲೆ ಒಂದರಂತೆ ಗಂಟೆಯ ಶಬ್ದ ಗಾಳಿ, ಅಂಧಕಾರಗಳನ್ನು ಹರಿದುಕೊಂಡು ಕಿವಿಗೆ ಬಂದು ಬೀಳತೊಡಗಿತು. ಅದರ ಇಂಪಾದ ಧ್ವನಿ ನಿಃಸ್ತಬ್ಧತೆಯ ನಡುವೆ ಬಹು ಮಧುರವಾಗಿ ಕೇಳಿಸುತ್ತಿತ್ತು. ಆ ಶಬ್ದ ಹತ್ತಿರ ಹತ್ತಿರ ಬಂದು ಕೊನೆಗೆ ಪಂಡಿತ ದೇವದತ್ತರ ಬಳಿಸಾರಿ ಅವರ ಪಾಳುಮನೆಯಲ್ಲಿ ಕರಗಿಹೋಯಿತು. ಆಗ ಪಂಡಿತಜೀ ನಿರಾಶೆಯ ಗಂಭೀರ ಸಮುದ್ರದಲ್ಲಿ ಮುಳುಗಿದ್ದರು. ತಮ್ಮ ದುಃಖದಿಂದಾಗಿ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಗಿರಿಜಳಿಗೆ ಔಷಧ ಚಿಕಿತ್ಸೆ ಮಾಡಿಸುವಷ್ಟೂ ಅವರಿಗೆ ಯೋಗ್ಯತೆಯಿರಲಿಲ್ಲ. ಏನು ಮಾಡುವುದು ? ಆ ನಿಷ್ಠುರ ವೈದ್ಯನನ್ನು ಇಲ್ಲಿಗೆ ಕರೆತರುವುದು ಹೇಗೆ ? ಲೋ ಪಾಪಿ, ಇಡೀ ಜನ್ಮಪೂರ್ತಿ ನಿನ್ನ ಗುಲಾಮಗಿರಿ ಮಾಡುತ್ತಿದ್ದೆನಲ್ಲೋ, ನಿನ್ನ ಜಾಹೀರಾತನ್ನು ಅಚ್ಚು ಮಾಡಿಕೊಡುತ್ತಿದ್ದೆನಲ್ಲೋ, ನಿನ್ನ ಔಷಧಿಯನ್ನು ಅರೆದುಕೊಡುತ್ತಿದ್ದೆನಲ್ಲ ! ಎಪ್ಪತ್ತು ಲಕ್ಷ ರೂಪಾಯಿಯ ಕಾಗದ ಪತ್ರಗಳು ಒಂದು ಕವಡೆಯ ಬೆಲೆಗೂ ಬಾಳದು ಎಂಬುದು ಇವತ್ತು ಪಂಡಿತರಿಗ ಅರ್ಥವಾಯಿತು. ಕುಲಗೌರವದ ಅಹಂಕಾರ ಈಗ ಕಣ್ಣಿಂದ ಮರೆಯಾಯಿತು. ಪಂಡಿತಜೀ ಸಂದೂಕದಿಂದ ಮಕಮಲ್ಲಿನ ಚೀಲವನ್ನು ಹೊರತೆಗೆದು ತಂದೆತಾತಂದಿರ ಸಂಪಾದನೆಯ ಶೇಷಾಂಶವಾಗಿ ಉಳಿದಿದ್ದ, ತಮ್ಮ ಪ್ರತಿಷ್ಠೆಗೂ ಹೆಚ್ಚಾಗಿ ಕಾಪಾಡಿಕೊಂಡು ಬಂದಿದ್ದ ಕಾಗದಪತ್ರಗಳನ್ನು ಒಂದೊಂದಾಗಿ ದೀಪಕ್ಕೆ ಅರ್ಪಣೆ ಮಾಡತೊಡಗಿದರು. ಸುಖ, ಆನಂದಗಳಲ್ಲಿ ಬೆಳೆದ ಶರೀರ ಚಿತೆಗೆ ಕಾಣಿಕೆಯಾಗುವಂತೆ ಆ ಕಾಗದಗಳೂ ಪ್ರಜ್ವಲಿಸುತ್ತಿದ್ದ ದೀಪದ ಉರಿಬಾಯಿಗೆ ಆಹಾರವಾಗುತ್ತಿದ್ದವು. ಅಷ್ಟರಲ್ಲಿ ಹೊರಗಿನಿಂದ ಯಾರೋ ಪಂಡಿತಜೀಯನ್ನು ಹೆಸರು ಹಿಡಿದು ಕರೆದರು. ಪಂಡಿತಜೀ ಬೆಚ್ಚಿ ತಲೆಯೆತ್ತಿ ನೋಡಿದರು. ಎದ್ದು ಕತ್ತಲಿನಲ್ಲಿ ನಿದ್ರೆಯಿಂದ ತಡವರಿಸುತ್ತ ಬಾಗಿಲವರೆಗೆ ಬಂದರು. ಕೆಲವಾರು ಜನ ಕೈಯಲ್ಲಿ ಪಂಜು ಹಿಡಿದು ನಿಂತಿದ್ದಾರೆ; ಬಾಗಿಲ ಬಳಿ ಕಾವಲಾಳಿನಂತಿದ್ದ ಹರಳಿನ ಮರವನ್ನು ಆನೆಯೊಂದು ತರಿದು ಹಾಕುತ್ತಿದೆ. ಆನೆಯ ಮೇಲೆ ಕೇಸರಿಬಣ್ಣದ

ರುಮಾಲು ಸುತ್ತಿದ ಯುವಕನೊಬ್ಬ ಕುಳಿತಿದ್ದಾನೆ. ಅವನ ಹಣೆಯ ಮೇಲೆ ಅರ್ಧಚಂದ್ರಾಕಾರದ ಗಂಧದ ತಿಲಕ; ಮುಖದ ಮೇಲೆ ಈಟಿಯಂತೆ ಸೆಟೆದ ಚೂಪಾದ ಮೀಸೆ; ವರ್ಚಸ್ಸು ಹಾಗೂ ಕಳೆ ತುಳುಕುತ್ತಿವೆ. ಅವನು ಯಾವನೋ ಸರದಾರನಂತೆ ಕಾಣುತ್ತಾನೆ. ಜೋಡುಪಟ್ಟಿಯ ನಿಲುವಂಗಿ, ನೆರಿಗೆ ಹಿಡಿದ ಪೈಜಾಮ, ಸೊಂಟದಲ್ಲಿ ತೂಗುಬಿಟ್ಟ ಕತ್ತಿ, ಕತ್ತಿನಲ್ಲಿ ಕಂಠೀಸರ, ಚಿನ್ನದ ಚೈನು ಆ ಯುವಕನ ಸುಕುಮಾರ ಶರೀರಕ್ಕೆ ಶೋಭೆ ಕೊಟ್ಟಿವೆ. ಪಂಡಿತರನ್ನು ಕಂಡ ತಕ್ಷಣ ಆ ಯುವಕ ರಕಾಬಿನ ಮೇಲೆ ಕಾಲಿಟ್ಟು ಕೆಳಗಿಳಿದು ಅವರಿಗೆ ವಂದಿಸಿದ. ಅವನ ಈ ವಿನಯಕ್ಕೆ ಪಂಡಿತಜೀ ಕೊಂಚ ನಾಚಿ ಹೇಳಿದರು – "ತಾವು ಎಲ್ಲಿಂದ ದಯಮಾಡಿಸಿದ್ದೀರಿ ?"

"ನಾನು ನಿಮ್ಮ ಹಳೆಯ ಸೇವಕ" ಯುವಕ ತುಂಬ ನಮ್ರನಾಗಿ ಉತ್ತರಿಸಿದ. ಅವನ ಮುಖದಲ್ಲಿ ಸೌಜನ್ಯ ಮಳೆಗರೆಯುತ್ತಿತ್ತು. "ಈ ದಾಸನ ಊರು ರಾಜನಗರ. ನಾನು ಅಲ್ಲಿನ ಜಹಗೀರದಾರ. ನಮ್ಮ ಪೂರ್ವಜರಿಗೆ ನಿಮ್ಮ ಪೂರ್ವಜರು ತುಂಬ ಅನುಗ್ರಹ ತೋರಿದ್ದಾರೆ. ಈಗ ನನ್ನ ಮರ್ಯಾದೆ ಸಂಪತ್ತುಗಳೇನಿವೆ, ಅವು ನಿಮ್ಮ ಪೂರ್ವಜರ ಕೃಪೆ ಹಾಗೂ ದಯೆಯ ಪರಿಣಾಮವಾಗಿ ದೊರೆತದ್ದು. ನಾನು ನಮ್ಮ ಅನೇಕ ಬಂಧುಗಳ ಬಾಯಿಂದ ನಿಮ್ಮ ಹೆಸರು ಕೇಳಿದ್ದೆ. ತುಂಬ ದಿನದಿಂದ ನಿಮ್ಮ ದರ್ಶನ ಮಾಡುವ ಆಕಾಂಕ್ಷೆಯಿತ್ತು. ಈಗ ಆ ಸದವಕಾಶ ಸಿಕ್ಕಿದೆ. ಇವತ್ತು ನನ್ನ ಜನ್ಮ ಸಫಲವಾಯಿತು."

ಪಂಡಿತ ದೇವದತ್ತರ ಕಣ್ಣಿನಲ್ಲಿ ನೀರು ತುಂಬಿತು. ತಂದೆತಾತಂದಿರ ಪ್ರತಿಷ್ಠೆಯ ಅಭಿಮಾನ ಅವರ ಹೃದಯದ ಮೃದುಭಾಗವಾಗಿತ್ತು. ಅವರ ಮುಖದ ಮೇಲೆ ಕವಿದಿದ್ದ ದೈನ್ಯ ಕೊಂಚ ಹೊತ್ತು ಮರೆಯಾಯಿತು. ಗಂಭೀರಭಾವ ತಾಳಿ ಅವರು ಹೇಳಿದರು "ನೀವು ಹಾಗೆ ಹೇಳುವುದು ನಿಮ್ಮ ಅನುಗ್ರಹ. ಅಂತಹ ಹಿರಿಯರ ಸಂತಾನವೆಂದು ಕೊಳ್ಳುವ ಯೋಗ್ಯತೆ ಈ ಕುಪುತ್ರನಿಗೆಲ್ಲಿ ಬರಬೇಕು ?"

ಅಷ್ಟರಲ್ಲಿ ನೌಕರರು ಅಂಗಳದಲ್ಲಿ ಜಮಖಾನ ಹಾಸಿದರು. ಇಬ್ಬರೂ ಅದರ ಮೇಲೆ ಕುಳಿತರು. ಮಾತು ಮುಂದುವರಿಯಿತು. ಬೆಳಗಿನ ಗಾಳಿ ಹೂವನ್ನು ಅರಳಿಸುವಂತೆ ಯುವಕನ ಮಾತಿನ ಒಂದೊಂದು ಶಬ್ದವೂ ಪಂಡಿತರ ಮುಖವನ್ನು ಅರಳಿಸುತ್ತಿತ್ತು. ಪಂಡಿತರ ತಾತ ಯುವಕನ ತಾತನಿಗೆ ಐವತ್ತು ಸಾವಿರ ರೂಪಾಯಿ ಸಾಲ ಕೊಟ್ಟಿದ್ದರು. ಠಾಕೂರ ಈಗ ಗಯಾಕ್ಕೆ ಹೋಗಿ ಪೂರ್ವಜರ ಶ್ರಾದ್ಧ ಮಾಡಬಯಸಿದ್ದ. ಅವನ ಉತ್ತರದಾಯಿಯಾಗಿ ಅವರ ಸಾಲವನ್ನೆಲ್ಲಾ ಕೊನೆಯ ಕವಡೆಯವರೆಗೂ ತೀರಿಸುವುದು ಈಗ ಅವಶ್ಯಕವಾಗಿತ್ತು. ಹಳೆಯ ಲೆಕ್ಕದ ಖಾತೆಯಲ್ಲಿ ಈ ಸಾಲ ನಮೂದಾಗಿದ್ದುದು ಠಾಕೂರನಿಗೆ ಕಂಡುಬಂದಿತ್ತು. ಐವತ್ತು ಸಾವಿರ ಬಡ್ಡಿ ಸೇರಿ ಈಗ ಎಪ್ಪತ್ತೈದು ಸಾವಿರವಾಗಿತ್ತು. ಆ ಸಾಲ ತೀರಿಸಲೆಂದು ಠಾಕೂರ್ ಬಂದಿದ್ದ. ಅಂತಃಕರಣದಲ್ಲಿ ಓಜಸ್ವಿಯಾದ ವಿಚಾರಗಳನ್ನು ಹುಟ್ಟಿಸುವ ಒಂದು ಶಕ್ತಿಯೆಂದರೆ ಧರ್ಮ. ಹೌದು, ಈ ವಿಚಾರವನ್ನು ಕಾರ್ಯಗತಗೊಳಿಸಲು ಪವಿತ್ರವೂ ಬಲಶಾಲಿಯೂ ಆದ ಆತ್ಮವಿರಬೇಕು. ಇಲ್ಲವಾದರೆ ಅದೇ ವಿಚಾರ ಕ್ರೂರವಾಗುತ್ತದೆ, ಪಾಪಮಯವಾಗುತ್ತದೆ. ಕೊನೆಗೆ ಠಾಕೂರ್ ಹೇಳಿದ – "ನಿಮ್ಮ

ಹತ್ತಿರವೂ ಆ ಕಾಗದಪತ್ರಗಳಿರಬೇಕು.''

ದೇವದತ್ತರ ಹೃದಯ ಕುಸಿಯಿತು. ಅವರು ಸವರಿಸಿಕೊಳ್ಳುತ್ತ ಹೇಳಿದರು – ''ಇರಬಹುದೇನೋ, ಏನೂ ಹೇಳುವಂತಿಲ್ಲ.''

ಠಾಕೂರ್ ನಿಶ್ಚಿಂತನಾಗಿ ಹೇಳಿದ – ''ಹುಡುಕಿ ನೋಡಿ. ಸಿಕ್ಕಿದರೆ ಅದನ್ನು ತೊಗೊಂಡು ಹೋಗ್ತೀನಿ.''

ಪಂಡಿತ ದೇವದತ್ತರು ಎದ್ದರು. ಅವರ ಎದೆ ತಣ್ಣಗಾಗುತ್ತಿತ್ತು. ಭಾಗ್ಯ ಬರಿಯ ಆಸೆ ತೋರಿಸಿ ಹೋಗುವುದೇನೋ ಎಂದು ಅನುಮಾನ ಬರತೊಡಗಿತು. ಆ ಕಾಗದದ ತುಂಡು ಬೂದಿಯಾಗಿ ಹೋಗಿದೆಯೋ ಏನೋ ಯಾರಿಗೆ ಗೊತ್ತು. ಅದು ಸಿಗದಿದ್ದರೆ ಹಣ ಕೊಡುವವರು ಯಾರು: ಕೈಗೆ ಬಂದ ಹಾಲಿನ ಬಟ್ಟಲು ಕಳಚಿ ಬಿದ್ದರೆ ಎಂತಹ ದುಃಖದ ಸಂಗತಿ. ಹೇ ದೇವರೇ, ಆ ಕಾಗದ ಸಿಗುವಂತಾಗಲಿ. ಎಷ್ಟೋ ಕಷ್ಟ ಸಹಿಸಿದ್ದೀನಿ. ಈಗ ನನ್ನ ಮೇಲೆ ದಯೆಯಿಡು, ದೇವರೇ. ಹೀಗೆ ಆಸೆ – ನಿರಾಶೆಗಳ ನಡುವೆ ತೂಗಾಡುತ್ತ ದೇವದತ್ತರು ಒಳಗೆ ಹೋದರು; ಮಿಣುಕು ದೀಪದ ಬೆಳಕಿನಲ್ಲಿ ಉಳಿದಿದ್ದ ಕಾಗದಪತ್ರಗಳನ್ನು ತಿರುವಿ ಹಾಕಿ ನೋಡಿದರು. ಅವರು ಇದ್ದಕ್ಕಿದ್ದಂತೆ ಜಿಗಿದೆದ್ದರು; ಉಲ್ಲಾಸದ ಸ್ಥಿತಿಯಲ್ಲಿರುವ ಹುಚ್ಚನಂತೆ ಎರಡು ಮೂರು ಬಾರಿ ಆನಂದದಿಂದ ಕುಪ್ಪಳಿಸಿದರು. ಆಮೇಲೆ ಓಡಿಹೋಗಿ ಗಿರಿಜೆಯನ್ನು ತಬ್ಬಿಕೊಂಡು ಹೇಳಿದರು – ''ಪ್ರಿಯೆ, ಈಶ್ವರನ ಇಚ್ಛೆಯಿಂದ್ದರೆ ನೀನಿನ್ನು ಬದುಕಿ ಉಳಿಯುವೆ.'' ಉನ್ಮತ್ತ ಸ್ಥಿತಿಯಲ್ಲಿದ್ದ ದೇವದತ್ತರಿಗೆ ಗಿರಿಜಾ ಇನ್ನಿಲ್ಲ, ತಾವು ತಬ್ಬಿದುದು ಅವಳ ಹೆಣ ಎಂಬುದು ತಕ್ಷಣ ತಿಳಿಯಲಿಲ್ಲ.

ದೇವದತ್ತರು ಕಾಗದವನ್ನು ಎತ್ತಿಕೊಂಡು ಕಾಲಿಗೆ ರೆಕ್ಕೆ ಮೂಡಿದೆಯೋ ಎಂಬಂತೆ ವೇಗವಾಗಿ ಬಾಗಿಲ ಬಳಿ ಬಂದರು. ಎದೆಯಲ್ಲಿ ಏಳುತ್ತಿದ್ದ ಆನಂದದ ತರಂಗಗಳನ್ನು ತಡೆದು, ಸಂಯಮ ತಂದುಕೊಂಡು ಹೇಳಿದರು – ''ಇದೋ ತೊಗೊಳ್ಳಿ. ಆ ಕಾಗದ ಸಿಕ್ಕಿದೆ. ಅದೃಷ್ಟ ಅನ್ನಬೇಕು. ಎಪ್ಪತ್ತು ಲಕ್ಷ ರೂಪಾಯಿನ ಕಾಗದಪತ್ರಗಳು ಗೆದ್ದಲಿಗೆ ಆಹಾರವಾಗಿ ಹೋದವು.''

ಆಕಸ್ಮಿಕವಾಗಿ ನಮಗೆ ಸಫಲತೆ ದೊರೆತಾಗ ಒಮ್ಮೊಮ್ಮೆ ಸಂದೇಹ ಬಾಧಿಸುವುದುಂಟು. ಠಾಕೂರ್ ಆ ಪತ್ರಕ್ಕೆ ಕೈ ನೀಡಿದಾಗ ಅವನು ಅದನ್ನು ಹರಿದು ಎಸೆದರೆ ಹೇಗೆ ಎಂದು ದೇವದತ್ತರಿಗೆ ಸಂದೇಹವಾಯಿತು. ಆದರೆ ಆ ಸಂದೇಹ ನಿರರ್ಥಕವಾಗಿತ್ತು. ಯಾಕೆಂದರೆ ಮನುಷ್ಯ ದೌರ್ಬಲ್ಯಗಳ ಬೊಂಬೆ ತಾನೇ. ಠಾಕೂರ್ ಪಂಡಿತರ ಮನಸ್ಸಿನ ಭಾವವನ್ನು ಗ್ರಹಿಸಿದ. ನಿರ್ಲಕ್ಷ್ಯದಿಂದ ಆ ಪತ್ರವನ್ನೆತ್ತಿಕೊಂಡು ಪಂಜಿನ ಬೆಳಕಿನಲ್ಲಿ ನೋಡಿ ಹೇಳಿದ – ''ಈಗ ನಂಬಿಕೆಯಾಯಿತು. ತೊಗೊಳ್ಳಿ, ನಿಮ್ಮ ಹಣ ನಿಮ್ಮ ಮುಂದಿದೆ. ನಮ್ಮ ಪೂರ್ವಜರಿಗೆ ಮುಕ್ತಿ ದೊರೆಯಲೆಂದು ಆಶೀರ್ವದಿಸಿ'' ಹೀಗಂದು ಠಾಕೂರ್ ಸೊಂಟದಿಂದ ಒಂದು ಚೀಲ ತೆಗೆದು ಅದರಿಂದ ಸಾವಿರ ರೂಪಾಯಿಯ ಎಪ್ಪತ್ತೈದು ನೋಟುಗಳನ್ನು ಎಣಿಸಿ ದೇವದತ್ತರಿಗೆ ಕೊಟ್ಟ. ಪಂಡಿತರ ಎದೆ ವೇಗದಿಂದ ಬಡಿದುಕೊಳ್ಳುತ್ತಿತ್ತು. ಬೇರೆ ಯಾರಾದರೂ ಅಲ್ಲಿ ನಿಂತಿದ್ದಾರೆಯೇ ಎಂದು ಅವರು

ಸುತ್ತಲೂ ಒಮ್ಮೆ ಎಚ್ಚರಿಕೆಯ ದೃಷ್ಟಿ ಹರಿಸಿದರು. ನಡುಗುತ್ತಿರುವ ಕೈಗಳಿಂದ ನೋಟುಗಳನ್ನು ಇಸಿದುಕೊಂಡು ತಮ್ಮ ದೊಡ್ಡಸ್ತಿಕೆಯನ್ನು ತೋರಿಸುವ ವ್ಯರ್ಥ ಪ್ರಯತ್ನದಲ್ಲಿ ಅವನ್ನು ಎಣಿಸುವ ಗೋಜಿಗೂ ಹೋಗದೆ ನೋಡಿಯೂ ನೋಡದವರಂತೆ ಮಡಿಸಿ ಜೇಬಿನಲ್ಲಿಟ್ಟುಕೊಂಡರು.

## 5

ಅದೇ ಅಮಾವಾಸ್ಯೆಯ ರಾತ್ರಿ. ಆಕಾಶದಲ್ಲಿನ ದೀಪಗಳು ಸಹ ಮಂಕಾಗುತ್ತಿದ್ದವು. ಅವುಗಳ ಯಾತ್ರೆ ಸೂರ್ಯನಾರಾಯಣನ ಬರವನ್ನು ಸೂಚಿಸುತ್ತಿದ್ದವು. ಉದಯಾಚಲ ಊದಾಬಣ್ಣದ ಉಡಿಗೆ ತೊಟ್ಟಿತ್ತು. ಅಸ್ತಾಚಲದಲ್ಲಿ ಸಹ ಬಿಳಿಯ ಬಣ್ಣದ ಬೆಳಕು ಕಾಣುತ್ತಿತ್ತು. ಪಂಡಿತ ದೇವದತ್ತರು ಠಾಕೂರನನ್ನು ಬೀಳ್ಕೊಟ್ಟು ಮನೆಯೊಳಕ್ಕೆ ಬಂದರು. ಆಗ ಅವರ ಹೃದಯ ಔದಾರ್ಯದ ನಿರರ್ಗಳ ಪ್ರಕಾಶದಿಂದ ಬೆಳಗುತ್ತಿತ್ತು. ಬೇಡಿ ಬಂದವರು ಯಾರೂ ಆ ಹೊತ್ತು ಅವರ ಮನೆಯಿಂದ ನಿರಾಶರಾಗಿ ಹಿಂದಿರುಗುವಂತಿರಲಿಲ್ಲ. ಸತ್ಯನಾರಾಯಣನ ಪೂಜೆಯನ್ನು ಬಹಳ ವಿಜೃಂಭಣೆಯಿಂದ ನಡೆಸುವುದೆಂದು ನಿಶ್ಚಯಿಸಿದ್ದಾಗಿತ್ತು. ಗಿರಿಜಳ ಒಡವೆ ಬಟ್ಟೆಗಳ ವಿಚಾರವೂ ಆಯಿತು. ಪಂಡಿತ ದೇವದತ್ತರು ದೇವರ ಮನೆಗೇ ಹೋಗಿ ಸಾಲಿಗ್ರಾಮದ ಮುಂದೆ ಮನಸಾ ವಾಚಾ ಕರ್ಮಣಾ ತಲೆಬಾಗಿ ನಮಿಸಿ, ಉಳಿದ ಕಾಗದಪತ್ರಗಳನ್ನು ಮಡಿಸಿ ಮಕಮಲ್ಲಿನ ಚೀಲದಲ್ಲಿಟ್ಟರು. ಆ ಹೆಣಗಳಲ್ಲಿಯೂ ಯಾವದಾದರೂ ಬದುಕಿ ಏಳಬಹುದೆಂಬುದು ಅವರ ಯೋಚನೆಯಾಗಿರಲಿಲ್ಲ. ಬದಲು ಅವರೀಗ ಜೀವನೋಪಾಯದ ಬಗ್ಗೆ ನಿಶ್ಚಿಂತರಾಗಿ ಪೂರ್ವಜರ ಗೌರವದ ಬಗ್ಗೆ ಅಭಿಮಾನ ಪಡಬಹುದಾಗಿತ್ತು. ಆ ಕ್ಷಣ ಅವರು ಧೈರ್ಯ ಉತ್ಸಾಹಗಳ ಅಮಲಿನಿಂದ ಮತ್ತರಾಗಿದ್ದರು. ಸಾಕು, ನನಗಿನ್ನು ಬದುಕಿನಲ್ಲಿ ಹೆಚ್ಚು ಸಂಪತ್ತಿನ ಅವಶ್ಯಕತೆಯಿಲ್ಲ. ದೇವರು ನನಗೆ ಇಷ್ಟು ಕೊಟ್ಟಿದ್ದಾನೆ. ಇಷ್ಟರಿಂದ ನನ್ನ, ಗಿರಿಜಳ ಜೀವನ ಸಂತೋಷದಿಂದ ಕಳೆಯುತ್ತದೆ ಎಂದುಕೊಂಡರು. ಆದರೆ ಗಿರಿಜಳ ಜೀವನವಾಗಲೇ ಮುಗಿದಾಗಿದೆಯೆಂದು ಅವರಿಗೇನು ಗೊತ್ತು. ಈ ಸಂತೋಷದ ಸುದ್ದಿ ಕೇಳಿದಾಕ್ಷಣ ಗಿರಿಜಾ ಎದ್ದು ಕೂರುವಳೆಂಬ ವಿಚಾರ ಅವರ ಎದೆಯಲ್ಲಿ ಕುಣಿದಾಡುತ್ತಿತ್ತು. ಅವಳನ್ನು ಈ ದುರ್ಗತಿಗೆ ತಂದಿದ್ದುದು ಚಿಂತೆ, ಕಷ್ಟ. ಯಾರ ಹಣೆಯಲ್ಲಿ ಹೊಟ್ಟೆಯ ತುಂಬ ಅನ್ನ ಬರೆದಿಲ್ಲವೋ, ಯಾರು ನಿರಾಶೆಯಿಂದ, ದಾರಿದ್ರ್ಯದ ಹೃದಯವಿದ್ರಾವಕ ಬಂಧನದಿಂದ ಮುಕ್ತರಾಗಿಲ್ಲವೋ ಅವರ ಗತಿ ಹೀಗಲ್ಲದೆ ಮತ್ತೇನಾಗಲು ಸಾಧ್ಯ? ಹೀಗೆ ಯೋಚಿಸುತ್ತ ಪಂಡಿತ ದೇವದತ್ತರು ಗಿರಿಜಳ ಹತ್ತಿರ ಹೋಗಿ ಅವಳನ್ನು ಮೆಲ್ಲಗೆ ಅಲ್ಲಾಡಿಸುತ್ತ ಹೇಳಿದರು – "ಗಿರಿಜಾ, ಕಣ್ಣು ತೆಗಿ. ದೇವರಿಗೆ ನಿನ್ನ ಕೋರಿಕೆ ಕೇಳಿಸಿದೆ. ಅವನು ನಮ್ಮ ಮೇಲೆ ದಯೆ ತೋರಿಸಿದಾನೆ. ದೇಹಸ್ಥಿತಿ ಈಗ ಹೇಗಿದೆ?"

ಗಿರಿಜೆ ಕೊಂಚವೂ ಬಾಯಿ ತೆಗೆಯದಿದ್ದುದನ್ನು ಕಂಡು ಪಂಡಿತ ದೇವದತ್ತರು ತಾವೇ ಹೊದಿಕೆಯೆತ್ತಿ ಅವಳ ಮುಖದ ಕಡೆ ನೋಡಿದರು. ಅವರ ಎದೆಯಿಂದ ಕರುಣಾಪೂರಿತವಾದ ತಣ್ಣನೆಯ ನಿಟ್ಟುಸಿರೊಂದು ಹೊರಟಿತು. ಅವರು ಅಲ್ಲೇ ತಲೆ ಹಿಡಿದುಕೊಂಡು ಕೂತುಬಿಟ್ಟರು. ಕಣ್ಣಿನಿಂದ ರಕ್ತದ ಹನಿಯೋ ಎಂಬಂತೆ ನೀರು ತೊಟ್ಟಿಕ್ಕತೊಡಗಿತು. ಅಯ್ಯೋ ! ಈ ಸಂಪತ್ತು ಇಷ್ಟು ದುಬಾರಿ ಬೆಲೆಗೆ ಸಿಕ್ಕಿತೆ ? ಪರಮಾತ್ಮನ ದರಬಾರಿನಲ್ಲಿ ನನಗೆ ದೊರೆತದ್ದು ಈ ಪ್ರಿಯ ಜೀವದ ಬೆಲೆಯೆ ? ದೇವರೇ, ನಿನ್ನ ನ್ಯಾಯ ಬಲು ಚೆನ್ನಾಗಿದೆ ! ನನಗೆ ಅವಶ್ಯಕತೆಯಿರುವುದು ಗಿರಿಜಳದು, ರೂಪಾಯಿಯದಲ್ಲ. ಈ ಸರಕು ಬಲು ದುಬಾರಿಯದು !

## 6

ಅಮಾವಾಸ್ಯೆಯ ಕತ್ತಲ ರಾತ್ರಿ ಗಿರಿಜೆಯ ಕತ್ತಲ ಬದುಕಿನಂತೆಯೇ ಕಳೆದುಹೋಗಿತ್ತು. ಗದ್ದೆಯಲ್ಲಿ ನೇಗಿಲು ಹೊಡೆಯುತ್ತಿದ್ದ ರೈತರು ದನಿಯೆತ್ತಿ ಇಂಪಾಗಿ ಹಾಡುತ್ತಿದ್ದರು. ಚಳಿಯಿಂದ ನಡುಗುತ್ತಿದ್ದ ಮಕ್ಕಳು ಸೂರ್ಯದೇವ ಬೇಗನೆ ಹೊರಬರಲೆಂದು ಪ್ರಾರ್ಥನೆ ಸಲ್ಲಿಸುತ್ತಿದ್ದರು. ಬಾವಿಕಟ್ಟೆಯ ಹತ್ತಿರ ಹಳ್ಳಿಯ ಬೆಡಗುಗಾತಿಯರು ಗುಂಪು ಸೇರಿದ್ದರು – ನೀರು ತುಂಬಿಕೊಳ್ಳುವುದಕ್ಕಲ್ಲ, ಸರಸವಾಡುವುದಕ್ಕೆ. ಕೆಲವರು ಬಾವಿಯಲ್ಲಿ ಗಡಿಗೆ ಬಿಟ್ಟು ತಮ್ಮ ಬೊಚ್ಚುಬಾಯಿಯ ಅತ್ತೆಯರನ್ನು ಅಣಕಿಸುತ್ತಿದ್ದರು; ಕೆಲವರು ಕಂಬಕ್ಕೊರಗಿ ಹುಸಿನಗೆ ನಗುತ್ತ ತಮ್ಮ ಜೊತೆಗಾತಿಯರೊಡನೆ ಪ್ರೇಮರಹಸ್ಯದ ಮಾತಾಡುತ್ತಿದ್ದರು. ಮುದುಕಿಯರು ಮೊಮ್ಮಕ್ಕಳನ್ನು ತೊಡೆಯ ಮೇಲೆತ್ತಿಕೊಂಡು ಒಂದು ಗಂಟೆ ಕಳೆದರೂ ಬಾವಿಗೆ ಹೋದ ತಮ್ಮ ಸೊಸೆ ಯಾಕಿನ್ನೂ ಹಿಂದಿರುಗಿ ಬರಲಿಲ್ಲವೆಂದು ಬೈಯುತ್ತಿದ್ದರು. ಆದರೆ ರಾಜವೈದ್ಯ ಶಂಕರದಾಸನಿನ್ನೂ ಸಿಹಿನಿದ್ರೆಯಲ್ಲಿದ್ದ. ಅವನ ಔಷಧಾಲಯದ ಮುಂದೆ ಕೆಮ್ಮುವ ಮಕ್ಕಳೂ ನರಳುವ ಮುದುಕರೂ ನೆರೆಯುತ್ತಿದ್ದರು. ಈ ಗುಂಪಿನಿಂದ ಕೊಂಚ ದೂರದಲ್ಲಿ ನೋಡಲು ಸುಂದರರಾದರೂ ಸೊರಗಿದಂತೆ ಕಾಣುತ್ತಿದ್ದ ಇಬ್ಬರು ಮೂವರು ಯುವಕರು ಅತ್ತಿಂದಿತ್ತ ಅಡ್ಡಾಡುತ್ತಿದ್ದರು. ವೈದ್ಯನೊಡನೆ ಏಕಾಂತದಲ್ಲಿ ಮಾತಾಡುವ ಬಯಕೆ ಅವರದ್ದು. ಅಷ್ಟರಲ್ಲಿ ಪಂಡಿತ ದೇವದತ್ತರು ಕೈಯಲ್ಲಿ ಒಂದು ಕಂತೆ ಕಾಗದ ಹಿಡಿದುಕೊಂಡು ಅಲ್ಲಿಗೆ ಬಂದರು. ಅವರ ತಲೆ ಬರಿದಾಗಿತ್ತು. ಮೈ ಬೆತ್ತಲಾಗಿತ್ತು, ಕಣ್ಣು ಕೆಂಪಾಗಿದ್ದವು, ಮುಖ ಭಯ ಹುಟ್ಟಿಸುವಂತಿತ್ತು. ಬಂದವರೇ ಔಷಧಾಲಯದಲ್ಲಿ ಬಾಗಿಲಲ್ಲಿ ನಿಂತು ಜೋರಾಗಿ ಕೂಗತೊಡಗಿದರು. ಆ ಕೂಗಿಗೆ ವೈದ್ಯ ಬೆಚ್ಚಿಬಿದ್ದು, ನೌಕರನಿಗೆ ಬಾಗಿಲು ತೆಗೆಯುವಂತೆ ಹೇಳಿದ. ನೌಕರ ಮಹಾಶಯ ಕುಲದ ಪಂಚಾಯಿತಿಗೆ ಹೋಗಿದ್ದವನು ರಾತ್ರಿ ಬಹು ಹೊತ್ತಾಗಿ ಬಂದಿದ್ದ. ಅವನಿಗೆ ಅತಿನಿದ್ರೆಯ ರೋಗ. ವೈದ್ಯನ ಎಡೆಬಿಡದ ಭಾಷಣ ಇಲ್ಲವೇ ಗದರಿಕೆಯ ಮದ್ದಿಂದ ಅದು ಕಡಿಮೆಯಾಗಿರಲಿಲ್ಲ. ಮುಖ

ಗಂಟಿಕ್ಕಿಕೊಂಡೆದ್ದು ಬಾಗಿಲು ತೆಗೆದು, ಹುಕ್ಕಾ ಚಿಲುಮೆಯ ಯೋಚನೆಯಲ್ಲಿ ಬೆಂಕಿ ಹುಡುಕಿಕೊಂಡು ಹೊರಟುಹೋದ. ವೈದ್ಯನಿನ್ನೂ ಏಳುವ ಪ್ರಯತ್ನದಲ್ಲಿದ್ದಾಗ ಇದ್ದಕ್ಕಿದ್ದಂತೆ ದೇವದತ್ತರು ಅವನ ಮುಂದೆ ನಿಂತುಕೊಂಡರು, ನೋಟಿನ ಕಂತೆಯನ್ನು ಅವನ ಕಡೆ ಎಸೆಯುತ್ತ ಹೇಳಿದರು – "ವೈದ್ಯರೇ, ಇಲ್ಲಿ ಎಪ್ಪತ್ತೈದು ಸಾವಿರ ರೂಪಾಯಿದೆ. ಇದು ನಿಮಗೆ ಫೀಸು, ನಿಮಗೆ ಕಾಣಿಕೆ. ಬಂದು ಗಿರಿಜಳನ್ನು ನೋಡಿ, ಅವಳು ಒಂದೇ ಒಂದು ಸಲ ಕಣ್ಣು ತೆರೆಯೋ ಹಾಗೆ ಏನಾದರೂ ಮಾಡಿ. ಈ ಹಣ ಅವಳ ಒಂದು ನೋಟಕ್ಕೆಂದು ಕಾಣಿಕೆ ಕೊಟ್ಟದ್ದು. ಮನುಷ್ಯರ ಪ್ರಾಣಕ್ಕಿಂತ ಹಣ ನಿಮಗೆ ಪ್ರಿಯ ತಾನೇ. ಅದು ನಿಮ್ಮ ಮುಂದಿದೆ. ನನಗೆ ಗಿರಿಜಳ ಒಂದು ನೋಟ ಈ ರೂಪಾಯಿಗಿಂತ ಎಷ್ಟೋ ಪಟ್ಟು ಪ್ರಿಯವಾದದ್ದು."

ವೈದ್ಯ ನಾಚಿಕೆಯಿಂದ ದೇವದತ್ತರ ಕಡೆ ಸಹಾನುಭೂತಿಪೂರ್ಣವಾಗಿ ನೋಡುತ್ತ ಹೇಳಿದ – "ನನಗೆ ತುಂಬ ದುಃಖವಾಗಿದೆ. ನಾನು ಸದಾಕಾಲಕ್ಕಾಗಿ ನಿಮಗೆ ಅಪರಾಧ ಮಾಡಿದ್ದೇನೆ. ಆದರೆ ನೀವಾಗಲೇ ನನಗೆ ಪಾಠ ಕಲಿಸಿದ್ದೀರಿ. ದೈವೇಚ್ಛೆಯಿದ್ದರೆ ಮುಂದೆ ಎಂದೆಂದಿಗೂ ಈ ತಪ್ಪಾಗೋಲ್ಲ. ನನಗೆ ದುಃಖವಾಗಿದೆ, ಇದು ನಿಜ."

ಈ ಮಾತು ವೈದ್ಯ ಅಂತಃಕರಣದಿಂದ ಹೊರಟಿತ್ತು.

# 4. ಅಗ್ನಿಸಮಾಧಿ

ಸಾಧುಸಂತರ ಸತ್ಸಂಗದಿಂದ ಕೆಟ್ಟವರೂ ಒಳ್ಳೆಯವರಾಗುತ್ತಾರೆ. ಆದರೆ ಪಯಾಗನ ದೌರ್ಭಾಗ್ಯವೆಂದರೆ ಅಂತಹ ಸತ್ಸಂಗ ಅವನ ಮೇಲೆ ವಿರುದ್ಧ ಪರಿಣಾಮ ಮಾಡಿತು. ಅವನು ಗಾಂಜಾ, ಭಂಗಿ, ಚರಸ್ಸುಗಳ ಸುಳಿಯಲ್ಲಿ ಸಿಕ್ಕಿಬಿದ್ದ. ಇದರ ಫಲವಾಗಿ ಮೈ ಮುರಿದು ಕೆಲಸ ಮಾಡುತ್ತಿದ್ದ ಯುವಕನೊಬ್ಬ ಮೈಗಳ್ಳನಾದ. ಜೀವನಸಂಗ್ರಾಮದಲ್ಲಿ ಈ ಆನಂದವೆಲ್ಲಿ ಬರಬೇಕು ? ಯಾವದೋ ಅಶ್ವತ್ಥವೃಕ್ಷದ ಕೆಳಗೆ ಅಗ್ನಿಕುಂಡ ಉರಿಯುತ್ತಿದೆ; ಒಬ್ಬ ಜಟಾಧಾರಿ ಸಾಧು ವಿರಾಜಮಾನನಾಗಿ ಕುಳಿತಿದ್ದಾನೆ; ಭಕ್ತ ಜನ ಅವನ ಸುತ್ತ ಮುತ್ತಿದ್ದಾರೆ; ಕ್ಷಣಕ್ಷಣಕ್ಕೂ ಚರಸ್ಸಿನ ಅಮಲು ಏರುತ್ತಿದೆ. ನಡುನಡುವೆ ಭಜನೆಯೂ ಆಗುತ್ತದೆ. ಕೂಲಿನಾಲಿಯಲ್ಲಿ ಈ ಸ್ವರ್ಗಸುಖ ಎಲ್ಲಿ ಬರಬೇಕು ? ಚಿಲುಮೆ ತುಂಬುವುದು ಪಯಾಗನ ಕೆಲಸ. ಭಕ್ತಜನರಿಗೆ ಪರಲೋಕದಲ್ಲಿ ಪುಣ್ಯಫಲ ದೊರೆಯಲೆಂಬ ಆಸೆಯಿದ್ದಿದ್ದಾದರೆ ಪಯಾಗನಿಗೆ ಆ ಕ್ಷಣ ಫಲ ಸಿಕ್ಕಿಬಿಡುತ್ತಿತ್ತು. ಚಿಲುಮೆಯ ಮೇಲಿನ ಮೊದಲ ಹಕ್ಕು ಅವನದು. ಸಾಧು ಮಹಾತ್ಮರ ಶ್ರೀಮುಖದಿಂದ ಭಗವತ್ ಚರ್ಚೆಯನ್ನು ಕೇಳಿ ಅವನು ಆನಂದದಿಂದ ವಿಹ್ವಲನಾಗುತ್ತಿದ್ದ. ಅದೇನೋ ಆತ್ಮವಿಸ್ಮೃತಿಯಂತಹುದು ಅವನನ್ನು ಕವಿಯುತ್ತಿತ್ತು. ಆಗ ಅವನು ಸೌರಭ, ಸಂಗೀತ, ಪ್ರಕಾಶಗಳಿಂದ ತುಂಬಿದ ಬೇರೆ ಇನ್ನೊಂದು ಪ್ರಪಂಚವನ್ನು ಕಾಣುತ್ತಿದ್ದ. ಈ ಕಾರಣದಿಂದಾಗಿ ಅವನ ಹೆಂಡತಿ ರುಕ್ಮಿಣಿ ರಾತ್ರಿ ಹತ್ತು ಹನ್ನೊಂದು ಗಂಟೆಯಾದರೂ ಅವನು ಮನೆಗೆ ಬಾರದುದನ್ನು ನೋಡಿ ಕರೆಯಲು ಹೋದರೆ ಪಯಾಗನಿಗೆ ಪ್ರತ್ಯಕ್ಷವಾಗಿ ಕ್ರೂರ ಅನುಭವವಾಗುತ್ತಿತ್ತು. ಅದರಲ್ಲೂ ವಿಶೇಷವಾಗಿ ಮನೆ ತಲಪಿದ ಮೇಲೆ ಇನ್ನೂ ಒಲೆ ಹಚ್ಚಿಲ್ಲವೆಂದು ತಿಳಿದು ಹೊಟ್ಟೆಯ ಚಿಂತೆ ಷುರುವಾದಾಗ ಅವನಿಗೆ ಜಗತ್ತು ಮುಳ್ಳಿನಿಂದ ತುಂಬಿದ ಕಾಡಿನಂತೆ ಕಾಣುತ್ತಿತ್ತು.

ಪಯಾಗ ಕೀಳು ಜಾತಿಯವನು, ಹಳ್ಳಿಯ ತಳವಾರಿಕೆ ಅವನಿಗೆ ವಂಶಪಾರಂಪರ್ಯವಾಗಿ ಬಂದಿತ್ತು. ಎರಡೂ ಚಿಲ್ಲರೆ ರೂಪಾಯಿ ಸಂಬಳ ಸಿಗುತ್ತಿತ್ತು. ಮೇಲೆ ಪೇಟಪೋಷಾಕು ಬಿಟ್ಟಿ ದೊರೆಯುತ್ತಿತ್ತು. ಕೆಲಸವೆಂದರೆ ವಾರಕ್ಕೊಂದು ದಿನ ಠಾಣೆಗೆ ಹೋಗಿ, ಅಲ್ಲಿ ಅಧಿಕಾರಿಗಳ ಬಾಗಿಲ ಮುಂದಿನ ಕಸ ಬಳಿಯುವುದು, ಕುದುರೆ ಲಾಯ ತೊಳೆಯುವುದು, ಸೌದೆ ಕಡಿಯುವುದು.

ಪಯಾಗ ಕೋಪ ನುಂಗಿಕೊಂಡು ಕೆಲಸ ಮಾಡುತ್ತಿದ್ದ; ಅದನ್ನು ಧಿಕ್ಕರಿಸಿದರೆ ಭೌತಿಕ ಹಾಗೂ ಆರ್ಥಿಕ, ಹೀಗೆ ಎರಡೂ ದೃಷ್ಟಿಗಳಿಂದ ಕಷ್ಟವಾಗುತ್ತಿತ್ತು. ತಳವಾರಿಕೆಯ ಕೆಲಸವೆಂದರೆ ಇಷ್ಟೆಯೇ. ತಿಂಗಳಲ್ಲಿ ನಾಲ್ಕು ದಿನದ ದುಡಿಮೆಗೆ ಎರಡೂ ಚಿಲ್ಲರೆ ರೂಪಾಯಿ ಕಡಿಮೆ ಸಂಬಳವೇನಲ್ಲ ಎಂದುಕೊಂಡು ಸಮಾಧಾನ ತಂದುಕೊಳ್ಳುತ್ತಿದ್ದ. ಅಲ್ಲದೆ ಹಳ್ಳಿಯಲ್ಲಿ ದೊಡ್ಡವರ ಹತ್ತಿರವಲ್ಲವಾದರೂ ಸಣ್ಣವರ ಹತ್ತಿರ ಅವನ ಪ್ರತಾಪ ನಡೆಯುತ್ತಿತ್ತು. ಸಂಬಳವೇನೋ ನಿಯಮಿತವಾಗಿ ಬರುತ್ತಿತ್ತು. ಆದರೆ ಸಾಧುಮಹಾತ್ಮರ ಸಂಪರ್ಕಕ್ಕೆ ಬಿದ್ದಾಗಿನಿಂದ ಅದು ಅವನ ಜೇಬು ಖರ್ಚಿನ ಬಾಬತ್ತಾಗಿತ್ತು. ಹೀಗಾಗಿ ಜೀವನೋಪಾಯದ ಪ್ರಶ್ನೆ ದಿನೇ ದಿನೇ ಚಿಂತೋತ್ಪಾದಕ ರೂಪ ಧರಿಸತೊಡಗಿತು. ಈ ಸತ್ಸಂಗದ ಹವ್ಯಾಸ ಶುರುವಾಗುವ ಮೊದಲು ಪಯಾಗ ದಂಪತಿಗಳಿಬ್ಬರೂ ಊರಿನಲ್ಲಿ ಕೂಲಿನಾಲಿ ಮಾಡುತ್ತಿದ್ದರು. ರುಕ್ಮಿಣಿ ಸೌದೆ ಕಡಿದು ಪೇಟೆಗೊಯ್ದು ಮಾರುತ್ತಿದ್ದಳು; ಪಯಾಗ ಗರಗಸ ಹಿಡಿಯುತ್ತಿದ್ದ, ನೇಗಿಲು ಹೂಡುತ್ತಿದ್ದ, ಏತ ಎಳೆಯುತ್ತಿದ್ದ. ಯಾವ ಕೆಲಸವೆಂದರೆ ಅದಕ್ಕೆ ಅಂಟಿಕೊಳ್ಳುತ್ತಿದ್ದ. ಆಗ ಅವನು ಹಸನ್ಮುಖಿಯಾಗಿ, ಶ್ರಮಶೀಲನಾಗಿ, ವಿನೋದಪರನಾಗಿ, ನಿರ್ದ್ವಂದ್ವದ ವ್ಯಕ್ತಿಯಾಗಿದ್ದ; ಅಂಥ ಮನುಷ್ಯರು ಎಂದೂ ಹೊಟ್ಟೆಗಿಲ್ಲದೆ ಸಾಯುವುದಿಲ್ಲ. ಕೆಲಸ ಎಂಥದೇ ಆಗಲಿ, 'ಇಲ್ಲ'ವೆನ್ನದಷ್ಟು ನಮ್ರತೆ ಅವನಲ್ಲಿತ್ತು. ಯಾರಾದರೂ ಏನಾದರೂ ಕೆಲಸ ಹೇಳಿದರೆ ಅವನು 'ಒಳ್ಳೆಯದಣ್ಣ' ಎನ್ನುತ್ತ ತಕ್ಷಣ ಹೋಗುತ್ತಿದ್ದ. ಇದರಿಂದಾಗಿ ಅವನಿಗೆ ಹಳ್ಳಿಯಲ್ಲಿ ಗೌರವವಿತ್ತು. ಹಿಂದೊಮ್ಮೆ ಎರಡು ಮೂರು ವರ್ಷ ಕಾಲ ನಿರುದ್ಯೋಗಿಯಾಗಿದ್ದರೂ ಅವನಿಗೆ ಕಷ್ಟವಾಗಲಿಲ್ಲ. ಮನೆಯ ಮುಂದೆ ಮೂರು ಜೊತೆ ಎತ್ತು ಕಟ್ಟಿದ ಊರ ಗೌಡನಿಗೇ ಎರಡು ಹೊತ್ತು ಊಟದ ಭಾಗ್ಯವಿರಲಿಲ್ಲವೆಂದ ಮೇಲೆ ಪಯಾಗನದು ಯಾವ ಲೆಕ್ಕ? ಏನೇ ಇರಲಿ, ಒಂದು ಹೊತ್ತಿನ ರೊಟ್ಟಿ ದೊರೆಯುವುದರಲ್ಲಿ ಸಂದೇಹವಿರಲಿಲ್ಲ. ಆದರೆ ಸಮಸ್ಯೆ ದಿನದಿನಕ್ಕೆ ವಿಷಮವಾಗುತ್ತಿತ್ತು. ಮೇಲೆ ಇನ್ನೊಂದು ತೊಂದರೆಯೆಂದರೆ ಯಾವದೋ ಕಾರಣದಿಂದಾಗಿ ಈಗ ರುಕ್ಮಿಣಿಯಲ್ಲಿ ಮೊದಲಿನ ಪತಿಪರಾಯಣತೆಯಾಗಲೀ, ತತ್ಪರತೆಯಾಗಲೀ, ಸೇವಾದೃಷ್ಟಿಯಾಗಲೀ ಇರಲಿಲ್ಲ. ಅಷ್ಟೇ ಅಲ್ಲ, ಅವಳು ಬುದ್ಧಿವಂತಿಕೆಯಲ್ಲೂ ಮಾತಿನಲ್ಲೂ ಆಶ್ಚರ್ಯವುಂಟು ಮಾಡುವಷ್ಟು ವಿಕಾಸ ತೋರಿಸುತ್ತ ನಡೆದಳು. ಆದಕಾರಣ ಪಯಾಗನಿಗೆ ಜೀವನೋಪಾಯದ ಚಿಂತೆಯಿಂದ ಮುಕ್ತನಾಗಿ ಭಗವತ್ ಭಜನೆ, ಸಾಧುಸೇವೆಗಳಲ್ಲಿ ನಿಶ್ಚಿಂತನಾಗಿ ಮನತೊಡಗಿಸಲು ಯಾವದಾದರೊಂದು ಸಿದ್ಧಿಯ ಅವಶ್ಯಕತೆ ಕಂಡಿತು.

ಒಂದು ದಿನ ರುಕ್ಮಿಣಿ ಪೇಟೆಯಿಂದ ಸೌದೆ ಮಾರಿಕೊಂಡು ಹಿಂದಿರುಗಿದಾಗ ಪಯಾಗ ಹೇಳಿದ– "ತಾ, ನನಗೊಂದಿಷ್ಟು ದುಡ್ಡು ಕೊಡು. ದಮ್ಮೆಳೆದು ಬರ್ತೀನಿ."

ರುಕ್ಮಿಣಿ ಮುಖ ಸಿಂಡರಿಸಿ ಹೇಳಿದಳು – "ಅಷ್ಟು ದಮ್ಮೆಳೆಯೋ ಚಟ ಇದ್ದರೆ ಕೆಲಸ ಯಾಕೆ ಮಾಡಬಾರದು? ಸಾಧು ಮಹಾತ್ಮರ ಚಿಲುಮೆ ತುಂಬಿಕೊಡೋದಕ್ಕೆ ಬೇರೆ ಯಾರೂ ದಿಕ್ಕಿಲ್ಲವೆ?"

ಪಯಾಗ ಹುಬ್ಬು ಗಂಟಿಕ್ಕಿ ಹೇಳಿದ – "ನಿನಗೆ ಒಳ್ಳೇದಾಗಬೇಕು ಅಂತ ಇದ್ದರೆ ದುಡ್ಡು ತೆಗಿ. ಇಲ್ಲದೇ ಹೀಗೆ ಪೀಡಿಸಿದರೆ ಯಾವತ್ತಾದರೂ ಒಂದು ದಿನ ಹೊರಟುಹೋಗ್ತೀನಿ. ಆಮೇಲೆ ಗೋಳಾಡ್ತಿ."

ರುಕ್ಮಿಣಿ ಅವನ ಮೂತಿ ತಿವಿಯುತ್ತ ಹೇಳಿದಳು – "ಗೋಳಾಡ್ತೀನಿ ಬಾ ಅಂತ. ನೀನಿದ್ದು ಅದ್ಯಾವ ಬಂಗಾರ ತಂದಿಕ್ಕಿದೀಯಂತೊ. ಈಗಲೂ ಎದೆ ಚಚ್ಚಿಕೊಳ್ಳೋದು ಇದ್ದೇ ಇದೆ; ಆಗಲೂ ಚಚ್ಚಿಕೋತೀನಿ."

"ಹಾಗಾದರೆ ಇದೇ ಕೊನೇ ಮಾತೋ"

"ಹ್ಞಾ, ಹ್ಞಾ, ಹೇಳಿದೆನಲ್ಲ, ನನ್ನ ಹತ್ತಿರ ದುಡ್ಡಿಲ್ಲ ಅಂತ."

"ಒಡವೆ ಮಾಡಿಸಿಕೊಳ್ಳೋಕೆ ದುಡ್ಡಿರುತ್ತೆ. ನಾನೊಂದು ನಾಲ್ಕು ಕಾಸು ಕೇಳಿದರೆ ಹೀಗೆ ಜವಾಬು ಕೊಡ್ತಿ."

ರುಕ್ಮಿಣಿ ಕಿಡಿಕಿಡಿಯಾಗಿ ಹೇಳಿದಳು – "ನಾನು ಒಡವೆ ಮಾಡಿಸಿಕೊಂಡರೆ ನಿನಗೆ ಯಾಕೆ ಸಂಕಟ ? ಒಂದು ಹಿತ್ತಾಳೆ ಬಳೆ ಮಾಡಿಸಿಕೊಡಲಾರದವನಿಗೆ ಇದನ್ನು ನೋಡೋಕ್ಕಾಗೋಲ್ಲವೆ ?"

ಪಯಾಗ ಅವತ್ತು ಮನೆಗೆ ಬರಲಿಲ್ಲ. ಒಂಬತ್ತು ಹೊಡೆಯಿತು, ರುಕ್ಮಿಣಿ ಬಾಗಿಲು ಹಾಕಿದಳು. ಊರಲ್ಲೆಲ್ಲೋ ತಲೆಮರೆಸಿಕೊಂಡು ಕುಳಿತಿದಾನೆ. ಬಂದು ಒಲಿಸಿಕೋತಾಳೆ ಅಂತ ಅಂದುಕೊಂಡಿದಾನೆ, ನಾನ್ಯಾಕೆ ಹೋಗಬಾರದು ಎಂದುಕೊಂಡಳು.

ಮಾರನೆಯ ದಿನವೂ ಪಯಾಗ ಬರದಿದ್ದಾಗ ರುಕ್ಮಿಣಿಗೆ ಚಿಂತೆಗಿಟ್ಟುಕೊಂಡಿತು. ಊರಲ್ಲೆಲ್ಲಾ ಹುಡುಕಿದಳು, ಎಲ್ಲೂ ಕಾಣಿಸಲಿಲ್ಲ. ಅವತ್ತು ಅವಳು ಅಡಿಗೆಯನ್ನೇ ಮಾಡಲಿಲ್ಲ. ರಾತ್ರಿ ಎಷ್ಟು ಹೊತ್ತಾದರೂ ನಿದ್ರೆ ಹತ್ತಲಿಲ್ಲ. ಪಯಾಗ ನಿಜವಾಗಿಯೂ ವಿರಕ್ತನಾಗಿಬಿಟ್ಟನೋ ಹೇಗೆ ಎಂದು ಅನುಮಾನ ಬರತೊಡಗಿತು. ಬೆಳಗ್ಗೆ ಎದ್ದು ಒಂದಂಗುಲ ನೆಲವೂ ಬಿಡದಂತೆ ಊರನ್ನೆಲ್ಲಾ ಸೋಸುವುದು, ಯಾರಾದರೂ ಸಾಧು ಸಂತರ ಬಳಿ ಇದ್ದಾನು, ಇಲ್ಲವೇ ಹೋಗಿ ಠಾಣೆಯಲ್ಲಿ ದೂರು ಕೊಡುವುದು ಎಂದುಕೊಂಡಳು.

ರುಕ್ಮಿಣಿ ಠಾಣೆಗೆ ಹೋಗಲು ತಯಾರಿ ನಡೆಸಿದ್ದಾಗ ಇನ್ನೂ ನಸುಕು. ಬಾಗಿಲು ಹಾಕಿ ಮನೆಯಿಂದ ಹೊರಬೀಳುವಾಗ ಎದುರಿನಿಂದ ಪಯಾಗ ಬರುತ್ತಿರುವುದು ಕಾಣಿಸಿತು. ಆದರೆ ಅವನು ಒಂಟಿಯಾಗಿರಲಿಲ್ಲ. ಅವನ ಹಿಂದೆ ಹಿಂದೆ ಒಬ್ಬಳು ಹೆಂಗಸು ಬರುತ್ತಿದ್ದಳು. ಅವಳ ಹೊಸಚೀಟಿಯ ಸೀರೆ, ಬಣ್ಣದ ಪಚ್ಚಡ, ಉದ್ದನೆಯ ಮುಸುಕು, ನಾಚಿಕೆಯ ಹಾವಭಾವಗಳನ್ನು ಕಂಡಾಗ ರುಕ್ಮಿಣಿಯ ಗುಂಡಿಗೆ ಸೋತಂತಾಯಿತು. ಒಂದು ಕ್ಷಣ ಅವಳು ಬುದ್ಧಿ ಕಳೆದವಳಂತೆ ನಿಂತಿದ್ದಳು. ಆಮೇಲೆ ಮುಂದೆ ಬಂದು ಹೊಸ ಸವತಿಯನ್ನು ಎರಡೂ ಕೈಯಿಂದ ಹಿಡಿದುಕೊಂಡು ಮೆಲ್ಲಮೆಲ್ಲನೆ ಮನೆಯೊಳಕ್ಕೆ ಕರೆದೊಯ್ದಳು. ಅವಳನ್ನು ನೋಡಿದರೆ ಯಾವನೋ ರೋಗಿ ಬದುಕಿನಲ್ಲಿ ನಿರಾಶೆಗೊಂಡು ವಿಷಪಾನ ಮಾಡುತ್ತಿರುವಂತೆ ಕಾಣುತ್ತಿತ್ತು.

ನೆರೆಹೊರೆಯವರ ಗುಂಪು ಚದುರಿದ ಮೇಲೆ ರುಕ್ಮಿಣಿ ಪಯಾಗನನ್ನು ಕೇಳಿದಳು

– "ಎಲ್ಲಿಂದ ತಂದೆ ಇವಳನ್ನ?"

ಪಯಾಗ ನಗುತ್ತ ಹೇಳಿದ – "ಮನೆ ಬಿಟ್ಟು ಓಡಿಬರ್ತಿದ್ದಳು, ದಾರೀಲಿ ಎದುರಾದಳು. ಮನೆಗೆಲಸ ನೋಡಿಕೊಂಡು ಇರ್ತಾಳೆ."

"ನನ್ನ ಜೊತೆ ಸಂಸಾರ ಸಾಕಾಯ್ತು ಅಂತ ಕಾಣುತ್ತೆ!"

ಪಯಾಗ ಓರೆನೋಟ ಬೀರುತ್ತ ಹೇಳಿದ – "ಛೀ ಹುಚ್ಚಿ, ನಿನ್ನ ಸೇವೆ ಶುಶ್ರೂಷೆ ಮಾಡಿಕೊಂಡಿರಲಿ ಅಂತ ಇವಳನ್ನ ಕರೆತಂದಿದೀನಿ ಕಣೇ."

"ಹೊಸದರ ಮುಂದೆ ಹಳೇದನ್ನ ಯಾರು ಕೇಳ್ತಾರೆ?"

"ಯಾರು ಮನಸ್ಸಿಗೆ ಒಪ್ತಾರೋ ಅವರೇ ಹೊಸಬರು; ಯಾರು ಮನಸ್ಸಿಗೆ ಒಪ್ಪೋಲ್ಲವೋ ಅವರು ಹಳಬರು. ತಾ, ಒಂದಿಷ್ಟು ದುಡ್ಡಿದ್ದರೆ ಕೊಡು. ಮೂರು ದಿನದಿಂದ ದಮ್ಮಿಳದಿಲ್ಲ; ನೆಟ್ಟಗೆ ಕಾಲು ಹಾಕೋಕ್ಕೆ ಆಗ್ತಿಲ್ಲ. ಹ್ಞಾ, ನೋಡು, ನಾಲ್ಕಾರು ದಿನ ಈ ಬಡಪಾಯಿಗೆ ಚೆನ್ನಾಗಿ ಊಟ ತಿಂಡಿ ಹಾಕು; ಆಮೇಲೆ ನಿನ್ನ ಸೇವೇನೇ ಮಾಡ್ತಾಳೆ."

ರುಕ್ಮಿಣಿ ಒಂದು ಇಡೀ ರೂಪಾಯಿ ತೆಗೆದು ಪಯಾಗನ ಕೈಲಿಟ್ಟಳು. ಅವನಿಗೆ ಮತ್ತೆ ಪೀಡಿಸುವ ಅವಶ್ಯಕತೆಯೇ ಬರಲಿಲ್ಲ.

## 2

ಪಯಾಗನಲ್ಲಿ ಬೇರೆ ಏನೇ ಒಳ್ಳೆಯ ಗುಣವಿರಲಿ ಬಿಡಲಿ, ಅವನಿಗೆ ಶಾಸನದ ಮೂಲ ಸಿದ್ಧಾಂತಗಳ ಪರಿಚಯವಿತ್ತೆಂಬುದನ್ನು ಒಪ್ಪಲೇಬೇಕು. ಭೇದನೀತಿಯ ಕಡೆ ಲಕ್ಷ್ಯವಿಟ್ಟು ಅವನು ನಡೆದಿದ್ದ.

ಒಂದು ತಿಂಗಳ ತನಕ ಯಾವ ವಿಘ್ನವೂ ಅಡ್ಡಿ ಬರಲಿಲ್ಲ. ರುಕ್ಮಿಣಿ ಯಾವದೋ ಮಂಕು ಕವಿದವಳಂತೆ ಇರುತ್ತಿದ್ದಳು. ಹೊತ್ತಿಗೆ ಮುಂಚೆ ಏಳುತ್ತಿದ್ದಳು. ಸೌದೆ ಕಡಿದೋ, ಹುಲ್ಲು ಕೊಯ್ದೋ, ಬೆರಣಿ ತಟ್ಟಿಯೋ ಪೇಟೆಗೆ ಕೊಂಡು ಹೋಗುತ್ತಿದ್ದಳು. ಅಲ್ಲಿ ಸಿಕ್ಕಿದ್ದರಲ್ಲಿ ಅರ್ಧವನ್ನು ಪಯಾಗನ ಕೈಗಿಡುತ್ತಿದ್ದಳು. ಉಳಿದರ್ಧದಲ್ಲಿ ಮನೆಯ ಖರ್ಚು ವೆಚ್ಚ ನಡೆಯುತ್ತಿತ್ತು. ಸವತಿಗೆ ಏನೂ ಕೆಲಸ ಮಾಡಲು ಬಿಡುತ್ತಿರಲಿಲ್ಲ. ನೆರೆಹೊರೆಯವರಿಗೆ ಹೇಳುತ್ತಿದ್ದಳು – "ಸವತಿಯಾದರೇನಂತಕ್ಕ, ಹೊಸ ಮದುವಣಗಿತ್ತಿ ಅಲ್ಲವೆ? ಈಗ ನಾಲ್ಕಾರು ತಿಂಗಳಾದರೂ ಆರಾಮವಾಗಿಲ್ಲದಿದ್ದರೆ ಮುಂದೆ ನೆಪ್ಪು ಮಾಡಿ ಕೊಳ್ಳೋಕೆ ಏನು ಇರುತ್ತೆ? ಕೆಲಸಕ್ಕೆ ನಾನು ಇದ್ದೇ ಇದೀನಿ."

ಊರವರೆಲ್ಲಾ ರುಕ್ಮಿಣಿಯ ಗುಣ ನಡತೆಗಳನ್ನು ಹೊಗಳುತ್ತಿದ್ದರು. ಆದರೆ ಸತ್ಸಂಗ ಚತುರ ಪಯಾಗನಿಗೆ ಎಲ್ಲವೂ ಅರ್ಥವಾಗುತ್ತಿತ್ತು. ತನ್ನ ನೀತಿ ಸಫಲವಾದುದಕ್ಕೆ ಅವನಿಗೆ ಸಂತೋಷವಾಗಿತ್ತು.

ಒಂದು ದಿನ ಹೊಸ ಹೆಂಡತಿ ಹೇಳಿದಳು – "ಅಕ್ಕ, ಮನೇಲಿ ಕೂತೂ ಕೂತೂ

ಬೇಜಾರು ಬಂತು. ನನಗೂ ಏನಾದರೂ ಕೆಲಸ ಕೊಡು.''

ರುಕ್ಮಿಣಿ ಪ್ರೀತಿ ತುಂಬಿದ ಧ್ವನಿಯಲ್ಲಿ ಹೇಳಿದಳು – ''ಏನು, ನನ್ನ ಮುಖಕ್ಕೆ ಮಸಿ ಬಳೀಬೇಕು ಅಂತೇನು? ನೀನು ಮನೆಗೆಲಸ ನೋಡಿಕೊಂಡು ಹೋಗು, ಹೊರಗೆಲಸಕ್ಕೆ ನಾನು ಇದ್ದೇ ಇದೀನಿ.''

ಹೊಸ ಹೆಂಡತಿಯು ಹೆಸರು ಕೌಸಲ್ಯ. ಅದು ಅಪಭ್ರಂಶಗೊಂಡು 'ಸಿಲಿಯಾ' ಎಂದಾಗಿತ್ತು. ಸಿಲಿಯಾ ಆ ಕ್ಷಣ ಏನೂ ಉತ್ತರ ಕೊಡಲಿಲ್ಲ. ಆದರೆ ಆ ಹುಡುಗಿಯ ಪಾಡು ಅವಳಿಗೇ ಅಸಹ್ಯ ತರುತ್ತಿತ್ತು. ದಿನವಿಡೀ ಮನೆಗೆಲಸ ಮಾಡಿ ಮಾಡಿ ಸತ್ತರೂ ಯಾರೂ ಕೇಳುವವರಿಲ್ಲ. ರುಕ್ಮಿಣಿ ಹೊರಗೆ ನಾಲ್ಕು ಕಾಸು ಸಂಪಾದಿಸಿ ತರುತ್ತಿದ್ದುದರಿಂದ ಮನೆಯ ಯಜಮಾನಿಯಾಗಿದ್ದಳು. ಈಗ ಸಿಲಿಯಳೂ ಕೂಲಿಗೆ ಹೊರಟರೆ ಯಜಮಾನಿಯ ಅಹಂಕಾರ ಮುರಿಯುತ್ತದೆ. ಪಯಾಗನಿಗೂ ಹಣವೆಂದರೆ ಎಷ್ಟು ಮೋಹವೆಂಬುದು ಸಿಲಿಯಳಿಗೂ ತಿಳಿದಿತ್ತು. ಅವತ್ತು ರುಕ್ಮಿಣಿ ಹುಲ್ಲು ತೆಗೆದುಕೊಂಡು ಪೇಟೆಗೆ ಹೊರಟೊಡನೆಯೇ ಸಿಲಿಯಾ ಮನೆಯ ಬಾಗಿಲು ಹಾಕಿ ಹಳ್ಳಿಯ ಅಂದ ಚಂದ ನೋಡಿ ಬರಲು ಹೊರಟಳು. ಹಳ್ಳಿಯಲ್ಲಿ ಬ್ರಾಹ್ಮಣರು, ಠಾಕೂರರು, ಕಾಯಸ್ಥರು, ಬನಿಯರು ಎಲ್ಲರೂ ಇದ್ದರು. ಸಿಲಿಯಾ ಹಾಕಿದ ಶೀಲ ಸಂಕೋಚಗಳ ಸೋಗಿಗೆ ಹಳ್ಳಿಯ ಹೆಂಗಸರು ಮಾರುಹೋದರು. ಒಬ್ಬರು ಅಕ್ಕಿ ಕೊಟ್ಟರೆ ಇನ್ನೊಬ್ಬರು ಬೇಳೆ ಕೊಟ್ಟರು, ಮತ್ತೊಬ್ಬರು ಮಗುದೊಂದು ಕೊಟ್ಟರು. ಹೊಸ ಮದುವಣಗಿತ್ತಿಯನ್ನು ಯಾರು ತಾನೇ ಬರ ಮಾಡಿಕೊಳ್ಳುವುದಿಲ್ಲ? ಮೊದಲ ಸುತ್ತಿನಲ್ಲಿಯೇ ಹಳ್ಳಿಯಲ್ಲಿ ಹಿಟ್ಟು ಬೀಸಿ ಕೊಡುವವರ ಅಗತ್ಯ ಇದೆ, ಆ ಕೊರತೆಯನ್ನು ತಾನು ಪೂರೈಸಬಹುದೆಂದು ಕೌಸಲ್ಯಳಿಗೆ ಗೊತ್ತಾಯಿತು. ಅವಳು ಅವತ್ತು ಮನೆಗೆ ಹಿಂದಿರುಗುವಾಗ ಅವಳ ತಲೆಯ ಮೇಲೆ ಗೋದಿ ತುಂಬಿದ ಕುಕ್ಕೆಯಿತ್ತು.

ಪಯಾಗನಿಗೆ ಇನ್ನೂ ಬೆಳಗಿನ ಜಾವದಲ್ಲಿಯೇ ಬೀಸುವ ಕಲ್ಲಿನ ಶಬ್ದ ಕೇಳಿ ಬಂದಾಗ ಅವನು ರುಕ್ಮಿಣಿಗೆ ಹೇಳಿದ – ''ಸಿಲಿಯಾ ಇವತ್ತು ಇಷ್ಟು ಬೇಗಾಗಲೇ ಬೀಸೋಕ್ಕೆ ಷುರು ಮಾಡಿದಾಳೆ.'' ರುಕ್ಮಿಣಿ ಪೇಟೆಯಿಂದ ಹಿಟ್ಟು ಕೊಂಡು ತಂದಿದ್ದಳು. ಗೋದಿಯ ಬೆಲೆ, ಹಿಟ್ಟಿನ ಬೆಲೆಗಳಲ್ಲಿ ಅಷ್ಟಾಗಿ ವ್ಯತ್ಯಾಸವಿರಲಿಲ್ಲ. ಸಿಲಿಯಾ ಇನ್ನೂ ಬೆಳಗಿನಲ್ಲಿ ಇಷ್ಟು ಬೇಗ ಏನು ಬೀಸುತ್ತಿದ್ದಾಳೆಂದು ಅವಳಿಗೆ ಆಶ್ಚರ್ಯವಾಯಿತು. ಎದ್ದು ಕೋಣೆಯೊಳಗೆ ಹೋಗಿ ನೋಡಿದಾಗ ಸಿಲಿಯಾ ಕತ್ತಲಲ್ಲಿ ಕುಳಿತು ಏನನ್ನೋ ಬೀಸುತ್ತಿದ್ದಾಳೆ. ಅವಳು ಹೋಗಿ ಸಿಲಿಯಳ ಕೈ ಹಿಡಿದುಕೊಂಡಳು; ಕುಕ್ಕೆಯನ್ನೆತ್ತಿ ಹೇಳಿದಳು – ''ನಿನಗೆ ಬೀಸೋಕ್ಕೆ ಯಾರು ಹೇಳಿದರು? ಯಾರ ದವಸ ಇದು?''

ಸಿಲಿಯಾ ನಿಸ್ಸಂಕೋಚವಾಗಿ ಉತ್ತರ ಕೊಟ್ಟಳು – ''ನೀನು ಹೋಗಿ ಆರಾಮವಾಗಿ ಯಾಕೆ ಮಲಕ್ಕೊಳೋಲ್ಲ! ನಾನು ಬೀಸಿದರೆ ನಿನಗೇನು ನಷ್ಟ? ಕಲ್ಲಿನ ಶಬ್ದಾನೂ ಸಹಿಸೋಕ್ಕಾಗೋಲ್ಲವೆ? ತಾ, ಕುಕ್ಕೆ ಇಲ್ಲಿ ಕೊಡು. ಎಷ್ಟು ದಿನ ಅಂತ ಕೂತುಕೊಂಡು ತಿನ್ನಲಿ! ಆಗಲೇ ಎರಡು ತಿಂಗಳಾಯಿತು.''

“ನಾನು ನಿನಗೇನೂ ಅನ್ನಲಿಲ್ಲವಲ್ಲ!”

“ನೀನು ಅನ್ನು, ಬಿಡು. ನನ್ನ ಧರ್ಮ ಅನ್ನೋದು ಒಂದಿಷ್ಟಿದೆ”.

“ನಿನಗಿನ್ನೂ ಇಲ್ಲಿನ ಜನ ಗೊತ್ತಿಲ್ಲ. ಹಿಟ್ಟು ಬೀಸಿಕೊಳ್ಳೋಕೆ ಎಲ್ಲರಿಗೂ ಸಂತೋಷವೇ. ಆದರೆ ದುಡ್ಡು ಕೊಡೋಕ್ಕೆ ಸಂಕಟವಾಗುತ್ತೆ. ಯಾರ ಮನೆಯ ಗೋದಿ ಇದು ? ಬೆಳಗ್ಗೆ ಹೋಗಿ ಅವರ ತಲೆಯ ಮೇಲೆ ಕುಕ್ಕಿ ಬರ್ತೀನಿ.”

ಸಿಲಿಯಾ ರುಕ್ಮಿಣಿಯ ಕೈಯಿಂದ ಕುಕ್ಕೆಯನ್ನು ಕಿತ್ತುಕೊಂಡು ಹೇಳಿದಳು – “ಯಾಕೆ ದುಡ್ಡು ಕೊಡೋಲ್ಲ ? ನಾನೇನು ಬಿಟ್ಟಿ ಜೀತ ಮಾಡೋಕ್ಕಿದೇನೆಯೆ ?”

“ನೀನು ನನ್ನ ಮಾತು ಕೇಳ್ತಿಯೋ ಇಲ್ಲವೋ ?”

“ನಿನ್ನ ಆಳಾಗಿ ನಾನು ಬಾಳಲಾರೆ !”

ಈ ತಕರಾರನ್ನು ಕೇಳಿ ಪಯಾಗನೂ ಎದ್ದು ಬಂದ. “ಕೆಲಸ ಮಾಡೋದಾದರೆ ಯಾಕೆ ಬಿಡಬಾರದು ? ಏನು, ಸಾಯೋತನಕ ಮದುವಣಗಿತ್ತಿಯಾಗಿಯೇ ಇರ್ತಾಳೆಯೆ ? ಆಗಲೆ ಎರಡು ತಿಂಗಳಾಯಿತು” – ಅವನಂದ.

“ನಿನಗೇನು ತಿಳಿಯುತ್ತೆ, ಮರ್ಯಾದೆ ಹೋಗೋದು ನನ್ನದು ತಾನೆ ?” – ರುಕ್ಮಿಣಿ ಹೇಳಿದಳು.

ರುಕ್ಮಿಣಿಯ ಮಾತು ಕೇಳಿ ಸಿಲಿಯಾ ಜವಾಬು ಕೊಟ್ಟಳು – “ಈಗ ತಾನೇ ಯಾರು ಕೂರಿಸಿ ಅನ್ನ ಇಕ್ತಿದಾರಂತೆ ! ಕುಟ್ಟೋದು – ಬೀಸೋದು, ಅಡಿಗೆ – ಊಟ – ಕಸಮುಸುರೆಗಳನ್ನೆಲ್ಲಾ ಯಾರೋ ಮಾಡ್ತಿರೋರು ? ನೀರೆಳೆದೂ ಎಳೆದೂ ಕೈಯೆಲ್ಲಾ ಬಾರೆ ಬಂತು. ಇನ್ನು ಮೇಲೆ ಈ ಎಲ್ಲ ಕೆಲಸ ನನ್ನಿಂದಾಗೋಲ್ಲ.”

ಪಯಾಗ ಹೇಳಿದ – “ಹಾಗಾದರೆ ನೀನೇ ಪೇಟೆಗೆ ಹೋಗಿ ಬಾ. ಮನೆಗೆಲಸಾನ ರುಕ್ಮಿಣಿ ನೋಡ್ಕೊತಾಳೆ.”

ರುಕ್ಮಿಣಿ ಅಡ್ಡ ಬಂದಳು – “ಇಂಥ ಮಾತಾಡೋಕ್ಕೆ ನಾಚಿಕೆಯಾಗೋಲ್ವೆ ? ಇನ್ನೂ ನಿನ್ನೆ ಮೊನ್ನೆಯ ಮದುವಣಗಿತ್ತಿ ಪೇಟೆ ತಿರುಗಿದರೆ ಲೋಕ ಏನನ್ನೋಲ್ಲ.”

ಸಿಲಿಯಾ ಗೆದ್ದಳು. ಮನೆಯ ಯಜಮಾನಿಕೆ ರುಕ್ಮಿಣಿಯ ಕೈಯಿಂದ ಕಳಚಿ ಹೋಯಿತು.

ಸಿಲಿಯಳ ಪಾರುಪತ್ಯ ಷುರುವಾಯಿತು. ಹರೆಯದ ಹೆಣ್ಣು. ಬೆಳಗ್ಗೆ ಗೋದಿ ಬೀಸಿ ಎದ್ದು, ಇತರರ ಜೊತೆ ಹುಲ್ಲು ಕೆತ್ತಲು ಹೊರಟರೆ ಎಲ್ಲರೂ ದಂಗುಬಡಿದು ಹೋಗುವಷ್ಟು ಹುಲ್ಲು ಕೆತ್ತುತ್ತಿದ್ದಳು. ಹೊರೆ ಎತ್ತಿದರೂ ಎತ್ತಲಾರದಷ್ಟಿರುತ್ತಿತ್ತು. ಚೆನ್ನಾಗಿ ಹುಲ್ಲು ಕೆತ್ತಿ ಅಭ್ಯಾಸವಿದ್ದ ಗಂಡಸರ ಮೇಲೆಯೂ ಬಾಜಿ ಕಟ್ಟಿ ಗೆಲ್ಲುತ್ತಿದ್ದಳು. ಹೊರೆ ಹನ್ನೆರಡಾಣೆಗೆ ಮಾರಾಟವಾಯಿತು. ಸಿಲಿಯಾ ಆ ಹಣದಲ್ಲಿ ಹಿಟ್ಟು, ಅಕ್ಕಿ, ಬೇಳೆ, ಎಣ್ಣೆ ಉಪ್ಪು, ತರಕಾರಿ, ಗರಂ ಮಸಾಲೆ ಎಲ್ಲವನ್ನೂ ಕೊಂಡು ಇನ್ನೂ ನಾಲ್ಕಾಣೆ ಉಳಿಸಿ ತಂದಳು. ಸಿಲಿಯಾ ಒಂದು ನಾಲ್ಕಾರಾಣೆ ಸಂಪಾದಿಸಿ ತರುತ್ತಾಳೆ. ಅವಳನ್ನು ಚೆನ್ನಾಗಿ ಅಂದು ಮಾರನೆಯ ದಿನದಿಂದ ತಾನೇ ಬಜಾರಿಗೆ ಹೋಗುತ್ತೇನೆ ಎಂದು ರುಕ್ಮಿಣಿ ಅಂದುಕೊಂಡಿದ್ದಳು. ಇಷ್ಟೆಲ್ಲ ಸಾಮಾನು ಕಂಡು

ಅವಳ ಕಣ್ಣು ಕೆರಳಿತು. ಪಯಾಗ ಊಟಕ್ಕೆ ಕುಳಿತಾಗ ಮಸಾಲೆ ಹಾಕಿ ಮಾಡಿದ ತರಕಾರಿಯನ್ನು ಹೊಗಳತೊಡಗಿದ. ಅಷ್ಟು ರುಚಿಯಾದ ಊಟ ಉಂಡು ಎಷ್ಟೋ ತಿಂಗಳಾಗಿತ್ತು. ಅವನಿಗೆ ಬಹಳ ಸಂತೋಷವಾಯಿತು. ಊಟ ಮುಗಿಸಿ ಅವನು ಮನೆಬಿಟ್ಟು ಹೊರಟಾಗ ಬಾಗಿಲ ಬಳಿ ಸಿಲಿಯಾ ನಿಂತಿದ್ದುದು ಕಂಡಿತು. ಇವತ್ತು ಎಷ್ಟು ದುಡ್ಡು ಸಿಕ್ಕಿತು ಎಂದು ಕೇಳಿದ.

''ಹನ್ನೆರಡಾಣೆ''

''ಎಲ್ಲಾ ಖರ್ಚಾಯಿತೆ ? ಏನಾದರೂ ಮಿಕ್ಕಿದ್ದರೆ ಕೊಡು ಇಲ್ಲಿ.''

ಸಿಲಿಯಾ ಮಿಕ್ಕಿದ್ದ ನಾಲ್ಕಾಣೆಯನ್ನು ಅವನ ಕೈಗಿಟ್ಟಳು. ಪಯಾಗ ರಾಗವಾಗಿ ಹೇಳಿದ – ''ನೀನಿವತ್ತು ವೈಭವದಲ್ಲಿ ಮುಳುಗಿಸಿಬಿಟ್ಟೆ. ರುಕ್ಮಿಣಿಯಾಗಿದ್ದರೆ ನಾಲ್ಕಾರು ಕಾಸಿನಲ್ಲಿ ಮುಗಿಸಿಬಿಡ್ತಿದ್ದಳು.''

''ನಾನೇನು ದುಡ್ಡನ್ನ ಹೂತಿಡಬೇಕೆ ? ದುಡ್ಡಿರೋದು ಉಣ್ಣೋಕೆ ತಿನ್ನೋಕ್ಕೋ ಇಲ್ಲವೇ ಹೂತಿಡೋಕ್ಕೋ ?''

''ಇನ್ನು ಮೇಲೆ ನೀನೇ ಪೇಟೆಗೆ ಹೋಗು. ರುಕ್ಮಿಣಿ ಮನೆಗೆಲಸ ನೋಡಿಕೊಳ್ಳಲಿ.''

## 3

ರುಕ್ಮಿಣಿ ಸಿಲಿಯರ ನಡುವೆ ಕದನಕ್ಕಿಟ್ಟುಕೊಂಡಿತು. ಸಿಲಿಯಾ ಪಯಾಗನನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಜೀವ ತೇಯುತ್ತಿದ್ದಳು. ನಸುಕಿನಲ್ಲಿಯೇ ಅವಳ ಬೀಸುವ ಕಲ್ಲಿನ ಶಬ್ದ ಕೇಳಿಸುತ್ತಿತ್ತು. ಬೆಳಕು ಹರಿದೊಡನೆಯೇ ಹುಲ್ಲು ಕೆತ್ತಲು ಹೋಗುತ್ತಿದ್ದಳು. ಆಮೇಲೆ ಕೊಂಚ ಸುಧಾರಿಸಿಕೊಂಡು ಪೇಟೆಯ ಹಾದಿ ಹಿಡಿಯುತ್ತಿದ್ದಳು. ಪೇಟೆಯಿಂದ ಹಿಂದಿರುಗಿದ ಮೇಲೂ ಅವಳು ಸುಮ್ಮನೆ ಕೂಡುತ್ತಿರಲಿಲ್ಲ. ಸೆಣಬು ಕತ್ತರಿಸುತ್ತಿದ್ದಳು, ಇಲ್ಲವೇ ಸೌದೆ ಕಡಿಯುತ್ತಿದ್ದಳು. ಅವಕಾಶ ಸಿಕ್ಕಿದಾಗಲೆಲ್ಲಾ ಸಗಣಿ ಕೂಡಿಸಿ ಬೆರಣಿ ತಟ್ಟಿ ಹಳ್ಳಿಯಲ್ಲಿ ಮಾರುತ್ತಿದ್ದಳು. ರುಕ್ಮಿಣಿ ಮಾತ್ರ ಅವಳ ಆಡಳಿತದಲ್ಲಿ ತಪ್ಪು ತೆಗೆಯದೇ ಇರುತ್ತಿರಲಿಲ್ಲ.

ಪಯಾಗನ ಎರಡೂ ಕೈಯಲ್ಲಿ ಮಿಠಾಯಿ ತುಂಬಿತ್ತು. ಹೆಂಡತಿಯರಿಬ್ಬರೂ ಹೆಚ್ಚು ಹೆಚ್ಚಾಗಿ ಹಣ ಕೊಟ್ಟು, ವಿಶ್ವಾಸ ತೋರಿಸಿ, ಅವನನ್ನು ತಮ್ಮ ತಮ್ಮ ಅಧಿಕಾರದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದರು. ಏನು ಮಾಡಿದರೂ ಅಲುಗಾಡದಂತೆ ಸಿಲಿಯಾ ಭದ್ರವಾಗಿ ತಳವೂರಿದ್ದಳು. ಬರುಬರುತ್ತಾ ಇಬ್ಬರಲ್ಲಿಯೂ ಬಹಿರಂಗವಾಗಿಯೇ ಪೈಪೋಟಿಗಿಟ್ಟುಕೊಂಡಿತು. ಒಂದು ದಿನ ಸಿಲಿಯಾ ಹುಲ್ಲು ಕೆತ್ತಿಕೊಂಡು ಬರುವಾಗ ಬೆವರಿನಿಂದ ಒದ್ದೆಮುದ್ದೆಯಾಗಿದ್ದಳು. ಫಾಲ್ಗುಣ ಮಾಸ, ಬಿಸಿಲು ಜೋರಾಗಿತ್ತು. ಮೈ ತೊಳೆದುಕೊಂಡು ಬಂದು ಆಮೇಲೆ ಪೇಟೆಗೆ ಹೋಗುವುದೆಂದು ಕೊಂಡಳು. ಹುಲ್ಲಿನ ಹೊರೆಯನ್ನು ಬಾಗಿಲ ಬಳಿಯೇ ಇಟ್ಟು ಕೆರೆಗೆ ಹೋದಾಗ ರುಕ್ಮಿಣಿ ಅದರಿಂದ ಸ್ವಲ್ಪ ಹುಲ್ಲನ್ನು ತೆಗೆದು ನೆರೆಮನೆಯಲ್ಲಿ

ಬಚ್ಚಿಟ್ಟು, ಹೊರೆಯನ್ನು ಮೊದಲಿನಷ್ಟೇ ಕಾಣುವಂತೆ ಸಡಿಲವಾಗಿ ಕಟ್ಟಿಟ್ಟಳು.

ಸಿಲಿಯಾ ಮೈತೊಳೆದು ಹಿಂದಿರುಗಿದಾಗ ಹುಲ್ಲು ಕಡಿಮೆಯಾಗಿದೆಯೆಂದನಿಸಿತು. ರುಕ್ಮಿಣಿಯನ್ನು ಕೇಳಿದಳು. ಅವಳು ತನಗೇನೂ ತಿಳಿಯದೆಂದಳು.

ಸಿಲಿಯಾ ಬೈಗಳಕ್ಕೆ ತೊಡಗಿದಳು – "ನನ್ನ ಹುಲ್ಲು ಮುಟ್ಟಿದೋಳ ಮೈಯಲ್ಲಿ ಹುಳ ಬೀಳ! ಅವಳ ಅಪ್ಪ ಅಣ್ಣ ಸತ್ತುಹೋಗ! ಅವಳ ಕಣ್ಣು ಕುರುಡಾಗ!"

ರುಕ್ಮಿಣಿ ಕೊಂಚ ಹೊತ್ತು ಬಾಯಿ ಮುಚ್ಚಿಕೊಂಡು ಕುಳಿತಿದ್ದಳು, ಕೊನೆಗೆ ರಕ್ತ ಕುದಿಯದೇ ಇರಲಿಲ್ಲ. ಕೋಪದಿಂದ ಎದ್ದು ಬಂದು ಸಿಲಿಯಳ ಕಪಾಳಕ್ಕೆ ಎರಡು ಮೂರು ಬಿಗಿದಳು

ಸಿಲಿಯಾ ಎದೆ ಎದೆ ಬಡಿದುಕೊಂಡು ಅಳತೊಡಗಿದಳು. ಕೇರಿಗೆ ಕೇರಿಯೇ ಅಲ್ಲಿ ಗುಂಪು ಸೇರಿತು. ಸಿಲಿಯಳ ಜಾಣ್ಮೆ ಕಾರ್ಯಕುಶಲತೆಗಳನ್ನು ಕಂಡು ಎಲ್ಲರ ಕಣ್ಣೂ ಕಿಡಿಕಿಡಿಯಾಗಿತ್ತು. ಅವಳು ಎಲ್ಲರಿಗಿಂತ ಹೆಚ್ಚು ಹುಲ್ಲು ಕೊಯ್ಯುತ್ತಿದ್ದಳು, ಸೌದೆ ಕಡಿಯುತ್ತಿದ್ದಳು, ಹೊತ್ತಿಗೆ ಮುಂಚೆ ಏಳುತ್ತಿದ್ದಳು, ಹಣ ಸಂಪಾದಿಸುತ್ತಿದ್ದಳು. ಈ ಕಾರಣಗಳಿಂದಾಗಿ ಅವಳ ಬಗ್ಗೆ ನೆರೆಹೊರೆಯವರ ಸಹಾನುಭೂತಿ ಕಡಿಮೆಯಾಗಿತ್ತು. ಎಲ್ಲರೂ ಅವಳನ್ನೇ ಅನ್ನ ತೊಡಗಿದರು – "ಒಂದು ಹಿಡಿ ಹುಲ್ಲಿಗಾಗಿ ಇಷ್ಟು ರಂಪವೆ? ಗುಡಿಸಿ ಎಸೆಯೋ ಅಷ್ಟು ಹುಲ್ಲು. ಹುಲ್ಲನ್ನ ಬಂಗಾರ ಮಾಡಿಬಿಟ್ಟಳು. ತೊಗೊಂಡಿದ್ದರೆ ಯಾರೋ ಊರೂಮನೆಯವರೇ ಇರಬೇಕು ಅಂತ ಯೋಚಿಸಬೇಕಾಗಿತ್ತು. ಹೊರಗಿನ ಕಳ್ಳರು ಯಾರು ತಾನೇ ಬರ್ತಾರೆ? ನೀನು ಇಷ್ಟೆಲ್ಲಾ ಬೈದೆಯಲ್ಲ, ಯಾರನ್ನ ಮನಸ್ಸಿನಲ್ಲಿಟ್ಟುಕೊಂಡು ಬೈದೆ? ನೆರೆಹೊರೆಯವರನ್ನೇನು?"

ಸುಯೋಗವೆಂದರೆ ಪಯಾಗ ಅವತ್ತು ಠಾಣೆಗೆ ಹೋಗಿದ್ದ. ಸಂಜೆ ಸುಸ್ತಾಗಿ ಮನೆಗೆ ಬಂದು ಸಿಲಿಯಳಿಗೆ ಹೇಳಿದ – "ತಾ, ಒಂದಿಷ್ಟು ದುಡ್ಡು ಕೊಡು, ದಮ್ಮೆಳೆದು ಬರ್ತೀನಿ. ದಣಿದುಹೋಗಿದೀನಿ".

ಸಿಲಿಯಾ ಅವನನ್ನು ನೋಡಿದೊಡನೆಯೇ ಅಯ್ಯಯ್ಯೋ ಎಂದು ಅಳತೊಡಗಿದಳು.

ಪಯಾಗ ಗಾಬರಿಯಿಂದ ಕೇಳಿದ – "ಏನಾಯಿತು? ಯಾಕೆ ಅಳ್ತಿ? ಯಾರಾದರೂ ತೀರಿಕೊಂಡರೋ ಹೇಗೆ? ತವರಿನಿಂದ ಯಾರಾದರೂ ಬಂದು ಸುದ್ದಿ ಕೊಟ್ಟರೆ?"

"ನಾನು ಇನ್ನು ಈ ಮನೇಲಿ ಇರೋಕ್ಕಾಗೋಲ್ಲ, ನಮ್ಮ ಮನೆಗೆ ಹೋಗ್ತೀನಿ."

"ಬಾಯಿ ಬಿಟ್ಟು ಹೇಳೇ ಏನಾಯ್ತು ಅಂತ. ಹಳ್ಳೀಲಿ ಯಾರಾದರೂ ಬೈದರೆ? ಯಾರು ಬೈದರು? ಅವರ ಮನೆ ಬೂದಿ ಮಾಡಿಬಿಟ್ಟೇನು! ಪೊಲೀಸಿಗೆ ಹಿಡಿದುಕೊಟ್ಟೇನು!"

ಸಿಲಿಯಾ ಬಿಕ್ಕಿ ಬಿಕ್ಕಿ ಅಳುತ್ತ ನಡೆದುದೆಲ್ಲವನ್ನೂ ಹೇಳಿದಳು. ಪಯಾಗನಿಗೆ ಅವತ್ತು ಠಾಣೆಯಲ್ಲಿ ಚೆನ್ನಾಗಿ ಹೊಡೆತ ಬಿದ್ದಿತ್ತು. ಕಿಡಿಕಿಡಿಯಾಗಿದ್ದ. ಇದನ್ನು ಕೇಳಿದೊಡನೆಯೇ ಅವನ ಮೈ ಉರಿಯತೊಡಗಿತು. ರುಕ್ಮಿಣಿ ನೀರು ತರಲು

ಹೋಗಿದ್ದಳು. ಅವಳು ಬಂದು ಇನ್ನೂ ಗಡಿಗೆಯನ್ನು ಕೆಳಗಿಟ್ಟಿರಲಿಲ್ಲ, ಪಯಾಗ ಅವಳ ಮೇಲೆ ಬಿದ್ದು ಉಸಿರು ಕಟ್ಟುವಷ್ಟು ಹೊಡೆದ. ಅವನ ಒಂದೊಂದು ಏಟಿಗೂ ಅವಳು ಬೈಗಳದಿಂದ ಉತ್ತರ ಕೊಡುತ್ತಿದ್ದಳು. ಒಂದೊಂದು ಬೈಗಳ ಕೇಳಿದಾಗಲೂ ಪಯಾಗ ಕಿಡಿಕಿಡಿಯಾಗಿ ಹೊಡೆಯುತ್ತಿದ್ದ. ರುಕ್ಮಿಣಿಯ ಮಂಡಿ ಮುರಿಯಿತು, ಬಳೆ ಒಡೆಯಿತು. ಸಿಲಿಯಾ ನಡುನಡುವೆ ಬಾಯಿ ಹಾಕುತ್ತಿದ್ದಳು – "ಅಹಾ, ನಿನ್ನ ದಿಟ್ಟತನವೆ! ಅಯ್ಯೋ ನಿನ್ನ ನಾಲಿಗೆಯೆ! ಇಂಥ ಹೆಂಗಸನ್ನೇ ನಾನು ನೋಡಲಿಲ್ಲ. ಹೆಂಗಸೇನು ಬಂತು, ಪಿಶಾಚಿ ಇವಳು! ನಾಲಿಗೆಯ ಮೇಲೆ ಸ್ವಲ್ಪವಾದರೂ ಹತೋಟಿ ಇಲ್ಲ". ಆದರೆ ರುಕ್ಮಿಣಿ ಅವಳ ಮಾತು ಕೇಳಿಸದವಳಂತೆ ಇದ್ದಳು. ಅವಳೆಲ್ಲ ಶಕ್ತಿಯೂ ಪಯಾಗನನ್ನು ಬೈಯುವುದರಲ್ಲಿ ನಿರತವಾಗಿತ್ತು. ಪಯಾಗ ಹೊಡೆದು ಹೊಡೆದು ಸುಸ್ತಾದ, ಆದರೆ ರುಕ್ಮಿಣಿಯ ನಾಲಿಗೆಗೆ ಮಾತ್ರ ಸುಸ್ತಾಗಲಿಲ್ಲ. ಬಾಯಿ ಪಾಠ ಮಾಡಿದಂತೆ ಒಂದೇ ಮಾತು – "ನೀನು ಸಾಯು! ನೀನು ಮಣ್ಣಾಗ! ಭವಾನಿ ನಿನ್ನನ್ನ ತಿನ್ನಲಿ! ನಿನಗೆ ಮೂರ್ಛೆರೋಗ ಬರ!" ಪಯಾಗ ಬಿಟ್ಟು ಬಿಟ್ಟು ಕೋಪದಿಂದ ಕಿಡಿಕಿಡಿಯಾಗುತ್ತಿದ್ದ. ಮತ್ತೆ ಮತ್ತೆ ಬಂದು ಒಂದೆರಡು ಬಿಗಿದು ಹೋಗುತ್ತಿದ್ದ. ಹೊಡೆತ ತಿಂದೂ ತಿಂದೂ ಈಗ ರುಕ್ಮಿಣಿಗೆ ಪ್ರಾಯಶಃ ನೋವೇ ಆಗುತ್ತಿರಲಿಲ್ಲವೇನೋ. ಅವಳು ಇದ್ದಲ್ಲಿಂದ ಅಲುಗಾಡುತ್ತಲೂ ಇರಲಿಲ್ಲ. ತಲೆಗೂದಲು ಕೆದರಿಕೊಂಡು, ನೆಲದ ಮೇಲೆ ಬಿದ್ದುಕೊಂಡು, ಅದೇ ಅದೇ 'ಮಂತ್ರ'ಗಳನ್ನು ಜಪಿಸುತ್ತಿದ್ದಳು. ಅವಳ ಧ್ವನಿಯಲ್ಲಿ ಕೋಪವಿರಲಿಲ್ಲ; ಬರಿಯ ಉನ್ಮಾದದ ಹುಚ್ಚು ಹೊಳೆಯಿತ್ತು. ಅವಳ ಇಡೀ ಜೀವ ಹಿಂಸಾಗ್ನಿಯಿಂದ ದಹಿಸುತ್ತಿತ್ತು.

ಕತ್ತಲಾದ ಮೇಲೆ ರುಕ್ಮಿಣಿ ಎದ್ದು ಮನೆಯಿಂದ ಹೊರಬಂದಳು. – ಕಣ್ಣಿಂದ ಅಶ್ರುಧಾರೆ ಹರಿದು ಹೊರಹೋಗುವಂತೆ. ಸಿಲಿಯಾ ಅಡಿಗೆ ಮಾಡುತ್ತಿದ್ದಳು. ರುಕ್ಮಿಣಿ ಹೋಗುವುದನ್ನು ನೋಡಿದರೂ ಎಲ್ಲಿಗೆಂದು ಕೇಳಲಿಲ್ಲ. ಪಯಾಗ ಬಾಗಿಲಲ್ಲಿ ಕುಳಿತು ಚಿಲುಮೆ ಸೇದುತ್ತಿದ್ದ. ಅವನೂ ಏನೂ ಹೇಳಲಿಲ್ಲ.

## 4

ಫಸಲು ಮಾಗುವ ಕಾಲದಲ್ಲಿ ಒಂದೆರಡು ತಿಂಗಳು ಪಯಾಗ ಕಣ ಕಾಯುವ ಕೆಲಸ ಮಾಡುತ್ತಿದ್ದ. ಅವನಿಗೆ ರೈತರಿಂದ ಎರಡೂ ಸುಗ್ಗಿಗಳಲ್ಲಿ ಕೊಂಚ ದವಸ ಸಿಗುತ್ತಿತ್ತು. ಮಾಘಮಾಸದಲ್ಲಿಯೇ ಅವನು ಕಣದ ನಡುವೆ ನೆಲ ಗುಡಿಸಿ ಸಮ ಮಾಡಿ ಜೋಪಡಿ ಹಾಕುತ್ತಿದ್ದ. ರಾತ್ರಿ ಉಂಡಾದ ಮೇಲೆ ಚಿಲುಮೆ, ಬೆಂಕಿ, ತಂಬಾಕು – ಚರಸ್ಸುಗಳ ಸಮೇತ ಅಲ್ಲಿ ಹೋಗಿ ಬಿದ್ದುಕೊಳ್ಳುತ್ತಿದ್ದ. ಚೈತ್ರದ ಕೊನೆಯವರೆಗೂ ಇದೇ ನೇಮ ಅವನದ್ದು. ಈಗ ಅದೇ ಕಾಲ. ಫಸಲು ಬಲಿತು ನಿಂತಿತ್ತು, ನಾಲ್ಕಾರು ದಿನಗಳಲ್ಲಿ ಕೊಯ್ಲು ಶುರುವಾಗುವುದಿತ್ತು. ಪಯಾಗ ರಾತ್ರಿ ಹತ್ತುಗಂಟೆಯವರೆಗೂ

ರುಕ್ಮಿಣಿಯ ದಾರಿ ನೋಡಿದ. ಆಮೇಲೆ ಪ್ರಾಯಶಃ ಯಾರಾದರೂ ಅಕ್ಕಪಕ್ಕದವರ ಮನೆಗೆ ಹೋಗಿ ಮಲಗಿರಬಹುದೆಂದುಕೊಂಡ. ಊಟ ಮುಗಿಸಿ ಲಾಠಿ ಎತ್ತಿಕೊಂಡು ಹೊರಡುವ ಮುನ್ನ ಸಿಲಿಯಾಳಿಗೆ ಹೇಳಿದ – "ಭದ್ರವಾಗಿ ಚಿಲಕ ಹಾಕಿಕೊ. ರುಕ್ಮಿಣಿ ಏನಾದರೂ ಬಂದರೆ ಬಾಗಿಲು ತೆಗಿ; ಮನವೊಲಿಸಿಕೊಂಡು ಒಂದಿಷ್ಟು ಊಟಕ್ಕೆ ಇಕ್ಕು. ನಿನ್ನಿಂದಾಗಿ ಇವತ್ತು ಇಷ್ಟೊಂದು ರಾದ್ಧಾಂತ ಆಯಿತು. ನನಗೆ ಹೇಗೆ ಅಷ್ಟೊಂದು ಕೋಪ ಬಂತೋ ಗೊತ್ತಿಲ್ಲ. ಇದುವರೆಗೆ ನಾನು ಅವಳನ್ನ ಒಂದು ಹೂವಿನ ದಂಡೆಯಿಂದ ಸಹ ಹೊಡೆದಿರಲಿಲ್ಲ. ಎಲ್ಲಾದರೂ ಹೋಗಿ ಕೆರೆ ಬಾವಿ ಹಾರಿಕೊಂಡಿದ್ದರೆ ನಾಳೆ ಕಷ್ಟಕ್ಕಿಟ್ಟುಕೊಳ್ಳುತ್ತೆ."

ಸಿಲಿಯಾ ಹೇಳಿದಳು – "ಅವಳು ಬರ್ತಾಳೋ ಇಲ್ಲವೋ ಯಾರಿಗೆ ಗೊತ್ತು. ನಾನೊಬ್ಬಳೇ ಹೇಗಿರಲಿ ? ನನಗೆ ಭಯವಾಗುತ್ತೆ ?"

"ಹಾಗಾದರೆ ಮನೇಲಿ ಯಾರಿರ್ತಾರೆ ? ಮನೆ ಖಾಲಿ ಇರೋದು ನೋಡಿ ಯಾರಾದರೂ ಥಾಲಿ – ಲೋಟ ಹೊತ್ತುಕೊಂಡು ಹೋದರೆ ! ಹೆದರಿಕೆಗೆ ಏನಿದೆ ? ಅಲ್ಲದೇ ರುಕ್ಮಿಣಿ ಬಂದೇ ಬರ್ತಾಳೆ."

ಸಿಲಿಯಾ ಒಳಗಿನಿಂದ ಬಾಗಿಲು ಹಾಕಿಕೊಂಡಳು. ಪಯಾಗ ಕಣದ ಕಡೆ ನಡೆದ. ಚರಸ್ಸಿನ ಲಹರಿಯಲ್ಲಿ ಅವನ ಬಾಯಿ ಕಬೀರರ ಭಜನೆಯೊಂದನ್ನು ಗುಣಗುಣಿಸುತ್ತಿತ್ತು:

> ಮಾಯಾವಿ, ಕಣ್ಣ ಹೀಗೇಕೆ ಕುಣಿಸುವೆಯ ?
> 'ಕುಂಬಳ' ಕೊರೆದು ಮೃದಂಗ ಮಾಡಿದೆ, 'ನಿಂಬೆ'ಯ ಕೊಚ್ಚಿ ಮಂಜೀರ ಮಾಡಿದೆ.
> 'ಹೀರೆ'ಯರೈವರು ಮಂಗಳ ಹಾಡೆ, ಥೈಥಕ ಥಕಥೈ ಕುಣಿದಳು 'ಸೌತೆ'.
> ಬೆಳ್ಳಿಯ ತೊಟ್ಟು ಬೆಡಗನು ತೋರಿದೆ, ಚಿನ್ನವ ತೊಟ್ಟು ಕಣ್ಮನ ಸೆಳೆದೆ
> ತುಳಸೀಮಾಲೆಯ ಕೊರಳಲಿ ಧರಿಸಿ, ಮೂಲೋಕವನೂ ಮರುಳಾಗಿಸಿದೆ.
> ಮಾಯಾವಿ, ಕಣ್ಣ ಹೀಗೇಕೆ ಕುಣಿಸುವೆಯ ?

ಪಯಾಗ ಗದ್ದೆಯ ಗಡಿಯನ್ನು ತಲಪಿದಾಗ ಇದ್ದಕ್ಕಿದ್ದಂತೆ ಎದುರು ಕಣದಲ್ಲಿ ಯಾರೋ ಬೆಂಕಿ ಹಚ್ಚಿದ್ದುದು ಕಾಣಿಸಿತು. ಒಂದೇ ಕ್ಷಣದಲ್ಲಿ ಅದು ದೊಡ್ಡ ಜ್ವಾಲೆಯಾಗಿ ಉರಿಯತೊಡಗಿತು. "ಯಾರಲ್ಲಿ ? ಯಾರದು ಬೆಂಕಿ ಹಚ್ಚಿರೋರು ?" – ಪಯಾಗ ಜೋರಾಗಿ ಕೂಗಿಕೊಂಡ.

ಪಯಾಗನ ಪ್ರಶ್ನೆಗೆ ಮೇಲೇಳುತ್ತಿದ್ದ ಬೆಂಕಿಯ ಜ್ವಾಲೆ ತನ್ನ ಕೆನ್ನಾಲಿಗೆಯ ಉತ್ತರ ಕೊಟ್ಟಿತ್ತು. ಪಯಾಗನಿಗೆ ತನ್ನ ಜೋಪಡಿಗೆ ಬೆಂಕಿ ಬಿದ್ದಿದೆಯೆಂದು ಈಗ ಗೊತ್ತಾಯಿತು. ಅವನ ಎದೆ ಬಡಿದುಕೊಳ್ಳತೊಡಗಿತು. ಆ ಜೋಪಡಿಗೆ ಬೆಂಕಿ ಹಚ್ಚುವುದು ಹತ್ತಿಯ ಗುಡ್ಡೆಗೆ ಬೆಂಕಿ ಇಟ್ಟಂತೆಯೇ ! ಗಾಳಿ ಬೀಸುತ್ತಿತ್ತು. ಜೋಪಡಿಯ ನಾಲ್ಕೂ ಕಡೆ ಒಂದು ಮೊಳ ದೂರ ಬಿಟ್ಟು ಹಣ್ಣಾದ ಫಸಲು ಹಚ್ಚಡದಂತೆ ಹಾಸಿತ್ತು. ರಾತ್ರಿಯಲ್ಲಿ ಸಹ ಅದರ ಬಂಗಾರದ ಬಣ್ಣ ಹೊಳೆಯುತ್ತಿತ್ತು. ಬೆಂಕಿಯ ಒಂದು ಜ್ವಾಲೆ, ಬರಿಯ ಒಂದು ಸಣ್ಣ ಕಿಡಿ ಇಡೀ ಕಣವನ್ನೇ ಭಸ್ಮಮಾಡಬಹುದಾಗಿತ್ತು. ಹಾಗೇನಾದರೂ ಆದರೆ ಹಳ್ಳಿಗೆ ಹಳ್ಳಿಯೇ ನಾಶವಾಗಿ

ಬಿಡುತ್ತದೆ. ಈ ಗದ್ದೆಗೆ ಹತ್ತಿ ಕೊಂಡಂತೆ ಇತರ ಹಳ್ಳಿಗಳ ಗದ್ದೆಗಳೂ ಇವೆ. ಅವೂ ಹತ್ತಿ ಉರಿಯುತ್ತವೆ. ಓಹ್ ! ಬೆಂಕಿಯು ಜ್ವಾಲೆ ಏರುತ್ತಾ ಹೋಗುತ್ತಿದೆ. ಇನ್ನು ತಡಮಾಡುವಂತಿಲ್ಲ.

ಪಯಾಗ ತನ್ನ ಬೆರಣಿ ಚಿಲುಮೆಗಳನ್ನು ಅಲ್ಲಿಯೇ ಎಸೆದು ಹೆಗಲ ಮೇಲೆ ಕಬ್ಬಿಣದ ಕಟ್ಟು ಹಾಕಿದ ಲಾಠಿಯನ್ನೇರಿಸಿ ಬೇಗ ಬೇಗ ಜೋಪಡಿಯ ಕಡೆ ಓಡಿದ. ಒಡ್ಡಿನ ಮೇಲೆ ಹೋದರೆ ಒಳ ಸಾಗುತ್ತಿದ್ದುದರಿಂದ ಅವನು ಗದ್ದೆಯ ಮೇಲೆಯೇ ನೇರವಾಗಿ ಹೋಗುತ್ತಿದ್ದ. ಜ್ವಾಲೆ ಕ್ಷಣಕ್ಷಣಕ್ಕೆ ಪ್ರಚಂಡವಾಗುತ್ತಿತ್ತು. ಪಯಾಗ ಇದ್ದಿದ್ದೂ ಜೋರಾಗಿ ಹೆಜ್ಜೆ ಹಾಕುತ್ತಿದ್ದ. ವೇಗವಾಗಿ ಓಡುವ ಕುದುರೆ ಸಹ ಅವನನ್ನು ಆ ಕ್ಷಣ ಹಿಡಿಯಲಾಗುತ್ತಿರಲಿಲ್ಲ. ಅವನ ವೇಗಕ್ಕೆ ಅವನಿಗೇ ಆಶ್ಚರ್ಯವಾಗುತ್ತಿತ್ತು. ಹೆಜ್ಜೆ ನೆಲ ತಾಕುತ್ತಲೇ ಇಲ್ಲವೇನೋ ಎನಿಸುತ್ತಿತ್ತು. ಅವನ ಕಣ್ಣು ಜೋಪಡಿಯ ಮೇಲೆ ನೆಟ್ಟಿತ್ತು. ಎಡಬಲದಲ್ಲಿದ್ದುದೇನೂ ಅವನ ಕಣ್ಣಿಗೆ ಕಾಣುತ್ತಿರಲಿಲ್ಲ. ಈ ಏಕಾಗ್ರತೆಯೇ ಅವನ ಕಾಲಿಗೆ ರೆಕ್ಕೆ ಮೂಡಿಸಿತ್ತು. ಏದುಸಿರಾಗಲೀ ಕಾಲಿಗೆ ದಣಿವಾಗಲೀ ಇರಲಿಲ್ಲ. ಎರಡು ನಿಮಿಷದಲ್ಲಿ ಅವನು ಮೂರು ನಾಲ್ಕು ಫರ್ಲಾಂಗು ದೂರ ದಾಟಿ ಜೋಪಡಿಯನ್ನು ಮುಟ್ಟಿದ್ದ.

ಜೋಪಡಿಯ ಸುತ್ತಮುತ್ತ ಯಾರೂ ಇರಲಿಲ್ಲ. ಬೆಂಕಿ ಹಾಕಿದವರನ್ನು ಹುಡುಕುವ ಮಾತು ಒತ್ತಟ್ಟಿಗಿರಲಿ, ಅವರು ಯಾರಿರಬಹುದೆಂದು ಯೋಚಿಸಲೂ ಅವನಿಗೆ ಪುರಸೊತ್ತಿರಲಿಲ್ಲ. ಪಯಾಗನಿಗೆ ರುಕ್ಮಿಣಿಯ ಮೇಲೆ ಸಂದೇಹ ಬಂದಿತು, ಆದರೆ ಅದು ಕೋಪಕ್ಕೆ ಹೊತ್ತಲ್ಲ. ಬೆಂಕಿಯು ಜ್ವಾಲೆ ತುಂಟ ಹುಡುಗರ ತರಹ ಗೇಲಿ ಮಾಡುತ್ತಿತ್ತು; ಒಮ್ಮೆ ಬಲಗಡೆಗೆ, ಇನ್ನೊಮ್ಮೆ ಎಡಗಡೆಗೆ ನುಗ್ಗುತ್ತಿತ್ತು. ಬಲವಂತದಿಂದ ಗದ್ದೆಯ ನಡುಭಾಗದ ಕಡೆ ನುಗ್ಗಲು ಹೊರಟು, ಪ್ರಯತ್ನ ಸಫಲವಾಗದೆ ಮತ್ತೆ ಇಮ್ಮಡಿ ವೇಗದಿಂದ ನುಗ್ಗಿಯೇ ತೀರುವೆನೆಂದು ಹೊರಟಂತೆ ಕಾಣುತ್ತಿತ್ತು. ಬೆಂಕಿಯನ್ನು ಆರಿಸುವುದು ಹೇಗೆ ? ಲಾಠಿಯಿಂದ ಬಡಿದು ಬಡಿದು ಆರಿಸುವುದರಲ್ಲಿ ಅರ್ಥವಿಲ್ಲ. ಹಾಗೆ ಮಾಡುವುದು ಮಹಾ ಮೂರ್ಖತನ. ಬಿಟ್ಟರೆ ಮತ್ತೇನು ? ಫಸಲು ಸುಟ್ಟು ಹೋದರೆ ಅವನು ಯಾರಿಗೂ ಮುಖ ತೋರಿಸುವಂತಿರಲಿಲ್ಲ. ಅಯ್ಯೋ, ಹಳ್ಳಿಯಲ್ಲಿ ಗೋಳಾಟವಾಗುತ್ತದೆ, ಸರ್ವನಾಶವಾಗುತ್ತದೆ. ಪಯಾಗ ಹೆಚ್ಚು ಯೋಚಿಸುವ ತಂಟೆಗೇ ಹೋಗಲಿಲ್ಲ. ಹಳ್ಳಿಯ ಮುಕ್ಕರು ಯೋಚಿಸುವುದನ್ನೇನು ಬಲ್ಲರು ? ಪಯಾಗ ಲಾಠಿಯನ್ನು ಸರಿಮಾಡಿಕೊಂಡು, ಜೋರಾಗಿ ಹಾರಿ, ಬೆಂಕಿಯ ಮಧ್ಯೆ ಜೋಪಡಿಯ ಬಾಗಿಲ ಬಳಿ ಬಂದ. ಉರಿಯುತ್ತಿದ್ದ ಜೋಪಡಿಯನ್ನು ಲಾಠಿಯಿಂದ ಮೇಲೆತ್ತಿ ತಲೆಯ ಮೇಲೆ ಹಿಡಿದುಕೊಂಡು, ಎಲ್ಲಕ್ಕಿಂತ ಅಗಲವಾಗಿದ್ದ ಒಡ್ಡಿನ ಮೇಲಿಂದ ಹಳ್ಳಿಯ ಕಡೆ ಓಡಿದ. ಅದನ್ನು ನೋಡಿದರೆ ಯಾವದೋ ಅಗ್ನಿಯಾನ ಗಾಳಿಯಲ್ಲಿ ಹಾರುತ್ತ ಬರುತ್ತಿದೆಯೋ ಎನ್ನುವಂತಿತ್ತು. ಉರಿಯುತ್ತಿರುವ ಹುಲ್ಲಿನ ತುಂಡುಗಳು ಅವನ ಮೇಲೆ ಬೀಳುತ್ತಿದ್ದವು. ಆದರೆ ಅದು ಅವನಿಗೆ ಗೊತ್ತಾಗುತ್ತಲೂ ಇರಲಿಲ್ಲ. ಕೈಯೆಲ್ಲಾ ಸುಟ್ಟುಹೋಯಿತು. ಆದರೆ ಅವನ ಕಾಲು ಕ್ಷಣಮಾತ್ರವೂ ನಿಲ್ಲಲಿಲ್ಲ; ಕೈ

ಅಲುಗಾಡಲಿಲ್ಲ. ಕೈ ಅಲುಗಾಡಿದ್ದಿದ್ದರೆ ಗದ್ದೆ ಸುಟ್ಟು ಬೂದಿಯಾಗುತ್ತಿತ್ತು. ಪಯಾಗನಿಗೆ ಈಗ ಒಂದಿಷ್ಟೂ ಅನುಮಾನ ಉಳಿಯಲಿಲ್ಲ. ಆದರೆ ಲಾಠಿಯ ಮೊನೆಯಿಂದ ಚುಚ್ಚಿ ಎತ್ತಿ ಹಿಡಿದಿದ್ದ ಜೋಪಡಿಯು ನಡುಭಾಗ ಎಲ್ಲಿ ಸುಟ್ಟು ಬೀಳುವುದೋ ಎಂಬ ಭಯವಿತ್ತು. ತೂತು ದೊಡ್ಡದಾದೊಡನೆಯೇ ಜೋಪಡಿ ತಲೆಯ ಮೇಲೆ ಬಿದ್ದು ಅವನು ಅಗ್ನಿಸಮಾಧಿಯಾಗುತ್ತಾನೆ. ಪಯಾಗನಿಗೆ ಇದು ಗೊತ್ತಿತ್ತು. ಅವನು ಗಾಳಿಯ ವೇಗದಲ್ಲಿ ಹಾರಿ ಬರುತ್ತಿದ್ದ.

ನಾಲ್ಕು ಫರ್ಲಾಂಗು ದೂರದ ಓಟ. ಮೃತ್ಯು ಅಗ್ನಿಯ ರೂಪ ಧರಿಸಿ ಆಡುತ್ತಿದೆ – ಪಯಾಗನ ತಲೆಯ ಮೇಲೆ, ಹಳ್ಳಿಯ ಫಸಲಿನ ಮೇಲೆ. ಪಯಾಗನ ಓಟದ ವೇಗಕ್ಕೆ ಜ್ವಾಲೆ ಹಿಮ್ಮುಖವಾಗಿ ತಿರುಗಿದೆ; ಅದರ ಶಕ್ತಿಯ ಅಧಿಕಾಂಶ ಗಾಳಿಯೊಡನೆ ಹೋರಾಡುವುದರಲ್ಲಿ ವ್ಯಯವಾಗಿದೆ. ಇಲ್ಲವಾದರೆ ಇಷ್ಟು ಹೊತ್ತಿಗೆ ಬೆಂಕಿ ನಡುಭಾಗವನ್ನು ತಲಪಿರುತ್ತಿತ್ತು; ಹಾಹಾಕಾರ ಎದ್ದಿರುತ್ತಿತ್ತು. ಒಂದು ಫರ್ಲಾಂಗು ಮುಗಿಯಿತು. ನೋಡು, ಪಯಾಗ, ಇನ್ನೆರಡು ಫರ್ಲಾಂಗು ಬಾಕಿಯಿದೆ; ಕಾಲು ಕೊಂಚವೂ ದಣಿಯಬಾರದು; ಜ್ವಾಲೆ ಲಾಠಿಯ ಮೊನೆಯ ಹತ್ತಿರ ಬರುತ್ತಿದೆ; ನಿನ್ನ ಬಾಳು ಕೊನೆಯಾಗುತ್ತದೆ. ಸತ್ತ ಮೇಲೂ ನಿನಗೆ ಬೈಗಳ ತಪ್ಪಿದ್ದಲ್ಲ; ಅನಂತಕಾಲದವರೆಗೂ ನೀನು ನಿಟ್ಟುಸಿರಿನ ಬೆಂಕಿಯಲ್ಲಿ ಉರಿಯುತ್ತಿರಬೇಕಾಗುತ್ತದೆ. ಇನ್ನು ಒಂದೇ ನಿಮಿಷ. ಎರಡು ಗದ್ದೆಗಳು ಉಳಿದವು. ಸರ್ವನಾಶವಾಯಿತು. ಲಾಠಿಯ ಮೊನೆ ಮೇಲೆ ಕುಸಿದು ಕೊಂಡಿತು. ಜೋಪಡಿ ಕೆಳಗೆ ಕುಸಿಯುತ್ತಿದೆ. ಇನ್ನು ಆಸೆಗೆ ಎಡೆಯಿಲ್ಲ. ಪಯಾಗ ಜೀವ ಬಿಟ್ಟು ಓಡುತ್ತಿದ್ದಾನೆ. ಅವನು ಕೊನೆಯ, ಅಂಚಿನ ಗದ್ದೆಗೆ ಬಂದು ತಲುಪಿದ. ಇನ್ನೆರಡು ಸೆಕೆಂಡಿನ ಮಾತು. ವಿಜಯದ ಬಾಗಿಲು ಎದುರಿಗೆ ಇಪ್ಪತ್ತು ಅಡಿ ದೂರದಲ್ಲಿ ನಿಂತು ಸ್ವಾಗತ ನೀಡುತ್ತಿದೆ. ಅಲ್ಲಿ ಸ್ವರ್ಗ; ಇಲ್ಲಿ ನರಕ. ಆದರೆ ಜೋಪಡಿಯ ಚಾವಣಿ ಪಯಾಗನ ತಲೆಯ ಮೇಲೆ ಕುಸಿದು ಬಿತ್ತು. ಅವನು ಈಗಲೂ ಅದನ್ನು ಎಸೆದು ತನ್ನ ಪ್ರಾಣ ಉಳಿಸಿಕೊಳ್ಳಬಹುದು. ಆದರೆ ಅವನಿಗೆ ಜೀವದ ಮೋಹವಿಲ್ಲ.

ಅವನು ಈ ಉರಿಯುತ್ತಿರುವ ಬೆಂಕಿಯನ್ನು ತಲೆಯ ಮೇಲೆ ಹೊತ್ತು ಓಡಾಡುತ್ತಿದ್ದಾನೆ. ಈಗ ಅವನ ಕಾಲು ನಡುಗುತ್ತಿದೆ. ಇನ್ನು ಈ ಕ್ರೂರ ಅಗ್ನಿಲೀಲೆಯನ್ನು ಕಣ್ಣಿಂದ ನೋಡಲಾಗುವುದಿಲ್ಲ.

ಇದ್ದಕ್ಕಿದ್ದಂತೆ ಒಬ್ಬ ಹೆಂಗಸು ಮುಂದಿನ ಮರದ ಕೆಳಗಿನಿಂದ ಓಡುತ್ತ ಓಡುತ್ತ ಪಯಾಗನ ಹತ್ತಿರ ಬಂದಳು. ಅವಳು ರುಕ್ಮಿಣಿ. ಅವಳು ಕಣ್ಣು ಮುಚ್ಚಿ ಬಿಡುವುದರೊಳಗೆ ಪಯಾಗನ ಮುಂದೆ ಬಂದು ತಲೆ ತಗ್ಗಿಸಿ, ಉರಿಯುತ್ತಿದ್ದ ಚಾವಣಿಯ ಕೆಳಗೆ ನುಗ್ಗಿ ಅದನ್ನು ಎರಡೂ ಕೈಯಿಂದ ತೆಗೆದುಕೊಂಡಳು. ಅದೇ ಕ್ಷಣ ಪಯಾಗ ಪ್ರಜ್ಞೆ ತಪ್ಪಿ ಕೆಳಬಿದ್ದ. ಅವನ ಮುಖವೆಲ್ಲಾ ಸುಟ್ಟು ಕಪ್ಪಾಗಿತ್ತು.

ರುಕ್ಮಿಣಿ ಆ ಬೆಂಕಿಯ ಹೊಂಡ ಹೊತ್ತು ಒಂದು ಸೆಕೆಂಡಿನಲ್ಲಿ ಗದ್ದೆಯ ಅಂಚನ್ನು ತಲಪಿದಳು. ಅಷ್ಟರಲ್ಲಿ ಅವಳ ಕೈ ಸುಟ್ಟುಹೋಯಿತು, ಮುಖ ಸುಟ್ಟುಹೋಯಿತು. ಬಟ್ಟೆಗೆ ಬೆಂಕಿ ಹತ್ತಿಕೊಂಡಿತು. ಅವಳಲ್ಲಿ ಈಗ ಆ ಚಾವಣಿಯಿಂದ ಹೊರಬರುವಷ್ಟು

ಪ್ರಜ್ಞೆಯೂ ಉಳಿದಿರಲಿಲ್ಲ. ಚಾವಣಿಯನ್ನು ಹಿಡಿದೇ ಅವಳು ಕೆಳಗುರುಳಿದಳು. ಇದಾದ ಮೇಲೆ ಕೊಂಚ ಹೊತ್ತಿನವರೆಗೆ ಉರಿವ ಜೋಪಡಿ ಅಲುಗಾಡುತ್ತಿತ್ತು. ರುಕ್ಮಿಣಿ ಕೈಕಾಲು ಬಡಿಯುತ್ತಿದ್ದಳು. ಆಮೇಲೆ ಬೆಂಕಿ ಅವಳನ್ನು ನುಂಗಿಬಿಟ್ಟಿತು. ರುಕ್ಮಿಣಿ ಅಗ್ನಿಸಮಾಧಿಯಾದಳು.

ಕೊಂಚ ಹೊತ್ತಿನ ಮೇಲೆ ಪಯಾಗನಿಗೆ ಪ್ರಜ್ಞೆ ಬಂದಿತು. ಅವನ ಇಡೀ ದೇಹ ಉರಿಯುತ್ತಿತ್ತು. ಕಣ್ಣು ತೆರೆದು ನೋಡಿದಾಗ ಮರದ ಕೆಳಗೆ ಜೋಪಡಿಯ ಹುಲ್ಲಿನ ಕೆಂಪು ಬೆಂಕಿ ಜಗಮಗಿಸುತ್ತಿತ್ತು. ಪಯಾಗ ಎದ್ದು ಓಡಿಹೋಗಿ ಕಾಲಿನಿಂದ ಬೆಂಕಿಯನ್ನು ಆಚೆ ಸರಿಸಿದ. ಕೆಳಗೆ ರುಕ್ಮಿಣಿಯ ಅರ್ಧ ಸುಟ್ಟ ದೇಹ ಬಿದ್ದಿತ್ತು. ಅವನು ಕೂತು ಎರಡೂ ಕೈಯಿಂದ ಮುಖ ಮುಚ್ಚಿಕೊಂಡು ಅಳತೊಡಗಿದ.

ಬೆಳಗ್ಗೆ ಹಳ್ಳಿಯ ಜನ ಪಯಾಗನನ್ನು ಎತ್ತಿಕೊಂಡು ಮನೆಗೊಯ್ದರು. ವಾರ ಕಾಲ ಔಷಧಿ – ಚಿಕಿತ್ಸೆಯಾದರೂ ಅವನು ಉಳಿಯಲಿಲ್ಲ. ಅವನ ಒಂದು ಅಂಶ ಅಗ್ನಿಗೆ ಆಹುತಿಯಾಗಿತ್ತು; ಉಳಿದದ್ದನ್ನು ಶೋಕಾಗ್ನಿ ಮುಗಿಸಿತ್ತು.

# 5. ಆತ್ಮಾರಾಮ

ಬೇಂದ್ರೋ ಗ್ರಾಮದ ಅಕ್ಕಸಾಲಿಗ ಮಹಾದೇವ ಒಬ್ಬ ವಿಖ್ಯಾತ ವ್ಯಕ್ತಿ. ಅವನು ಮನೆ. ಒಪ್ಪಾರದಲ್ಲಿ ಬೆಳಗಿನಿಂದ ಸಂಜೆಯ ತನಕ ಅಗ್ಗಿಷ್ಟಿಕೆಯ ಮುಂದೆ ಕಟ್ ಕಟ್ ಎಂದು ಬಡಿಯುತ್ತ ಕುಳಿತಿರುತ್ತಿದ್ದ. ಊರ ಜನರಿಗೆ ಒಂದೇ ಸಮನೆ ಈ ಶಬ್ದವನ್ನು ಕೇಳಿ ಕೇಳಿ ಎಷ್ಟು ಅಭ್ಯಾಸವಾಗಿ ಹೋಗಿತ್ತೆಂದರೆ ಕಾರಣವಶಾತ್ ಅದು ನಿಂತುಹೋದರೆ ಅವರಿಗೆ ತಮ್ಮ ಯಾವದೇ ಅಮೂಲ್ಯ ವಸ್ತುವನ್ನು ಕಳೆದುಕೊಂಡಂತೆ ಅನಿಸುತ್ತಿತ್ತು. ಅವನು ದಿನನಿತ್ಯ ಬೆಳಗಿನಲ್ಲಿ ತನ್ನ ಗಿಣಿಯ ಪಂಜರವನ್ನೂ ತೆಗೆದುಕೊಂಡು ಯಾವದೋ ಭಜನೆ ಮಾಡುತ್ತ ಕೆರೆಯ ಕಡೆಗೆ ಹೋಗುತ್ತಿದ್ದ. ಆ ಮಬ್ಬು ಬೆಳಕಿನಲ್ಲಿ ಅವನ ಜರ್ಜರವಾದ ಶರೀರ, ಮುಖ, ಬಗ್ಗಿದ ಸೊಂಟಗಳನ್ನು ನೋಡಿದ ಅಪರಿಚಿತರು ಅದು ಯಾವದೋ ಪಿಶಾಚಿಯೋನೋ ಎಂದು ಭ್ರಮೆಪಡಬಹುದಾಗಿತ್ತು. ಜನರ ಕಿವಿಗೆ 'ಸತ್ಯ ಗುರುದತ್ತ ಶಿವದತ್ತ ದಾತಾ' ಎಂಬ ಶಬ್ದ ಬಿದ್ದೊಡನೆಯೇ ಅವರು ಬೆಳಕು ಹರಿಯಿತೆಂದು ತಿಳಿಯುತ್ತಿದ್ದರು.

ಮಹಾದೇವನ ಕೌಟುಂಬಿಕ ಜೀವನ ಸುಖಮಯವಾಗಿರಲಿಲ್ಲ. ಅವನಿಗೆ ಮೂವರು ಗಂಡು ಮಕ್ಕಳಿದ್ದರು, ಮೂವರು ಸೊಸೆಯರಿದ್ದರು, ಹತ್ತಾರು ಮೊಮ್ಮಕ್ಕಳಿದ್ದರು. ಆದರೆ ಮಹಾದೇವನ ಭಾರವನ್ನು ಇಳಿಸುವವರು ಯಾರೂ ಇರಲಿಲ್ಲ. "ಅಪ್ಪ ಇರುವವರೆಗೂ ಜೀವನವನ್ನು ಆನಂದವಾಗಿ ಕಳೆಯೋಣ. ಆಮೇಲೆ ಈ ಡೋಲು ಕೊರಳಿಗೆ ಬೀಳುವುದಂತೂ ಇದ್ದೇ ಇದೆ" ಎಂದು ಮಕ್ಕಳು ಅಂದುಕೊಳ್ಳುತ್ತಿದ್ದರು. ಬಡಪಾಯಿ ಮಹಾದೇವ ಒಮ್ಮೊಮ್ಮೆ ನಿರಾಹಾರನಾಗಿ ಇರಬೇಕಾಗುತ್ತಿತ್ತು. ಊಟದ ಹೊತ್ತಿನಲ್ಲಿ ಅವನ ಮನೆಯಲ್ಲಿ ಹೇಗೆ ಸಾಮ್ಯವಾದದ ಗಗನಭೇದಿಯಾದ ಘೋಷಣೆ ಏಳುತ್ತಿತ್ತೆಂದರೆ ಅವನು ಹಸಿದೇ ತಟ್ಟೆ ಬಿಟ್ಟೇಳುತ್ತಿದ್ದ; ತೆಂಗಿನ ಚಿಪ್ಪಿನ ಹುಕ್ಕಾ ಕುಡಿದು ಮಲಗಿಬಿಡುತ್ತಿದ್ದ. ಅವನ ಔದ್ಯೋಗಿಕ ಜೀವನದಲ್ಲಿ ಕೌಟುಂಬಿಕ ಜೀವನದಲ್ಲಿದ್ದುದಕ್ಕಿಂತ ಹೆಚ್ಚಿನ ಅಶಾಂತಿಯಿತ್ತು. ಅವನೇನೋ ತನ್ನ ಕೆಲಸದಲ್ಲಿ ನಿಪುಣನಾಗಿದ್ದ, ಅವನ ಲೋಹ ಪರಿಷ್ಕಾರ ಕ್ರಮ ಇತರರದ್ದಕ್ಕಿಂತ ಹೆಚ್ಚು ಶುದ್ಧವಾಗಿತ್ತು. ಅವನು ತುಂಬ ಕಠಿಣವಾದ ರಾಸಾಯನಿಕ ಕ್ರಿಯೆಗಳನ್ನು ಉಪಯೋಗಿಸುತ್ತಿದ್ದ. ಆದರೂ ಕೂಡ ಸಂಶಯಗ್ರಸ್ತರಾದ ಅಧೈರ್ಯದ ಗಿರಾಕಿಗಳಿಂದ ಕೆಟ್ಟ ಮಾತು ಕೇಳಬೇಕಾಗಿ ಬರುತ್ತಿತ್ತು. ಆದರೆ ಮಹಾದೇವ ಮಾತ್ರ

ಗಾಂಭೀರ್ಯ ಕಳೆದುಕೊಳ್ಳದೆ ತಲೆ ತಗ್ಗಿಸಿಕೊಂಡು ಎಲ್ಲವನ್ನೂ ಕೇಳುತ್ತಿದ್ದ. ಒಂದೊಂದು ಸಲ ಜಗಳ ಶಾಂತವಾದಾಗಲೂ ಅವನು ತನ್ನ ಗಿಣಿಯ ಕಡೆ ನೋಡಿ ಜೋರಾಗಿ 'ಸತ್ಯ ಗುರುದತ್ತ ಶಿವದತ್ತ ದಾತಾ' ಎಂದು ಕೂಗುತ್ತಿದ್ದ. ಈ ಮಂತ್ರವನ್ನು ಜಪಿಸಿದ ತಕ್ಷಣ ಅವನ ಚಿತ್ತಕ್ಕೆ ಪೂರ್ಣ ಶಾಂತಿ ಸಿಗುತ್ತಿತ್ತು.

## 2

ಅಪ್ಪಿತಪ್ಪಿ ಒಂದು ದಿನ ಯಾವನೋ ಹುಡುಗ ಪಂಜರದ ಬಾಗಿಲು ತೆಗೆದುಬಿಟ್ಟ. ಗಿಣಿ ಹಾರಿಹೋಯಿತು. ಮಹಾದೇವ ಕತ್ತೆತ್ತಿ ಪಂಜರದ ಕಡೆ ನೋಡಿದಾಗ ಅವನ ಹೃದಯ ಶೂನ್ಯವಾದಂತಾಯಿತು. ಗಿಣಿ ಎಲ್ಲಿ ಹೋಯಿತು? ಅವನು ಮತ್ತೆ ಪಂಜರವನ್ನು ನೋಡಿದ. ಗಿಣಿ ಕಣ್ಮರೆಯಾಗಿತ್ತು. ಮಹಾದೇವ ಗಾಬರಿಯಿಂದ ಎದ್ದು ಸೂರಿನ ಕಡೆ ದೃಷ್ಟಿ ಹರಿಸಿದ. ಪ್ರಪಂಚದಲ್ಲಿ ಅವನಿಗೆ ಯಾವುದಾದರೂ ಪ್ರಿಯವಾದ ವಸ್ತು ಇದ್ದಿದ್ದುದಾದರೆ ಅದು ಆ ಗಿಣಿ. ಮಕ್ಕಳು ಮೊಮ್ಮಕ್ಕಳಿಂದ ಅವನಿಗೆ ಬೇಸರ ಬಂದಿತ್ತು. ಮೊಮ್ಮಕ್ಕಳ ಚೇಷ್ಟೆಯಿಂದ ಅವನ ಕೆಲಸಕ್ಕೆ ವಿಘ್ನವಾಗುತ್ತಿತ್ತು. ಮಕ್ಕಳ ಬಗ್ಗೆ ಅವನಿಗೆ ಪ್ರೀತಿಯಿರಲಿಲ್ಲ. ಇದಕ್ಕೆ ಕಾರಣ ಅವರು ವೈಗಳ್ಳರೆಂದಲ್ಲ; ಅವರಿಂದಾಗಿ ತನ್ನ ಪಾಲಿಗೆ ದೊರೆಯಬೇಕಾಗಿದ್ದ ಆನಂದ ಲೆಕ್ಕಕ್ಕಿಂತ ಕಡಿಮೆಯಾಗಿತ್ತೆಂದು. ನೆರೆಹೊರೆಯವರನ್ನು ಕಂಡರೆ ಅವನಿಗೆ ಸಿಟ್ಟು; ಅವರು ಬಂದು ಅವನ ಅಗ್ಗಿಷ್ಟಿಕೆಯ ಬೆಂಕಿಗೆ ಕಾಡುತ್ತಿದ್ದರು. ಈ ಎಲ್ಲ ಅಡ್ಡಿ ಆತಂಕಗಳಿಂದ ಅವನಿಗಿದ್ದ ಒಂದೇ ಆಶ್ರಯವೆಂದರೆ ಈ ಗಿಣಿ. ಅದರಿಂದ ಅವನಿಗೆ ಯಾವ ರೀತಿಯ ತೊಂದರೆಯೂ ಆಗುತ್ತಿರಲಿಲ್ಲ. ಅವನೀಗ ಶಾಂತಿ ಹೊರತು ಬೇರೇನನ್ನೂ ಬಯಸದ ವಯಸ್ಸನ್ನು ಮುಟ್ಟಿದ್ದ.

ಗಿಣಿ ಹೋಗಿ ಒಂದು ಹಂಚಿನ ಮೇಲೆ ಕುಳಿತಿತ್ತು. ಮಹಾದೇವ ಪಂಜರವನ್ನು ಕೆಳಗಿಳಿಸಿ ಅದನ್ನು ಗಿಣಿಯ ಕಡೆ ಹಿಡಿದು ತೋರಿಸುತ್ತ ಹೇಳತೊಡಗಿದ – "ಬಾಬಾ! ಸತ್ಯ ಗುರುದತ್ತ ಶಿವದತ್ತ ದಾತಾ." ಅದನ್ನು ನೋಡಿ ಹಳ್ಳಿಯ ಹುಡುಗರೂ ಮನೆಯ ಹುಡುಗರೂ ಒಟ್ಟಾಗಿ ಗದ್ದಲ ಮಾಡುತ್ತ ಚಪ್ಪಾಳೆ ತಟ್ಟತೊಡಗಿದರು. ಮೇಲಿನಿಂದ ಕಾಗೆಗಳು ಕಾಕಾ ಎಂದು ಅರಚತೊಡಗಿದವು. ಗಿಣಿ ಹಾರಿಹೋಗಿ ಹಳ್ಳಿಯಾಚೆಯ ಒಂದು ಮರದ ಮೇಲೆ ಕುಳಿತುಕೊಂಡಿತು. ಮಹಾದೇವ ಕೈಯಲ್ಲಿ ಖಾಲಿ ಪಂಜರ ಹಿಡಿದುಕೊಂಡು ಅದರ ಹಿಂದೆ ಹಿಂದೆ ಹೇಗಿದ್ದನೋ ಹಾಗೆಯೇ ಓಡತೊಡಗಿದ. ಅವನ ವೇಗದ ಓಟವನ್ನು ನೋಡಿ ಜನಕ್ಕೆ ಆಶ್ಚರ್ಯವಾಯಿತು. ಇದಕ್ಕಿಂತ ಹೆಚ್ಚು ಸುಂದರವಾದ, ಜೀವಂತವಾದ, ಭಾವನಾಮಯವಾದ ಮೋಹದ ಕಲ್ಪನೆ ಸಾಧ್ಯವಿಲ್ಲ!

ಮಧ್ಯಾಹ್ನದ ಹೊತ್ತು. ರೈತರು ಗದ್ದೆಗಳಿಂದ ಹಿಂದಿರುಗುತ್ತಿದ್ದರು. ಅವರಿಗೆ ವಿನೋದಕ್ಕೆ ಒಳ್ಳೆಯ ಅವಕಾಶ ಸಿಕ್ಕಿತು. ಮಹಾದೇವನನ್ನು ಚುಡಾಯಿಸುವುದೆಂದರೆ

ಅವರಿಗೆ ಆನಂದ. ಕೆಲವರು ಕಲ್ಲೆಸೆದರು, ಕೆಲವರು ಚಪ್ಪಾಳೆ ತಟ್ಟಿದರು. ಗಿಣಿ ಮತ್ತೆ ಹಾರಿತು. ದೂರದಲ್ಲಿದ್ದ ಮಾವಿನ ತೋಪಿಗೆ ಹೋಗಿ, ಒಂದು ಮರದ ಕೊಂಬೆಯ ತುದಿಯ ಮೇಲೆ ಕೂತುಕೊಂಡಿತು. ಮಹಾದೇವ ಮತ್ತೆ ಕೈಯಲ್ಲಿ ಖಾಲಿ ಪಂಜರ ಹಿಡಿದುಕೊಂಡು ಕಪ್ಪೆಯಂತೆ ಕುಪ್ಪಳಿಸುತ್ತ ನಡೆದು ತೋಪಿಗೆ ಬಂದ. ಅಂಗಾಲು ಬೆಂಕಿಯಂತೆ ಉರಿಯುತ್ತಿತ್ತು. ತಲೆ ತಿರುಗುತ್ತಿತ್ತು. ಸ್ವಲ್ಪ ಸುಧಾರಿಸಿಕೊಂಡು ಮತ್ತೆ ಪಂಜರವೆತ್ತಿಕೊಂಡು ಜಪಿಸತೊಡಗಿದ– "ಸತ್ಯ ಗುರುದತ್ತ ಶಿವದತ್ತ ದಾತಾ." ಗಿಣಿ ತಾನಿದ್ದ ಕೊಂಬೆಯ ಮೇಲುತುದಿಯಿಂದಿಳಿದು ಕೆಳಗಿನ ಕೊಂಬೆಯ ಮೇಲೆ ಬಂದು ಕುಳಿತು, ಮಹಾದೇವನ ಕಡೆ ಸಂಶಯದಿಂದ ನೋಡತೊಡಗಿತು. ಮಹಾದೇವ ಅದು ಹೆದರಿದೆಯೆಂದುಕೊಂಡ. ಪಂಜರವನ್ನು ಕೆಳಗಿಟ್ಟು ತಾನು ಇನ್ನೊಂದು ಮರದ ಮರೆಯಲ್ಲಿ ಅವಿತುಕೊಂಡ. ಗಿಣಿ ಸುತ್ತಲೂ ದಿಟ್ಟಿಸಿ ನೋಡಿತು; ಅದರ ಸಂಶಯ ಮಾಯವಾಯಿತು; ಕೆಳಗಿಳಿದು ಬಂದು ಪಂಜರದ ಮೇಲೆ ಕೂತುಕೊಂಡಿತು. ಮಹಾದೇವನ ಎದೆ ಹಾರತೊಡಗಿತು. "ಸತ್ಯ ಗುರುದತ್ತ ಶಿವದತ್ತ ದಾದಾ" ಎಂದು ಮಂತ್ರವನ್ನು ಜಪಿಸುತ್ತ ಮೆಲ್ಲಗೆ ಗಿಣಿಯ ಹತ್ತಿರ ಬಂದು ಅದನ್ನು ಹಿಡಿಯಲು ನುಗ್ಗಿದ. ಆದರೆ ಗಿಣಿ ಕೈಗೆ ಸಿಕ್ಕಲಿಲ್ಲ; ಮತ್ತೆ ಮರದ ಮೇಲೆ ಹೋಗಿ ಕೂತುಕೊಂಡಿತು.

ಸಂಜೆಯ ತನಕ ಹೀಗೆಯೇ ನಡೆಯಿತು. ಗಿಣಿ ಒಮ್ಮೆ ಈ ಕೊಂಬೆಯ ಮೇಲೆ, ಒಮ್ಮೆ ಆ ಕೊಂಬೆಯ ಮೇಲೆ, ಒಮ್ಮೆ ಪಂಜರದ ಮೇಲೆ ಬಂದು ಕೂರುತ್ತಿತ್ತು. ಒಮ್ಮೆ ಪಂಜರದ ಬಾಗಿಲ ಮೇಲೆ ಕುಳಿತು ತನ್ನ ಕಾಳುನೀರಿನ ಬಟ್ಟಲ ಕಡೆ ನೋಡಿ ಮತ್ತೆ ಹಾರಿಹೋಗುತ್ತಿತ್ತು. ಮುದುಕ ಮೋಹದ ಮೂರ್ತಿಯಾಗಿದ್ದರೆ ಗಿಣಿ ಮಾಯೆಯ ಮೂರ್ತಿಯಾಗಿತ್ತು. ಅಷ್ಟರಲ್ಲಿ ಸಂಜೆಯಾಯಿತು. ಮೋಹಮಾಯೆಗಳ ಈ ವಿಚಿತ್ರ ಸಂಗ್ರಾಮ ಕತ್ತಲಲ್ಲಿ ವಿಲೀನವಾಯಿತು.

## 3

ರಾತ್ರಿಯಾಯಿತು. ಎಲ್ಲೆಲ್ಲೂ ಕತ್ತಲು ಗಾಢವಾಗಿ ಕವಿಯಿತು. ಗಿಣಿ ಎಲೆಗಳ ನಡುವೆ ಎಲ್ಲೋ ಅಡಗಿ ಕುಳಿತಿತ್ತು. ಅದು ರಾತ್ರಿ ಹಾರಿಹೋಗಲಾರದು, ಪಂಜರದೊಳಗೂ ಬರಲಾರದು ಎಂದು ಮಹಾದೇವನಿಗೆ ಗೊತ್ತಿತ್ತು. ಆದರೂ ಅವನು ಅಲ್ಲಿಂದ ಸರಿಯುವ ಯೋಚನೆ ಮಾಡಲಿಲ್ಲ. ಇಡೀ ದಿನ ಅವನು ಏನನ್ನೂ ತಿಂದಿರಲಿಲ್ಲ. ರಾತ್ರಿಯ ಊಟದ ಹೊತ್ತೂ ಮೀರಿಹೋಯಿತು. ಅವನು ಒಂದು ಹನಿನೀರನ್ನು ಸಹ ಗಂಟಲಿಗೆ ಹಾಕಲಿಲ್ಲ. ಅವನಿಗೆ ಹಸಿವಾಗಲೀ ನೀರಡಿಕೆಯಾಗಲೀ ಇರಲಿಲ್ಲ. ಗಿಣಿಯಿಲ್ಲದೇ ಅವನ ಬದುಕು ನಿಸ್ಸಾರ, ಶುಷ್ಕ, ಶೂನ್ಯ ಎನಿಸುತ್ತಿತ್ತು. ಅಂತಃಪ್ರೇರಣೆಯಿಂದಾಗಿ ಅವನು ಹಗಲಿರುಳೂ ಕೆಲಸ ಮಾಡುತ್ತಿದ್ದ. ಅಭ್ಯಾಸ ಬಲದಿಂದ ಬದುಕಿನ ಇತರ ಕೆಲಸಗಳನ್ನೂ ಮಾಡುತ್ತಿದ್ದ. ಈ ಕೆಲಸಕಾರ್ಯಗಳನ್ನು

ಮಾಡುವಾಗ ಅವನಿಗೆ ತಾನು ಜೀವಂತನಾಗಿದ್ದೇನೆಂಬ ಅರಿವು ಲೇಶ ಮಾತ್ರವೂ ಇರುತ್ತಿರಲಿಲ್ಲ. ಅವನಿಗೆ ತನ್ನ ಚೇತನದ ನೆನಪು ಕೊಡುತ್ತಿದ್ದ ಒಂದೇ ಒಂದು ವಸ್ತುವೆಂದರೆ ಆ ಗಿಣಿ. ಅದು ಕೈಬಿಟ್ಟು ಹೋಗುವುದೆಂದರೆ ಜೀವ ದೇಹ ತೊರೆದು ಹೋದಂತೆಯೇ ಸರಿ!

ಇಡೀ ದಿನದ ಹಸಿವು–ನೀರಡಿಕೆ, ದಣಿವು–ಬಳಲಿಕೆಗಳಿಂದಾಗಿ ಮಹಾದೇವ ಕೂತುಕೂತಿದ್ದಂತೆಯೇ ತೂಕಡಿಸುತ್ತಿದ್ದ. ಮತ್ತೆ ಬೆಚ್ಚಿಬಿದ್ದೆದ್ದು ಕಣ್ಣು ತೆರೆಯುತ್ತಿದ್ದ. ಆ ವಿಶಾಲ ಕತ್ತಲಿನಲ್ಲಿ 'ಸತ್ಯ ಗುರುದತ್ತ ಶಿವದತ್ತ ದಾತಾ' ಎಂಬ ಅವನ ಧ್ವನಿ ಕೇಳಿ ಬರುತ್ತಿತ್ತು.

ಅರ್ಧರಾತ್ರಿ ಕಳೆಯಿತು. ಇದ್ದಕ್ಕಿದ್ದಂತೆ ಯಾವದೋ ಸಪ್ಪಳ ಕೇಳಿ ಅವನು ಬೆಚ್ಚಿ ಬಿದ್ದ. ಕಣ್ಣು ತೆರೆದು ನೋಡಿದರೆ ಇನ್ನೊಂದು ಮರದ ಕೆಳಗೆ ಒಂದು ಮಂಕುದೀಪ ಉರಿಯುತ್ತಿದೆ; ಕೆಲ ಮಂದಿ ಕುಳಿತು ತಮ್ಮ ತಮ್ಮಲ್ಲಿ ಏನೋ ಮಾತಾಡಿಕೊಳ್ಳುತ್ತಿದ್ದಾರೆ; ಚಿಲುಮೆಯೆಳೆಯುತ್ತಿದ್ದಾರೆ. ತಂಬಾಕಿನ ವಾಸನೆ ಮಹಾದೇವನ ಚಪಲ ಕೆರಳಿಸಿತು. ಒಮ್ಮೆ ಉಚ್ಚಸ್ವರದಲ್ಲಿ 'ಸತ್ಯ ಗುರುದತ್ತ ಶಿವದತ್ತ ದಾತಾ' ಎಂದು ಕೂಗಿ ಚಿಲುಮೆ ಸೇದಲೆಂದು ಅವರ ಕಡೆ ನಡೆದ. ಬಂದೂಕದ ಶಬ್ದವನ್ನು ಕೇಳಿ ಜಿಂಕೆ ಓಡಿಹೋಗುವಂತೆ ಅವರೆಲ್ಲರೂ ಅವನು ಬರುತ್ತಿರುವುದನ್ನು ಕಂಡು ಎದ್ದು ಓಡಿದರು. ಕೆಲವರು ಈ ಕಡೆ, ಕೆಲವರು ಆ ಕಡೆ. "ನಿಲ್ಲಿ, ನಿಲ್ಲಿ" ಎಂದು ಮಹಾದೇವ ಅರಚತೊಡಗಿದ. ಅವರೆಲ್ಲರೂ ಕಳ್ಳರೆಂದು ಅವನಿಗೆ ಏಕಾಏಕಿ ಹೊಳೆಯಿತು. ಅವನು ಜೋರಾಗಿ ಕೂಗಿಕೊಂಡ– "ಕಳ್ಳರು! ಕಳ್ಳರು! ಹಿಡೀರಿ! ಹಿಡೀರಿ!" ಕಳ್ಳರು ಹಿಂದಿರುಗಿ ಸಹ ನೋಡಲಿಲ್ಲ.

ಮಹಾದೇವ ದೀಪದ ಹತ್ತಿರ ಹೋದಾಗ ತುಕ್ಕಿನಿಂದ ಕಪ್ಪಾಗಿದ್ದ ಒಂದು ಚಿಕ್ಕ ಲೋಹದ ಕುಡಿಕೆಯಿದ್ದುದು ಕಂಡಿತು. ಮಹಾದೇವನ ಎದೆ ಬಡಿದುಕೊಳ್ಳತೊಡಗಿತು. ಕುಡಿಕೆಯಲ್ಲಿ ಕೈಹಾಕಿ ನೋಡಿದರೆ ಅದರಲ್ಲಿ ಚಿನ್ನದ ನಾಣ್ಯವಿದ್ದುದು ಕಂಡಿತು. ಮಹಾದೇವ ಒಂದು ನಾಣ್ಯವನ್ನು ಹೊರತೆಗೆದು ದೀಪದ ಬೆಳಕಿನಲ್ಲಿ ನೋಡಿದ. ಹೌದು, ಚಿನ್ನದ ನಾಣ್ಯವೇ! ಅವನು ತಕ್ಷಣ ಕುಡಿಕೆಯನ್ನೆತ್ತಿಕೊಂಡು, ದೀಪ ಆರಿಸಿ ಮರದ ಕೆಳಗೆ ಅವಿತುಕೊಂಡು ಕುಳಿತ. ಅನಾಯಾಸವಾಗಿ ಅವನೂ ಕಳ್ಳನಾದ.

ಕಳ್ಳರೇನಾದರೂ ಹಿಂದಿರುಗಿ ಬಂದು ತಾನೊಬ್ಬನೇ ಇರುವುದನ್ನು ನೋಡಿ ಚಿನ್ನದ ನಾಣ್ಯ ಕಿತ್ತುಕೊಂಡರೆ ಹೇಗೆ ಎಂದು ಅವನಿಗೆ ಅನುಮಾನ ಬಂದಿತು. ಒಂದಿಷ್ಟು ಚಿನ್ನದ ನಾಣ್ಯವನ್ನು ತೆಗೆದು ಸೊಂಟದಲ್ಲಿ ಸಿಕ್ಕಿಸಿದ. ಒಂದು ಒಣಗಿದ ಕಡ್ಡಿಯಿಂದ ನೆಲ ಕೆದಕಿ ಹಲವಾರು ಕಡೆ ಹೊಂಡ ತೋಡಿದ. ಅವುಗಳಲ್ಲಿ ನಾಣ್ಯ ತುಂಬಿ ಮಣ್ಣು ಮುಚ್ಚಿದ.

# 4

ಮಹಾದೇವನ ಒಳಗಣ್ಣಿನ ಮುಂದೆ ಈಗ ಚಿಂತೆ ಹಾಗೂ ಕಲ್ಪನೆಗಳಿಂದ ಕೂಡಿದ ಬೇರೆ ಇನ್ನೊಂದು ಜಗತ್ತು ನಿಂತಿತ್ತು. ಜೊತೆಗೆ ಸಿಕ್ಕಿದ್ದ ಥೈಲಿ ಕೈಯಿಂದ ಕಳಚಿಹೋಗುವ ಭಯವೂ ಇತ್ತು. ಆದರೆ ಕನಸು ತನ್ನ ಕೆಲಸ ಶುರು ಮಾಡಿತ್ತು. ಒಂದು ಭದ್ರವಾದ ಮನೆ ಎದ್ದು ನಿಂತಿತು. ಚಿನ್ನ ಬೆಳ್ಳಿಯ ಒಂದು ದೊಡ್ಡ ಅಂಗಡಿ ತೆರೆಯಿತು. ಹತ್ತಿರದ ನೆಂಟರೊಡನೆ ಮತ್ತೊಮ್ಮೆ ಗಂಟು ಬೆಳೆಯಿತು. ಭೋಗವಿಲಾಸದ ಸಾಮಗ್ರಿಗಳು ಒಟ್ಟುಗೂಡಿದವು. ತೀರ್ಥಯಾತ್ರೆಗೆ ಹೊರಟು ಅಲ್ಲಿಂದ ಹಿಂದಿರುಗಿ ಬಂದ ಮೇಲೆ ತುಂಬ ವಿಜೃಂಭಣೆಯಿಂದ ಯಜ್ಞ, ಬ್ರಹ್ಮಭೋಜನಗಳು ನಡೆದವು. ಆಮೇಲೆ ಒಂದು ಶಿವಾಲಯ ಹಾಗೂ ಬಾವಿಯ ನಿರ್ಮಾಣವಾಯಿತು; ಒಂದು ತೋಟವೂ ಕೂಡಿಕೊಂಡಿತು. ದಿನನಿತ್ಯ ಹರಿಕಥೆ ಪುರಾಣಗಳು ನಡೆಯಲಾರಂಭಿಸಿದವು. ಸಾಧುಸಂತರಿಗೆ ಆದರ ಸತ್ಕಾರಗಳಾದವು.

ಇದ್ದಕ್ಕಿದ್ದಂತೆ ಮಹಾದೇವನಿಗೆ ಒಂದು ಪಕ್ಷ ಕಳ್ಳರು ಹಿಂದಿರುಗಿ ಬಂದರೆ ತಾನು ಓಡಿ ಹೋಗಬೇಕೆಂಬುದರ ನೆನಪಾಯಿತು. ಪರೀಕ್ಷೆಗೆಂದು ಅವನು ನಾಣ್ಯದ ಕುಡಿಕೆಯನ್ನೆತ್ತಿಕೊಂಡು ಇನ್ನೂರು ಹೆಜ್ಜೆಯಷ್ಟು ದೂರ ವೇಗವಾಗಿ ಓಡುತ್ತ ನಡೆದ. ಕಾಲಿಗೆ ರೆಕ್ಕೆ ಮೂಡಿದೆಯೇನೋ ಎಂದು ಭಾಸವಾಯಿತು. ಚಿಂತೆ ಶಾಂತವಾಯಿತು. ಈ ಕಲ್ಪನೆಗಳಲ್ಲೇ ರಾತ್ರಿ ಕಳೆಯಿತು. ಬೆಳಕು ಹರಿಯಿತು; ಗಾಳಿ ಬೀಸತೊಡಗಿತು. ಹಕ್ಕಿಗಳು ಹಾರತೊಡಗಿದವು. ಇದ್ದಕ್ಕಿದ್ದಂತೆ ಮಹಾದೇವನ ಕಿವಿಯಲ್ಲಿ ಮಂತ್ರ ಧ್ವನಿಸತೊಡಗಿತು:

ಸತ್ಯ ಗುರುದತ್ತ ಶಿವದತ್ತ ದಾತಾ
ರಾಮಪಾದದಲಿ ತೊಡಗಿಸೆಲೊ ಚಿತ್ತ.

ಈ ಮಂತ್ರ ಯಾವಾಗಲೂ ಮಹಾದೇವನ ನಾಲಿಗೆಯ ಮೇಲೆಯೇ ಇರುತ್ತಿತ್ತು. ದಿನಕ್ಕೆ ಸಾವಿರ ಸಲ ಈ ಮಂತ್ರ ಅವನ ಬಾಯಿಂದ ಹೊರಡುತ್ತಿದ್ದರೂ ಧಾರ್ಮಿಕ ಭಾವನೆಯಿಂದೂ ಅವನ ಅಂತಃಕರಣವನ್ನು ಮುಟ್ಟಿರಲಿಲ್ಲ. ವಾದ್ಯದಿಂದ ರಾಗ ಹೊರಡುವಂತೆಯೇ ನಿರ್ಥಕವಾಗಿ, ಪ್ರಭಾವಶೂನ್ಯವಾಗಿ ಅವನ ಬಾಯಿಂದ ಈ ಮಂತ್ರಹೊರಡುತ್ತಿತ್ತು. ಅವನ ಹೃತ್‌ವೃಕ್ಷದಲ್ಲಿ ಎಲೆ ಚಿಗುರುಗಳಿರಲಿಲ್ಲ, ನಿರ್ಮಲವಾದ ಗಾಳಿ ಅಲ್ಲಿ ಝೇಂಕರಿಸುತ್ತಿರಲಿಲ್ಲ. ಆದರೆ ಈಗ ಆ ವೃಕ್ಷದಲ್ಲಿ ಕೊಂಬೆಗಳೂ ತೆನೆಗಳೂ ಹೊರಟುಕೊಂಡಿದ್ದವು. ಗಾಳಿಯ ಬೀಸಿಗೆ ಅವನ ಮನಸ್ಸು ತೂಗಾಡಿತು, ಝೇಂಕರಿಸಿತು.

ಸೂರ್ಯ ಮೂಡುವ ಹೊತ್ತು. ಪ್ರಕೃತಿ ಯಾವದೋ ಪ್ರೀತಿ ಚೆಲ್ಲುವ ಬೆಳಕಿನಲ್ಲಿ ಮುಳುಗಿತ್ತು. ಅದೇ ಹೊತ್ತಿಗೆ ಆಕಾಶದಿಂದ ನಕ್ಷತ್ರವೊಂದು ಬಿದ್ದಂತೆ ಗಿಣಿ ತಾನು ಕುಳಿತಿದ್ದ ಎತ್ತರವಾದ ಕೊಂಬೆಯ ಮೇಲಿನಂದ ಕೆಳಗಿಳಿದು ಬಂದು ಪಂಜರದಲ್ಲಿ

ಕುಳಿತುಕೊಂಡಿತು. ಮಹಾದೇವ ಹಿಗ್ಗುತ್ತ ಓಡಿತ; ಪಂಜರವನ್ನು ಎತ್ತಿಕೊಂಡು ಹೇಳಿದ– "ಬಾ, ಆತ್ಮಾರಾಮು. ನೀನೇನೋ ತುಂಬ ಕಷ್ಟ ಕೊಟ್ಟೆ. ಆದರೆ ಜೊತೆಗೇ ನನ್ನ ಬದುಕನ್ನೂ ಸಫಲಗೊಳಿಸಿದೆ. ಇನ್ನು ನಿನಗೆ ಬೆಳ್ಳಿಯ ಪಂಜರ ಮಾಡಿಸಿಕೊಡುತ್ತೇನೆ; ಚಿನ್ನ ಹೊದಿಸುತ್ತೇನೆ." ಮಹಾದೇವನ ರೋಮರೋಮ ದಿಂದಲೂ ಪರಮಾತ್ಮನ ಗುಣಗಾನ ಹೊರಡತೊಡಗಿತು. "ಪ್ರಭು, ನೀನೆಷ್ಟು ದಯಾಮಯಿ. ಇದು ನಿನ್ನ ಅಸೀಮ ವಾತ್ಸಲ್ಯವೇ ಸರಿ. ಇಲ್ಲವಾದರೆ ನನ್ನಂಥ ಪಾಪಿ, ನನ್ನಂಥ ಪತಿತ ಪ್ರಾಣಿ ಈ ಕೃಪೆಗೆ ಹೇಗೆ ತಾನೆ ಯೋಗ್ಯ ?"

ಈ ಪವಿತ್ರ ಭಾವನೆಗಳಿಂದ ಅವನ ಆತ್ಮ ವಿಹ್ವಲವಾಯಿತು. ಪ್ರೀತಿ ಉಕ್ಕಿಬಂದು ಅವನು ಧ್ವನಿಯೆತ್ತಿದ:

ಸತ್ಯ ಗುರುದತ್ತ ಶಿವದತ್ತ ದಾದಾ
ರಾಮಪಾದದಲಿ ತೊಡಗಿಸೆಲೊ ಚಿತ್ತ.

ತೋಳಲ್ಲಿ ಪಂಜರವನ್ನು ತೂಗುಹಾಕಿಕೊಂಡು, ಕಂಕುಳಲ್ಲಿ ಹಣದ ಕುಡಿಕೆಯೆತ್ತಿಕೊಂಡು ಮಹಾದೇವ ಮನೆಯ ಕಡೆ ನಡೆದ.

## 5

ಮಹಾದೇವ ಮನೆ ತಲಪಿದಾಗ ಇನ್ನೂ ಕೊಂಚ ಕೊಂಚ ಕತ್ತಲಿತ್ತು. ದಾರಿಯಲ್ಲಿ ಒಂದು ನಾಯಿಯ ಹೊರತು ಬೇರೇನೂ ಭೇಟಿಯಾಗಲಿಲ್ಲ. ನಾಯಿಗೆ ಚಿನ್ನದ ನಾಣ್ಯದ ಬಗ್ಗೆ ಅಂಥ ವಿಶೇಷವಾದ ಯಾವ ಪ್ರೀತಿಯೂ ಇರದು. ಮಹಾದೇವ ಕುಡಿಕೆಯನ್ನು ತನ್ನ ಕೋಣೆಯಲ್ಲಿ ಒಂದು ಬೋಗುಣಿಯಲ್ಲಿಟ್ಟು ಇದ್ದಲಿನಿಂದ ಮುಚ್ಚಿದ. ಬೆಳಕು ಹರಿದ ತಕ್ಷಣ ನೇರವಾಗಿ ಪುರೋಹಿತನಲ್ಲಿಗೆ ಹೋದ. ಪುರೋಹಿತ ಪೂಜೆಗೆ ಕುಳಿತು ಯೋಚಿಸುತ್ತಿದ್ದ– "ನಾಳೆಯೇ ಕೋರ್ಟಿನಲ್ಲಿ ಕೇಸಿನ ಹೀರಿಂಗಿದೆ. ಈ ತನಕ ಕೈಯಲ್ಲಿ ಒಂದು ಕವಡೆಯಾದರೂ ಇಲ್ಲ. ಗೊತ್ತಿನ ಮನೆಯ ಯಜಮಾನರು ಯಾರೂ ಸಹಾಯ ಮಾಡುವವರಲ್ಲ." ಅಷ್ಟರಲ್ಲಿ ಮಹಾದೇವ ಬಂದು ಕಾಲಿಗೆರಗಿದ. ಪುರೋಹಿತ ಮುಖ ತಿರುಗಿಸಿ ನೋಡಿದ. ಈ ಅಮಂಗಳ ಮೂರ್ತಿ ಎಲ್ಲಿಂದ ಬಂದಿಳಿದ? ಇವನಿಂದ ಒಂದು ಕಾಸು ಗಿಟ್ಟಲಾರದು. ಪುರೋಹಿತ ಕೋಪದಿಂದ ಕೇಳಿದ– "ಏನಯ್ಯಾ, ಏನು ಕೆಲಸವಿತ್ತು ? ಗೊತ್ತಿಲ್ಲವೇ ಈಗ ನಾನು ಪೂಜೇಲಿದೀನಿ ಅಂತ ?"

ಮಹಾದೇವ ಹೇಳಿದ– "ಸ್ವಾಮಿ, ಇವತ್ತು ನಮ್ಮ ಮನೇಲಿ ಸತ್ಯನಾರಾಯಣನ ಕಥೆಯಾಗಬೇಕು."

ಪುರೋಹಿತನಿಗೆ ಆಶ್ಚರ್ಯವಾಯಿತು. ತನ್ನ ಕಿವಿಯನ್ನು ತಾನೇ ನಂಬದಾದ. ಮಹಾದೇವನ ಮನೆಯಲ್ಲಿ ಕಥೆಯಾಗುವುದೆಂದರೆ ತನ್ನ ಮನೆಯಲ್ಲಿ ಯಾವನಾದರೂ ಭಿಕ್ಷುಕನಿಗೆ ದಾನ ಕೊಡುವಷ್ಟೇ ಅಸಾಧಾರಣ ಘಟನೆಯಾಗಿತ್ತು.

ಅವನ ಕೇಳಿದ– "ಯಾಕೆ? ಇವತ್ತು ಏನು ವಿಶೇಷ?"

ಮಹಾದೇವ ಹೇಳಿದ– "ಏನೂ ಇಲ್ಲ, ಇವತ್ತು ದೇವರ ಕಥೆ ಕೇಳೋ ಇಚ್ಛೆಯಾಯಿತು ಅಷ್ಟೇ!"

ಬೆಳಗಿನಿಂದಲೇ ಕಥೆಗೆ ಸಿದ್ಧತೆಯಾಗತೊಡಗಿತು. ಬೇಂದೋ ಹಾಗೂ ಸುತ್ತುಮುತ್ತಿನ ಹಳ್ಳಿಗಳಿಗೆಲ್ಲಾ ಆಮಂತ್ರಣದ ಎಲೆಯಡಿಕೆ ಹೋಯಿತು. ಕಥೆಯಾದ ಮೇಲೆ ಭೋಜನಕ್ಕೂ ಆಹ್ವಾನವಿತ್ತು. ಕೇಳಿದವರೆಲ್ಲರೂ ಆಶ್ಚರ್ಯಪಟ್ಟರು. ಇವತ್ತು ಮರಳಿನಲ್ಲಿ ಹುಲ್ಲು ಹೇಗೆ ಹುಟ್ಟಿತು!

ಸಂಜೆಯ ಹೊತ್ತಿಗೆ ಜನರೆಲ್ಲರೂ ಬಂದು ಸೇರಿದರು. ಪುರೋಹಿತ ತನ್ನ ಸಿಂಹಾಸನವನ್ನು ಅಲಂಕರಿಸಿದ. ಆಗ ಮಹಾದೇವ ಎದ್ದು ನಿಂತುಕೊಂಡು ದೊಡ್ಡ ಧ್ವನಿಯಲ್ಲಿ ಹೇಳಿದ– "ಅಣ್ಣತಮ್ಮಂದಿರೇ, ನನ್ನ ಇಡೀ ಆಯುಷ್ಯವೆಲ್ಲಾ ಕಪಟಮೋಸಗಳಲ್ಲೇ ಕಳೆಯಿತು. ನಾನು ಅದೆಷ್ಟು ಜನರಿಗೆ ದಗಾ ಹಾಕಿದ್ದೇನೋ, ಎಷ್ಟು ಮಂದಿಯ ಒಳ್ಳೆಯ ಮಾಲನ್ನು ಕೆಟ್ಟದು ಮಾಡಿದ್ದೇನೋ ಗೊತ್ತಿಲ್ಲ. ದೇವರು ಈಗ ನನ್ನ ಮೇಲೆ ದಯೆ ತೋರಿಸಿದ್ದಾನೆ. ನನ್ನ ಮುಖದ ಮಸೀನ ಅಳಿಸಬಯಸಿದ್ದಾನೆ. ನನ್ನ ಅಣ್ಣತಮ್ಮಂದಿರಾದ ನಿಮ್ಮಲ್ಲಿ ಆಗ್ರಹದಿಂದ ಕೇಳಿಕೊಳ್ತೀನಿ. ಯಾರದಾದರೂ ಹೊಣೆ ನನ್ನ ಮೇಲಿದ್ದರೆ, ಯಾರದಾದರೂ ಹಣಾನ ನಾನು ತಿಂದಿದ್ದರೆ, ಯಾರದಾದರೂ ಒಳ್ಳೆಯ ಮಾಲನ್ನು ಖೋಟಾ ಮಾಡಿದ್ದರೆ ಅವರು ಬಂದು ತಮ್ಮ ಒಂದೊಂದು ಕವಡೇನೂ ಲೆಕ್ಕ ಮಾಡಿ ತೊಗೊಂಡು ಹೋಗಲಿ. ಇವತ್ತು ಇಲ್ಲಿ ಬಂದಿಲ್ಲದೇ ಇರೋರಲ್ಲಿ ಅಂಥವರು ಯಾರಾದರೂ ಇದ್ದರೆ ನೀವು ಅವರಿಗೆ ದಯವಿಟ್ಟು ತಿಳಿಸಿ. ನಾಳೆಯಿಂದ ಒಂದು ತಿಂಗಳೊಳಗೆ ಅವರು ಮನಸ್ಸು ಬಂದಾಗ ಬಂದು ತಮ್ಮ ಲೆಕ್ಕ ಚುಕ್ತಾ ಮಾಡಿಸಿಕೊಂಡು ಹೋಗಲಿ. ಸಾಕ್ಷಿಗೀಕ್ಷಿಯ ಅವಶ್ಯಕತೆ ಇಲ್ಲ."

ಜನರೆಲ್ಲರೂ ಸ್ತಬ್ಧರಾದರು. ಕೆಲವರು ಮಾರ್ಮಿಕವಾಗಿ ತಲೆ ಅಲ್ಲಾಡಿಸಿ ಹೇಳಿದರು– "ನಾವು ಹೇಳ್ತಿರಲಿಲ್ಲವೆ!" ಮತ್ತೆ ಕೆಲವರು ಅವಿಶ್ವಾಸದಿಂದ ಹೇಳಿದರು– "ಏನು ಕೊಡ್ತಾನೆ ಮಣ್ಣು? ಒಟ್ಟು ಸಾವಿರಾರು ರೂಪಾಯಿ ಆಗುತ್ತೆ."

ಒಬ್ಬ ಠಾಕೂರ ಕುಚೋದ್ಯ ಮಾಡಿದ– "ಈಗಾಗಲೇ ಸ್ವರ್ಗಕ್ಕೆ ಹೋದವರು?"

ಮಹಾದೇವ ಉತ್ತರಿಸಿದ– "ಅವರ ಹೆಂಡತಿ ಮಕ್ಕಳು ಇದಾರಲ್ಲವೆ?"

ಜನರಿಗೆ ಅವನಿಂದ ಹಣ ವಸೂಲಿ ಮಾಡುವುದಕ್ಕಿಂತ ಹೆಚ್ಚಾಗಿ ಅವನಿಗೆ ಇಷ್ಟೊಂದು ಹಣ ಎಲ್ಲಿಂದ ಬಂತೆಂದು ತಿಳಿಯುವ ಇಚ್ಛೆಯಾಗಿತ್ತು. ಆದರೆ ಯಾರಿಗೂ ಮಹಾದೇವ ಹತ್ತಿರ ಬರುವ ಸಾಹಸವಾಗಲಿಲ್ಲ. ಅವರು ಹಳ್ಳಿಯ ಜನ; ಹೂತ ಹೆಣ ಕೆದಕುವುದನ್ನೇನು ಬಲ್ಲರು? ಪ್ರಾಯಶಃ ಅವರಿಗೆ ಮಹಾದೇವನಿಂದ ಏನು ಪಡೆಯಬೇಕಾಗಿದೆಯೆಂಬುದರ ನೆನಪೂ ಉಳಿದಿರಲಿಲ್ಲ. ಇಂತಹ ಪವಿತ್ರ ಸಂದರ್ಭದಲ್ಲಿ ತಮ್ಮಿಂದ ಏನು ತಪ್ಪಾಗಿಬಿಡುವುದೋ ಎಂಬ ಭಯ ಅವರ ಬಾಯಿ ಮುಚ್ಚಿಸಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಮಹಾದೇವನ ಸಾಧುಗುಣ ಅವರನ್ನು ವಶೀಭೂತರನ್ನಾಗಿ ಮಾಡಿಬಿಟ್ಟಿತು.

ಇದ್ದಕ್ಕಿದ್ದಂತೆ ಪುರೋಹಿತ ಹೇಳಿದ– "ನಾನು ಒಂದು ಹಾರ ಮಾಡಿಕೊಡಲೆಂದು ನಿನಗೆ ಚಿನ್ನ ಕೊಟ್ಟಿದ್ದುದು ನೆನಪಿದೆಯೆ ? ನೀನು ಅದರಲ್ಲಿ ಅದೆಷ್ಟೋ ಗುಲಗಂಜಿ ತೂಕ ಚಿನ್ನ ಹಾರಿಸಿದ್ದೆ."

ಮಹಾದೇವ– "ಹೌದು, ನೆನಪಿದೆ. ನಿಮಗೆ ಎಷ್ಟು ನಷ್ಟವಾಗಿರಬಹುದು ?"

ಪುರೋಹಿತ– "ಐವತ್ತು ರೂಪಾಯಿಗಿಂತ ಕಡಿಮೆಯಿಲ್ಲ."

ಮಹಾದೇವ ಸೊಂಟದಿಂದ ಎರಡು ನಾಣ್ಯ ತೆಗೆದು ಪುರೋಹಿತನ ಮುಂದಿಟ್ಟ.

ಪುರೋಹಿತನ ದುರಾಸೆಯನ್ನು ಕುರಿತು ಟೀಕೆಗಳಾಗತೊಡಗಿದವು– "ಇದು ಕಳ್ಳ ಬುದ್ಧಿ. ಹೆಚ್ಚು ಅಂದರೆ ನಾಲ್ಕಾರು ರೂಪಾಯಿ ನಷ್ಟವಾಗಿರಬಹುದು. ಆ ಬಡಪಾಯಿಯಿಂದ ಐವತ್ತು ರೂಪಾಯಿ ಕಸಿದುಕೊಂಡ. ಸತ್ಯನಾರಾಯಣನ ಭಯವೂ ಇಲ್ಲ ಇವನಿಗೆ. ನೋಡಿದರೆ ಬ್ರಾಹ್ಮಣ, ನಿಯತ್ತು ಇಷ್ಟು ಕೆಟ್ಟಿದೆ. ರಾಮ ರಾಮ !"

ಜನರಿಗೆ ಮಹಾದೇವನ ಬಗ್ಗೆ ಒಂದು ಬಗೆಯ ಶ್ರದ್ಧೆ ಹುಟ್ಟಿತು. ಒಂದು ಗಂಟೆ ಕಳೆಯಿತು. ಆದರೆ ಅಲ್ಲಿದ್ದ ಸಾವಿರಾರು ಜನರಲ್ಲಿ ಒಬ್ಬನಾದರೂ ಎದ್ದು ನಿಂತು ನಷ್ಟ ಕೇಳಲಿಲ್ಲ. ಆಗ ಮಹಾದೇವ ಮತ್ತೆ ಹೇಳಿದ– "ನೀವುಗಳು ನಿಮ್ಮ ನಿಮ್ಮ ಲೆಕ್ಕ ಮರೆತುಬಿಟ್ಟಿದ್ದೀರಿ ಅಂತ ಕಾಣುತ್ತೆ. ಇವತ್ತು ಕಥೆ ನಡೀಲಿ ಬಿಡಿ. ನಾನು ಇನ್ನೊಂದು ತಿಂಗಳತನಕ ನಿಮ್ಮ ದಾರಿ ನೋಡ್ತೀನಿ. ಆದಾದ ಮೇಲೆ ತೀರ್ಥಯಾತ್ರೆಗೆ ಹೋಗ್ತೀನಿ, ನೀವು ಬಂಧುಗಳಲ್ಲಿ ನನ್ನದೊಂದೇ ವಿನಂತಿ. ನೀವು ನನ್ನ ಉದ್ಧಾರ ಮಾಡಬೇಕು."

ಒಂದು ತಿಂಗಳವರೆಗೆ ಮಹಾದೇವ ಹಣ ಪಡೆಯಲಿದ್ದವರ ದಾರಿ ಕಾಯುತ್ತಿದ್ದ. ರಾತ್ರಿಯ ಹೊತ್ತು ಕಳ್ಳರ ಭಯದಿಂದಾಗಿ ನಿದ್ದೆ ಬರುತ್ತಿರಲಿಲ್ಲ. ಅವನು ಈಗ ಏನು ಕೆಲಸವನ್ನೂ ಮಾಡುತ್ತಿರಲಿಲ್ಲ. ಕುಡಿತದ ಚಟವೂ ಬಿಟ್ಟುಹೋಯಿತು. ಮನೆ ಬಾಗಿಲಿಗೆ ಬಂದ ಸಾಧುಗಳಿಗೆ ಯಥಾಯೋಗ್ಯವಾಗಿ ಸತ್ಕಾರ ಮಾಡುತ್ತಿದ್ದ. ದೂರದೂರದ ಹಳ್ಳಿ ಊರುಗಳಲ್ಲೆಲ್ಲಾ ಅವನ ಕೀರ್ತಿ ಹರಡಿತು. ಅಷ್ಟರಲ್ಲಿ ಒಂದು ತಿಂಗಳು ಕಳೆಯಿತು. ಒಬ್ಬನಾದರೂ ಲೆಕ್ಕ ಮಾಡಿಸಿ ಹಣ ಪಡೆಯಲು ಬರಲಿಲ್ಲ. ಪ್ರಪಂಚದಲ್ಲಿ ಎಷ್ಟೊಂದು ಧರ್ಮ ಸದಾಚಾರಗಳಿವೆಯೆಂಬುದು ಈಗ ಮಹಾದೇವನಿಗೆ ಅರಿವಾಯಿತು. ಪ್ರಪಂಚ ಕೆಟ್ಟವರಿಗೆ ಕೆಟ್ಟದು, ಒಳ್ಳೆಯವರಿಗೆ ಒಳ್ಳೆಯದು ಎಂಬುದು ಗೊತ್ತಾಯಿತು.

## 6

ಈ ಘಟನೆ ನಡೆದು ಐವತ್ತು ವರ್ಷಗಳಾಗಿವೆ. ಈಗ ನೀವು ಬೇಂದೋ ಗ್ರಾಮಕ್ಕೆ ಹೋದರೆ ದೂರದಿಂದಲೇ ಒಂದು ಹೊಂಬಣ್ಣದ ಕಳಶ ಕಾಣುತ್ತದೆ. ಅದು ಗುಡಿಯ ಕಳಶ. ಅದಕ್ಕೆ ಹತ್ತಿಕೊಂಡಂತೆಯೇ ಒಂದು ಭದ್ರವಾದ ಕೆರೆಯಿದೆ. ಅದರಲ್ಲಿ

ಕಮಲದ ಹೂಗಳು ಅರಳಿರುತ್ತವೆ. ಅದರಲ್ಲಿ ಯಾರೂ ಮೀನು ಹಿಡಿಯುವುದಿಲ್ಲ. ಕೆರೆಯ ದಂಡೆಯ ಮೇಲೆ ಒಂದು ವಿಶಾಲವಾದ ಸಮಾಧಿಯಿದೆ. ಅದೇ ಗಿಣಿಯ ಸ್ಮೃತಿಚಿಹ್ನೆ. ಅದರ ಬಗ್ಗೆ ಅನೇಕ ಕಥೆಗಳು ಪ್ರಚಲಿತವಾಗಿವೆ. ಅದು ರತ್ನಖಚಿತವಾದ ಪಂಜರದಲ್ಲಿ ಸ್ವರ್ಗಕ್ಕೆ ಹೋಯಿತೆಂದು ಕೆಲವರು ಹೇಳುತ್ತಾರೆ. 'ಸತ್ಯ ಗುರುದತ್ತ' ಎಂದು ಹೇಳುತ್ತ ಅಂತರ್ಧಾನವಾಯಿತೆಂದು ಮತ್ತೆ ಕೆಲವರು ಹೇಳುತ್ತಾರೆ. ನಿಜಸ್ಥಿತಿಯೆಂದರೆ ಒಂದು ದಿನ ಆ ಪಕ್ಷಿರೂಪಿಯಾದ ಚಂದ್ರನನ್ನು ಮಾರ್ಜಾಲರೂಪಿಯಾದ ರಾಹು ಹಿಡಿದು ತಿಂದಿತು. ಈಗಲೂ ನಡುರಾತ್ರಿ ಕೆರೆಯ ದಂಡೆಯ ಮೇಲಿಂದ,

ಸತ್ಯ ಗುರುದತ್ತ ಶಿವದತ್ತ ದಾತಾ
ರಾಮಪಾದದಲಿ ತೊಡಗಿಸೆಲೊ ಚಿತ್ತ.

ಎಂಬ ಧ್ವನಿ ಕೇಳಿ ಬರುತ್ತದೆನ್ನುತ್ತಾರೆ.

ಮಹಾದೇವನ ವಿಷಯದಲ್ಲಿಯೂ ಅದೆಷ್ಟೋ ಜನಶ್ರುತಿಗಳಿವೆ. ಅವುಗಳಲ್ಲೆಲ್ಲಾ ಹೆಚ್ಚು ಮಾನ್ಯವಾದುದೆಂದರೆ ಇದು: ಗಿಣಿಯ ಸಮಾಧಿಯಾದ ಮೇಲೆ ಮಹಾದೇವ ಕೆಲವು ಸನ್ಯಾಸಿಗಳ ಸಂಗಡ ಹಿಮಾಲಯಕ್ಕೆ ಹೋದವನು ಹಿಂದಿರುಗಿ ಬರಲಿಲ್ಲ. ಅವನು ಗಿಣಿಗೆ ಪರ್ಯಾಯವಾದ 'ಆತ್ಮಾರಾಮ' ಎಂಬ ಹೆಸರಿನಿಂದಲೇ ಪ್ರಸಿದ್ಧನಾದ.

# 6. ಈದಿಗಾ

ಪೂರಾ ಮೂವತ್ತು ದಿನಗಳ ರಮಜಾನಿನ ಉಪವಾಸ ವ್ರತ ಕಳೆದು ಇವತ್ತು ಈದ್ ಹಬ್ಬ ಬಂದಿದೆ. ಈ ಬೆಳಗು ಎಷ್ಟು ಸುಂದರ, ಎಷ್ಟು ಮನೋಹರ! ಮರಗಿಡಗಳಲ್ಲೆಲ್ಲಾ ಯಾವುದೋ ವಿಚಿತ್ರವಾದ ಹಸಿರಿದೆ; ಹೊಲಗದ್ದೆಗಳಲ್ಲಿ ಯಾವದೋ ವಿಚಿತ್ರವಾದ ಕಳೆಯಿದೆ; ಆಕಾಶದಲ್ಲಿ ಯಾವುದೋ ವಿಚಿತ್ರವಾದ ಗುಲಾಬಿಯ ಛಾಯೆಯಿದೆ. ಇವತ್ತಿನ ಸೂರ್ಯನನ್ನು ನೋಡಿ. ಜಗತ್ತಿಗೆ ಈದ್ ಹಬ್ಬದ ಶುಭಾಶಯಗಳನ್ನು ಅರ್ಪಿಸುತ್ತಿದ್ದಾನೆಯೋ ಎಂಬಂತೆ ಎಷ್ಟು ಮುದ್ದಾಗಿ, ಎಷ್ಟು ತಂಪಾಗಿ ಕಾಣುತ್ತಿದ್ದಾನೆ. ಹಳ್ಳಿಯಲ್ಲಿ ಇವತ್ತು ಅದೆಷ್ಟು ಸಡಗರ! ಈದಿಗಾಕ್ಕೆ* ಹೋಗಿ ನಮಾಜು ಮಾಡಿ ಬರಲು ತಯಾರಿ ನಡೆಯುತ್ತಿದೆ. ಒಬ್ಬರ ಅಂಗಿಗೆ ಗುಂಡಿಯಿಲ್ಲ; ಸೂಜಿ-ದಾರ ತರಲು ಪಕ್ಕದ ಮನೆಗೆ ಓಡುತ್ತಿದ್ದಾರೆ. ಇನ್ನೊಬ್ಬರ ಎಕ್ಕಡ ಬಿರುಸಾಗಿದೆ; ಅದಕ್ಕೆ ಹಚ್ಚಲು ಎಣ್ಣೆ ತರಲೆಂದು ಗಾಣಿಗನ ಹಟ್ಟಿಗೆ ಹೊರಟಿದ್ದಾರೆ. ಎತ್ತುಗಳಿಗೆ ಬೇಗ ಬೇಗ ನೀರು ಕೊಡಬೇಕು. ಈದಿಗಾದಿಂದ ಹಿಂದಿರುಗುವ ಹೊತ್ತಿಗೆ ಮಧ್ಯಾಹ್ನವಾಗಿಬಿಡುತ್ತದೆ. ಮೂರು ಕೋಸುಗಳ ಕಾಲುದಾರಿ. ಸಾವಿರಾರು ಮಂದಿಯನ್ನು ಭೇಟಿಮಾಡಿ ಕುಶಲವಾರ್ತೆ ನಡೆಸಬೇಕಾಗುತ್ತದೆ. ಮಧ್ಯಾಹ್ನಕ್ಕೆ ಮುಂಚೆ ಮನೆಗೆ ಹಿಂದಿರುಗುವುದು ಅಸಂಭವ. ಎಲ್ಲರಿಗಿಂತ ಹೆಚ್ಚು ಸಂತೋಷವೆಂದರೆ ಮಕ್ಕಳಿಗೆ. ಅವರಲ್ಲೂ ಕೆಲವರು ಒಂದು ದಿನ ಉಪವಾಸ ಮಾಡಿದ್ದಾರೆ, ಅದೂ ಮಧ್ಯಾಹ್ನದವರೆಗೆ! ಕೆಲವರಂತೂ ಅಷ್ಟು ಸಹ ಮಾಡಿಲ್ಲ. ಆದರೆ ಈದಿಗಾಕ್ಕೆ ಹೋಗುವ ಖುಷಿ ಅವರಿಗೆ ಹಕ್ಕಿನಿಂದ ಬಂದದ್ದು. ರಮಜಾನಿನ ಉಪವಾಸ ದೊಡ್ಡವರು, ಮುದುಕರಿಗಿರಬಹುದು. ಈದ್ ಮಾತ್ರ ಈ ಮಕ್ಕಳ ಪಾಲಿನದು. ಅವರು ದಿನವೂ ಈದ್‌ನ ಹೆಸರನ್ನು ಜಪಿಸುತ್ತಿದ್ದರು. ಆ ಈದ್ ಇವತ್ತು ಬಂದಿದೆ. ಈದಿಗಾಕ್ಕೆ ಹೊರಡಲು ಹಿರಿಯರು ಏಕೆ ತಡ ಮಾಡುತ್ತಿದ್ದಾರೆಂದು ಅವರಿಗೆ ಆತುರ. ಸಂಸಾರದ ಚಿಂತೆ ಕಟ್ಟಿಕೊಂಡು ಅವರಿಗೇನಾಗಬೇಕಾಗಿದೆ! ಶಾವಿಗೆ ಖೀರಿಗೆ ಮನೆಯಲ್ಲಿ ಹಾಲು ಸಕ್ಕರೆ ಇರಲಿ ಬಿಡಲಿ

---

*ಮೂಲ = ಈದ್‌ಗಾಹ್. ಈದ್ ಹಬ್ಬದಂದು ನಮಾಜು ಮಾಡುವುದಕ್ಕೆಂದು ಗೊತ್ತಾದ ಸ್ಥಳ. ನಾಲ್ಕಾರು ಹಳ್ಳಿಗಳಿಗೆ ಒಂದರಂತೆ ಕೇಂದ್ರ ಸ್ಥಾನದಲ್ಲಿರುತ್ತದೆ. ಮೈಸೂರು ನಗರದಲ್ಲೂ ಒಂದು ಈದಿಗಾ ಇರುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಅವರಿಗೇನಂತೆ ? ಅವರು ಖೀರು ಕುಡಿಯುವವರೇ ಸರಿ. ಅಪ್ಪ ಸಾಹುಕಾರ ಕಾಯಮ್ ಆಲಿಯ ಮನೆಯ ಕಡೆ ಮೈಮೇಲೆ ಪ್ರಜ್ಞೆ ತಪ್ಪಿದವನಂತೆ ಏಕೆ ಓಡುತ್ತಿದ್ದಾನೆಂದು ಅವರೇನು ಬಲ್ಲರು ? ಒಂದು ಪಕ್ಷ ಸಾಹುಕಾರನ ಕೃಪಾದೃಷ್ಟಿ ಇವತ್ತು ಬದಲಾದದ್ದೇ ಆದರೆ ಮನೆಯಲ್ಲಿ ಈದ್ ಹೋಗಿ ಮೊಹರಮ್ ಆಗಿಬಿಡುವುದೆಂದು ಅವರಿಗೇನು ಗೊತ್ತು ! ಅವರ ಜೇಬಿನಲ್ಲಿ ಕುಬೇರನ ಐಶ್ವರ್ಯ ತುಂಬಿದೆ. ಜೇಬಿನಿಂದ ಮತ್ತೆ ಮತ್ತೆ ಗಂಟು ತೆಗೆದು ಎಣಿಸುತ್ತಾರೆ. ಸಂತೋಷಗೊಂಡು ಮತ್ತೆ ಇಡುತ್ತಾರೆ. ಮಹಮೂದ್ ಎಣಿಸುತ್ತಾನೆ – ಒಂದು, ಎರಡು.... ಹತ್ತು, ಹನ್ನೊಂದು, ಹನ್ನೆರಡು ! ಅವನ ಹತ್ತಿರ ಹನ್ನೆರಡು ಬಿಲ್ಲೆಯಿದೆ. ಮೊಹಸಿನ್ನನ ಹತ್ತಿರ ಒಂದು, ಎರಡು, ಮೂರು, ಎಂಟು, ಒಂಬತ್ತು, ಹದಿನೈದು ಬಿಲ್ಲೆಯಿದೆ. ಈ ಅಸಂಖ್ಯ ಹಣದಲ್ಲಿ ಅಸಂಖ್ಯ ಸಾಮಾನುಗಳನ್ನು ಕೊಂಡು ತರುತ್ತಾರೆ – ಆಟದ ಸಾಮಾನು, ಮಿಠಾಯಿ, ತುತ್ತೂರಿ, ಚೆಂಡು, ಇನ್ನೂ ಏನೇನೋ. ಎಲ್ಲರಿಗಿಂತ ಹೆಚ್ಚು ಸಂತೋಷದಲ್ಲಿರುವವನೆಂದರೆ ಹಾಮೀದ್, ನಾಲ್ಕೈದು ವರ್ಷ ವಯಸ್ಸಿನ, ಸೊರಗಿನ ಮುಖ, ಬಡಕಲು ದೇಹಗಳ ಹುಡುಗ ಅವನು. ಅವರ ಅಪ್ಪ ಕಳೆದ ವರ್ಷ ಕಾಲರಾ ಬೇನೆಗೆ ತುತ್ತಾಗಿ ಸತ್ತ; ಏಕೋ ಏನೋ ಅವನ ತಾಯಿಗೆ ದಿನ ದಿನಕ್ಕೆ ಮುಖ ಬಿಳಿಚಿಕೊಳ್ಳುತ್ತ ಹೋಗಿ ಅವಳೂ ಒಂದು ದಿನ ಸತ್ತುಹೋದಳು. ಏನು ಕಾಹಿಲೆಯೆಂದು ಯಾರಿಗೂ ತಿಳಿಯಲಿಲ್ಲ. ಇಂಥ ಕಾಹಿಲೆಯೆಂದು ಹೇಳಿದ್ದಿದ್ದರೆ ಸಹ ಕೇಳುವವರು ಯಾರಿದ್ದರು ? ಎದೆಯಲ್ಲಿ ಆಗುತ್ತಿದ್ದುದನ್ನು ಅವಳು ಎದೆಯೊಳಗೇ ಸಹಿಸುತ್ತಿದ್ದಳು. ಇನ್ನು ಸಹಿಸಲಾಗದಾಗ ಜಗತ್ತಿನಿಂದ ವಿದಾಯ ಪಡೆದಳು. ಈಗ ಹಾಮೀದ್ ತನ್ನ ಮುದಿ ಅಜ್ಜಿ ಅಮೀನಳ ತೊಡೆಯ ಮೇಲೆ ಮಲಗುತ್ತಾನೆ; ಮೊದಲಿನಷ್ಟೇ ಸಂತೋಷದಿಂದಿದ್ದಾನೆ. ಅಪ್ಪ ಹಣ ಸಂಪಾದಿಸಿ ಬರಲು ಹೋಗಿದ್ದಾನೆ, ತುಂಬ ತುಂಬ ಗಂಟು ಮಾಡಿಕೊಂಡು ಬರುತ್ತಾನೆ; ಅಮ್ಮ ತನಗೆ ಒಳ್ಳೊಳ್ಳೆಯ ಸಾಮಾನು ತಂದು ಕೊಡಲು ದೇವರೂರಿಗೆ ಹೋಗಿದ್ದಾಳೆ ಎಂದು ಅವನ ತಿಳಿವಳಿಕೆ. ಇದರಿಂದಾಗಿ ಹಾಮೀದನಿಗೆ ಸಂತೋಷ. ಆಸೆಯೆಂಬುದು ದೊಡ್ಡ ವಸ್ತು; ಅದರಲ್ಲೂ ಮಕ್ಕಳ ಆಸೆಯೆಂದ ಮೇಲೆ ಕೇಳಬೇಕೆ ! ಅವರ ಕಲ್ಪನೆಯಲ್ಲಿ ಸಾಸಿವೆಯಷ್ಟಿದ್ದದ್ದು ಪರ್ವತದಷ್ಟಾಗಿಬಿಡುತ್ತದೆ. ಹಾಮೀದನ ಕಾಲಿಗೆ ಚಪ್ಪಲಿಯಿಲ್ಲ; ತಲೆಯ ಮೇಲೆ ಜರಿ ಕಪ್ಪಾದ ಒಂದು ಹಳೆಯ ಟೋಪಿಯಿದೆ. ಆದರೂ ಅವನು ಸಂತೋಷದಿಂದಿದ್ದಾನೆ. ಅಪ್ಪ ಹಣದ ಥೈಲಿಯನ್ನು ಅಮ್ಮ ಅಪೂರ್ವ ವಸ್ತುಗಳನ್ನು ತಂದಾಗ ಅವನು ತನ್ನ ಎದೆಯ ಬಯಕೆಗಳೆಲ್ಲವನ್ನೂ ತೀರಿಸಿಕೊಳ್ಳುತ್ತಾನೆ ! ಮಹಮೂದ್, ಮೊಹಸಿನ್, ನೂರೇ, ಸಮ್ಮಿ ಅವರೆಲ್ಲರೂ ಎಲ್ಲಿಂದ ಅಷ್ಟು ಹಣ ತರುತ್ತಾರೆ, ನೋಡೋಣ ! ದುರ್ದೈವಿ ಅಮೀನಾ ಕೊಠಡಿಯಲ್ಲಿ ಕುಳಿತು ಅಳುತ್ತಿದ್ದಾಳೆ. ಇವತ್ತು ಈದ್ ಹಬ್ಬ, ಅವಳ ಮನೆಯಲ್ಲಿ ಒಂದು ಕಾಳಿಗೂ ದಿಕ್ಕಿಲ್ಲ ! ಇವತ್ತು ಆಬೀದ್ ಬದುಕಿದ್ದಿದ್ದರೆ ಈದ್ ಹೀಗೆ ಬಂದು ಹೀಗೆ ಹೋಗುತ್ತಿತ್ತೆ ! ಈ ಅಂಧಕಾರ, ನಿರಾಶೆಗಳಲ್ಲಿ ಅವಳು ಮುಳುಗಿಹೋಗಿದ್ದಾಳೆ. ಈ ದರಿದ್ರ ಈದ್‌ಗೆ ಬಾ ಎಂದವರಾರು ? ಈ ಮನೆಯಲ್ಲಿ ಅದಕ್ಕೇನು ಕೆಲಸ ?

ಆದರೆ ಹಾಮೀದ್ ? ಅವನಿಗೂ ಯಾರ ಸಾವುಬದುಕಿಗೂ ಏನು ಸಂಬಂಧ ? ಅವನ ಒಳಗಡೆ ಬೆಳಕಿದೆ, ಹೊರಗಡೆ ಆಶೆಯಿದೆ. ವಿಪತ್ತು ತನ್ನೆಲ್ಲ ದಳಬಲದೊಂದಿಗೆ ಬಂದರೂ ಸರಿಯೆ, ಹಾಮೀದನ ಆನಂದಮಯ ದೃಷ್ಟಿ ಅದನ್ನು ನುಚ್ಚುನೂರು ಮಾಡಿಬಿಡುತ್ತದೆ.

ಹಾಮೀದ್ ಒಳಹೋಗಿ ಅಜ್ಜಿಗೆ ಹೇಳುತ್ತಾನೆ – "ನೀನು ಹೆದರಬೇಡ, ಅಜ್ಜಿ. ಈದಿಗಾದಿಂದ ನಾನು ಎಲ್ಲರಿಗಿಂತ ಮುಂಚೆ ಹಿಂದಿರುಗಿ ಬರ್ತೀನಿ. ಖಂಡಿತವಾಗಿಯೂ ಹೆದರಬೇಡ."

ಅಮೀನಳ ಎದೆ ಹಿಂಡುತ್ತಿದೆ. ಹಳ್ಳಿಯ ಮಕ್ಕಳು ತಮ್ಮ ತಮ್ಮ ಅಪ್ಪಂದಿರ ಸಂಗಡ ಹೋಗುತ್ತಿದ್ದಾರೆ. ಆದರೆ ಹಾಮೀದನಿಗೆ ತನ್ನ ಹೊರತು ಬೇರೆ ಯಾರಿದ್ದಾರೆ ? ಅವನನ್ನು ಒಂಟಿಯಾಗಿ ಜಾತ್ರೆಗೆ ಕಳಿಸುವುದು ಹೇಗೆ ? ಆ ಗುಂಪುಗದ್ದಲದಲ್ಲಿ ಮಗು ತಪ್ಪಿಸಿಕೊಂಡರೆ ಏನು ಗತಿ ? ಇಲ್ಲ, ಅಮೀನ ಅವನನ್ನು ಹಾಗೆ ಒಂಟಿಯಾಗಿ ಹೋಗಗೊಡುವುದಿಲ್ಲ. ಪಾಪ, ಮಗು ! ಮೂರು ಕೋಸು ದೂರ ಹೇಗೆ ನಡೆದಾನು ? ಕಾಲಿನಲ್ಲಿ ಬೊಬ್ಬೆ ಎದ್ದೀತು. ತೊಡಲು ಕಾಲಿಗೆ ಚಪ್ಪಲಿ ಸಹ ಇಲ್ಲ. ತಾನಾದರೆ ಬಿಟ್ಟು ಬಿಟ್ಟು ಕೊಂಚ ದೂರ ಅವನನ್ನು ಎತ್ತಿಕೊಂಡು ಹೋಗಬಹುದು. ತಾನು ಹೋದರೆ ಇಲ್ಲಿ ಶಾವಿಗೆ ಖೀರು ಮಾಡುವವರಾರು ? ದುಡ್ಡಿದ್ದಿದ್ದರೆ ಹಿಂದಿರುಗಿ ಬರುವಾಗ ದಾರಿಯಲ್ಲಿ ಬೇಕಾದ ಸಾಮಗ್ರಿಯೆಲ್ಲವನ್ನೂ ಕೊಂಡುತಂದು ಪಟಪಟನೆ ಮಾಡಿಬಿಡಬಹುದಾಗಿತ್ತು. ಇಲ್ಲೋ ಸಾಮಾನು ಶೇಖರಿಸುವುದಕ್ಕೇ ಗಂಟೆಗಟ್ಟಲೆ ಹಿಡಿಯುತ್ತದೆ. ಬೇಡಿ ತರುವುದೊಂದೇ ಮಾರ್ಗ. ಕೆಲ ದಿನಗಳ ಹಿಂದೆ ಅಮೀನಾ ಫಹೀಮನ್ನಳಿಗೆ ಬಟ್ಟೆ ಹೊಲಿದುಕೊಟ್ಟಿದ್ದಳು. ಎಂಟಾಣೆ ಸಿಕ್ಕಿತು. ಆ ಎಂಟಾಣೆಯನ್ನು ಈ ಈದ್‌ಗೆಂದು ಉಳಿಸಿಕೊಂಡು ಬಂದಿದ್ದಳು – ವಿಶ್ವಾಸವನ್ನು ಉಳಿಸಿಕೊಂಡು ಬರುವಷ್ಟು ಎಚ್ಚರದಿಂದ. ಆದರೆ ನಿನ್ನೆ ಗೌಳಿಗ ಬಂದು ತಲೆಯ ಮೇಲೆ ಕೂತುಕೊಂಡರೆ ಏನು ಮಾಡುವುದು ? ಇನ್ನೇನಿಲ್ಲದಿದ್ದರೂ ಹಾಮೀದನಿಗೆ ದಿನಕ್ಕೆ ಎರಡು ಬಿಲ್ಲೆಯ ಹಾಲು ಬೇಕಲ್ಲವೆ ? ಈಗ ಒಟ್ಟು ಎರಡಾಣೆ ಉಳಿದಿದೆ – ಮೂರು ಬಿಲ್ಲೆ ಹಾಮೀದನ ಜೇಬಿನಲ್ಲಿ, ಐದು ಅಮೀನಳ ಮಡಿಲಿನ ಚೀಲದಲ್ಲಿ. ಇದೇ ಈದ್ ಹಬ್ಬದ ಬಂಡವಾಳ. ದೇವರೇ ಸಂಕಟದಿಂದ ಪಾರು ಮಾಡಬೇಕು. ಅಗಸರವಳು, ಹಜಾಮರವಳು, ಜಾಡಮಾಲಿ, ಬಳೆ ತೊಡಿಸುವವಳು ಎಲ್ಲರೂ ಬರುತ್ತಾರೆ. ಎಲ್ಲರಿಗೂ ಶಾವಿಗೆಯ ಖೀರಾಗಬೇಕು; ಸ್ವಲ್ಪ ಕೊಟ್ಟರೆ ಯಾರೂ ಒಪ್ಪರು. ಯಾರು ಯಾರಿಗೆಂದು ಮುಖ ತೋರಿಸದೆ ಇರುವುದು ? ಅಲ್ಲದೇ ಮುಖ ತೋರಿಸದೆ ಇರಬೇಕೇಕೆ ? ವರ್ಷಕ್ಕೊಂದು ಹಬ್ಬ. ಎಲ್ಲರೂ ಕ್ಷೇಮದಿಂದ ಬದುಕಬೇಕು. ತನ್ನ ಭಾಗ್ಯದೊಂದಿಗೆ ಅವರ ಭಾಗ್ಯವೂ ಹೊಂದಿಕೊಂಡಿದೆ. ದೇವರು ಮಗುವನ್ನು ಸುಖವಾಗಿಡಲಿ, ಈ ದಿನವೂ ಹೇಗೋ ಕಳೆದುಹೋಗುತ್ತದೆ.

ಹಳ್ಳಿಯಿಂದ ಜಾತ್ರೆಯ ಗುಂಪು ಹೊರಟಿತು. ಇತರ ಹುಡುಗರೊಂದಿಗೆ ಹಾಮೀದನೂ ಹೊರಟಿದ್ದ. ಒಮ್ಮೊಮ್ಮೆ ಎಲ್ಲರೂ ಒಟ್ಟಾಗಿ ಓಡಿ ಮುಂದೆ ಹೋಗುತ್ತಿದ್ದರು. ಮತ್ತೆ ಯಾವುದಾದರೊಂದು ಮರದ ಕೆಳಗೆ ನಿಂತು

ಜೊತೆಗಾರರಿಗಾಗಿ ಕಾಯುತ್ತಿದ್ದರು. ಜನರೇಕೆ ಇಷ್ಟು ನಿಧಾನವಾಗಿ ನಡೆಯುತ್ತಿದ್ದಾರೆ? ಹಾಮೀದನ ಕಾಲಿಗೆ ರೆಕ್ಕೆ ಮೂಡಿದಂತಿದೆ. ಅವನಿಗೆ ಎಂದಾದರೂ ದಣಿವೆಂಬುದಿದೆಯೆ! ಪಟ್ಟಣದ ಸರಹದ್ದು ಬಂದಿತು. ರಸ್ತೆಯ ಎರಡೂ ಕಡೆ ಸಾಹುಕಾರರ ತೋಟಗಳಿವೆ. ಅವುಗಳ ನಾಲ್ಕೂ ಕಡೆ ಮಜಬೂತಾದ ಗೋಡೆ ಕಟ್ಟಿದ್ದಾರೆ. ಮರದ ಮೇಲೆ ಮಾವು, ಲೀಚಿ ಹಣ್ಣುಗಳು ಬಿಟ್ಟಿವೆ. ಒಮ್ಮೊಮ್ಮೆ ಯಾವನಾದರೂ ಹುಡುಗ ಕಲ್ಲೆತ್ತಿ ಮಾವಿನ ಹಣ್ಣಿಗೆ ಗುರಿಯಿಡುತ್ತಾನೆ. ಮಾಲಿ ತೋಟದೊಳಗಿಂದಲೇ ಬೈಗಳ ಸುರಿಸುತ್ತ ಹೊರಬರುತ್ತಾನೆ. ಹುಡುಗರಾಗಲೇ ಅಲ್ಲಿಂದ ಒಂದು ಫರ್ಲಾಂಗ್ ದೂರ ಓಡಿದ್ದಾರೆ, ಚೆನ್ನಾಗಿ ನಗುತ್ತಿದ್ದಾರೆ. ವಾಹ್! ಮಾಲಿ ಹೇಗೆ ಬೆಪ್ಪಾದ!

ದೊಡ್ಡ ದೊಡ್ಡ ಕಟ್ಟಡಗಳು ಕಾಣಿಸಿಕೊಳ್ಳತೊಡಗಿದವು. ಇದು ಕೋರ್ಟು, ಇದು ಕಾಲೇಜು, ಇದು ಕ್ಲಬ್ಬು! ಇಷ್ಟು ದೊಡ್ಡ ಕಾಲೇಜಿನಲ್ಲಿ ಎಷ್ಟೊಂದು ಜನ ಹುಡುಗರು ಓದುತ್ತಿರಬೇಡ! ಎಲ್ಲರೂ ಹುಡುಗರಲ್ಲ; ವಯಸ್ಸಾದವರೂ ಇದ್ದಾರೆ, ನಿಜವಾಗಿಯೂ. ಅವರಿಗೆ ದಪ್ಪ ದಪ್ಪ ಮೀಸೆ ಇದೆ. ಇಷ್ಟು ದೊಡ್ಡವರಾದ ಮೇಲೆಯೂ ಇನ್ನೂ ಓದುತ್ತಾರೆಯೆ? ಎಲ್ಲಿಯವರೆಗೆ ಓದುತ್ತಿರುತ್ತಾರೆ? ಇಷ್ಟೊಂದು ಓದಿ ಏನು ಮಾಡುತ್ತಾರೆ? ಹಾಮೀದನ ಶಾಲೆಯಲ್ಲಾದರೋ ಇಬ್ಬರು ಮೂವರು ದೊಡ್ಡ ಹುಡುಗರಿದ್ದಾರೆ, ಮೂರು ಕವಡೆಯ ಬೆಲೆಗೂ ಬಾಳದವರು, ಮೈಗಳ್ಳರು, ದಿನವೂ ಏಟು ತಿನ್ನುತ್ತಾರೆ. ಇಲ್ಲೂ ಅಂತಹ ಹುಡುಗರೇ ಇರುತ್ತಾರೆ, ಮತ್ತೇನು? ಕ್ಲಬ್ಬಿನಲ್ಲಿ ಮಾಯಮಂತ್ರದ ಆಟ ನಡೆಯುತ್ತದೆ. ಸತ್ತವರ ಅಸ್ಥಿಪಂಜರ ಅಲ್ಲಿ ಓಡಾಡುತ್ತದೆಂದು ಹೇಳುತ್ತಾರೆ. ದೊಡ್ಡ ದೊಡ್ಡ ತಮಾಷೆಯ ಆಟಗಳೂ ನಡೆಯುತ್ತವೆ. ಆದರೆ ಯಾರನ್ನೂ ಒಳಗೆ ಬಿಡುವುದಿಲ್ಲ. ಅಲ್ಲದೇ ಅಲ್ಲಿ ಸಂಜೆಯ ಹೊತ್ತು ಸಾಹೇಬರುಗಳು ಆಟವಾಡುತ್ತಾರೆ, ದೊಡ್ಡ ಮಂದಿ, ಗಡ್ಡಮೀಸೆ ಬಿಟ್ಟವರು. ಅಲ್ಲದೇ ಪರಂಗೀ ಹೆಂಗಸರೂ ಆಡುತ್ತಾರೆ, ನಿಜವಾಗಿಯೂ. ಅದೇನಂತಾರೆ, ಆ 'ಬ್ಯಾಟು', ಅದನ್ನ ನಮ್ಮಮ್ಮನ ಕೈಲಿ ಹಿಡಕೊಳ್ಳೋಕೆ ಸಹ ಆಗೋಲ್ಲ, ತಿರುಗಿಸೋದರಲ್ಲೇ ಕೆಳಗೆ ಬೀಳ್ತಾಳೆ.

ಮಹಮೂದ್ ಹೇಳಿದ – "ನಮ್ಮಮ್ಮನಿಗಂತೂ ಕೈ ನಡುಗುತ್ತೆ, ದೇವರಾಣೆ."

ಮೊಹಸಿನ್ ಬಾಯಿಹಾಕಿದ – "ಬಿಡೋ ಬಿಡೋ, ಮಣಗಟ್ಟಲೆ ಹಿಟ್ಟು ಬೀಸ್ತಾಳೆ. ಸ್ವಲ್ಪ ಬ್ಯಾಟು ಹಿಡಕೊಂಡರೆ ಕೈ ನಡುಗುತ್ತೆ ಅಂತೀಯಲ್ಲ. ದಿನಕ್ಕೆ ಸಾವಿರ ಗಡಿಗೆ ನೀರು ಎತ್ತುತಾಳೆ, ನಿಮ್ಮ ಎಮ್ಮೆಯೋ ಐದು ಗಡಿಗೆ ನೀರು ಕುಡಿದು ಮುಗಿಸುತ್ತೆ. ಯಾವಳಾದರೂ ಪರಂಗೀ ಹೆಂಗಸು ಒಂದು ಗಡಿಗೆ ನೀರು ಎತ್ತಲಿ ನೋಡೋಣ, ಕಣ್ಣುಗತ್ತಲೆ ಬರುತ್ತೆ."

ಮಹಮೂದ್ – "ಆದರೆ ಅವಳು ಓಡೋಲ್ಲವಲ್ಲ; ಅವಳಿಗೆ ಕುಣಿದು ಕುಪ್ಪಳಿಸೋಕ್ಕೆ ಆಗೋಲ್ಲವಲ್ಲ."

ಮೊಹಸಿನ್ – "ಹೌದು, ಕುಣಿಯೋಕ್ಕಾಗೋಲ್ಲ ನಿಜ. ಆದರೆ ನಮ್ಮ ಹಸು ಹಗ್ಗ ಬಿಚ್ಚಿಕೊಂಡು ಸಾಹುಕಾರರ ತೋಟಕ್ಕೆ ನುಗ್ಗಿದ್ದಾಗ ಅಮ್ಮ ಎಷ್ಟು ಜೋರಾಗಿ

ಓಡಿದಳು ಅಂದರೆ ಅವಳನ್ನ ಹಿಡಿಯೋಕ್ಕಾಗಲಿಲ್ಲ, ನಿಜವಾಗಿಯೂ.''

ಹುಡುಗರು ಮುಂದೆ ನಡೆದರು. ಮಿಠಾಯಿಯ ಅಂಗಡಿಗಳು ಎದುರಾದವು. ಇವತ್ತು ಅಂಗಡಿಗಳನ್ನೆಲ್ಲಾ ಚೆನ್ನಾಗಿ ಜೋಡಿಸಿ ಅಲಂಕಾರ ಮಾಡಿದ್ದರು. ಇಷ್ಟೊಂದು ಮಿಠಾಯಿಯನ್ನು ಯಾರು ತಿನ್ನುತ್ತಾರೆ? ಒಂದೊಂದು ಅಂಗಡಿಯಲ್ಲೂ ಮಣಗಟ್ಟಲೆ ಮಿಠಾಯಿ ಇದೆ. ರಾತ್ರಿಯಾದ ಮೇಲೆ ಭೂತಪ್ರೇತಗಳು ಬಂದು ಮಿಠಾಯಿ ಕೊಂಡುಕೊಂಡು ಹೋಗುತ್ತವಂತೆ. ಅಪ್ಪ ಹೇಳ್ತಿದ್ದರು, ನಡುರಾತ್ರಿ ಒಬ್ಬ ಮನುಷ್ಯ ಪ್ರತಿಯೊಂದು ಅಂಗಡಿಗೂ ಹೋಗ್ತಾನಂತೆ, ಮಿಕ್ಕಿರೋ ಮಿಠಾಯಿಯನ್ನೆಲ್ಲಾ ತೂಗಿಸಿ, ನಿಜವಾದ ರೂಪಾಯಿ ಕೊಟ್ಟು ಕೊಂಡುಕೊಳ್ತಾನಂತೆ. ಇಂಥದೇ ರೂಪಾಯಿ.''

ಹಾಮೀದನಿಗೆ ನಂಬಿಕೆಯಾಗಲಿಲ್ಲ – ''ಇಂಥ ರೂಪಾಯಿ ಭೂತಪ್ರೇತಗಳ ಹತ್ತಿರ ಎಲ್ಲಿ ಬರಬೇಕು?''

ಮೊಹಸಿನ್ ಹೇಳಿದ – ''ಭೂತಗಳಿಗೆ ರೂಪಾಯಿಗೇನು ಕಡಿಮೆ? ಯಾವ ಖಜಾನೆಗೆಂದರೆ ಆ ಖಜಾನೆಗೆ ಹೋಗುತ್ತವೆ. ಕಬ್ಬಿಣದ ಬಾಗಿಲನ್ನ ಸಹ ಅವು ತೂರಿಕೊಂಡು ಹೋಗುತ್ತವೆ, ನೀನು ಯಾವ ಪ್ರಪಂಚದಲ್ಲಿದಿ? ಅವುಗಳ ಹತ್ತಿರ ವಜ್ರವೈಢೂರ್ಯಗಳೂ ಇರುತ್ತವೆ. ಯಾರ ಮೇಲೆ ಸಂತೋಷವಾದರೆ ಅವರಿಗೆ ಬುಟ್ಟಿ ಬುಟ್ಟಿ ಮುತ್ತುರತ್ನ ಕೊಟ್ಟುಬಿಡುತ್ತವೆ. ಈಗ ಇಲ್ಲಿ ಕೂತಿದ್ದರೆ ಇನ್ನು ಐದು ನಿಮಿಷದಲ್ಲಿ ಕಲಕತ್ತೆ ತಲಪಿಬಿಡುತ್ತವೆ.''

ಹಾಮೀದ್ ಕೇಳಿದ – ''ಭೂತಗಳು ತುಂಬ ದೊಡ್ಡದೊಡ್ಡದಾಗಿರುತ್ತವೆ ಅಲ್ಲವೆ?''

ಮೊಹಸಿನ್ – ''ಒಂದೊಂದೂ ಆಕಾಶದಷ್ಟು ಎತ್ತರ ಇರುತ್ತೆ. ಭೂಮಿಯ ಮೇಲೆ ನಿಂತುಕೊಂಡರೆ ಅವುಗಳ ತಲೆ ಆಕಾಶ ಮುಟ್ಟುತ್ತೆ. ಬೇಕೂ ಅಂದರೆ ತುಂಬ ಚಿಕ್ಕದಾಗಿ ಒಂದು ಲೋಟದಲ್ಲಿ ಅಡಗಿಕೊಂಡುಬಿಡುತ್ತವೆ.''

ಹಾಮೀದ್ – ''ಜನ ಅವನ್ನ ಒಲಿಸಿಕೊಳ್ತಾರೆ ಅಲ್ಲವೆ? ನನಗೂ ಯಾರಾದರೂ ಅಂಥ ಮಂತ್ರ ಹೇಳಿಕೊಟ್ಟರೆ ನಾನೂ ಒಂದು ಭೂತಾನ್ನ ಒಲಿಸಿಕೊಳ್ಳಲಾ?''

ಮೊಹಸಿನ್ – ''ಅದು ನನಗೆ ಗೊತ್ತಿಲ್ಲಪ್ಪ. ನಮ್ಮ ಸಾಹುಕಾರರ ಹತೋಟೀಲಿ ತುಂಬ ಭೂತಗಳಿವೆ. ಏನಾದರೂ ಸಾಮಾನು ಕಳುವಾದರೆ ಸಾಹುಕಾರರು ಅದನ್ನ ಕಂಡುಹಿಡಿದುಬಿಡ್ತಾರೆ, ಕಳ್ಳನ ಹೆಸರನ್ನೂ ಹೇಳಿಬಿಡ್ತಾರೆ. ಅವತ್ತು ಜುಮರಾತಿಯ ಕರು ತಪ್ಪಿಸಿಕೊಂಡುಬಿಟ್ಟಿತ್ತು. ಮೂರು ದಿನ ಎಲ್ಲೆಲ್ಲಿ ಹುಡುಕಾಡಿದರೂ ಸಿಗಲಿಲ್ಲ. ಆಗ ಬೇರೆ ದಾರಿಯಿಲ್ಲದೆ ಸಾಹುಕಾರರ ಹತ್ತಿರ ಹೋದ. ಸಾಹುಕಾರರು ತಕ್ಷಣ ಹೇಳಿ ಬಿಟ್ಟರಲ್ಲ, ದೊಡ್ಡೀಲಿದೆ ಅಂತ. ಅಲ್ಲೇ ಸಿಕ್ಕಿತು. ಭೂತಗಳು ಬಂದು ಇಡೀ ಜಗತ್ತಿನಲ್ಲಿ ನಡೆಯೋದನ್ನೆಲ್ಲಾ ಹೇಳಿ ಹೋಗುತ್ತವೆ.''

ಸಾಹುಕಾರರ ಹತ್ತಿರ ಅಷ್ಟೊಂದು ಹಣ ಯಾಕಿದೆ, ಅವರಿಗೆ ಅಷ್ಟೊಂದು ಮರ್ಯಾದೆ ಯಾಕೆ ಸಿಗುತ್ತದೆ ಎಂದು ಹಾಮೀದನ ಬುದ್ಧಿಗೆ ಈಗ ಹೊಳೆಯಿತು. ಹುಡುಗರು ಮುಂದೆ ನಡೆದರು. ಇದು ಪೊಲೀಸ್ ಲೈನ್. ಕಾನಸ್ಟೇಬಲ್ಲರುಗಳು

ಕವಾಯತು ಮಾಡುವುದು ಇಲ್ಲೇ. 'ರೈಟನ್'! 'ಫಾಯ್ ಪೋ'! ಪಾಪ, ಎಲ್ಲೂ ಕಳ್ಳತನವಾಗದಿರಲೆಂದು ಬಡಪಾಯಿಗಳು ರಾತ್ರಿಯೆಲ್ಲಾ ಅಲೆಯುತ್ತ ಕಾವಲು ಕಾಯುತ್ತಾರೆ.

ಮೊಹಸಿನ್ ಪ್ರತಿವಾದ ಹೂಡಿದ – "ಈ ಕಾನಸ್ಟೇಬಲ್ಲರು ಕಾವಲು ಕಾಯ್ತಾರೆಯೆ ? ನಿನಗೆ ಬಹಳ ಗೊತ್ತು! ಕಳ್ಳತನ ಮಾಡಿಸೋರು ಇವರೇ ಕಣೋ. ಪಟ್ಟಣದಲ್ಲಿ ಎಷ್ಟು ಜನ ಕಳ್ಳರೂ ದರೋಡೆಗಾರರೂ ಇದಾರೋ ಅವರೆಲ್ಲರೂ ಇವರ ಜೊತೆ ಕೈ ಕೈ ಮಿಲಾಯಿಸಿರ್ತಾರೆ. ರಾತ್ರಿ ಹೊತ್ತು ಇವರು ಕಳ್ಳರಿಗೆ ಕಳ್ಳತನ ಮಾಡಿ ಅಂತ ಹೇಳ್ತಾರೆ, ಬೇರೆ ಒಂದು ಮೊಹಲ್ಲಾದಲ್ಲಿ ಹೋಗಿ 'ಹುಷಾರ್'! 'ಹುಷಾರ್'! ಅಂತ ಕೂಗು ಹಾಕ್ತಾರೆ. ಅದಕ್ಕೇ ಇವರ ಹತ್ತಿರ ಅಷ್ಟೊಂದು ಹಣ ಇರೋದು. ನಮ್ಮ ಮಾವ ಒಂದು ಠಾಣೇಲಿ ಕಾನಸ್ಟೇಬಲ್ ಆಗಿದಾನೆ. ತಿಂಗಳಿಗೆ ಇಪ್ಪತ್ತು ರೂಪಾಯಿ ಸಂಬಳ ತರ್ತಾನೆ, ಆದರೆ ಮನೆಗೆ ಐವತ್ತು ರೂಪಾಯಿ ಕಳಿಸ್ತಾನೆ. ದೇವರಾಣೆಯಾಗಿಯೂ. ನಾನು ಒಂದು ಸಲ ಕೇಳಿದೆ, 'ಮಾವ, ನಿನಗೆ ಇಷ್ಟೊಂದು ದುಡ್ಡು ಎಲ್ಲಿಂದ ಬರುತ್ತೆ' ಅಂತ. ನಗುತ್ತಾ 'ದೇವರು ಕೊಡ್ತಾನೆ.' ಅಂದ. ಮತ್ತೆ ಅವನೇ ಹೇಳಿದ – "ಬೇಕಾದರೆ ನಾವು ಲಕ್ಷ ರೂಪಾಯಿ ಹೊಡಕೊಂಡು ಬರಬಹುದು. ಆದರೆ ನಮಗೆ ಕೆಟ್ಟ ಹೆಸರು ಬರದೆ, ನೌಕರಿಯೂ ಹೋಗದೆ ಇರೋ ಹಾಗೆ ಎಷ್ಟು ಬೇಕೋ ಅಷ್ಟೇ ತರ್ತೀವಿ."

ಹಾಮೀದ್ ಕೇಳಿ – "ಈ ಜನ ಕಳ್ಳತನ ಮಾಡಿಸಿದರೆ ಇವರನ್ನ ಯಾರೂ ಹಿಡಿಯೋಲ್ಲವೆ ?"

ಮೊಹಸಿನ್ ಅವನ ಅಜ್ಞಾನಕ್ಕೆ ಕನಿಕರ ವ್ಯಕ್ತಪಡಿಸುತ್ತ ಹೇಳಿದ – "ಅಯ್ಯೋ ಹುಚ್ಚ, ಇವರನ್ನ ಯಾರು ಹಿಡೀತಾರೆ! ಹಿಡಿಯೋರು ಅಂದರೆ ಸ್ವತಃ ಇವರೇ. ಆದರೆ ದೇವರು ಇವರಿಗೆ ತಕ್ಕ ಶಿಕ್ಷೇನೂ ಕೊಡ್ತಾನೆ ಅನ್ನು. ಅಧರ್ಮದ ಸಂಪಾದನೆ ಅಧರ್ಮದಲ್ಲೇ ಹೋಗುತ್ತೆ. ಸ್ವಲ್ಪ ದಿನದ ಹಿಂದೆ ನಮ್ಮ ಮಾವನ ಮನೆಗೆ ಬೆಂಕಿ ಬಿತ್ತು. ಇದ್ದಬದ್ದದ್ದೆಲ್ಲಾ ಸುಟ್ಟುಹೋಯ್ತು. ಒಂದು ಕುರುಡು ಪಾತ್ರೆ ಸಹ ಉಳೀಲಿಲ್ಲ. ಸ್ವಲ್ಪ ದಿನ ಮರದ ಕೆಳಗೆ ಮಲಕ್ಕೋತಿದ್ದರು. ದೇವರಾಣೆಯಾಗಿ ಹೇಳ್ತೀನಿ, ಮರದ ಕೆಳಗೆ! ಆಮೇಲೆ ಅದೆಲ್ಲಿಂದ ನೂರು ರೂಪಾಯಿ ಸಾಲ ತಂದನೋ ಗೊತ್ತಿಲ್ಲ, ಪಾತ್ರೆ ಪಗಡ ಮತ್ತೆ ಬಂದವು."

ಹಾಮೀದ್ – "ನೂರು ರೂಪಾಯಿ ಅಂದರೆ ಐವತ್ತಕ್ಕಿಂತ ಹೆಚ್ಚಾಗುತ್ತೆ."

"ಐವತ್ತೆಲ್ಲಿ, ನೂರೆಲ್ಲಿ? ಐವತ್ತು ಒಂದು ಚೀಲದಷ್ಟಾಗುತ್ತೆ, ನೂರು ರೂಪಾಯನ್ನ ಎರಡು ಚೀಲದಲ್ಲಿ ಸಹ ತುಂಬೋಕ್ಕಾಗೋಲ್ಲ."

ಈಗ ಗುಂಪು ನಿಬಿಡವಾಗುತ್ತಿತ್ತು. ಜನ ಈದಿಗಾಕ್ಕೆ ಹೊರಟಿದ್ದಾರೆಂಬುದು ಎದ್ದು ಕಾಣುತ್ತಿತ್ತು. ಒಬ್ಬರಿಗಿಂತ ಒಬ್ಬರು ಥಳಥಳಿಸುವ ಬಟ್ಟೆ ತೊಟ್ಟಿದ್ದರು. ಕೆಲವರು ಇಕ್ಕಾ–ಟಾಂಗಾಗಳಲ್ಲೂ ಕೆಲವರು ಮೋಟರುಗಳಲ್ಲೂ ಹೊರಟಿದ್ದರು. ಎಲ್ಲರೂ ಅತ್ತರು ಬಳಿದುಕೊಂಡಿದ್ದರು. ಎಲ್ಲರ ಎದೆಯಲ್ಲಿಯೂ ಉತ್ಸಾಹ ತುಂಬಿತ್ತು. ಹಳ್ಳಿಗರ ಈ ಸಣ್ಣ ಗುಂಪು ತನ್ನ ಕಷ್ಟನಿಷ್ಠುರಗಳನ್ನು ಮರೆತು

ಧೈರ್ಯಸಂತೋಷಗಳಲ್ಲಿ ಮುಳುಗಿ ಮುನ್ನಡೆದಿತ್ತು. ಮಕ್ಕಳಿಗೆ ಪಟ್ಟಣದ ವಸ್ತುಗಳೆಂದರೆ ತುಂಬ ಸುಂದರವಾಗಿ ಕಾಣುತ್ತವೆ. ಮನಸ್ಸು ಯಾವ ವಸ್ತುವಿನ ಮೇಲೆ ಹೋದರೆ ಅದರ ಮೇಲೆಯೇ ನೆಟ್ಟುಬಿಡುತ್ತದೆ. ಹಿಂದಿನಿಂದ ಮತ್ತೆ ಮತ್ತೆ ಹಾರನ್ನಿನ ಶಬ್ದವಾದರೂ ಎಚ್ಚರವಾಗದು. ಹಾಮೀದ್ ಮೋಟರಿಗೆ ಸಿಕ್ಕಿಕೊಳ್ಳುವುದರಲ್ಲಿದ್ದವನು ಹೇಗೋ ಬಚಾವಾದ.

ಇದ್ದಕ್ಕಿದ್ದಂತೆ ಈದಿಗಾ ಕಣ್ಣಿಗೆ ಬಿತ್ತು. ದಟ್ಟವಾದ ಹುಣಿಸೇ ಮರದ ನೆರಳಿನಲ್ಲಿ ಹಾಸುಗಲ್ಲಿನ ನೆಲದ ಮೇಲೆ ಜಮಖಾನ ಹಾಸಿದೆ. ಉಪವಾಸ ವ್ರತ ಮಾಡಿದವರು ಸಾಲುಸಾಲಾಗಿ ನಿಂತಿದ್ದಾರೆ. ಒಂದರ ಹಿಂದೊಂದರಂತೆ ಆ ಸಾಲುಗಳು ಕಲ್ಲಿನ ನೆಲದ ಆ ಕೊನೆಯುವರೆಗೆ ಜಮಖಾನವನ್ನು ದಾಟಿ ಹೋಗಿವೆ. ಕೊನೆಗೆ ಬಂದವರು ಹಿಂದಿನ ಸಾಲಿನಲ್ಲಿ ನಿಲ್ಲುತ್ತಾರೆ, ಮುಂದೆ ಜಾಗವಿಲ್ಲ. ಇಲ್ಲಿ ಯಾರೂ ಹಣ, ಅಂತಸ್ತುಗಳನ್ನು ನೋಡುವುದಿಲ್ಲ. ಇಸ್ಲಾಮ್ ಧರ್ಮದ ಕಣ್ಣಿನಲ್ಲಿ ಎಲ್ಲರೂ ಒಂದೇ. ಈ ಹಳ್ಳಿಯವರೂ ನಮಾಜಿಗೆಂದು ಕೈಕಾಲು ತೊಳೆದುಕೊಂಡು ಹಿಂದಿನ ಸಾಲಿನಲ್ಲಿ ನಿಂತುಕೊಂಡರು. ಎಷ್ಟು ಸೊಗಸಾದ ವ್ಯವಸ್ಥೆ, ಎಂಥ ಮೇಲ್ವಿಚಾರಣೆ! ಪ್ರಾರ್ಥನೆಯಲ್ಲಿ ಲಕ್ಷಾಂತರ ತಲೆಗಳು ಒಮ್ಮೆಲೇ ಬಾಗಿ ನೆಲ ಮುಟ್ಟುತ್ತವೆ, ಮತ್ತೆ ಒಮ್ಮೆಲೇ ಮೇಲೇಳುತ್ತವೆ. ಎಲ್ಲರೂ ಒಮ್ಮೆಲೇ ಬಾಗುತ್ತಾರೆ; ಒಮ್ಮೆಲೇ ಹೊತ್ತಿ, ಒಮ್ಮೆಲೇ ಆರುವಂತೆ ಇದೇ ಕ್ರಿಯೆ ಅನೇಕ ಸಲ ನಡೆಯುತ್ತದೆ. ಎಂತಹ ಅಪೂರ್ವ ದೃಶ್ಯ ಇದು! ಈ ಸಾಮೂಹಿಕ ಕ್ರಿಯೆ, ಇದರ ವಿಸ್ತಾರ, ಇದರ ಅನಂತತೆ ಹೃದಯಕ್ಕೆ ಶ್ರದ್ಧೆ, ಹೆಮ್ಮೆ ಹಾಗೂ ಆತ್ಮಾನಂದಗಳನ್ನು ತುಂಬುತ್ತದೆ. ಭ್ರಾತೃತ್ವದ ಒಂದು ಸೂತ್ರ ಈ ಸಮಸ್ತ ಆತ್ಮಗಳನ್ನೂ ಒಂದೇ ಎಳೆಯಲ್ಲಿ ಪೋಣಿಸಿದೆಯೇನೋ ಎಂಬಂತಿದೆ.

## 2

ನಮಾಜು ಮುಗಿಯಿತು. ಜನ ಒಬ್ಬರನ್ನೊಬ್ಬರು ಎದೆಗೆ ಅಪ್ಪಿಕೊಳ್ಳುತ್ತಿದ್ದಾರೆ. ಇನ್ನು ಮಿಠಾಯಿ, ಆಟದ ಸಾಮಾನಿನ ಅಂಗಡಿಗಳ ಮೇಲೆ ದಾಳಿಯಾಗುತ್ತದೆ. ಈ ವಿಷಯದಲ್ಲಿ ಹಳ್ಳಿಗರ ಗುಂಪಿಗೆ ಹುಡುಗರದ್ದಕ್ಕಿಂತೇನೂ ಕಡಿಮೆ ಉತ್ಸಾಹವಿಲ್ಲ. ಇದು ನೋಡಿ, ಉಯ್ಯಾಲೆ: ಒಂದು ಬಿಲ್ಲೆ ಕೊಟ್ಟು ಕೂತರೆ ಒಮ್ಮೆ ಆಕಾಶಕ್ಕೆ ಏರುತ್ತಿರುವಂತೆ, ಇನ್ನೊಮ್ಮೆ ನೆಲಕ್ಕೆ ಇಳಿಯುತ್ತಿರುವಂತೆ ಭಾಸವಾಗುತ್ತದೆ. ಇದು ರಾಟವಾಳೆ: ಮರದ ಆನೆ, ಕುದುರೆ, ಒಂಟೆಗಳು ಸರಳಿಗೆ ನೇತುಬಿದ್ದಿವೆ. ಒಂದು ಬಿಲ್ಲೆ ಕೊಟ್ಟು ಕೂತರೆ ಐವತ್ತು ಸುತ್ತಿನ ಆನಂದ ಪಡೆಯಬಹುದು. ಮಹಮೂದ್, ಮೊಹಸಿನ್, ನೂರೆ, ಸಮ್ಮಿ ಈ ಒಂಟೆ ಕುದುರೆಗಳ ಮೇಲೆ ಕೂರುತ್ತಾರೆ. ಹಾಮೀದ್ ದೂರ ನಿಂತಿದ್ದಾನೆ. ಅವನ ಹತ್ತಿರ ಇರುವುದೇ ಮೂರು ಬಿಲ್ಲೆ. ಅವನು ತನ್ನ ಗಂಟಿನ ಮೂರನೇ ಒಂದು ಪಾಲನ್ನು ತಲೆಸುತ್ತು ಬರಸಿಕೊಳ್ಳುವುದಕ್ಕೆ ಖರ್ಚು ಮಾಡಲಾರ.

ಎಲ್ಲರೂ ರಾಟವಾಳೆ ಬಿಟ್ಟು ಇಳಿಯುತ್ತಾರೆ. ಇನ್ನು ಆಟದ ಸಾಮಾನು ಕೊಳ್ಳಲು ಹೋಗುತ್ತಾರೆ. ಈ ಕಡೆ ಸಾಲುಸಾಲು ಅಂಗಡಿಗಳಿವೆ. ಬಗೆಬಗೆಯ ಬೊಂಬೆಗಳಿವೆ – ಸಿಪಾಯಿ, ರಾಜ, ವಕೀಲ, ನೀರಾಳು, ಅಗಸಗಿತ್ತಿ, ಸಾಧು: ವಾಹ್! ಎಷ್ಟು ಸೊಗಸಾದ ಆಟದ ಸಾಮಾನುಗಳು! ಮಾತಾಡ ಹೊರಟಿವೆಯೋ ಎನ್ನುವಂತೆ ಕಾಣುತ್ತಿವೆ. ಮಹಮೂದ್ ಸಿಪಾಯಿಯನ್ನು ಕೊಳ್ಳುತ್ತಾನೆ. ಖಾಕೀ ಉಡುಪು, ತಲೆಗೆ ಕೆಂಪು ರುಮಾಲು, ಹೆಗಲಿಗೆ ಏರಿಸಿದ ಬಂದೂಕ, ಈಗ ತಾನೇ ಕವಾಯಿತು ಮುಗಿಸಿ ಬಂದಂತಿದೆ. ಮೊಹಸಿನ್‌ಗೆ ನೀರಾಳು ಇಷ್ಟವಾಯಿತು. ಬಾಗಿದ ಸೊಂಟ, ಹೆಗಲ ಮೇಲೆ ನೀರಿನ ಚರ್ಮದ ಚೀಲ ಹೊತ್ತು, ಒಂದು ಕೈಯಲ್ಲಿ ಅದರ ಬಾಯಿಯನ್ನು ಹಿಡಿದುಕೊಂಡಿದೆ. ಅದು ಎಷ್ಟು ಸಂತೋಷದಿಂದಿದೆ! ಪ್ರಾಯಶಃ ಏನನ್ನೋ ಹಾಡುತ್ತಿರಬಹುದು. ಚೀಲದಿಂದ ಇನ್ನೇನು ನೀರು ಚಿಮುಕಿಸಲಿದೆ. ನೂರೆಗೆ ವಕೀಲನ ಬಗ್ಗೆ ಮೋಹವಾಯಿತು. ಅದರ ಮುಖದಲ್ಲಿ ಎಂತಹ ವಿದ್ವತ್ತಿದೆ! ಕಪ್ಪು ನಿಲುವಂಗಿ, ಅದರೊಳಗೆ ಬಿಳಿಯ ಮುಚ್ಚುಕೋಟು. ಮುಚ್ಚುಕೋಟಿನ ಮುಂಬದಿಯ ಜೇಬಿನಲ್ಲಿ ಗಡಿಯಾರ, ಅದಕ್ಕೆ ಚಿನ್ನದ ಚೈನು. ಒಂದು ಕೈಯಲ್ಲಿ ಕಾಯಿದೆಯ ಪುಸ್ತಕ ಇಟ್ಟುಕೊಂಡಿದೆ. ಇದೀಗ ಯಾವುದೋ ಕೋರ್ಟಿನಲ್ಲಿ ಪಾಟೀಸವಾಲನ್ನೋ ವಾದ-ವಿವಾದವನ್ನೋ ಮುಗಿಸಿ ಬರುತ್ತಿರುವಂತಿದೆ. ಇವೆಲ್ಲವೂ ಎರಡೆರಡು ಬಿಲ್ಲೆಯ ಬೊಂಬೆಗಳು. ಹಾಮೀದನ ಹತ್ತಿರ ಇರುವುದು ಒಟ್ಟು ಮೂರು ಬಿಲ್ಲೆ. ಇಷ್ಟು ದುಬಾರಿ ಬೊಂಬೆಗಳನ್ನು ಅವನೆಲ್ಲಿ ಕೊಂಡಾನು? ಬೊಂಬೆಯೇನಾದರೂ ಕೈಯಿಂದ ಜಾರಿ ಬಿದ್ದರೆ ಚೂರುಚೂರಾಗುತ್ತದೆ. ಸ್ವಲ್ಪ ನೀರು ಬಿದ್ದರೆ ಅದರ ಬಣ್ಣವೆಲ್ಲಾ ತೊಳೆದುಹೋಗುತ್ತದೆ. ಇಂಥ ಬೊಂಬೆ ತೊಗೊಂಡು ಅವನೇನು ಮಾಡಬೇಕಾಗಿದೆ! ಅವು ಯಾವ ಪುರುಷಾರ್ಥಕ್ಕೆ!

ಮೊಹಸಿನ್ ಹೇಳುತ್ತಾನೆ – "ನನ್ನ ನೀರಾಳು ದಿನಾಗಲೂ ನೀರು ಕೊಡ್ತಾನೆ, ಬೆಳಗ್ಗೆ ಸಂಜೆ."

ಮಹಮೂದ್ – "ನನ್ನ ಸಿಪಾಯಿ ಮನೆ ಕಾಯ್ತಾನೆ. ಯಾವನಾದರೂ ಕಳ್ಳ ಬಂದರೆ ತಕ್ಷಣ ಬಂದೂಕ ಹಾರಿಸ್ತಾನೆ."

ನೂರೆ – "ನನ್ನ ವಕೀಲ ಮೊಕದ್ದಮೇಲಿ ಚೆನ್ನಾಗಿ ವಾದ ಮಾಡ್ತಾನೆ."

ಸಮ್ಮಿ – "ನನ್ನ ಅಗಸಗಿತ್ತಿ ದಿನಾ ಬಟ್ಟೆ ಒಗೆದುಕೊಡ್ತಾಳೆ."

"ಅವೆಲ್ಲಾ ಮಣ್ಣಿಂದು. ಕೆಳಗೆ ಬಿದ್ದರೆ ಚೂರುಚೂರಾಗುತ್ತವೆ." – ಹಾಮೀದ್ ಬೊಂಬೆಗಳನ್ನು ಹೀಗಳೆಯುತ್ತಾನೆ. ಆದರೆ ಅವನ ಕಣ್ಣುಗಳು ಮಾತ್ರ ಬೊಂಬೆಗಳತ್ತ ಆಸೆಯಿಂದ ನೋಡುತ್ತಿವೆ. ಕೊಂಚ ಹೊತ್ತು ತಾನೂ ಅವನ್ನು ಕೈಯಲ್ಲಿಟ್ಟುಕೊಳ್ಳಬೇಕೆಂದು ಆಸೆಯಾಗುತ್ತದೆ. ಅನಾಯಾಸವಾಗಿ ಬೊಂಬೆಗಳ ಕಡೆ ಕೈಚಾಚುತ್ತಾನೆ. ಆದರೆ ಹುಡುಗರು ಅವನ್ನು ಕೊಡುವಷ್ಟು ತ್ಯಾಗಿಗಳಲ್ಲ, ಅದರಲ್ಲೂ ವಿಶೇಷವಾಗಿ ಗೀಳಿನ್ನೂ ಹೊಸದಾಗಿರುವಾಗ! ಹಾಮೀದನ ಆಸೆ ಆಸೆಯಾಗಿಯೇ ಉಳಿಯುತ್ತದೆ.

ಬೊಂಬೆಗಳ ಅಂಗಡಿಯಾದ ಮೇಲೆ ಮಿಠಾಯಿ ಅಂಗಡಿ. ಒಬ್ಬ ಎಳ್ಳುಂಡೆ

ಕೊಂಡ, ಇನ್ನೊಬ್ಬ ಗುಲಾಬ್ ಜಾಮೂನ್, ಮತ್ತೊಬ್ಬ ಸೋಹನ್ ಹಲ್ವಾ. ಎಲ್ಲರೂ ಸಂತೋಷದಿಂದ ತಿನ್ನುತ್ತಿದ್ದಾರೆ. ಹಾಮೀದ್ ಕುಲದಿಂದ ಹೊರಗಾಗಿದ್ದಾನೆ. ಆ ಬಡಪಾಯಿಯ ಹತ್ತಿರ ಮೂರು ಬಿಲ್ಲೆಯಿದೆ. ಯಾಕೆ ಏನನ್ನಾದರೂ ಕೊಂಡು ತಿನ್ನುವುದಿಲ್ಲ? ಆಸೆಗಣ್ಣಿಂದ ಎಲ್ಲರ ಕಡೆಯೂ ನೋಡುತ್ತಾನೆ.

ಮೊಹಸಿನ್ ಹೇಳುತ್ತಾನೆ – "ತೊಗೊಳ್ಳೋ, ಹಾಮೀದ್, ಎಳ್ಳುಂಡೆ ಎಷ್ಟು ಘಮ್ ಅಂತಿದೆ ಅಂತಿ!"

ಇದು ಬರಿಯ ಕ್ರೂರ ವಿನೋದ. ಮೊಹಸಿನ್ ತಿಂಡಿ ಕೊಡುವಷ್ಟು ಉದಾರಿಂ॰ೀ ಎಂದು ಹಾಮೀದನಿಗೆ ಹಾಮೀದನಿಗೆ ಸಂದೇಹ. ಆದರೂ ತಿಳಿದೂ ತಿಳಿದೂ ಅವನ ಹತ್ತಿರ ಹೋಗುತ್ತಾನೆ. ಮೊಹಸಿನ್ ಎರಡು ಎಳ್ಳುಂಡೆಗಳಲ್ಲಿ ಒಂದನ್ನು ಹಾಮೀದನ ಕಡೆ ನೀಡುತ್ತಾನೆ. ಹಾಮೀದ್ ಕೈ ಚಾಚುತ್ತಾನೆ. ಮೊಹಸಿನ್ ಎಳ್ಳುಂಡೆಯನ್ನು ಬಾಯಿಗೆ ಎಸೆದುಕೊಳ್ಳುತ್ತಾನೆ. ಮಹಮೂದ್, ನೂರೆ, ಸಮ್ಮಿ ಚಪ್ಪಾಳೆ ತಟ್ಟಿ ನಗುತ್ತಾರೆ. ಹಾಮೀದನ ಮುಖ ನಾಚಿಕೆಯಿಂದ ಕೆಂಪಾಗುತ್ತದೆ.

ಮೊಹಸಿನ್ – "ಹೋಗಲಿ ತೊಗೋ. ಈ ಸಲ ಖಂಡಿತ ಕೊಡ್ತೀನಿ. ದೇವರಾಣೆ."

ಹಾಮೀದ್ – "ನೀನೇ ಇಟ್ಟುಕೊ. ಏನು ನನ್ನ ಹತ್ತಿರ ದುಡ್ಡಿಲ್ಲ ಅಂದುಕೊಂಡೆಯಾ?"

ಸಮ್ಮಿ – "ಮೂರು ಬಿಲ್ಲೆ ಇದೆ. ಅದರಲ್ಲಿ ಏನೇನೆಲ್ಲಾ ತೊಗೋತಿ."

ಮಹಮೂದ್ – "ಮೊಹಸಿನ್ ಬಲು ಕೆಟ್ಟೋನು. ನಾನು ಗುಲಾಬ್ ಜಾಮೂನ್ ಕೊಡ್ತೀನಿ, ತೊಗೊಳ್ಳೋ ಹಾಮೀದ್."

ಹಾಮೀದ್ – "ಮಿಠಾಯಿ ಏನು ಮೈಗೆ ಒಳ್ಳೇದೆ? ಅದು ಎಷ್ಟು ಕೆಟ್ಟದ್ದು ಅಂತ ಪುಸ್ತಕದಲ್ಲಿ ಬರೆದಿದೆ."

ಮೊಹಸಿನ್ – "ನಿಜ ಆದರೆ ಸಿಕ್ಕಿದರೆ ತಿನ್ನೋಣ ಅಂತ ಹೇಳ್ತೋಲ್ವೆ ನಿನ್ನ ಮನಸ್ಸು! ನಿನ್ನ ದುಡ್ಡನ್ನ ಯಾಕೆ ಖರ್ಚು ಮಾಡೋಲ್ಲ!"

ಮಹಮೂದ್ – "ನಮಗೆ ಗೊತ್ತಿದೆ ಇವನ ಚಾಲ್ಕೋಕು. ನಮ್ಮ ದುಡ್ಡೆಲ್ಲಾ ಖರ್ಚಾದ ಮೇಲೆ ಆಗ ಕೊಂಡುಕೊಂಡು ನಮಗೆ ಆಸೆ ತೋರಿಸಿ ತೋರಿಸಿ ತಿಂತಾನೆ."

ಮಿಠಾಯಿ ಅಂಗಡಿಗಳಾದ ಮೇಲೆ ಕಬ್ಬಿಣದ ಸಾಮಾನಿನ ಅಂಗಡಿಗಳು, ಗಿಲೀಟಿನ ನಕಲಿ ಆಭರಣಗಳ ಅಂಗಡಿಗಳು ಬಂದವು. ಇಲ್ಲಿ ಹುಡುಗರಿಗೆ ಯಾವ ಆಕರ್ಷಣೆಯೂ ಇರಲಿಲ್ಲ. ಅವರೆಲ್ಲರೂ ಮುಂದೆ ಹೋದರು. ಆದರೆ ಕಬ್ಬಿಣದ ಅಂಗಡಿಯ ಮುಂದೆ ಹಾಮೀದ್ ನಿಂತುಕೊಂಡ. ಅಲ್ಲಿ ಅನೇಕ ಇಕ್ಕಳಗಳಿದ್ದವು. ಅಜ್ಜಿಯ ಹತ್ತಿರ ಇಕ್ಕಳವಿರಲಿಲ್ಲವೆಂದು ಹಾಮೀದನಿಗೆ ತಕ್ಷಣ ನೆನಪಾಯಿತು. ಪಾಪ, ಕಾವಲಿಯಿಂದ ರೊಟ್ಟಿ ತೆಗೆಯುವಾಗ ದಿನವೂ ಕೈ ಸುಟ್ಟುಕೊಳ್ಳುತ್ತಾಳೆ. ಇಕ್ಕಳ ಕೊಂಡುಹೋಗಿ ಕೊಟ್ಟರೆ ಅವಳಿಗೆ ಎಷ್ಟೊಂದು ಸಂತೋಷವಾಗುತ್ತದೆ! ಅವಳು ಮತ್ತೆಂದೂ ಕೈ ಸುಟ್ಟುಕೊಳ್ಳುವುದಿಲ್ಲ. ಬೊಂಬೆಗಳಿಂದ ಏನು ಲಾಭ! ಸುಮ್ಮನೇ ಹಣ

ಖರ್ಚು. ಸ್ವಲ್ಪ ಹೊತ್ತು ಸಂತೋಷ ಸಿಗುತ್ತದೆ. ಆಮೇಲೆ ಅವುಗಳ ಕಡೆ ಕಣ್ಣೆತ್ತಿ ಸಹ ನೋಡುವುದಿಲ್ಲ. ಇಲ್ಲವೇ ಮನೆ ತಲಪುವ ಮೊದಲೇ ಅವು ಮುರಿದೂ ಹೋಗಬಹುದು. ಇಕ್ಕಳವಾದರೆ ಎಷ್ಟೊಂದು ಕೆಲಸಕ್ಕೆ ಬರುತ್ತದೆ. ಕಾವಲಿಯಿಂದ ರೊಟ್ಟಿ ಎತ್ತಬಹುದು, ಬೇಕಾದರೆ ಒಲೆಯೊಳಗೇ ರೊಟ್ಟಿ ಇಟ್ಟು ಸುಡಬಹುದು. ಯಾರಾದರೂ ಬೆಂಕಿ ಕೇಳಲು ಬಂದರೆ ತಕ್ಷಣ ಒಲೆಯಿಂದ ಕೆಂಡ ತೆಗೆದುಕೊಡಬಹುದು. ಪಾಪ! ಬಡಪಾಯಿ ಅಜ್ಜಿಗೆ ಪೇಟೆಗೆ ಬಂದು ಅದನ್ನು ಕೊಂಡುಕೊಳ್ಳಲು ಪುರಸೊತ್ತೆಲ್ಲಿ? ಅಲ್ಲದೆ ಇಷ್ಟು ಹಣ ಸಹ ಎಲ್ಲಿ ಬರಬೇಕು? ದಿನವೂ ಕೈ ಸುಟ್ಟುಕೊಳ್ಳುತ್ತಾಳೆ! ಹಾಮೀದನ ಸ್ನೇಹಿತರು ಮುಂದೆ ಮುಂದೆ ಹೋಗಿದ್ದಾರೆ. ದಾರಿಯಲ್ಲಿ ಎಲ್ಲರೂ ಒಟ್ಟಾಗಿ ಶರಬತ್ತು ಕುಡಿಯುತ್ತಿದ್ದಾರೆ. ನೋಡಿ, ಎಲ್ಲರೂ ಎಂಥ ಲೋಭಿಗಳು! ಅಷ್ಟೊಂದು ಮಿಠಾಯಿ ಕೊಂಡುಕೊಂಡರು. ತನಗೆ ಒಬ್ಬರಾದರೂ ಒಂದು ಚೂರೂ ಕೊಡಲಿಲ್ಲ. ಇದು ಸಾಲದೆಂದು ಮೇಲೆ ಎಲ್ಲರೂ 'ನನ್ನ ಜೊತೆ ಆಡೋಕ್ಕೆ ಬಾ', 'ನನಗೆ ಈ ಕೆಲಸ ಮಾಡಿಕೊಡು' ಅನ್ನುವವರೇ. ಇನ್ನು ಮೇಲೆ ಯಾರಾದರೂ ಏನಾದರೂ ಕೆಲಸ ಹೇಳಲಿ! ಆಗ ಉತ್ತರ ಕೊಡ್ತೀನಿ. ನೀವೇ ತಿನ್ನಿ ನಿಮ್ಮ ಮಿಠಾಯೀನ. ನಿಮ್ಮ ಬಾಯೇ ಕೊಳೆಯುತ್ತೆ, ಮೈಮೇಲೆ ಕಜ್ಜಿ ತುರಿ ಏಳುತ್ತೆ. ನಿಮ್ಮ ಬಾಯಿಚಪಲವೇ ಹೆಚ್ಚಾಗುತ್ತೆ. ಆಗ ಮನೆಯಿಂದ ದುಡ್ಡು ಕದಿಯೋಕ್ಕೆ ಷುರು ಮಾಡ್ತೀರಿ, ಏಟು ತಿಂತೀರಿ. ಪುಸ್ತಕದಲ್ಲಿ ಸುಳ್ಳು ಬರೆದಿದೆಯೆ? ನನ್ನ ನಾಲಿಗೆಯೇನು ಕೆಡುತ್ತೆಯೆ? ಅಜ್ಜಿ ಇಕ್ಕಳ ನೋಡಿದ ತಕ್ಷಣ ಓಡಿಬಂದು ಅದನ್ನ ನನ್ನ ಕೈಯಿಂದ ಇಸಕೊಂಡು 'ನಮ್ಮ ಮಗು ಅಜ್ಜಿಗೆ ಇಕ್ಕಳ ತಂದುಕೊಟ್ಟಿತು' ಅಂತ ಸಂತೋಷಪಡ್ತಾಳೆ. ಸಾವಿರ ಸಲ ಹರಸ್ತಾಳೆ! ಆಮೇಲೆ ಅಕ್ಕಪಕ್ಕದ ಮನೆಯ ಹೆಂಗಸರಿಗೆ ತೋರಿಸ್ತಾಳೆ. 'ಹಾಮೀದ್ ಅವರ ಅಜ್ಜೀಗೆ ಇಕ್ಕಳ ತಂದುಕೊಟ್ಟ. ಎಷ್ಟು ಒಳ್ಳೇ ಹುಡುಗ' ಅಂತ ಇಡೀ ಹಳ್ಳಿಯೋರೆಲ್ಲಾ ಮಾತಾಡಿಕೊಳ್ತಾರೆ. ಇವಳ ಬೊಂಬೆಗಳನ್ನ ನೋಡಿ ಯಾರು ಇವರನ್ನ ಹರಸ್ತಾರೆ? ದೊಡ್ಡವರ ಹಾರೈಕೆ ನೇರವಾಗಿ ದೇವರ ಆಸ್ಥಾನಕ್ಕೆ ಹೋಗಿ ತಲಪುತ್ತೆ, ದೇವರು ಕೇಳಿಸಿಕೋತಾನೆ. ನನ್ನ ಹತ್ತಿರ ಹಣವಿಲ್ಲ. ಅದಕ್ಕೋಸ್ಕರವೇ ಮೊಹಸಿನ್, ಮಹಮೂದ್ ಅವರೆಲ್ಲರೂ ಹೀಗೆ ಅಹಂಕಾರ ತೋರಿಸ್ತಾರೆ. ನಾನೂ ನನ್ನ ಅಹಂಕಾರ ತೋರಿಸ್ತೀನಿ. ಬೊಂಬೆ ಇಟ್ಟುಕೊಂಡು ಆಡಲಿ, ಮಿಠಾಯಿ ತಿನ್ನಲಿ. ನಾನು ಬೊಂಬೆ ಇಟ್ಟುಕೊಂಡು ಆಡೋಲ್ಲ ಅಂದಮೇಲೆ ಯಾರ ಅಹಂಕಾರಾನ ತಾನೇ ಯಾಕೆ ಸಹಿಸಬೇಕು? ನಾನು ಬಡವ, ನಿಜ. ಆದರೆ ನಾನು ಯಾರ ಹತ್ತಿರಾನೂ ಭಿಕ್ಷೆ ಬೇಡೋಕ್ಕೆ ಹೋಗೋಲ್ಲವಲ್ಲ! ಕೊನೆಗೆ ಒಂದಲ್ಲ ಒಂದು ದಿನ ಅಪ್ಪ ಬರ್ತಾನೆ, ಅಮ್ಮನೂ ಬರ್ತಾಳೆ. ಆಗ ಇವರನ್ನ ಕೇಳ್ತೀನಿ, ಎಷ್ಟು ಬೊಂಬೆ ಬೇಕ್ರಪ್ಪಾ ನಿಮಗೆ? ಒಬ್ಬೊಬ್ಬರಿಗೂ ಬುಟ್ಟಿ ಬುಟ್ಟಿ ಬೊಂಬೆ ಕೊಟ್ಟು ಸ್ನೇಹಿತರ ಜೊತೆ ನಡೆದುಕೊಳ್ಳೋದು ಹೇಗೆ ಅಂತ ತೋರಿಸ್ತೀನಿ. ಒಂದು ಬಿಲ್ಲೆಗೆ ಎಳ್ಳುಂಡೆ ಕೊಂಡುಕೊಂಡು ತೋರಿಸಿ ತೋರಿಸಿ ತಿನ್ನೋದಲ್ಲ ನಡವಳಿಕೆ. ಹಾಮೀದ್ ಇಕ್ಕಳ ಕೊಂಡುಕೊಂಡ ಅಂತ ಎಲ್ಲಾರೂ ಒಟ್ಟಾಗಿ ನಗ್ತಾರೆ. ನಕ್ಕುಕೊಳ್ಳಲಿ. ನನಗೇನು ನಷ್ಟ?

ಹಾಮೀದ್ ಅಂಗಡಿಯುವನನ್ನು ಕೇಳಿದ – "ಈ ಇಕ್ಕಳಕ್ಕೆ ಎಷ್ಟಪ್ಪಾ ?"

ಅಂಗಡಿಯುವನು ಹಾಮೀದನ ಕಡೆ ನೋಡಿ ಜೊತೆಯಲ್ಲಿ ದೊಡ್ಡವರಾರೂ ಇಲ್ಲದುದನ್ನು ಕಂಡು ಹೇಳಿದ – "ಅದು ನೀನು ಕೊಂಡುಕೊಳ್ಳೋದಲ್ಲ !"

"ಮಾರಾಟಕ್ಕೆ ಇದೆಯೋ ಇಲ್ಲವೋ ಹೇಳು."

"ಮಾರಾಟಕ್ಕೆ ಯಾಕಿಲ್ಲ ? ಇಲ್ಲೇನು ಸುಮ್ಮನೆ ಸಾಮಾನು ಹೊತ್ತುಕೊಂಡು ಬಂದಿದೀವೆ ?"

"ಹಾಗಾದರೆ ಅದಕ್ಕೆಷ್ಟು ಅಂತ ಯಾಕೆ ಹೇಳೋಲ್ಲ."

"ಆರು ಬಿಲ್ಲೆ ಆಗುತ್ತೆ."

ಹಾಮೀದನ ಎದೆ ಕುಸಿಯಿತು. "ಎಷ್ಟಕ್ಕೆ ಕೊಡ್ತಿ ಅಂತ ಸರಿಯಾಗಿ ಹೇಳಪ್ಪ."

"ಐದು ಬಿಲ್ಲೇಗೆ ಕೊಡ್ತೀನಿ. ತೊಗೊಳ್ಳೋದಾದರೆ ತೊಗೋ, ಇಲ್ಲವೇ ನಡೀತಿರು."

ಹಾಮೀದ್ ಧೈರ್ಯ ತಂದುಕೊಂಡು ಕೇಳಿಯೇ ಬಿಟ್ಟ – "ಮೂರು ಬಿಲ್ಲೆಗೆ ಕೊಡ್ತೀಯೇನು ?"

ಹಾಗೆ ಕೇಳುಕೇಳುತ್ತಲೇ ಇನ್ನೆಲ್ಲಿ ಅಂಗಡಿಯುವನ ಬೈಗಳ ಎದುರಿಸಬೇಕಾಗುವುದೋ ಎಂದು ಹಾಮೀದ್ ಮುಂದೆ ಕಾಲುಹಾಕಿದ. ಆದರೆ ಅಂಗಡಿಯುವನು ಬೈಯಲಿಲ್ಲ. ಕರೆದು ಇಕ್ಕಳ ಕೊಟ್ಟ. ಬಂದೂಕವೋ ಎಂಬಂತೆ ಹಾಮೀದ್ ಅದನ್ನು ಹೆಗಲಿಗೇರಿಸಿ, ಜಂಬದಿಂದ ಎದೆ ಮುಂದುಮಾಡಿಕೊಂಡು ಜೊತೆಗಾರರ ಹತ್ತಿರ ಬಂದ. ಎಲ್ಲರೂ ಏನೇನು ಟೀಕೆ ಟಿಪ್ಪಣಿ ಮಾಡುತ್ತಾರೋ ಕೇಳೋಣವೆಂದುಕೊಂಡ.

ಮೊಹಸಿನ್ ನಗುತ್ತ ಹೇಳಿದ – "ಅಯ್ಯೋ ಬೆಪ್ಪೇ ! ಈ ಇಕ್ಕಳಾನ ಯಾಕೆ ಕೊಂಡುಕೊಂಡೆಯೋ ? ಇದರಲ್ಲಿ ಏನು ಮಾಡ್ತಿ ?"

ಹಾಮೀದ್ ಇಕ್ಕಳವನ್ನು ನೆಲಕ್ಕೆ ಅಪ್ಪಳಿಸಿ ಹೇಳಿದ – "ಹೀಗೆ ನಿನ್ನ ನೀರಾಳನ್ನ ನೆಲದ ಮೇಲೆ ಎತ್ತಿ ಹಾಕು. ಆದರ ಪಕ್ಕೆಯೆಲ್ಲಾ ಚೂರುಚೂರಾಗದೆ ಉಳಿಯುತ್ತೇನು ನೋಡೋಣ."

ಮಹಮೂದ್ ಕೇಳಿದ – "ಆದರೆ ಈ ಇಕ್ಕಳವೇನು ಆಟದ ಸಾಮಾನೆ ?"

ಹಾಮೀದ್ – "ಆಟದ ಸಾಮಾನಲ್ಲದೇ ಮತ್ತೇನು ? ಹೆಗಲ ಮೇಲಿಟ್ಟುಕೊಂಡರೆ ಬಂದೂಕವಾಗುತ್ತೆ. ಕೈಯಲ್ಲಿ ತೊಗೊಂಡರೆ ಫಕೀರರ ಚಿಮಟವಾಗುತ್ತೆ. ಬೇಕೂ ಅಂದರೆ ಇದರಿಂದ ತಾಳ ಹಾಕಬಹುದು. ಇದರಿಂದ ಒಂದೇಟು ಕೊಟ್ಟರೆ ನಿಮ್ಮೆಲ್ಲರ ಬೊಂಬೆಗಳ ಪ್ರಾಣವೂ ಹಾರಿಹೋಗುತ್ತೆ. ನಿಮ್ಮ ಬೊಂಬೆಗಳು ಎಷ್ಟೇ ಪ್ರಯತ್ನಪಡಲಿ, ನನ್ನ ಇಕ್ಕಳಾನ ಒಂದು ಕೂದಲೆಳೆಯಷ್ಟು ಸಹ ಬಗ್ಗಿಸೋಕ್ಕೆ ಆಗೋಲ್ಲ. ಈ ಇಕ್ಕಳ ನನ್ನ ಬಹದ್ದೂರ್ ಹುಲಿ !"

ಸಮ್ಮಿ ಒಂದು ಖಂಜರಿ ಕೊಂಡಿದ್ದಳು. ಅವಳು ಹಾಮೀದನ ಇಕ್ಕಳವನ್ನು ನೋಡಿ ಪ್ರಭಾವಿತಳಾಗಿ ಹೇಳಿದಳು – "ನನ್ನ ಖಂಜರಿ ತೊಗೊಂಡು ನಿನ್ನ ಇಕ್ಕಳ ಕೊಡ್ತೀಯಾ ಎರಡಾಣೆ ಕೊಟ್ಟು ತೊಗೊಂಡಿದೀನಿ."

ಹಾಮೀದ್ ಖಂಜರಿಯ ಕಡೆ ತಿರಸ್ಕಾರದಿಂದ ನೋಡಿದ – "ಬೇಕೂ ಅಂದರೆ ನನ್ನ ಇಕ್ಕಳ ನಿನ್ನ ಖಂಜರಿಯ ಹೊಟ್ಟೆ ಸೀಳಿ ಹಾಕುತ್ತೆ. ಒಂದು ಚರ್ಮದ ಹಾಳೆ ಅಂಟಿಸಿದಳು, ಡಬ್ ಡಬ್ ಅನ್ನೋಕ್ಕೆ ಷುರುವಾಯ್ತು. ಒಂದು ತೊಟ್ಟು ನೀರು ಬಿದ್ದರೆ ಮುಗೀತು ಅದರ ಕೆಲಸ ! ನನ್ನ ಈ ಬಹದ್ದೂರ್ ಇಕ್ಕಳ ಬೆಂಕೀಲಿ, ನೀರಲ್ಲಿ, ಬಿರುಗಾಳೀಲಿ, ಎಲ್ಲೀ ಅಂದರೆ ಅಲ್ಲಿ ದೃಢವಾಗಿ ನಿಂತಿರುತ್ತೆ."

ಇಕ್ಕಳ ಎಲ್ಲರ ಮನಸ್ಸನ್ನೂ ಸೆಳೆಯಿತು. ಆದರೆ ಕೊಂಡುಕೊಳ್ಳಲು ಯಾರ ಹತ್ತಿರ ತಾನೇ ಹಣವಿದೆ ? ಅಲ್ಲದೆ ಜಾತ್ರೆಯಿಂದ ಬಹು ದೂರ ಬಂದಿದ್ದಾರೆ; ಗಂಟೆ ಒಂಬತ್ತು ಹೊಡೆದು ಎಷ್ಟೋ ಹೊತ್ತಾಗಿದೆ. ಬಿಸಿಲು ಹೆಚ್ಚುತ್ತಿದೆ. ಮನೆ ತಲಪುವ ಆತುರ ಬೇರೆ. ಹೋಗಿ ಅಪ್ಪನ ಮುಂದೆ ಹಟಹಿಡಿದರೆ ಸಹ ಇಕ್ಕಳ ಸಿಕ್ಕೀತೆ ! ಹಾಮೀದನದು ಬಲು ಚಾಲ್ಲೋಕು. ಇದಕ್ಕೋಸ್ಕರವೇ ಅಲ್ಲವೇ ಆ ಪುಂಡ ದುಡ್ಡುಳಿಸಿ ಇಟ್ಟಿದ್ದುದು.

ಈಗ ಹುಡುಗರದ್ದು ಎರಡು ಗುಂಪಾಯಿತು. ಮೊಹಸಿನ್, ಮಹಮೂದ್, ಸಮ್ಮಿ ಮತ್ತು ನೂರೆ ಒಂದು ಕಡೆ: ಹಾಮಿದನೊಬ್ಬನೇ ಒಂಟಿಯಾಗಿ ಇನ್ನೊಂದು ಕಡೆ. ವಾಗ್ವಾದಕ್ಕೆ ಷುರುವಾಯಿತು. ಸಮ್ಮಿ ಧರ್ಮಗೇಡಿಯಾಗಿ ಎದುರು ಪಕ್ಷಕ್ಕೆ ಹೋಗಿ ಸೇರಿಕೊಂಡಳು. ಮೊಹಸಿನ್, ಮಹಮೂದ್ ಮತ್ತು ನೂರೆ ಹಾಮೀದನಿಗಿಂತ ಒಂದೆರಡು ವರ್ಷ ಹಿರಿಯರಾದರೂ ಅವನ ಮಾತಿನ ಹೊಡೆತ ಅವರನ್ನು ಆತಂಕಕ್ಕೆ ಗುರಿ ಮಾಡಿತು. ಅವನ ಹಿಂದೆ ನ್ಯಾಯದ ಬಲವಿದೆ; ನೀತಿಯ ಶಕ್ತಿಯಿದೆ. ಒಂದು ಕಡೆ ಮಣ್ಣಿದೆ; ಇನ್ನೊಂದು ಕಡೆ ತನ್ನನ್ನು ತಾನು ಉಕ್ಕೆಂದುಕೊಳ್ಳುವ ಕಬ್ಬಿಣವಿದೆ. ಕಬ್ಬಿಣ ಅಜೇಯವಾದುದು; ಘಾತಕವಾದುದು. ಯಾವದಾದರೂ ಹುಲಿ ಎದುರಾದರೆ ನೀರಾಳು ಕಕ್ಕಾಬಿಕ್ಕಿಯಾಗುತ್ತಾನೆ; ಸಿಪಾಯಪ್ಪ ತನ್ನ ಮಣ್ಣಿನ ಬಂದೂಕ ತೊರೆದು ಓಡುತ್ತಾನೆ; ವಕೀಲ ಗೋಳೋ ಎಂದು ಅಳುತ್ತ ಮೇಲಂಗಿಯ ಸೆರಗಿನಲ್ಲಿ ಮುಖಮುಚ್ಚಿಕೊಂಡು ನೆಲದ ಮೇಲೆ ಹೊರಳಾಡುತ್ತಾನೆ. ಆದರೆ ಈ ಇಕ್ಕಳ, ಈ ಬಹದ್ದೂರ್, ಈ ಭಾರತವೀರ ಹುಲಿಯ ಮೈಮೇಲೆ ಹಾರಿ, ಅದರ ಕತ್ತಿನ ಮೇಲೆ ಕುಳಿತು ಸವಾರಿ ಮಾಡುತ್ತಾನೆ. ಅದರ ಕಣ್ಣು ಕಿತ್ತುಹಾಕುತ್ತಾನೆ.

ಹಾಮೀದ್ ತನ್ನೆಲ್ಲ ಶಕ್ತಿಯನ್ನೂ ಬಳಸಿ ವಾದ ಮಾಡಿದ – "ನಿನ್ನ ನೀರಾಳನ್ನ ಯಾರಾದರೂ ಒಂದು ಸಲ ಗದರಿಸಿಕೊಂಡರಾಯಿತು, ಓಡಿಹೋಗಿ ನೀರು ಹೊತ್ತು ತಂದು ಅವರ ಮನೆ ಬಾಗಿಲಲ್ಲಿ ಚಿಮುಕಿಸುತ್ತಾನೆ."

ಮೊಹಸಿನ್ ಸೋತುಹೋದ. ಆದರೆ ಮಹಮೂದ್ ಅವನ ಪಕ್ಷ ವಹಿಸುತ್ತ ಹೇಳಿದ – "ಆದರೆ ಮಗ ಸಿಕ್ಕಿಬಿದ್ದಾಗ ಕೈಬೇಡಿ ಹಾಕ್ಕೊಂಡು ಕೋರ್ಟಿಗೆ ಅಲೆಯಬೇಕಾಗುತ್ತೆ. ಆಗ ವಕೀಲ ಸಾಹೇಬರ ಕಾಲು ಕಟ್ಟದೇ ವಿಧಿಯಿಲ್ಲ."

ಈ ಪ್ರಬಲವಾದ ತರ್ಕಕ್ಕೆ ಹಾಮೀದ್ ಜವಾಬು ಕೊಡಲಾಗಲಿಲ್ಲ. ಅವನು ಕೇಳಿದ – "ನಮ್ಮನ್ನ ಹಿಡಿಯೋರು ಯಾರಿದಾರಂತೆ ?"

ನೂರೆ ಎದೆಯೆತ್ತಿ ಹೇಳಿದ – "ಈ ಬಂದೂಕಿನ ಸಿಪಾಯಿ !"

ಹಾಮೀದ್ ಸಿಟ್ಟಿಗೆದ್ದ – "ಈ ಬಡಪಾಯಿ ನಮ್ಮ ಬಹದ್ದೂರ್ ಭಾರತವೀರನನ್ನು ಹಿಡೀತಾನೆಯೆ ? ಒಳ್ಳೇದು, ಕರಕೊಂಡು ಬಾ. ಒಂದು ಕೈ ನೋಡೋಣಂತೆ ಇದರ

ಮುಖ ನೋಡಿದರೆ ಸಾಕು, ದೂರದಿಂದಲೇ ಓಡಿ ಹೋಗುತ್ತಾನೆ. ಏನು ಹಿಡೀತಾನೆ, ಬಡಪಾಯಿ !"

ಮೊಹಸಿನ್‌ಗೆ ಒಂದು ಹೊಸ ಪಟ್ಟು ಹೊಳೆಯಿತು – "ನಿನ್ನ ಇಕ್ಕಳದ ಮುಖ ದಿನಾಲೂ ಬೆಂಕೀಲಿ ಸುಡುತ್ತೆ."

ಹಾಮೀದ್ ನಿರುತ್ತರನಾಗುವನೆಂದು ಅವನಂದುಕೊಂಡಿದ್ದ. ಆದರೆ ಹಾಗಾಗಲಿಲ್ಲ. ಹಾಮೀದ್ ತಕ್ಷಣ ಉತ್ತರ ಕೊಟ್ಟ – "ಬೆಂಕೀಲಿ ಹಾರೋರು ಅಂದರೆ ಬಹದ್ದೂರರೇ ಕಣಪ್ಪಾ ! ನಿಮ್ಮ ಈ ವಕೀಲ, ಈ ಸಿಪಾಯಿ, ಈ ನೀರಾಳುಗಳೆಲ್ಲಾ ಹೇಡಿಗಳಂತೆ ಮನೇಲಿ ಅವಿತುಕೊಂಡಿರ್ತಾರೆ. ಬೆಂಕೀಲಿ ಹಾರೋದು ಅಂದರೆ ಭಾರತವೀರರು ಮಾಡೋ ಕೆಲಸ."

ಮಹಮೂದ್ ಇನ್ನೂ ಒಂದು ಪಟ್ಟ ಹಾಕಿದ – "ವಕೀಲ ಸಾಹೇಬರು ಕುರ್ಚಿಯ ಮೇಲೆ ಕೂತ್ಕೋತಾರೆ. ನಿನ್ನ ಇಕ್ಕಳ ಅಡಿಗೇಮನೇಲಿ ನೆಲದ ಮೇಲೆ ಬಿದ್ದಿರುತ್ತೆ."

ಈ ತರ್ಕದಿಂದ ಸಮ್ಮಿ, ನೂರೆಯರಿಗೆ ಜೀವ ಬಂದಿತು. ಈ ಗಂಡು ಎಂಥ ಭಾರೀ ಮಾತಾಡಿದ. ಅಡಿಗೇಮನೇಲಿ ಬಿದ್ದಿರೋದರ ಹೊರತು ಇಕ್ಕಳ ಇನ್ನೇನು ತಾನೆ ಮಾಡಬಲ್ಲದು ?

ಹಾಮೀದನಿಗೆ ತಕ್ಷಣ ಯಾವ ಚುರುಕಾದ ಜವಾಬೂ ಹೊಳೆಯಲಿಲ್ಲ. ಅವನು ಜಗಳಕ್ಕೆ ಷುರು ಮಾಡಿದ – "ನನ್ನ ಇಕ್ಕಳವೇನೂ ಅಡಿಗೇಮನೇಲಿ ಕೂತಿರೋಲ್ಲ. ವಕೀಲ ಸಾಹೇಬರು ಕುರ್ಚಿಯ ಮೇಲೆ ಕೂತಾಗ ಹೋಗಿ ಅವರನ್ನ ನೆಲಕ್ಕೆ ಕೆಡವುತ್ತೆ; ಅವರ ಕಾಯಿದೇನ ಎತ್ತಿಕೊಂಡು ಅವರ ಹೊಟ್ಟೆ ಮೇಲೇ ಕುಕ್ಕುತ್ತೆ."

ಯಾವ ಇತ್ಯರ್ಥವೂ ಆಗಲಿಲ್ಲ. ಬರಿಯ ಜಗಳ ಬೈಗಳಗಳಾದವು, ಅಷ್ಟೇ. ಕಾಯಿದೆಯನ್ನು ಎತ್ತಿ ಹೊಟ್ಟೆಯ ಮೇಲೆ ಕುಕ್ಕುವ ಮಾತು ಎಲ್ಲರ ಗಮನವನ್ನೂ ಸೆಳೆಯಿತು. ಮೂವರು ವೀರರೂ ಒಬ್ಬರ ಮುಖವನ್ನೊಬ್ಬರು ನೋಡುತ್ತ ಇದ್ದರು. ಅರ್ಧಾಣೆಯ ಪಟ ಒಂದಾಣೆಯ ಪಟವನ್ನು ಗೋತ ಹೊಡೆಸಿದಂತಾಗಿತ್ತು. ಕಾಯಿದೆ ಬಾಯಿಂದ ಆಡುವ ವಿಷಯ; ಅವನ್ನೆತ್ತಿ ಹೊಟ್ಟೆಯ ಮೇಲೆ ಕುಕ್ಕುವುದು ಅಸಂಬಂದ್ಧವಾಗಿ ತೋರಿದರೂ ಅದರಲ್ಲಿ ಹೊಸತನವಿತ್ತು. ಹಾಮೀದ್ ಗೆದ್ದ. ಅವನ ಇಕ್ಕಳ ಭಾರತವೀರ. ಈಗ ಮೊಹಸಿನ್, ಮಹಮೂದ್, ನೂರೆ, ಸಮ್ಮಿ ಯಾರಿಗೂ ಈ ಬಗ್ಗೆ ಅಭ್ಯಂತರವಿರಲಿಲ್ಲ.

ಗೆದ್ದವರಿಗೆ ಸೋತವರಿಂದ ಸ್ವಾಭಾವಿಕವಾಗಿ ಸಿಗುವ ಗೌರವನೇ ಹಾಮೀದನಿಗೂ ದೊರೆಯಿತು. ಉಳಿದವರು ಮೂರುಮೂರು ನಾಲ್ಕುನಾಲ್ಕು ಆಣೆ ಖರ್ಚು ಮಾಡಿದ್ದರು. ಆದರೆ ಅವರಾರೂ ಯಾವ ಉಪಯುಕ್ತವಾದ ಸಾಮಾನನ್ನೂ ಕೊಂಡಿರಲಿಲ್ಲ. ಹಾಮೀದ್ ಮೂರು ಬಿಲ್ಲೆಯಲ್ಲಿ ಕಳೆ ಕಟ್ಟಿಸಿದ್ದ. ನಿಜ, ಬೊಂಬೆಗಳದ್ದು ಯಾವ ಭರವಸೆ ? ಹಾಮೀದನ ಇಕ್ಕಳವಾದರೋ ವರ್ಷಗಟ್ಟಲೆ ಹಾಗೆಯೇ ಇರುತ್ತದೆ.

ಸಂಧಿಯ ಷರತ್ತುಗಳನ್ನು ನಿರ್ಧರಿಸಿದ್ದಾಯಿತು. ಮೊಹಸಿನ್ ಹೇಳಿದ – "ಸ್ವಲ್ಪ

ನಿನ್ನ ಇಕ್ಕಳ ಕೊಡು, ನಾವೂ ನೋಡ್ತೀವಿ. ನೀನು ನಮ್ಮ ನೀರಾಳನ್ನ ತೊಗೊಂಡು ನೋಡು.''

ನೂರೆ ಮತ್ತು ಮಹಮೂದರೂ ತಮ್ಮ ತಮ್ಮ ಬೊಂಬೆಗಳನ್ನು ಮುಂದಿಟ್ಟರು. ಹಾಮೀದನಿಗೆ ಈ ಷರತ್ತುಗಳನ್ನು ಒಪ್ಪಲು ಅಡ್ಡಿಯಿರಲಿಲ್ಲ. ಒಬ್ಬರಾದ ಮೇಲೆ ಒಬ್ಬರಂತೆ ಎಲ್ಲರೂ ಇಕ್ಕಳವನ್ನು ನೋಡಿದರು. ಅವರ ಬೊಂಬೆಗಳೂ ಒಂದಾದ ಮೇಲೆ ಒಂದರಂತೆ ಹಾಮೀದನ ಕೈಗೆ ಬಂದವು. ಬೊಂಬೆಗಳು ಎಷ್ಟು ಮುದ್ದಾಗಿದ್ದವು !

ಹಾಮೀದ್ ಸೋತವರ ಕಣ್ಣೊರಸಿದ – ''ನಿಜ ಹೇಳಬೇಕು ಅಂದರೆ ನಾನು ನಿಮ್ಮನ್ನ ಚುಡಾಯಿಸ್ತಿದ್ದೆ. ಈ ಬೊಂಬೆಗಳ ಮುಂದೆ ನನ್ನ ಕಬ್ಬಿಣದ ಇಕ್ಕಳ ಏನು ಮಹಾ ! ಅವು ಇನ್ನೇನು ಬಾಯಿ ತೆಗೆದು ಮಾತಾಡುತ್ತವೆಯೋ ಅನ್ನೋ ಹಾಗಿದೆ.''

ಆದರೆ ಮೊಹಸಿನ್ನನ ತಂಡಕ್ಕೆ ಈ ಸಮಾಧಾನದ ಮಾತಿನಿಂದ ಏನೂ ಸಂತೋಷವಾಗಲಿಲ್ಲ. ಅವರ ಮನಸ್ಸಿನ ಮೇಲೆ ಇಕ್ಕಳದ ಮುದ್ರೆ ಬಲವಾಗಿ ಒತ್ತಿತ್ತು; ಅಂಟಿಕೊಂಡ ಅಂಚೆಚೀಟಿ ಈಗ ನೀರಿನಲ್ಲಿ ನೆನಸಿದರೂ ತೆಗೆಯಲು ಬರುತ್ತಿರಲಿಲ್ಲ.

ಮೊಹಸಿನ್ – ''ಆದರೆ ಈ ಬೊಂಬೆಗಳನ್ನ ನೋಡಿ ಯಾರೂ ಒಂದು ಒಳ್ಳೇ ಮಾತಾಡೋಲ್ಲ.''

ಮಹಮೂದ್ – ''ಒಳ್ಳೇ ಮಾತು ಆಡೋದು ಹಾಗಿರಲಿ, ಬಯ್ಯದೇ ಇದ್ದರೆ ಸಾಲದೆ ? ಜಾತ್ರೇಲಿ ನಿಮಗೆ ಈ ಮಣ್ಣಿನ ಬೊಂಬೆ ಬಿಟ್ಟು ಬೇರೆ ಏನೂ ಸಿಗಲಿಲ್ಲವೆ ಅಂತ ಅಮ್ಮ ಕೇಳಿಯೇ ಕೇಳ್ತಾಳೆ.''

ಇಕ್ಕಳವನ್ನು ನೋಡಿ ಅಜ್ಜಿಗೆ ಸಂತೋಷವಾಗುವಷ್ಟು ಬೊಂಬೆಗಳನ್ನು ನೋಡಿ ಉಳಿದವರ ತಾಯಿಂದಿರಿಗೆ ಸಂತೋಷವಾಗುವುದಿಲ್ಲವೆಂದು ಹಾಮೀದ್ ಒಪ್ಪಿಕೊಳ್ಳಬೇಕಾಯಿತು. ಏನಿದ್ದರೂ ಮೂರು ಬಿಲ್ಲೆಗಳಲ್ಲಿ ಅವನು ತನ್ನೆಲ್ಲ ವ್ಯವಹಾರವನ್ನೂ ಮುಗಿಸಬೇಕಾಗಿತ್ತು; ಆ ದುಡ್ಡು ಹೀಗೆ ಉಪಯೋಗಕ್ಕೆ ಬಂದುದಕ್ಕೆ ಅವನು ಪಶ್ಚಾತ್ತಾಪಪಡುವ ಅಗತ್ಯವಿರಲಿಲ್ಲ. ಮತ್ತೆ ಈಗ ಇಕ್ಕಳ ಭಾರತವೀರನಾಯಿತು; ಬೊಂಬೆಗಳೆಲ್ಲಕ್ಕೂ ರಾಜನಾಯಿತು.

ದಾರಿಯಲ್ಲಿ ಮಹಮೂದನಿಗೆ ಹಸಿವಾಯಿತು. ಅವನ ತಂದೆ ತಿನ್ನಲು ಬಾಳೆಹಣ್ಣು ಕೊಟ್ಟರು. ಮಹಮೂದ್ ಕೇವಲ ಹಾಮೀದನೊಬ್ಬನಿಗೆ ಅವರಲ್ಲಿ ಪಾಲುಕೊಟ್ಟ. ಉಳಿದ ಸ್ನೇಹಿತರು ಪರಸ್ಪರ ಮುಖ ನೋಡುತ್ತ ನಿಂತಿದ್ದರು. ಇದು ಆ ಇಕ್ಕಳದ ಪ್ರಸಾದ !

ಹನ್ನೊಂದು ಗಂಟೆಯ ಹೊತ್ತಿಗೆ ಹಳ್ಳಿಯಲ್ಲಿ ಕೋಲಾಹಲವೆದ್ದಿತು. ಜಾತ್ರೆಗೆ ಹೋಗಿದ್ದವರು ಹಿಂದಿರುಗಿದ್ದರು. ಮೊಹಸಿನ್ನನ ತಂಗಿ ಓಡಿಬಂದು ಅವನ ಕೈಯಿಂದ ನೀರಾಳು ಬೊಂಬೆಯನ್ನು ಕಿತ್ತುಕೊಂಡು ಸಂತೋಷ ತಡೆಯಲಾರದೆ ಕುಣಿದಾಡತೊಡಗಿದಳು. ಆ ಆರ್ಭಟಕ್ಕೆ ನೀರಾಳು ಕೆಳಗುರುಳಿ ಸ್ವರ್ಗ ಸೇರಿದ. ಇದರಿಂದಾಗಿ ಅಣ್ಣತಂಗಿಯರ ನಡುವೆ ಹೊಡೆದಾಟಕ್ಕೆ ಷುರುವಾಯಿತು. ಇಬ್ಬರೂ ಚೆನ್ನಾಗಿ ಅತ್ತರು. ಈ ಗದ್ದಲ ಕೇಳಿ ಅವರ ತಾಯಿಗೆ ರೇಗಿತು: ಬೊಂಬೆ ಹೋದದ್ದು

ಸಾಲದೆಂಬಂತೆ ಮೇಲೆ ಇಬ್ಬರಿಗೂ ಕಪಾಳಕ್ಕೆ ಎರಡೆರಡು ಸಿಕ್ಕಿತು.

ನೂರೆಯ ವಕೀಲನ ಅಂತ್ಯ ಅವನ ಯೋಗ್ಯತೆಗೆ ತಕ್ಕಂತೆ ಇದಕ್ಕಿಂತ ಹೆಚ್ಚು ಗೌರವ ಪೂರ್ಣವಾಗಿತ್ತು. ವಕೀಲ ನೆಲದ ಮೇಲೆ ಇಲ್ಲವೇ ಬಡುವಿನ ಮೇಲೆ ಕುಳಿತುಕೊಳ್ಳುವುದುಂಟೆ? ಅವನ ಮರ್ಯಾದೆಯನ್ನು ಗಮನಿಸಬೇಡವೆ? ಗೋಡೆಗೆ ಎರಡು ಗೂಟ ಹೊಡೆದು ಅದರ ಮೇಲೆ ಒಂದು ಮಣೆ ಇಟ್ಟಿದ್ದಾಯಿತು. ಮಣೆಯ ಮೇಲೆ ಕಾಗದದ ಜಮಖಾನೆ ಹಾಸಲಾಯಿತು. ವಕೀಲ ಸಾಹೇಬರು ಭೋಜರಾಜನಂತೆ ಸಿಂಹಾಸನದ ಮೇಲೆ ವಿರಾಜಮಾನರಾದರು. ಕೋರ್ಟಿನಲ್ಲಾದರೋ ಸುತ್ತಲೂ ಲಾಮಂಚದ ತಡಿಕೆ ಕಟ್ಟಿ ತಣ್ಣೀರೆರಚುತ್ತಿರುತ್ತಾರೆ; ಮೇಲೆ ವಿದ್ಯುತ್ ಬೀಸಣಿಗೆಗಳು ತಿರುಗುತ್ತಿರುತ್ತವೆ. ಇಲ್ಲಿ ಸಾಧಾರಣ ಬೀಸಣಿಗೆಯಾದರೂ ಬೇಡವೆ! ಕಾಯಿದೆಯ ಬೇಗೆ ವಕೀಲರ ತಲೆಗೇರುವುದಿಲ್ಲವೆ? ಬಿದುರಿನ ಬೀಸಣಿಗೆ ಬಂತು. ನೂರೆ ಗಾಳಿ ಹಾಕಲು ಷುರು ಮಾಡಿದ. ಬೀಸಣಿಗೆಯ ಗಾಳಿಗೋ ಅಥವಾ ಬೀಸಣಿಗೆಯೇ ತಾಕಿ ಆದ ಪೆಟ್ಟಿನಿಂದಲೋ ವಕೀಲ ಸಾಹೇಬರು ಸ್ವರ್ಗಲೋಕದಿಂದ ಮೃತ್ಯುಲೋಕಕ್ಕೇರಿದರು; ಮಣ್ಣಿನ ಬೊಂಬೆ ಮಣ್ಣು ಸೇರಿತು. ಹುಡುಗರು ಜೋರಾಗಿ ಅತ್ತು ಕರೆಯುತ್ತ ವಕೀಲ ಸಾಹೇಬರ ಸಾವಿಗೆ ದುಃಖಿಸಿದರು; ಅವರ ಅಸ್ಥಿ ತಿಪ್ಪೆಯ ಗುಂಡಿ ಸೇರಿತು.

ಇನ್ನು ಉಳಿದದ್ದೆಂದರೆ ಮಹಮೂದನ ಸಿಪಾಯಿ. ಅವನಿಗೆ ತಕ್ಷಣ ಹಳ್ಳಿಯ ಪಹರೆ ಕಾಯುವ ಚಾರ್ಜು ಸಿಕ್ಕಿತು. ಬರಿಗಾಲಲ್ಲಿ ನಡೆದಾಡುವುದಕ್ಕೆ ಅವನೇನು ಸಾಧಾರಣ ಮನುಷ್ಯನೇ! ಪೋಲೀಸ್ ಸಿಪಾಯಿ. ಅವನು ಪಲ್ಲಕ್ಕಿಯ ಮೇಲೆಯೇ ಓಡಾಡುವುದು. ಒಂದು ಬಿದುರಿನ ಗೂಡೆ ಬಂತು; ಅದರಲ್ಲಿ ಸಿಪಾಯಿ ಸಾಹೇಬರು ಆರಾಮವಾಗಿ ಮಲಗಲೆಂದು ಯಾವದೋ ಕೆಂಪು ಬಣ್ಣದ ಹಳೆಯ ಹರಿದ ಚಿಂದಿಯನ್ನು ಹಾಸಲಾಯಿತು. ಮಹಮೂದ್ ಆ ಗೂಡೆಯನ್ನೆತ್ತಿಕೊಂಡು ತಮ್ಮ ಮನೆಯ ಮುಂದೆ ಅತ್ತಿಂದಿತ್ತ ಓಡಾಡತೊಡಗಿದ. ಅವನ ಇಬ್ಬರ ತಮ್ಮಂದಿರು ಸಿಪಾಯಿಗಳಂತೆ 'ಹುಷಾರ್! ಎಚ್ಚರವಾಗಿರಿ' ಎಂದು ಕೂಗುತ್ತ ಗೂಡೆಯ ಹಿಂದೆ ನಡೆದರು. ಆದರೆ ರಾತ್ರಿಯೆಂದಮೇಲೆ ಕತ್ತಲಿರಬೇಕಲ್ಲವೆ? ಮಹಮೂದ್ ಎಡವಿ ಬಿದ್ದ. ಗೂಡೆ ಕೈಯಿಂದ ಜಾರಿ ಕೆಳಗೆ ಬಿತ್ತು. ಸಿಪಾಯಿಸಾಹೇಬ ಬಂದೂಕದ ಸಮೇತ ನೆಲಕ್ಕೆ ಬಿದ್ದ. ಅವನ ಒಂದು ತೊಡೆ ಮುರಿಯಿತು. ಮಹಮೂದನಿಗೆ ತಾನು ಒಳ್ಳೆಯ ಡಾಕ್ಟರೆಂಬುದು ಇವತ್ತು ಅರಿವಾಯಿತು. ಮುರಿದ ತೊಡೆಯನ್ನು ತಕ್ಷಣ ಒಂದುಗೂಡಿಸುವಂತಹ ಅದ್ಭುತವಾದ ಒಂದು ಔಷಧಿಯನ್ನು ಅವನು ಬಲ್ಲ. ಅದನ್ನು ತಯಾರಿಸಲು ಅತ್ತಿಯ ಹಾಲು ಬೇಕು. ಅತ್ತಿಯ ಹಾಲೂ ಬರುತ್ತದೆ. ತೊಡೆಯನ್ನು ಕೂಡಿಸಲಾಗುತ್ತದೆ. ಆದರೆ ಸಿಪಾಯಿಯನ್ನು ಎತ್ತಿ ನಿಲ್ಲಿಸಿದರೆ ಅವನು ಅಲ್ಲೇ ತೊಡೆ ಮುರಿದುಕೊಂಡು ಬೀಳುತ್ತಾನೆ. ಶಲ್ಯಕ್ರಿಯೆ ನಡೆಯುತ್ತದೆ. ಅದೂ ಅಸಫಲವಾದಾಗ ಸಿಪಾಯಿಯ ಇನ್ನೊಂದು ಕಾಲನ್ನೂ ಮುರಿದು ಹಾಕುತ್ತಾರೆ. ಈಗ ಅವನು ಒಂದು ಕಡೆ ನೆಟ್ಟಗೆ ಕುಳಿತಾದರೂ ಕುಳಿತುಕೊಳ್ಳಬಹುದು. ಒಂಟಿಕಾಲಿನಲ್ಲಿ ಆತನಿಗೆ ನಡೆಯಲೂ ಆಗುತ್ತಿರಲಿಲ್ಲ; ಕೂರಲೂ ಆಗುತ್ತಿರಲಿಲ್ಲ. ಈಗ ಸಿಪಾಯಿ

ಸನ್ಯಾಸಿಯಾಗಿದ್ದಾನೆ. ಕುಳಿತಲ್ಲೇ ಕುಳಿತು ಪಹರೆ ಕಾಯುತ್ತಾನೆ. ಒಮ್ಮೊಮ್ಮೆ ಅವನು ದೇವತೆಯೂ ಆಗುತ್ತಾನೆ. ಅವನ ತಲೆಯ ಮೇಲಿದ್ದ ಕುಚ್ಚಿನ ರುಮಾಲನ್ನು ಕಿರೆದು ತೆಗೆದುಹಾಕಿದ್ದಾರೆ. ಈಗ ಅವನನ್ನು ಎಷ್ಟು ಬೇಕಾದರೂ ರೂಪಾಂತರಗೊಳಿಸಬಹುದು. ಆಗಾಗ ಅವನನ್ನು ತೂಗುವ ಬಟ್ಟಾಗಿಯೂ ಉಪಯೋಗಿಸುತ್ತಾರೆ.

ಇನ್ನು ಹಾಮೀದನ ಕಥೆ ಕೇಳಿ. ಅವನ ಧ್ವನಿ ಕೇಳುತ್ತಲೇ ಅಜ್ಜಿ ಅಮೀನಾ ಓಡಿಬಂದು ಅವನನ್ನು ತೊಡೆಯ ಮೇಲೆತ್ತಿಕೊಂಡು ಮುದ್ದಿಸತೊಡಗಿದಳು. ಇದ್ದಕ್ಕಿದ್ದಂತೆ ಅವನ ಕೈಯಲ್ಲಿದ್ದ ಇಕ್ಕಳವನ್ನು ಕಂಡು ಹೌಹಾರಿದಳು.

"ಈ ಇಕ್ಕಳ ಎಲ್ಲಿತ್ತು ?"

"ನಾನು ಕೊಂಡುಕೊಂಡು ಬಂದೆ."

"ಎಷ್ಟು ದುಡ್ಡು ಕೊಟ್ಟೆ ?"

"ಮೂರು ಬಿಲ್ಲೆ ಕೊಟ್ಟೆ."

ಅಮೀನಾ ಎದೆ ಎದೆ ಚಚ್ಚಿಕೊಂಡಳು. ಎಂಥ ಅವಿವೇಕಿ ಹುಡುಗ, ಮಧ್ಯಾಹ್ನವಾದರೂ ಒಂದು ತಿನ್ನಲಿಲ್ಲ, ಕುಡಿಯಲಿಲ್ಲ. ತಂದದ್ದೇನು, ಇಕ್ಕಳ ! ಈ ಕಬ್ಬಿಣದ ಇಕ್ಕಳ ತೊಗೊಂಡು ಬಂದಿದೀಯಲ್ಲ, ಇಡೀ ಜಾತ್ರೇಲಿ ಕೊಂಡುಕೊಳ್ಳೋಕೆ ನಿನಗೆ ಇನ್ನೇನೂ ಸಿಗಲಿಲ್ಲವೆ ?

ಹಾಮೀದ್ ಅಪರಾಧಿಯಂತೆ ಹೇಳಿದ – "ಬಿಸಿ ಕಾವಲಿಗೆ ತಾಕಿ ತಾಕಿ ನಿನ್ನ ಕೈಬೆರಳು ಸುಟ್ಟುಹೋಗ್ತಿತ್ತಲ್ಲಾ ಅಂತ ಅದನ್ನ ತಂದೆ."

ಮುದುಕಿಯ ಕೋಪ ತಕ್ಷಣ ಪ್ರೀತಿಗೆ ತಿರುಗಿತು. ತನ್ನ ಮೊನಚೆಲ್ಲವನ್ನೂ ಶಬ್ದಗಳಲ್ಲಿ ಎರಚಾಡುವಂತಹ ಪ್ರಗಲ್ಭವಾದ ಪ್ರೀತಿ ಅದಲ್ಲ. ರಸ, ರುಚಿ, ತಿರುಳುಗಳಿಂದ ತುಂಬಿದ ಮೂಕ ಪ್ರೀತಿ ಅದು. ಮಕ್ಕಳಲ್ಲಿ ಎಂತಹ ತ್ಯಾಗ, ಸದ್ಭಾವನೆ, ವಿವೇಕ ಇರುತ್ತದೆ ! ಉಳಿದವರು ಆಟದ ಸಾಮಾನು ಕೊಳ್ಳುವುದನ್ನು ನೋಡಿ, ಮಿಠಾಯಿ ತಿನ್ನುವುದನ್ನು ನೋಡಿ ಇವನ ಮನಸ್ಸು ಅದೆಷ್ಟು ಆಸೆಗೊಂಡಿರಬೇಡ ! ಇಷ್ಟೊಂದು ಸಂಯಮ ಇವನಿಗೆಲ್ಲಿ ಬಂತು ! ಜಾತ್ರೆಯಲ್ಲಿ ಸಹ ಇವನು ತನ್ನ ಮುದಿ ಅಜ್ಜಿಯನ್ನು ನೆನಸಿಕೊಳ್ಳುತ್ತಿದ್ದನಲ್ಲ. ಅಮೀನಳ ಗಂಟಲು ಗದ್ಗದವಾಯಿತು.

ಈಗ ಇನ್ನೂ ಒಂದು ವಿಚಿತ್ರ ನಡೆಯಿತು. ಹಾಮೀದನ ಇಕ್ಕಳಕ್ಕಿಂತಲೂ ದೊಡ್ಡ ವಿಚಿತ್ರ. ಮಗು ಹಾಮೀದ್ ಮುದುಕ ಹಾಮೀದನ ಪಾತ್ರವಾಡಿದ್ದ. ಮುದುಕಿ ಅಮೀನಾ ಮಗು ಅಮೀನಳಾದಳು. ಅವಳು ಒಂದೇ ಸಮನೆ ಅಳತೊಡಗಿದಳು. ಹಾಮೀದನಿಗೆ ಒಳ್ಳೆಯದಾಗಲೆಂದು ದೇವರಿಗೆ ಸೆರಗೊಡ್ಡಿ ಬೇಡಿಕೊಳ್ಳುತ್ತಿದ್ದಳು. ಅವಳ ಕಣ್ಣಿಂದ ದಪ್ಪ ದಪ್ಪ ಕಣ್ಣೀರಿನ ಹನಿ ಉದುರುತ್ತಿತ್ತು. ಹಾಮೀದ ಇದರ ರಹಸ್ಯವನ್ನೇನು ಬಲ್ಲ !

# 7. ಹೆಣದ ಬಟ್ಟೆ

ಅಪ್ಪ ಮಗ ಇಬ್ಬರೂ ಜೋಪಡಿಯ ಬಾಗಿಲಲ್ಲಿ ಆರಿಹೋದ ಅಗ್ಗಿಷ್ಟಿಕೆಯ ಮುಂದೆ ಮೌನವಾಗಿ ಕುಳಿತಿದ್ದರು. ಒಳಗೆ ಮಗನ ಪ್ರಾಯದ ಹೆಂಡತಿ ಬುಧಿಯಾ ಪ್ರಸವವೇದನೆಯಿಂದ ನರಳಾಡುತ್ತಿದ್ದಳು. ಬಿಟ್ಟು ಬಿಟ್ಟು ಅವಳ ಬಾಯಿಂದ ಎದೆ ನಡುಗಿಸುವಂತಹ ಶಬ್ದ ಬರುತ್ತಿತ್ತು; ಅದನ್ನು ಕೇಳಿದಾಗ ಅಪ್ಪ ಮಕ್ಕಳಿಬ್ಬರೂ ಎದೆ ಹಿಡಿದುಕೊಳ್ಳುತ್ತಿದ್ದರು. ಚಳಿಯ ರಾತ್ರಿ; ಪ್ರಕೃತಿ ಮೌನದಲ್ಲಿ ಮುಳುಗಿತ್ತು. ಹಳ್ಳಿಗೆ ಹಳ್ಳಿಯೇ ಕತ್ತಲಲ್ಲಿ ಕರಗಿಹೋಗಿತ್ತು.

ಘೀಸು ಹೇಳಿದ – "ನೋಡಿದರೆ ಉಳಿಯೋಲ್ಲ ಅಂತ ಕಾಣುತ್ತೆ. ಇಡೀ ದಿನ ಅಲೆದಾಡೋದರಲ್ಲೇ ಹೋಯಿತು. ಹೋಗು, ಏನಾಗ್ತಿದೆ ಅಂತ ನೋಡಿಕೊಂಡು ಬಾ."

ಮಾಧವ ಕೋಪದಿಂದ ಹೇಳಿದ – "ಸಾಯೋದೇ ಆದರೆ ಬೇಗ ಯಾಕೆ ಸಾಯಬಾರದು ! ನೋಡಿ ಏನು ಮಾಡಲಿ ?"

"ನೀನು ಮಹಾ ನಿಷ್ಕರುಣಿ ಕಣೋ ! ವರ್ಷಪೂರ್ತಿ ಯಾರ ಕೂಡ ಸುಖಸಂತೋಷದಲ್ಲಿ ಕಳೆದೆಯೋ ಅವಳಿಗೆ ಇಷ್ಟು ವಿಶ್ವಾಸಗೇಡಿಯಾಗೋದೆ !"

"ನನ್ನಿಂದ ಅವಳ ಗೋಳಾಟಾನ, ಅವಳು ಕೈಕಾಲು ಬಡಿಯೋದನ್ನ ನೋಡೋಕ್ಕೆ ಆಗೋಲ್ಲ."

ಅವರು ಚಮ್ಮಾರ ಜಾತಿಯವರು. ಇಡೀ ಹಳ್ಳಿಯಲ್ಲಿ ಕೆಟ್ಟ ಹೆಸರು ಸಂಪಾದಿಸಿದ್ದರು. ಅಪ್ಪ ಘೀಸು ಒಂದು ದಿನ ಕೆಲಸ ಮಾಡಿದರೆ ಮೂರು ದಿನ ಆರಾಮ ಮಾಡುತ್ತಿದ್ದ. ಮಗ ಮಾಧವ ಎಂತಹ ಮೈಗಳ್ಳನೆಂದರೆ ಅರ್ಧ ಗಂಟೆಯ ಕೆಲಸಕ್ಕೆ ಒಂದು ಗಂಟೆ ಚಿಲುಮೆ ಕುಡಿಯುತ್ತಿದ್ದ. ಇದರಿಂದಾಗಿ ಎಲ್ಲೂ ಕೂಲಿಗೆಲಸ ಸಿಗುತ್ತಿರಲಿಲ್ಲ. ಮನೆಯಲ್ಲಿ ಒಂದು ಹಿಡಿ ಕಾಳಿದ್ದರೆ ಸಾಕು ಕೆಲಸ ಮಾಡುವುದಿಲ್ಲವೆಂದು ಅವರು ಶಪಥ ಮಾಡಿದ್ದರು. ಒಂದೆರಡು ಹೊತ್ತು ಉಪವಾಸ ಬಿದ್ದಮೇಲೆ ಘೀಸು ಮರ ಹತ್ತಿ ಒಂದಿಷ್ಟು ಕೊಂಬೆ ಮುರಿದು ತರುತ್ತಿದ್ದ; ಮಾಧವ ಪೇಟೆಗೆ ಹೋಗಿ ಅದನ್ನು ಮಾರಿ ಬರುತ್ತಿದ್ದ. ಆ ಹಣ ಕೈಲಿರುವವರೆಗೆ ಇಬ್ಬರೂ ಅಲ್ಲಿ ಇಲ್ಲಿ ಅಲೆದಾಡುತ್ತ ಕಾಲಹಾಕುತ್ತಿದ್ದರು. ಹೊಟ್ಟೆಗಿಲ್ಲದ ಸ್ಥಿತಿ ಬಂದಾಗ ಮತ್ತೆ ಕೊಂಬೆ ಕಡಿಯುವುದು, ಇಲ್ಲವೇ ಕೂಲಿಗೆಲಸ ಹುಡುಕಿಕೊಂಡು.

ಓಡಾಡುವುದು. ಹಳ್ಳಿಯಲ್ಲಿ ಕೆಲಸಕ್ಕೇನೂ ಕೊರತೆಯಿರಲಿಲ್ಲ. ಬೇಸಾಯಗಾರರ ಹಳ್ಳಿಯೆಂದ ಮೇಲೆ ಮೈಮುರಿದು ದುಡಿಯುವವರಿಗೆ ಹತ್ತಾರು ಕೆಲಸ ಸಿಗುತ್ತದೆ. ಇಬ್ಬರಿಂದ ಕೂಡಿ ಒಬ್ಬ ಮಾಡುವಷ್ಟು ಕೆಲಸ ಪಡೆದು, ಅಷ್ಟರಿಂದಲೇ ತೃಪ್ತಿಯಾಗುವುದರ ವಿನಹ ಬೇರೆ ದಾರಿಯಿಲ್ಲವೆನ್ನುವ ಸ್ಥಿತಿ ಬಂದಾಗ ಮಾತ್ರ ಜನ ಅವರನ್ನು ಕೆಲಸಕ್ಕೆ ಕರೆಯುತ್ತಿದ್ದರು. ಇಬ್ಬರೂ ಸಾಧುಗಳಾದರೂ ಆಗಿದ್ದಿದ್ದರೆ ಯಾವ ಸಂಯಮನಿಯಮಗಳ ಅವಶ್ಯಕತೆಯೂ ಇಲ್ಲದೆ ಧೈರ್ಯ ಸಂತೋಷಗಳಿಂದ ಇರಬಹುದಾಗಿತ್ತು. ಹಾಗಿತ್ತು ಅವರ ಪ್ರಕೃತಿ! ಅವರದ್ದು ವಿಚಿತ್ರ ಜೀವನ. ಒಂದೆರಡು ಮಣ್ಣಿನ ಮಡಕೆಗಳನ್ನು ಬಿಟ್ಟರೆ ಅವರಿಗೆ ಬೇರೆ ಯಾವ ಆಸ್ತಿಯೂ ಇರಲಿಲ್ಲ. ಹರಿದ ಹಳೆಯ ಚಿಂದಿಯಿಂದ ತಮ್ಮ ಮಾನ ಮುಚ್ಚಿಕೊಂಡು ಬದುಕುತ್ತಿದ್ದರು. ಪ್ರಾಪಂಚಿಕ ಚಿಂತೆಗಳಿಂದ ಮುಕ್ತರಾಗಿದ್ದರು! ಸಾಲದ ಭಾರ ಹೇರಿಕೊಂಡಿತ್ತು. ಬೈಗಳವನ್ನೂ ಸಹಿಸುತ್ತಿದ್ದರು, ಏಟನ್ನೂ ತಿನ್ನುತ್ತಿದ್ದರು. ಆದರೂ ದುಃಖವೆಂಬುದು ಸ್ವಲ್ಪವೂ ಇರಲಿಲ್ಲ. ವಾಪಸು ಬರುವುದೆಂಬ ಆಸೆ ಏನೇನೂ ಇಲ್ಲದೆಯೇ ಜನ ಅವರಿಗೆ ಚೂರುಪಾರು ಸಾಲ ಕೊಡುತ್ತಿದ್ದರು – ಅಂತಹ ದೈನ್ಯವಿತ್ತು ಅವರಲ್ಲಿ. ಬಟಾಣಿ ಆಲೂಗೆಡ್ಡೆಗಳ ಕಾಲದಲ್ಲಿ ಇತರರ ಹೊಲದಿಂದ ಅವನ್ನು ಕಿತ್ತುತಂದು ಹುರಿದೋ ಸುಟ್ಟೋ ತಿನ್ನುತ್ತಿದ್ದರು. ಇಲ್ಲವೇ ನಾಲ್ಕೈದು ಕಬ್ಬಿನ ಜಲ್ಲೆ ಕಡಿದುತಂದು ರಾತ್ರಿಯ ಹೊತ್ತು ಅಗಿದು ತಿನ್ನುತ್ತಿದ್ದರು. ಇದೇ ಆಕಾಶ ವೃತ್ತಿಯಲ್ಲಿ ಘೀಸೂ ಅರುವತ್ತು ವರ್ಷ ಕಳೆದಿದ್ದ. ಮಾಧವ ಸುಪುತ್ರ; ಅಪ್ಪನ ಹೆಜ್ಜೆ ಹಿಡಿದು ನಡೆದಿದ್ದ. ಅಷ್ಟೇ ಅಲ್ಲ, ಅವನ ಹೆಸರು ಇನ್ನೂ ಉಜ್ಜಲವಾಗಿ ಬೆಳಗುತ್ತಿತ್ತು.

ಈಗ ಸಹ ಇಬ್ಬರೂ ಅಗ್ಗಿಷ್ಟಿಕೆಯ ಮುಂದೆ ಕುಳಿತು ಯಾರದೋ ಹೊಲದಿಂದ ಅಗೆದು ತಂದಿದ್ದ ಆಲೂಗೆಡ್ಡೆಯನ್ನು ಸುಡುತ್ತಿದ್ದರು. ಘೀಸುವಿನ ಹೆಂಡತಿ ಸತ್ತು ಎಷ್ಟೋ ಕಾಲವಾಗಿತ್ತು. ಮಾಧವ ಕಳೆದ ವರ್ಷ ತಾನೇ ಮದುವೆ ಮಾಡಿಕೊಂಡಿದ್ದ. ಹೆಂಡತಿ ಬಂದಂದಿನಿಂದ ಅವಳು ಮನೆಯಲ್ಲಿ ವ್ಯವಸ್ಥೆಯ ತಳಪಾಯ ಹಾಕಿದ್ದಳು. ಹಿಟ್ಟು ಬೀಸಿಯೋ, ಹುಲ್ಲು ಕತ್ತರಿಸಿಯೋ ದಿನವೂ ಸೇರಿನಷ್ಟು ಹಿಟ್ಟನ್ನು ಹೇಗೋ ಹೊಂದಿಸಿ ಈ ನಾಚಿಕೆಗೇಡಿಗಳ ಹಸಿದ ಹೊಟ್ಟೆ ತುಂಬಿಸುತ್ತಿದ್ದಳು. ಅವಳು ಬಂದಾಗಿನಿಂದ ಇವರಿಬ್ಬರೂ ಇನ್ನೂ ಹೆಚ್ಚು ಆಲಸಿಗಳೂ ಆರಾಮಪ್ರಿಯರೂ ಆಗಿಬಿಟ್ಟಿದ್ದರು. ಅಷ್ಟೇ ಅಲ್ಲ, ಕೊಂಚ ಜಂಬ ತೋರಿಸಲೂ ಶುರು ಮಾಡಿದ್ದರು. ಯಾರಾದರೂ ಕೆಲಸಕ್ಕೆ ಬರಹೇಳಿದರೆ ಹಿಂದೆಮುಂದೆ ನೋಡದೆ ಎರಡು ಪಟ್ಟು ಕೂಲಿ ಕೇಳುತ್ತಿದ್ದರು. ಈಗ ಅದೇ ಹೆಂಗಸು ಪ್ರಸವವೇದನೆಯಿಂದ ಸಾಯುತ್ತಿದ್ದಾಳೆ; ಪ್ರಾಯಶಃ ಇವರಿಬ್ಬರೂ ಅವಳು ಸತ್ತರೆ ತಾವು ಆರಾಮವಾಗಿ ನಿದ್ರೆ ಮಾಡಬಹುದೆಂದು ಕಾಯುತ್ತಿದ್ದಾರೋ ಏನೋ!

ಘೀಸು ಆಲೂಗೆಡ್ಡೆ ಎತ್ತಿಕೊಂಡು ಸಿಪ್ಪೆ ಸುಲಿಯುತ್ತ ಹೇಳಿದ – "ಹೋಗಿ ನೋಡಿ ಬಾರೋ, ಅವಳ ಸ್ಥಿತಿ ಹೇಗಿದೆ ಅಂತ. ಇನ್ನೇನು ಭೂತಚೇಷ್ಟೆ ಇರಬೇಕು. ಇಲ್ಲಂತೂ ದೆವ್ವ ಬಿಡಿಸೋಕ್ಕೆ ಓಝುನೂ* ಒಂದು ರೂಪಾಯಿ ತೊಗೋತಾನೆ!"

*ಮಂತ್ರಮಾಟಗಳಿಂದ ದೆವ್ವ ಭೂತ ಬಿಡಿಸುವ ವೃತ್ತಿಯವನು.

ತಾನು ಮನೆಯೊಳಗೆ ಹೋದರೆ ಎಲ್ಲಿ ಅಪ್ಪ ಆಲೂಗೆಡ್ಡೆಯ ಹೆಚ್ಚು ಭಾಗವನ್ನು ಮುಗಿಸಿಬಿಡುವನೋ ಎಂದು ಮಾಧವನಿಗೆ ಭಯ. ಅವನಂದ – "ನನಗಂತೂ ಒಳಗೆ ಹೋಗೋಕ್ಕೆ ಭಯವಾಗುತ್ತೆ!"

"ನಾನಿಲ್ಲೇ ಇರೋವಾಗ ಭಯ ಏತರದು ?"

"ಹಾಗಾದರೆ ನೀನೇ ಹೋಗಿ ಯಾಕೆ ನೋಡಿ ಬರಬಾರದು ?"

"ನನ್ನ ಹೆಂಡತಿ ಇರೋವಾಗ ಮೂರು ಜನ ಅವಳ ಬದಿ ಬಿಟ್ಟು ಅಲ್ಲಾಡಲಿಲ್ಲ! ನನ್ನನ್ನು ನೋಡಿದರೆ ಸೊಸೇಗೆ ನಾಚಿಕೆಯಾಗೋಲ್ಲವೆ ? ಇದುವರೆಗೆ ಯಾರ ಮುಖ ಸಹ ನೋಡಿಲ್ಲವೋ ಇವತ್ತು ಅವಳ ಬೆತ್ತಲೆ ಮೈ ನೋಡಲೆ ? ಅವಳಿಗೆ ಮೈಮೇಲೆ ಪ್ರಜ್ಞೆಯೂ ಇರಲಾರದೇನೋ? ಅವಳು ನನ್ನನ್ನು ನೋಡಿದರೆ ಬಿಡುಬೀಸಾಗಿ ಕೈಕಾಲು ಸಹ ಬಡೀಲಾರಳು !"

"ಮಗುವೇನಾದರೂ ಆಗಿಬಿಟ್ಟರೆ ಏನು ಗತಿ ಅಂತೀನಿ ? ಮನೇಲಿ ಶುಂಠಿ, ಬೆಲ್ಲ, ಎಣ್ಣೆ ಒಂದು ಚೂರೂ ಇಲ್ಲ."

"ಎಲ್ಲಾ ಬರುತ್ತೆ. ದೇವರು ಕೊಡೋವಾಗ, ಇದುವರೆಗೆ ಒಂದು ಕಾಸು ಸಹ ಬಿಚ್ಚದೇ ಇರೋ ಜನ ನಾಳೆ ತಾವಾಗಿಯೇ ಕರೆದು ರೂಪಾಯಿ ಕೊಡ್ತಾರೆ. ನನಗೆ ಒಂಬತ್ತು ಮಕ್ಕಳಾಗಿದ್ದವು. ಮನೇಲಿ ಯಾವಾಗಲೂ ಏನೂ ಇರ್ತಿರಲಿಲ್ಲ. ಆದರೆ ದೇವರು ಹೇಗೋ ಕಷ್ಟದಿಂದ ಪಾರುಮಾಡಿಯೇ ಮಾಡಿದ."

ಯಾರು ಸಮಾಜದಲ್ಲಿ ಹಗಲೂರಾತ್ರಿ ಶ್ರಮಪಡುವವರ ಸ್ಥಿತಿ ಸಹ ಇವರದ್ದಕ್ಕಿಂತ ಹೆಚ್ಚೇನೂ ಚೆನ್ನಾಗಿರಲಿಲ್ಲವೋ, ಎಲ್ಲಿ ರೈತರ ದೌರ್ಬಲ್ಯಗಳಿಂದ ಲಾಭ ಪಡೆಯುವುದನ್ನು ಬಲ್ಲ ಜನ ಅವರೊಂದಿಗೆ ವ್ಯವಹಾರ ಮಾಡಿ ಅವರಿಗಿಂತ ಹೆಚ್ಚು ಶ್ರೀಮಂತರಾಗಿದ್ದರೋ ಅಲ್ಲಿ ಇಂತಹ ಮನೋವೃತ್ತಿ ಹುಟ್ಟುವುದು ಆಶ್ಚರ್ಯವೇನಲ್ಲ. ಘೀಸು ರೈತರಿಗಿಂತ ಬಹುಪಾಲು ಹೆಚ್ಚು ಬುದ್ಧಿವಂತನೆಂದೇ ಹೇಳಬೇಕು. ಅವನು ವಿಚಾರ ಶೂನ್ಯರಾದ ರೈತರ ಗುಂಪಿನೊಂದಿಗೆ ಒಂದಾಗುವುದರ ಬದಲು ಕೆಲಸಗೇಡಿಗಳಾದ ಕೀಳು ಜನರ ತಂಡದಲ್ಲಿ ಹೋಗಿ ಸೇರಿಕೊಂಡಿದ್ದ. ಅವನಲ್ಲಿ ಆ ಜನರ ನೀತಿನಿಯಮಗಳನ್ನು ಪಾಲಿಸುವ ಶಕ್ತಿಯಿರಲಿಲ್ಲ ನಿಜ. ಈ ಕಾರಣದಿಂದಾಗಿ ಅವನ ಗುಂಪಿನ ಇತರರು ಹಳ್ಳಿಯ ಮುಖಂಡರೂ ಮುಂದಾಳುಗಳೂ ಆಗಿದ್ದರೆ ಇಡೀ ಹಳ್ಳಿ ಇವನನ್ನು ಕಂಡು ಹೀಯಾಳಿಸುತ್ತಿತ್ತು. ಆದರೂ ಸಹ, ತಾನು ದುಃಸ್ಥಿತಿಯಲ್ಲಿದ್ದರೇನಂತೆ ರೈತರಂತೆ ಮೈ ಮುರಿದು ಕೆಲಸ ಮಾಡಬೇಕಾಗಿಲ್ಲವಲ್ಲ ಎಂಬ ಸಮಾಧಾನ ಘೀಸುವಿಗಿತ್ತು. ಅವನ ಸರಳತೆ, ಶಾಂತಿಪ್ರಿಯತೆಗಳಿಂದ ಬೇರೆಯವರು ಅನುಚಿತವಾಗಿ ಲಾಭ ಪಡೆಯುವಂತಿರಲಿಲ್ಲ.

ಇಬ್ಬರೂ ಆಲೂಗೆಡ್ಡೆ ತೆಗೆದು ತೆಗೆದು ಇನ್ನೂ ಬಿಸಿಯಾಗಿರುವಾಗಲೇ ತಿನ್ನತೊಡಗಿದ್ದರು. ನಿನ್ನೆಯಿಂದ ಅವರೇನನ್ನೂ ತಿಂದಿರಲಿಲ್ಲ. ಆಲೂಗೆಡ್ಡೆ ಆರುವ ತನಕ ಕಾಯುವಷ್ಟು ಸಹ ಅವರಿಗೆ ತಾಳ್ಮೆಯಿರಲಿಲ್ಲ. ಎಷ್ಟೋ ಸಲ ಇಬ್ಬರ ನಾಲಿಗೆಯೂ ಸುಟ್ಟಿತು. ಸಿಪ್ಪೆ ಸುಲಿದ ಮೇಲೆ ಆಲೂಗೆಡ್ಡೆಯ ಹೊರಭಾಗ ತುಂಬ ಬಿಸಿಯಾಗಿರುವಂತೆ ತೋರುತ್ತಿರಲಿಲ್ಲ. ಆದರೆ ಕಚ್ಚಿದೊಡನೆಯೇ ನಾಲಿಗೆ, ಅಂಗಳು,

ಗಂಟಲುಗಳನ್ನು ಸುಡುತ್ತಿತ್ತು. ಆ ಸುಡುಗೆಂಡವನ್ನು ಬಾಯಲ್ಲಿ ಇಟ್ಟುಕೊಂಡಿರುವುದಕ್ಕಿಂತ ನುಂಗಿ ಹೊಟ್ಟೆಯೊಳಗೆ ಸೇರಿಸುವುದು ಎಷ್ಟೋ ಮೇಲೆನಿಸುತ್ತಿತ್ತು. ಅಲ್ಲಿ ಅವನ್ನು ತಣ್ಣಗೆ ಮಾಡಲು ಬೇಕಾದಷ್ಟು ಸಾಮಗ್ರಿಗಳಿದ್ದವು. ಇದರಿಂದಾಗಿ ಇಬ್ಬರೂ ಬೇಗ ಬೇಗ ನುಂಗಿಕೊಳ್ಳುತ್ತಿದ್ದರು. ಆದರೂ ಈ ಸಾಹಸದಿಂದಾಗಿ ಅವರ ಕಣ್ಣಲ್ಲಿ ನೀರು ಸುರಿಯುತ್ತಿತ್ತು.

ಘೀಸುವಿಗೆ ಇಪ್ಪತ್ತು ವರ್ಷಗಳ ಹಿಂದೆ ತಾನು ಭಾಗವಹಿಸಿದ್ದ ಠಾಕೂರನ ದಿಬ್ಬಣದ ನೆನಪಾಯಿತು. ಅವತ್ತಿನ ಊಟದಲ್ಲಿ ಸಿಕ್ಕಿದ್ದ ತೃಪ್ತಿ ಅವನ ಜೀವನದಲ್ಲಿನ ಸದಾ ನೆನಪಿಡುವ ಸಂಗತಿಯಾಗಿತ್ತು. ಇವತ್ತಿನವರೆಗೂ ಅದರ ನೆನಪು ಹಸನಾಗಿತ್ತು! ಅವನು ಹೇಳಿದ – "ಆ ಊಟಾನ ಮರೀಲಾರೆ. ಅದಾದ ಮೇಲೆ ಅಂಥ ಊಟ, ಅಷ್ಟು ಹೊಟ್ಟೆಭರ್ತಿಯಾಗಿ ಮತ್ತೆ ಸಿಕ್ಕಿಲ್ಲ ನೋಡು. ಹೆಣ್ಣಿನ ಕಡೆಯೋರು ಎಲ್ಲರಿಗೂ ಹೊಟ್ಟೆ ತುಂಬ ಪೂರಿ ಬಡಿಸಿದ್ದರು – ಎಲ್ಲರಿಗೂ! ಚಿಕ್ಕೋರು, ದೊಡ್ಡೋರು ಎಲ್ಲರೂ ಪೂರಿ ತಿಂದರು. ಅದೂ ಅಸಲೀ ತುಪ್ಪದಲ್ಲಿ ಕರಿದದ್ದು! ಚಟ್ನಿ, ರಾಯತ, ಮೂರು ತರಹ ಗಟ್ಟಿಪಲ್ಯ, ಒಂದು ನೀರುಪಲ್ಯ, ಮೊಸರು, ಮಿಠಾಯಿ. ಆ ಊಟ ಎಷ್ಟು ರುಚಿಯಾಗಿತ್ತು ಅಂತ ಈಗೇನು ಹೇಳಲಿ? ಯಾವ ಅಡೆತಡೆಯೂ ಇರಲಿಲ್ಲ. ಬೇಕಾದ್ದನ್ನ ಕೇಳಬಹುದಾಗಿತ್ತು. ಬೇಕಾದಷ್ಟು ತಿನ್ನಬಹುದಾಗಿತ್ತು. ಜನ ಹೇಗೆ ತಿಂದರು, ಹೇಗೆ ತಿಂದರು ಅಂದರೆ ಯಾರೂ ನೀರು ಸಹ ಕುಡೀಲಿಲ್ಲ. ಬಡಿಸೋರು ಬಿಸಿಬಿಸಿಯಾದ, ದುಂಡುದುಂಡಾದ, ಘಮ್ ಅನ್ನೋ ಕಚೋರೀನ* ಎಲೇಗೆ ಹಾಕಿಬಿಡೋರು. ಬೇಡ ಬೇಡ ಅಂದರೂ, ಎಲೆ ಮೇಲೆ ಅಡ್ಡಗೈ ಹಾಕಿ ತಡೆದರೂ ಬಡಿಸಿಬಿಡೋರು. ಕೈ ತೊಳೆದುಕೊಂಡಾದಮೇಲೆ ಏಲಕ್ಕಿ ಹಾಕಿ ಕಟ್ಟಿದ ಬೀಡವೂ ಸಿಕ್ಕಿತು. ಆದರೆ ನನಗೆ ಬೀಡ ಇಸಕೊಳ್ಳೋ ಅಷ್ಟು ಪ್ರಜ್ಞೆ ಎಲ್ಲಿತ್ತು? ನಿಂತುಕೊಳ್ಳೋಕ್ಕೆ ಆಗ್ತಿರಲಿಲ್ಲ. ದಡದಡ ಅಂತ ಹೋಗಿ ಕಂಬಳಿ ಹಾಸಿ ಮಲಕ್ಕೊಂಡುಬಿಟ್ಟೆ. ಹೊಳೆ ಹರಿದ ಹಾಗೆ ಹರಿಯೋ ಮನಸ್ಸು ಆ ಠಾಕೂರನದು."

ಈ ಎಲ್ಲ ಭಕ್ಷ್ಯಗಳ ರುಚಿಯನ್ನೂ ಮನಸ್ಸಿನಲ್ಲಿಯೇ ಸವಿಯುತ್ತ ಮಾಧವ ಹೇಳಿದ – "ಈಗ ನಮಗೆ ಯಾರೂ ಅಂಥ ಊಟ ಹಾಕೋಲ್ಲ."

"ಈಗ ಯಾರು ಏನು ಊಟ ಹಾಕಾರು? ಆ ಕಾಲ ಬೇರೆ ಇತ್ತು. ಈಗ ಎಲ್ಲರಿಗೂ ದುಡ್ಡುಳಿಸೋದೊಂದು ಗೊತ್ತು. ಮದುವೇಲಿ ಖರ್ಚು ಕೂಡದು, ಸತ್ತಾಗ ಖರ್ಚು ಕೂಡದು! ಬಡವರ ಹಣಾನ ಗುಡ್ಡೆ ಹಾಕಿಹಾಕಿ ಎಲ್ಲಿಡ್ತಾರಂತೆ ಇವರು. ಗುಡ್ಡೇ ಹಾಕೋದರಲ್ಲಿ ಯಾರೂ ಏನು ಕಡಿಮೆಯಿಲ್ಲ, ಖರ್ಚಿನಲ್ಲಿ ಮಾತ್ರ ಎಲ್ಲರಿಗೂ ಕೈ ಹಿಡಿಯೋದು ಗೊತ್ತಾಗುತ್ತೆ."

"ನೀನು ಒಂದಿಪ್ಪತ್ತು ಪೂರೀನಾದರೂ ತಿಂದಿರಬೇಕು."

"ಇಪ್ಪತ್ತಕ್ಕೂ ಜಾಸ್ತಿಯೇ!"

---

*ಒಂದು ಬಗೆಯ ಕರಿದ ತಿಂಡಿ.

"ನಾನಿದ್ದಿದ್ದರೆ ಐವತ್ತು ತಿಂದುಬಿಡ್ತಿದ್ದೆ."

"ನಾನು ಸಹ ಐವತ್ತಕ್ಕಿಂತ ಕಡಿಮೆಯೇನೂ ತಿಂದಿಲ್ಲ. ಚೆನ್ನಾಗಿ ಗಟ್ಟಿಮುಟ್ಟಾಗಿದ್ದೆ, ಒಳ್ಳೇ ಪಡ್ಡೇ ಹುಡುಗ. ನೀನು ನನ್ನ ಅರ್ಧದಷ್ಟೂ ಇಲ್ಲ."

ಆಲೂಗೆಡ್ಡೆ ತಿಂದು ಇಬ್ಬರೂ ನೀರು ಕುಡಿದರು. ಅದೇ ಅಗ್ಗಿಷ್ಟಿಕೆಯ ಮುಂದೆ ಧೋತಿ ಹೊದ್ದು ಮೈಮುದುಡಿಕೊಂಡು ಮಲಗಿದರು – ಎರಡು ದೊಡ್ಡ ಹೆಬ್ಬಾವುಗಳು ಸುರುಳಿಸುತ್ತಿಕೊಂಡು ಬಿದ್ದಿವೆಯೋ ಎಂಬಂತೆ.

ಬುಧಿಯಾ ಇನ್ನೂ ನರಳುತ್ತಲೇ ಇದ್ದಳು.

## 2

ಬೆಳಗಾಗ ಮಾಧವ ಎದ್ದು ಕೊಠಡಿಯೊಳಗೆ ಹೋಗಿ ನೋಡಿದಾಗ ಅವನ ಹೆಂಡತಿಯ ಮೈ ತಣ್ಣಗಾಗಿತ್ತು. ಮುಖದ ಮೇಲೆ ನೊಣಗಳು ಮುತ್ತಿಕೊಂಡು ಮೊರೆಯುತ್ತಿದ್ದವು. ಕಣ್ಣುಗುಡ್ಡೆ ಕಲ್ಲಿನಂತಾಗಿ ಮೇಲೆ ಸಿಕ್ಕಿಹಾಕಿಕೊಂಡಿತ್ತು. ಇಡೀ ದೇಹ ಧೂಳಿನಲ್ಲಿ ಮುಸುಕಿತ್ತು. ಮಗು ಹೊಟ್ಟೆಯೊಳಗೇ ಸತ್ತಿತ್ತು.

ಮಾಧವ ಘೀಸುವಿನ ಬಳಿ ಓಡುತ್ತ ಬಂದ. ಇಬ್ಬರೂ 'ಅಯ್ಯಯ್ಯೋ' ಎಂದು ಜೋರಾಗಿ ಅರಚುತ್ತ ಎದೆ ಬಡಿದುಕೊಳ್ಳತೊಡಗಿದರು. ಇವರ ಗೋಳಾಟವನ್ನು ಕೇಳಿ ನೆರೆಹೊರೆಯವರೂ ಓಡಿಬಂದರು; ಸಂಪ್ರದಾಯದ ಪ್ರಕಾರ ಈ ದುರ್ಭಾಗ್ಯರಿಗೆ ಸಮಾಧಾನ ಹೇಳತೊಡಗಿದರು.

ಆದರೆ ಅತಿಯಾಗಿ ಗೋಳಾಡಲು ಅವಕಾಶವಿರಲಿಲ್ಲ. ಹೆಣದ ಬಟ್ಟೆ ಹಾಗೂ ಸೌದೆಗೆ ಏರ್ಪಾಡು ಮಾಡಬೇಕಾಗಿತ್ತು. ಮನೆಯಲ್ಲಿ ಹಣದ ಸ್ಥಿತಿ ಹದ್ದಿನ ಗೂಡಿನ ಮಾಂಸದಂತಿತ್ತು.

ಅಪ್ಪಮಕ್ಕಳಿಬ್ಬರೂ ಅಳುತ್ತ ಹಳ್ಳಿಯ ಜಮೀನುದಾರನ ಬಳಿ ಹೋದರು. ಅವನಿಗೆ ಇವರ ಮುಖ ಕಂಡರೆ ಸಾಕು, ಹೇಸಿಗೆ ಬರುತ್ತಿತ್ತು. ಅವನು ಎಷ್ಟೋ ಸಲ ಇವರನ್ನು ಕಳ್ಳತನ ಮಾಡಿದ್ದಕ್ಕೆ, ವಾಯಿದೆಯ ಪ್ರಕಾರ ಕೆಲಸಕ್ಕೆ ಬರದಿದ್ದುದಕ್ಕೆ ಕೈಯಾರೆ ಹೊಡೆದಿದ್ದ. ಅವನು ಕೇಳಿದ – "ಏನಲೇ ಘೀಸುವಾ, ಯಾಕೋ ಅಳ್ತಿದಿ ? ಈಗೆಲ್ಲಿ ನೀನು ಕಾಣಿಸೋದೇ ಇಲ್ಲವಲ್ಲ. ಈ ಹಳ್ಳೀಲಿ ಇರೋಕ್ಕೆ ಇಷ್ಟವಿಲ್ಲ ಅಂತ ಕಾಣುತ್ತೆ."

ಘೀಸು ನೆಲಕ್ಕೆ ತಲೆಮುಟ್ಟಿಸಿ ಅಡ್ಡಬಿದ್ದು ಕಣ್ಣಿನಲ್ಲಿ ನೀರು ತುಂಬಿಕೊಂಡು ಹೇಳಿದ – "ಮಹಾಸಂಕಟದಲ್ಲಿದೀನಿ, ಸ್ವಾಮಿ, ಮಾಧವನ ಹೆಂಡತಿ ನಿನ್ನೆ ರಾತ್ರಿ ಹೋಗಿಬಿಟ್ಟಳು. ರಾತ್ರಿಯೆಲ್ಲ ಒದ್ದಾಡ್ತಿದ್ದಳು. ನಾವಿಬ್ಬರೂ ಅವಳ ತಲೆದಸೀಲೇ ಕೂತಿದ್ದೆವು. ನಮ್ಮ ಕೈಯಲ್ಲಾದ ಔಷಧಿ–ಚಿಕಿತ್ಸೆ ಮಾಡಿದೆವು. ಆದರೆ ನಮ್ಮ ಕೈಬಿಟ್ಟು ಹೊರಟುಹೋದಳು. ಈಗ ಒಂದು ರೊಟ್ಟಿ ಬಡಿದು ಕೊಡೋರೂ ಇಲ್ಲದ ಹಾಗಾಯಿತು. ಹಾಳಾಗಿಹೋದೆವು, ಸ್ವಾಮಿ, ಮನೆ ನಾಶವಾಗಿ ಹೋಯಿತು. ನಾನು ನಿಮ್ಮ ಗುಲಾಮ. ನಿಮ್ಮ ಹೊರತು ಅವಳನ್ನ ಮಣ್ಣುಮಾಡಿಸೋರು ಯಾರಿದಾರೆ ?

ನಮ್ಮ ಹತ್ತಿರ ಇದ್ದದ್ದೆಲ್ಲಾ ಔಷಧಿ–ಚಿಕಿತ್ಸೆಗೇ ಹೋಯಿತು. ದಣಿಗಳಿಗೆ ದಯ ಬಂದರೆ ಅವಳ ಹೆಣ ಮಣ್ಣು ಕಾಣುತ್ತೆ. ನಿಮ್ಮನ್ನು ಬಿಟ್ಟು ಬೇರೆ ಯಾರ ಮನೆ ಬಾಗಿಲಿಗೆ ಹೋಗಲಿ ?''

ಜಮೀನುದಾರನೇನೋ ದಯಾಳು. ಆದರೆ ಘೀಸುವಿಗೆ ದಯೆ ತೋರಿಸುವುದೆಂದರೆ ಕರಿಯ ಕಂಬಳಿಗೆ ಬಣ್ಣ ತೊಡೆದಂತೆ. ಅವನಿಗೆ 'ನಡಿ, ಜಾಗ ಬಿಟ್ಟು ಹೊರಡು' ಎಂದು ಅನ್ನೋಣವೆಂದು ಮನಸ್ಸಾಯಿತು ! ಹೇಳಿಕಳಿಸಿದರೂ ಬರದವನು ಈಗ ತನಗೆ ಅಗತ್ಯ ಬಿದ್ದಿದೆಯೆಂದು ಬಂದು ಹೊಗಳುತ್ತಿದ್ದಾನೆ. ಕಳ್ಳಸೂಳೇಮಗ, ಬದ್ಮಾಶ್ ! ಆದರೆ ಈಗ ಕೋಪ ಇಲ್ಲವೇ ಶಿಕ್ಷೆಗೆ ಹೊತ್ತಲ್ಲ. ಒಳಗಿಂದೊಳಗೇ ಕುದಿಯುತ್ತಿದ್ದರೂ ಜಮೀನುದಾರ ಎರಡು ರೂಪಾಯಿ ತೆಗೆದೆಸೆದ. ಆದರೆ ಅವನ ಬಾಯಿಂದ ಸಮಾಧಾನದ ಒಂದು ಮಾತಾದರೂ ಬರಲಿಲ್ಲ. ಅವನು ಘೀಸುವಿನ ಕಡೆ ನೋಡಲೂ ಇಲ್ಲ. ಹೆಗಲಮೇಲಿನ ಭಾರ ಕಳೆದುಹೋದಂತೆ ಸುಮ್ಮನಿದ್ದ.

ಜಮೀನುದಾರನೇ ಎರಡು ರೂಪಾಯಿ ಕೊಟ್ಟಮೇಲೆ ಹಳ್ಳಿಯ ವರ್ತಕ ಸಾಹುಕಾರರಿಗೆ ಇಲ್ಲವೆನ್ನುವ ಸಾಹಸವೆಲ್ಲಿ ಬರಬೇಕು ? ಘೀಸು ಜಮೀನುದಾರನ ಹೆಸರೆತ್ತಿಕೊಂಡು ಡಂಗುರ ಸಾರುವುದನ್ನು ಚೆನ್ನಾಗಿ ಕಲಿತಿದ್ದ. ಒಬ್ಬರು ಎರಡಾಣೆ ಕೊಟ್ಟರು ! ಇನ್ನೊಬ್ಬರು ನಾಲ್ಕಾಣೆ ಕೊಟ್ಟರು. ಒಂದು ಗಂಟೆಯೊಳಗೆ ಘೀಸುವಿನ ಹತ್ತಿರ ಐದು ರೂಪಾಯಿಯಷ್ಟು ದೊಡ್ಡ ಗಂಟಾಯಿತು. ಎಲ್ಲೋ ಒಂದಿಷ್ಟು ದವಸ ಸಿಕ್ಕಿತು; ಇನ್ನೆಲ್ಲೋ ಸೌದೆ ಸಿಕ್ಕಿತು. ಮಧ್ಯಾಹ್ನದ ಹೊತ್ತಿಗೆ ಘೀಸು ಮಾಧವರು ಹೆಣದ ಬಟ್ಟೆ ತರಲು ಪೇಟೆಗೆ ಹೋದರು. ಈ ಕಡೆ ಜನ ಬೊಂಬುಹಗ್ಗಕ್ಕೆ ಅಣಿ ಮಾಡುತ್ತಿದ್ದರು.

## 3

ಪೇಟೆ ತಲಪಿದಾಗ ಘೀಸು ಕೇಳಿದ – ''ಸುಡೋಕ್ಕೆ ಬೇಕಾದಷ್ಟು ಸೌದೆ ಸಿಕ್ಕಿದೆ ಅಲ್ಲವೇನೋ, ಮಾಧವ ?''

ಮಾಧವ ಹೇಳಿದ – ''ಹೌದು, ಸೌದೆ ಬೇಕಾದಷ್ಟಿದೆ. ಹೆಣಕ್ಕೆ ಬಟ್ಟೆ ಬೇಕು ಅಷ್ಟೆ.''

''ನಡಿ, ಯಾವುದಾದರೂ ತೆಳ್ಳಗಿರೋ ಬಟ್ಟೆ ಕೊಂಡುಕೊಳ್ಳೋಣ.''

''ಮತ್ತೇನು ? ಹೆಣ ಎತ್ತೋ ಹೊತ್ತಿಗೆ ರಾತ್ರಿಯಾಗಿರುತ್ತೆ. ಆ ಹೊತ್ತಿನಲ್ಲಿ ಹೆಣದ ಬಟ್ಟೆ ಯಾರಿಗೆ ಕಾಣುತ್ತೆ ?''

''ಬದುಕಿರೋವಾಗ ಮೈ ಮುಚ್ಕೋಕ್ಕೆ ಚಿಂದೀಗೆ ಗತಿಯಿಲ್ಲದೆ ಇರೋರಿಗೆ ಸತ್ತ ಮೇಲೆ ಹೊಸ ಬಟ್ಟೆ ಬೇಕು. ಎಂಥ ಕೆಟ್ಟ ಪದ್ಧತಿ ಇದು !''

''ಬಟ್ಟೆ ಹೆಣದ ಜೊತೇಲೇ ಸುಟ್ಟುಹೋಗುತ್ತೆ !''

"ಇನ್ನೇನು, ಉಳಿಯುತ್ತೆಯೆ ? ಇದೇ ಐದು ರೂಪಾಯಿ ಮೊದಲೇ ಸಿಕ್ಕಿದ್ದಿದ್ದರೆ ಏನಾದರೂ ಔಷಧಿ–ಚಿಕಿತ್ಸೆ ಮಾಡಿಸಬಹುದಾಗಿತ್ತು."

ಇಬ್ಬರೂ ಇನ್ನೊಬ್ಬನ ಮನಸ್ಸಿನಲ್ಲಿ ಏನಿದೆಯೆಂದು ಗ್ರಹಿಸಲು ಪ್ರಯತ್ನಿಸುತ್ತಿದ್ದರು. ಪೇಟೆಯಲ್ಲಿ ಅತ್ತಿಂದಿತ್ತ ಅಲೆದಾಡುತ್ತಿದ್ದರು. ಒಂದು ಬಟ್ಟೆ ಅಂಗಡಿಯಿಂದ ಇನ್ನೊಂದು ಬಟ್ಟೆ ಅಂಗಡಿಗೆ ಹೋದರು; ಬಗೆಬಗೆಯ ಬಟ್ಟೆ ನೋಡಿದರು – ರೇಶಿಮೆ ಬಟ್ಟೆ, ಹತ್ತಿಯ ಬಟ್ಟೆ. ಆದರೆ ಯಾವುದೂ ಸರಿ ಕಾಣಲಿಲ್ಲ. ಅಷ್ಟರಲ್ಲಿ ಸಂಜೆಯಾಯಿತು. ಆಗ ಅವರಿಬ್ಬರೂ ಹೇಗೋ ಏನೋ ಒಂದು ಹೆಂಡದಂಗಡಿಯ ಮುಂದೆ ಬಂದುನಿಂತರು; ಮೊದಲೇ ಇತ್ಯರ್ಥವಾಗಿತ್ತೋ ಎಂಬಂತೆ ಒಳಹೋದರು. ಒಳಹೋಗಿ ಕೊಂಚಹೊತ್ತು ಇಬ್ಬರೂ ಏನೂ ಮಾಡಲು ತಿಳಿಯದೆ ನಿಂತಿದ್ದರು. ಆಮೇಲೆ ಘೀಸು ಮಾಲೀಕನ ಬಳಿಗೆ ಹೋಗಿ ಹೇಳಿದ – "ನಮಗೂ ಒಂದು ಬಾಟಲು ಕೊಡಿ, ಸಾಹೂಜಿ." ಹಿಂದೆಯೇ ತಿನ್ನಲು ತಿಂಡಿ ಬಂತು, ಹುರಿದ ಮೀನು ಬಂತು. ವರಾಂಡದಲ್ಲಿ ಕೂತು ಇಬ್ಬರೂ ಶಾಂತಿಯಿಂದ ಕುಡಿಯತೊಡಗಿದರು.

ಬೇಗಬೇಗನೆ ಕೆಲವರು ಗುಟುಕು ಕುಡಿದಾದ ಮೇಲೆ ಇಬ್ಬರ ಮನಸ್ಸೂ ಉಲ್ಲಾಸಗೊಂಡಿತು.

ಘೀಸು ಹೇಳಿದ – "ಹೆಣಕ್ಕೆ ಬಟ್ಟೆ ಹೊದಿಸೋದರಿಂದ ಏನು ಲಾಭ ? ಕೊನೆಗೆ ಸುಟ್ಟು ಬೂದಿಯಾಗುತ್ತೆ. ಸೊಸೆಯ ಜೊತೆಯಂತೂ ಹೋಗೋಲ್ಲ."

ತಾನು ಪಾಪಿಯಲ್ಲವೆಂಬುದಕ್ಕೆ ದೇವತೆಗಳನ್ನು ಸಾಕ್ಷಿಗೆ ಕರೆಯುತ್ತಿದ್ದಾನೆಯೋ ಎಂಬಂತೆ ಆಕಾಶದ ಕಡೆ ನೋಡುತ್ತ ಮಾಧವ ಹೇಳಿದ – "ಲೋಕಾರೂಢಿ ಅಷ್ಟೇ. ಇಲ್ಲದೇ ಹೋಗಿದ್ದರೆ ಬ್ರಾಹ್ಮಣರಿಗೆ ಸಾವಿರಾರು ರೂಪಾಯಿ ಯಾರು ಕೊಡ್ತಿದ್ದರು ? ಪರಲೋಕದಲ್ಲಿ ಏನು ಸಿಗುತ್ತೆ ಬಿಡುತ್ತ ಅಂತ ಕಂಡೋರು ಯಾರು ?"

"ದೊಡ್ಡ ಮನುಷ್ಯರ ಹತ್ತಿರ ಹಣವಿರುತ್ತೆ. ಬೇಕಾದ ಹಾಗೆ ಚೆಲ್ಲಬಹುದು. ನಮ್ಮ ಹತ್ತಿರ ಚೆಲ್ಲೋಕೆ ಏನಿದೆಯಂತೆ ?"

"ಆದರೆ ಜನಕ್ಕೆ ಏನು ಉತ್ತರ ಹೇಳ್ತಿ ? ಬಟ್ಟೆ ಎಲ್ಲಿ ಅಂತ ಜನ ಕೇಳ್ತಾರೋ ಇಲ್ಲವೋ ?"

ಘೀಸು ಹೇಳಿದ – "ಹಣ ಸೊಂಟದಿಂದ ಬಿದ್ದುಹೋಯ್ತು ಅಂದುಬಿಡೋಣ, ಕಣೋ. ತುಂಬ ಹುಡುಕಿದೆವು, ಸಿಗಲಿಲ್ಲ ಅನ್ನೋಣ. ಜನಕ್ಕೆ ನಂಬಿಕೆ ಬರದಿರಬಹುದು. ಆದರೆ ಅವರೇ ಮತ್ತೆ ದುಡ್ಡು ಕೊಡ್ತಾರೆ."

ಬೇಡದೆಯೇ ಬಂದ ಈ ಸೌಭಾಗ್ಯವನ್ನು ಕಂಡು ನಗುತ್ತ ಮಾಧವ ಹೇಳಿದ – "ಬಹು ಒಳ್ಳೆಯವಳು. ಸತ್ತರೂ ನಮಗೆ ಚೆನ್ನಾಗಿ ತಿನ್ನಿಸಿ, ಕುಡಿಸಿ ಸತ್ತಳು."

ಅರ್ಧ ಬಾಟಲಿಗೂ ಹೆಚ್ಚು ಕರಗಿ ಹೋಯಿತು. ಘೀಸು ಎರಡು ಸೇರು ಪೂರಿ ತರಿಸಿದ. ಜೊತೆಗೇ ಚಟ್ನಿ, ಉಪ್ಪಿನಕಾಯಿ, ಮಾಂಸದ ಪಲ್ಯ, ಹೆಂಡದಂಗಡಿಯ ಮುಂದೆಯೇ ತಿಂಡಿಯ ಅಂಗಡಿಯಿತ್ತು. ಮಾಧವ ಓಡಿಹೋಗಿ ಎಲ್ಲವನ್ನೂ ಎಲೆಯಲ್ಲಿ ಕಟ್ಟಿಸಿಕೊಂಡು ತಂದ. ಇನ್ನೂ ಒಂದೂವರೆ ರೂಪಾಯಿ ಖರ್ಚಾಗಿ

ಹೋಯಿತು. ಉಳಿದಿದ್ದ ಹಣವೆಂದರೆ ತೀರಾ ಕಡಿಮೆ.

ಕಾಡಿನಲ್ಲಿ ಹುಲಿ ತನ್ನ ಬೇಟೆಯನ್ನು ತಿಂದು ಮುಗಿಸುವಂತೆ ಇಬ್ಬರೂ ಜರ್ಬಾಗಿ ಕೂತು ಪೂರಿ ತಿನ್ನುತ್ತಿದ್ದರು. ಯಾರಿಗೇ ಆಗಲಿ ಏನೂ ಉತ್ತರ ಕೊಡಬೇಕೆಂಬ ಭಯವಿರಲಿಲ್ಲ. ಕೆಟ್ಟ ಹೆಸರು ಬರುವುದೆಂಬ ಚಿಂತೆಯಿರಲಿಲ್ಲ. ಈ ಭಾವನೆಗಳನ್ನೆಲ್ಲಾ ಅವರು ಎಂದೋ ಗೆದ್ದುಬಿಟ್ಟಿದ್ದರು.

ಘೀಸು ವೇದಾಂತಿಯಂತೆ ಹೇಳಿದ – "ನಮ್ಮ ಆತ್ಮತೃಪ್ತಿಯಾಗ್ತಿದೆ ಅಂದಮೇಲೆ ಅವಳಿಗೆ ಗಂಡುಮಗುವಾಗದೆ ಇರುತ್ತೆಯೆ ?"

ಮಾಧವ ಶ್ರದ್ಧೆಯಿಂದ ತಲೆತಗ್ಗಿಸಿ ಆ ಮಾತನ್ನು ಸಮರ್ಥಿಸಿದ – "ಖಂಡಿತವಾಗಿಯೂ ಆಗುತ್ತೆ. ದೇವರೇ, ನೀನು ಅಂತರ್ಯಾಮಿ. ಅವಳನ್ನ ವೈಕುಂಠಕ್ಕೆ ಕರಕೊಂಡು ಹೋಗು. ನಾವಿಬ್ಬರೂ ಮನಸಾರೆ ಆಶೀರ್ವಾದ ಮಾಡ್ತಿದೀವಿ. ಇವತ್ತು ಸಿಕ್ಕಂಥ ಊಟ ನಮ್ಮ ಜನ್ಮದಲ್ಲೇ ಸಿಕ್ಕಿರಲಿಲ್ಲ."

ಕ್ಷಣಕಾಲದ ನಂತರ ಮಾಧವನ ಮನಸ್ಸಿನಲ್ಲಿ ಒಂದು ಶಂಕೆ ಹುಟ್ಟಿಕೊಂಡಿತು. ಅವನಂದ – "ಒಂದಲ್ಲ ಒಂದು ದಿನ ನಾವೂ ಅಲ್ಲಿಗೆ ಹೋಗೇಹೋಗ್ತೀವಿ."

ಘೀಸು ಈ ಸರಳ ಪ್ರಶ್ನೆಗೆ ಏನೂ ಉತ್ತರ ಕೊಡಲಿಲ್ಲ. ಅವನು ಪರಲೋಕದ ವಿಷಯ ಚಿಂತಿಸಿ ಈ ಲೋಕದ ಆನಂದವನ್ನು ಕೆಡಿಸಿಕೊಳ್ಳಬಯಸಲಿಲ್ಲ.

"ನನಗೆ ಯಾಕೆ ಬಟ್ಟೆ ಹೊದಿಸಲಿಲ್ಲ ಅಂತ ಅವಳು ಅಲ್ಲಿ ನಮ್ಮನ್ನ ಕೇಳಿದರೆ ಏನು ಉತ್ತರ ಕೊಡ್ತಿ ?"

"ಕೇಳ್ತಾಳೆ, ನಿನ್ನ ತಲೆ !"

"ಕೇಳೋದಂತೂ ಖಂಡಿತ."

"ಅವಳಿಗೆ ಬಟ್ಟೆ ಹೊದಿಸೋಲ್ಲ ಅಂತ ನಿನಗೆ ಹೇಗೆ ಗೊತ್ತು ? ನನ್ನನ್ನೇನು ಅಷ್ಟು ಕತ್ತೆ ಅಂತ ತಿಳಕೊಂಡೆಯಾ ? ಈ ಪ್ರಪಂಚದಲ್ಲಿ ಅರುವತ್ತು ವರ್ಷದಿಂದ ಕತ್ತೆಕಾಯಿಕೊಂಡಿದೀನಿ ಅಂದುಕೊಂಡೆಯಾ ? ಅವಳಿಗೆ ಬಟ್ಟೆ ಸಿಗುತ್ತೆ, ಇದಕ್ಕಿಂತ ಒಳ್ಳೇ ಬಟ್ಟೆಯೇ ಸಿಗುತ್ತೆ."

ಮಾಧವನಿಗೆ ನಂಬಿಕೆ ಬರಲಿಲ್ಲ. ಅವನಂದ – "ಯಾರು ಕೊಡ್ತಾರೆ ? ಇದ್ದ ಹಣಾನೆಲ್ಲಾ ನೀನು ಉಡಾಯಿಸಿಬಿಟ್ಟೆ. ಅವಳು ಕೇಳೋದು ನನ್ನನ್ನ. ಅವಳ ಹಣೇಗೆ ಕುಂಕುಮ ಹಚ್ಚಿದೋನು ನಾನು ತಾನೇ ?"

ಘೀಸು ರೇಗಿ ಹೇಳಿದ – "ಅವಳಿಗೆ ಬಟ್ಟೆ ಸಿಗುತ್ತೆ ಅಂತ ನಾನು ಹೇಳ್ತಿದೀನಿ. ನೀನು ಯಾಕೆ ನಂಬೋಲ್ಲ ?"

"ಯಾರು ಕೊಡ್ತಾರೆ ಅಂತ ಯಾಕೆ ಹೇಳಬಾರದು."

"ಈಗ ಯಾರು ಕೊಟ್ಟರೋ ಅವರೇ ಕೊಡ್ತಾರೆ. ಆದರೆ ಆಗ ಹಣ ನಮ್ಮ ಕೈಗೆ ಬರೋಲ್ಲ ಅಷ್ಟೇ."

ಕತ್ತಲು ಹೆಚ್ಚಾದಂತೆಲ್ಲಾ ಆಕಾಶದಲ್ಲಿ ನಕ್ಷತ್ರಗಳು ಹೆಚ್ಚುಹೆಚ್ಚಾಗಿ ಹೊಳೆಯತೊಡಗಿದವು. ಅದರೊಡನೆ ಹೆಂಡದಂಗಡಿಯ ಕಳೆಯೂ ಹೆಚ್ಚುತ್ತ ಹೋಯಿತು. ಒಬ್ಬರು ಹಾಡುತ್ತಿದ್ದರು; ಇನ್ನೊಬ್ಬರು ಬಡಾಯಿ ಕೊಚ್ಚುತ್ತಿದ್ದರು;

ಮತ್ತೊಬ್ಬರು ಸಂಗಡಿಗರನ್ನು ಅಪ್ಪಿಕೊಳ್ಳುತ್ತಿದ್ದರು; ಯಾರೋ ಜೊತೆಗಾರರ ಬಾಯಿಗೆ ಬಾಟಲಿಡುತ್ತಿದ್ದರು.

ಅಲ್ಲಿಯ ವಾತಾವರಣದಲ್ಲಿ ಆನಂದ ತುಳುಕುತ್ತಿತ್ತು; ಗಾಳಿಯಲ್ಲಿ ಅಮಲು ತುಂಬಿತ್ತು. ಅದೆಷ್ಟೋ ಜನ ಇಲ್ಲಿ ಬಂದು ಒಂದು ಗುಟುಕು ಕುಡಿದೇ ಮತ್ತರಾಗುತ್ತಿದ್ದರು. ಮಧ್ಯಕ್ಕಿಂತ ಹೆಚ್ಚಾಗಿ ಇಲ್ಲಿನ ಹವೆ ಅವರಿಗೆ ಅಮಲೇರಿಸುತ್ತಿತ್ತು. ಬದುಕಿನ ಜಂಜಾಟ ಅವರನ್ನು ಇಲ್ಲಿಗೆ ಎಳೆದುತರುತ್ತಿತ್ತು. ಕೊಂಚ ಹೊತ್ತು ಅವರು ತಾವು ಬದುಕಿದ್ದೇವೆಯೋ ಸತ್ತಿದ್ದೇವೆಯೋ ಎಂಬುದನ್ನೂ ಮರೆಯುತ್ತಿದ್ದರು ! ಆ ಸ್ಥಿತಿಯಲ್ಲಿ ಅವರು ಬದುಕಿಯೂ ಇರಲಿಲ್ಲ, ಸತ್ತೂ ಇರಲಿಲ್ಲ.

ಈ ಅಪ್ಪಮಕ್ಕಳಿಬ್ಬರೂ ಚಪ್ಪರಿಸಿ ಚಪ್ಪರಿಸಿ ಆನಂದ ಸವಿಯುತ್ತಿದ್ದರು. ಎಲ್ಲರ ಗಮನವೂ ಇವರ ಕಡೆ ಹರಿದಿತ್ತು. ಇಬ್ಬರೂ ಅದೆಷ್ಟು ಭಾಗ್ಯವಂತರು ! ಇಬ್ಬರಿಗಾಗಿಯೇ ಒಂದು ಪೂರ್ತಿ ಬಾಟಲಿದೆ !

ಹೊಟ್ಟೆ ತುಂಬ ತಿಂದಮೇಲೆ ಮಾಧವ ಎಲೆಯಲ್ಲಿ ಉಳಿದಿದ್ದ ಪೂರಿಯನ್ನು ಇವರ ಕಡೆ ಹಸಿವಿನಿಂದ ನೋಡುತ್ತ ನಿಂತಿದ್ದ ಭಿಕಾರಿಯೊಬ್ಬನಿಗೆ ಕೊಟ್ಟುಬಿಟ್ಟ. ಬದುಕಿನಲ್ಲಿ ಮೊತ್ತಮೊದಲ ಬಾರಿಗೆ ಹೀಗೆ 'ಕೊಡುವ' ಹೆಮ್ಮೆ, ಆನಂದ, ಉಲ್ಲಾಸಗಳನ್ನು ಅನುಭವಿಸಿದ.

ಘೀಸು ಹೇಳಿದ – "ತೊಗೊಂಡು ಹೋಗು. ತಿಂದು ಚೆನ್ನಾಗಿ ಹರಸು. ಇದನ್ನ ಸಂಪಾದಿಸಿದವಳು ಹೋಗಿಬಿಟ್ಟಳು. ನೀನು ಹರಸಿದರೆ ಆ ಹರಕೆ ಅವಳಿಗೆ ಖಂಡಿತ ತಲಪುತ್ತೆ. ನಿನ್ನ ಒಂದೊಂದು ರೋಮವೂ ಹರಸಲಿ. ಬಲು ಕಷ್ಟದಿಂದ ಸಂಪಾದಿಸಿದ್ದು ಇದು !"

ಮಾಧವ ಮತ್ತೆ ಆಕಾಶದ ಕಡೆ ನೋಡುತ್ತ ಹೇಳಿದ – "ಅವಳು ವೈಕುಂಠಕ್ಕೆ ಹೋಗ್ತಾಳಪ್ಪ. ಅಲ್ಲಿ ವೈಕುಂಠದ ರಾಣಿಯಾಗಿ ಮೆರೀತಾಳೆ."

ಘೀಸು ಎದ್ದುನಿಂತ. ಉಲ್ಲಾಸದ ತೆರೆಗಳ ಮೇಲೆ ತೇಲುತ್ತಿರುವವನಂತೆ ಹೇಳಿದ – "ಹೌದು ಕಣೋ, ಮಗು. ವೈಕುಂಠಕ್ಕೆ ಹೋಗ್ತಾಳೆ. ಯಾರಿಗೂ ಸತಾಯಿಸಲಿಲ್ಲ, ಯಾರ ಮೇಲೂ ದಬ್ಬಾಳಿಕೆ ಮಾಡಲಿಲ್ಲ. ಸತ್ತು ನಮ್ಮ ಬದುಕಿನ ಒಂದು ದೊಡ್ಡ ಬಯಕೆಯೇನಿತ್ತೋ ಅದನ್ನು ಪೂರೈಸಿದಳು. ಅವಳಲ್ಲದೇ ಮತ್ತೆ ಯಾರು ಈ ದೊಡ್ಡ ದೊಡ್ಡ ಮನುಷ್ಯರು ವೈಕುಂಠಕ್ಕೆ ಹೋಗ್ತಾರೆಯೆ ? ಎರಡೂ ಕೈಯಿಂದ ಬಡವರನ್ನ ಲೂಟಿ ಮಾಡಿ, ತಮ್ಮ ಪಾಪ ತೊಳಕೊಳ್ಳೋಕ್ಕೆ ಗಂಗೇಲಿ ಮಿಂದು ಗುಡೀಲಿ ಅಭಿಷೇಕ ಮಾಡಿಸ್ತಾರಲ್ಲ ಅವರು ಹೋಗ್ತಾರೆಯೆ ?"

ಶ್ರದ್ಧೆಯ ಈ ಬಣ್ಣ ತಕ್ಷಣ ಬದಲಾಯಿತು. ಅಮಲಿನ ಸ್ವಭಾವವೆಂದರೆ ಅಸ್ಥಿರತೆ. ದುಃಖನಿರಾಶೆಗಳು ತಲೆಹಾಕಿದವು.

ಮಾಧವ ಹೇಳಿದ – "ಆದರೆ ಬದುಕಿನಲ್ಲಿ ಅವಳು ತುಂಬ ದುಃಖ ಅನುಭವಿಸಿದಳು ಕಣಪ್ಪಾ. ಸಾಯುವಾಗ ಎಷ್ಟೊಂದು ದುಃಖ ನುಂಗಿಕೊಂಡು ಸತ್ತಳು." ಅವನು ಕೈಯಿಂದ ಕಣ್ಣನ್ನು ಮುಚ್ಚಿಕೊಂಡು ಅಳತೊಡಗಿದ, ಬಿಕ್ಕಳಿಸಿ ಬಿಕ್ಕಳಿಸಿ ಅತ್ತ.

ಘೀಸು ಸಮಾಧಾನ ಹೇಳಿದ – "ಯಾಕೆ ಅಳ್ತಿ, ಮಗು. ಸಂತೋಷದ ಸಂಗತಿ ಅಂದರೆ ಅವಳು ಈ ಮಾಯಾಜಾಲದಿಂದ ಬಿಡುಗಡೆ ಪಡೆದಳು. ಬಂಧನ ಹರೀತು, ತುಂಬ ಭಾಗ್ಯವಂತೆ. ಇಷ್ಟು ಚಿಕ್ಕ ವಯಸ್ಸಿನಲ್ಲಿ ಮಾಯಾಮೋಹಗಳ ಬಂಧನ ತೊಡೆದು ಹಾಕಿದಳು."

ಇಬ್ಬರೂ ಎದ್ದು ನಿಂತು ಹಾಡತೊಡಗಿದರು:

ಮಾಯಾವಿ, ಕಣ್ಣ ಹಿಂಗೇಕ ಕುಣಿಸುವಿಯ ?
ಮಾಯಾವಿ !

ಪಡಖಾನೆಯ ಕುಡುಕರೆಲ್ಲರ ಕಣ್ಣೂ ಇವರ ಮೇಲೆಯೇ ಇದ್ದವು. ಇಬ್ಬರೂ ಮತ್ತರಾಗಿ ಹಾಡುತ್ತಿದ್ದರು. ಆಮೇಲೆ ಇಬ್ಬರೂ ಕುಣಿಯತೊಡಗಿದರು. ಹಾರಿದರು, ನೆಗೆದರು, ಬಿದ್ದರು, ಮೈ ಕುಲುಕಿದರು, ಮುಖದಲ್ಲಿ ಭಾವ ತೋರಿಸಿದರು, ಅಭಿನಯ ಮಾಡಿದರು. ಕೊನೆಗೆ ಮದಮತ್ತರಾಗಿ ಅಲ್ಲೇ ಕೆಳಗೆ ಬಿದ್ದರು.

# 8. ಹಾಲಿನ ಋಣ

ಈಗ ದೊಡ್ಡ ದೊಡ್ಡ ನಗರಗಳಲ್ಲಿ ದಾದಿಯರು, ನರ್ಸುಗಳು, ಲೇಡಿ ಡಾಕ್ಟರುಗಳು ಎಲ್ಲರೂ ಹುಟ್ಟಿಕೊಂಡಿದ್ದಾರೆ. ಆದರೆ ಗ್ರಾಮಾಂತರ ಪ್ರದೇಶಗಳಲ್ಲಿ ಇಂದಿಗೂ ಹೆರಿಗೆ ಮನೆಗಳಲ್ಲಿ ಜಾಡಮಾಲಿ ಹೆಂಗಸರದ್ದೇ ಪ್ರಭುತ್ವ. ಅಲ್ಲದೇ ನಿಕಟ ಭವಿಷ್ಯದಲ್ಲಿ ಈ ವ್ಯವಸ್ಥೆಯಲ್ಲಿ ಯಾವ ಬದಲಾವಣೆಯಾಗುವ ಭರವಸೆಯೂ ಇಲ್ಲ. ಬಾಬು ಮಹೇಶನಾಥರು ಹಳ್ಳಿಯ ಜಮೀನುದಾರರು, ವಿದ್ಯಾವಂತರು, ಹೆರಿಗೆಯ ವಿಧಾನದಲ್ಲಿ ಸುಧಾರಣೆಯ ಆಗತ್ಯವನ್ನು ಒಪ್ಪಿಕೊಂಡವರು. ಆದರೆ ಅದಕ್ಕಿದ್ದ ಅಡಚಣೆಗಳನ್ನು ಹೇಗೆ ತಾನೆ ಗೆದ್ದಾರು ? ಯಾವ ನರ್ಸೂ ಅವರ ಹಳ್ಳಿಗೆ ಬಂದಿರಲು ಒಪ್ಪುತ್ತಿರಲಿಲ್ಲ; ತುಂಬ ಬಲವಂತ ಮಾಡಿದ ಮೇಲೆ ಒಪ್ಪಿದರೂ ಅವಳು ಬೇಡುವ ಸಂಭಾವನೆಯನ್ನು ಕೇಳಿದಾಗ ಬಾಬೂ ಸಾಹೇಬರಿಗೆ ತಲೆತಗ್ಗಿಸಿಕೊಂಡು ಹೊರಟುಬರುವ ಬದಲು ಬೇರೇನೂ ಹೊಳೆಯುತ್ತಿರಲಿಲ್ಲ. ಲೇಡಿ ಡಾಕ್ಟರರ ಹತ್ತಿರ ಹೋಗುವುದಕ್ಕಂತೂ ಅವರಿಗೆ ಸಾಹಸವಾಗುತ್ತಿರಲಿಲ್ಲ. ಅವಳ ಸಂಭಾವನೆಯನ್ನು ತೆರಬೇಕಾದರೆ ಬಾಬೂ ಸಾಹೇಬರು ಪ್ರಾಯಶಃ ತಮ್ಮ ಅರ್ಧ ಆಸ್ತಿಯನ್ನು ಮಾರಬೇಕಾಗುತ್ತಿತ್ತು. ಹೀಗಾಗಿ ಮೂರು ಹೆಣ್ಣುಗಳ ನಂತರ ನಾಲ್ಕನೆಯದಾಗಿ ಗಂಡು ಹುಟ್ಟಿದಾಗ ಅದೇ ಗೂದಡ, ಗೂದಡನ ಹೆಂಡತಿಗೇ ಮೊರೆಹೋಗಬೇಕಾಯಿತು. ಮಕ್ಕಳು ಸಾಮಾನ್ಯವಾಗಿ ರಾತ್ರಿಯ ಹೊತ್ತೇ ಹುಟ್ಟುತ್ತವೆ. ಒಂದು ನಡುರಾತ್ರಿ ಆಳು ಬಂದು ಗೂದಡನ ಮನೆ ಬಾಗಿಲಿನಲ್ಲಿ ಕೂಗು ಹಾಕಿದಾಗ ಅಕ್ಕಪಕ್ಕದವರೂ ಎಚ್ಚೆತ್ತರು. ಹೆಣ್ಣಾಗಿದ್ದಿದ್ದರೆ ಮೆಲುದನಿಯಲ್ಲಿ ಕೂಗುತ್ತಿದ್ದರೇನೋ.

ಗೂದಡನ ಮನೆಯಲ್ಲಿ ಈ ಶುಭಸಂದರ್ಭಕ್ಕಾಗಿ ಎಷ್ಟೋ ತಿಂಗಳುಗಳಿಂದ ತಯಾರಿ ನಡೆದಿತ್ತು. ಎಲ್ಲಿ ಮತ್ತೆ ಹೆಣ್ಣೇ ಹುಟ್ಟಿ, ಅದೇ ರೂಪಾಯಿಯ ಬಿಲ್ಲೆ ಮತ್ತು ಒಂದು ಸೀರೆಯಲ್ಲಿ ಮುಗಿದುಹೋಗುವುದೋ ಎಂದು ಗಂಡಹೆಂಡತಿ ಹೆದರಿದ್ದರು. ಈ ವಿಷಯದಲ್ಲಿ ಅವರ ನಡುವೆ ಎಷ್ಟೋ ಸಲ ಜಗಳವಾಗಿತ್ತು, ಬಾಜಿಕಟ್ಟಿದ್ದರು. ಹೆಂಡತಿ ಹೇಳುತ್ತಿದ್ದಳು – "ಈ ಸಲ ಗಂಡು ಹುಟ್ಟದಿದ್ದರೆ ನೋಡು, ಮುಖ ತೋರಿಸೋದಿಲ್ಲ. ಹ್ಞಾ, ಹ್ಞಾ, ಮುಖ ತೋರಿಸೋದಿಲ್ಲ ಅಂದೆ. ಲಕ್ಷಣ ಎಲ್ಲಾ ಗಂಡಿಂದೇ ಇದೆ." ಗೂದಡ ಹೇಳುತ್ತಿದ್ದ – "ನೋಡ್ತಿರು,

ಹೆಣ್ಣಾಗುತ್ತೆ. ರಾಜಾರೋಷವಾಗಿ ಸಾರ್ತೀನಿ, ಹೆಣ್ಣಾಗುತ್ತೆ. ಗಂಡಾದರೆ ಮೀಸೆ ಬೋಳಿಸಿಕೋತೀನಿ. ಹ್ಞಾ, ಹ್ಞಾ, ಮೀಸೆ ಬೋಳಿಸಿಕೋತೀನಿ.'' ಹೀಗೆ ಹೆಂಡತಿಯಲ್ಲಿ ಪುತ್ರಕಾಮನೆಯನ್ನು ಬಲಗೊಳಿಸಿ ಅವಳ ಹಾರೈಕೆಯಿಂದ ಗಂಡು ಹುಟ್ಟುವುದಕ್ಕೆ ದಾರಿ ಮಾಡಿಕೊಡುತ್ತಿದ್ದೇನೆಂದು ಪ್ರಾಯಶಃ ಗೂದಡ ಅಂದುಕೊಂಡಿದ್ದನೇನೋ !

ಭೂಂಗಿ ಬಂದು ಗಂಡ ಗೂದಡನಿಗೆ ಹೇಳಿದಳು – ''ಈಗ ಮೀಸೆ ಬೋಳಿಸಿಕೋ, ಗಡ್ಡ ಸುಟ್ಟವನೇ. ನಾನಂತಿದ್ದೆ ಗಂಡು ಮಗುವಾಗುತ್ತೆ ಅಂತ. ನೀನು ಕೇಳ್ತಿರಲಿಲ್ಲ. ನಿಂದೇ ನೀ ಜಪ ಮಾಡ್ತಿದ್ದೆ. ಈಗ ನಾನು ನಿನ್ನ ಮೀಸೆ ಬೋಳಿಸ್ತೀನಿ. ಒಂದು ಚಿಕ್ಕ ಮೊಳೆಯಷ್ಟು ಸಹ ಬಿಡೋದಿಲ್ಲ, ನೋಡ್ತೀರು.''

ಗೂದಡ ಹೇಳಿದ– ''ಒಳ್ಳೇದು, ಬೋಳಿಸು ಮಹಾರಾಯಿತಿ, ಮೀಸೆಯೇನು ಮತ್ತೆ ಬೆಳೆಯೋಲ್ಲ ಅನ್ನುತ್ತೆಯೆ ? ಮೂರು ದಿನ ಬಿಟ್ಟು ನೋಡೂವಂತೆ, ಹೇಗಿತ್ತೋ ಹಾಗೇ ಆಗುತ್ತೆ. ಆದರೆ ಈಗಲೇ ಹೇಳಿಬಿಡ್ತೀನಿ, ಏನು ಸಿಗುತ್ತೋ ಅದರಲ್ಲಿ ಅರ್ಧ ನನಗೆ ಕೊಟ್ಟುಬಿಡಬೇಕು.''

ಭೂಂಗಿ ಅವನ ಮೂತಿ ತಿವಿದು ತನ್ನ ಮೂರು ತಿಂಗಳ ಗಂಡು ಮಗುವನ್ನು ಗುದಡನ ಸುಪರ್ದಿಗೆ ಒಪ್ಪಿಸಿ ಮಹೇಶನಾಥರ ಸಿಪಾಯಿಯ ಜೊತೆ ಹೊರಡಲು ಎದ್ದು ನಿಂತಳು.

ಗೂದಡ ಕೂಗಿಕೊಂಡ– ''ಅರೇ, ಕೇಳೇ ಇಲ್ಲಿ. ಎಲ್ಲಿ ಓಡಿಹೋಗ್ತಿದಿ. ನಾನೂ ಹೋಗಿ ಹಾರೈಕೆ ಹೇಳಿ ಬರಬೇಕಾಗಿದೆ. ಇದನ್ನ ಯಾರು ನೋಡಿಕೋತಾರೆ ?''

ಭೂಂಗಿ ದೂರದಿಂದಲೇ ಅರಚಿದಳು– ''ಅದನ್ನ ಅಲ್ಲೇ ನೆಲದ ಮೇಲೆ ಮಲಗಿಸಿ ಹೋಗು. ನಾನು ಬಂದು ಹಾಲು ಕುಡಿಸ್ತೀನಿ.''

## 2

ಮಹೇಶನಾಥರ ಮನೆಯಲ್ಲಿ ಈ ಸಲ ಭೂಂಗಿಗೆ ಚೆನ್ನಾಗಿ ಆದರ ಸತ್ಕಾರಗಳಾಗತೊಡಗಿದವು. ಬೆಳಗ್ಗೆ ಹರೀರಾ*; ಮಧ್ಯಾಹ್ನ ಪೂರಿ, ಕೇಸರಿಭಾತು; ಮತ್ತೆ ಮಧ್ಯಾಹ್ನ; ಮತ್ತೆ ರಾತ್ರಿ. ಗೂದಡನಿಗೂ ತಟ್ಟೆ ತುಂಬ ಬಡಿಸುತ್ತಿದ್ದರು. ಭೂಂಗಿ ಸ್ವತಃ ತನ್ನ ಮಗುವಿಗೆ ದಿನದಲ್ಲಿ ಎರಡು ಸಲಕ್ಕಿಂತ ಹೆಚ್ಚಾಗಿ ಹಾಲು ಕುಡಿಸಲಾಗುತ್ತಿರಲಿಲ್ಲ. ಅದಕ್ಕೆಂದು ಮೇಲೆ ಹಸುವಿನ ಹಾಲಿನ ವ್ಯವಸ್ಥೆಯಾಗಿತ್ತು. ಭೂಂಗಿಯ ಎದೆ ಹಾಲನ್ನು ಬಾಬೂ ಸಾಹೇಬರ ಮಗ ಕುಡಿಯುತ್ತಿದ್ದ. ಈ ಕ್ರಮ ಹನ್ನೆರಡನೆಯ ದಿನವಾದರೂ ನಿಲ್ಲಲಿಲ್ಲ. ಯಜಮಾನಿ ಗಟ್ಟಿಮುಟ್ಟಾದ ಹೆಂಗಸು; ಆದರೂ ಯಾವುದೋ ಯೋಗದಿಂದ ಅವಳಲ್ಲಿ ಈ ಸಲ ಹಾಲಿಲ್ಲದೇ ಹೋಯಿತು. ಮೂರು ಹೆಣ್ಣುಮಕ್ಕಳು ಹುಟ್ಟಿದಾಗಲೂ ಅವಕ್ಕೆ ಅಜೀರ್ಣವಾಗುವಷ್ಟು ಹಾಲಿತ್ತು. ಈಗ ಒಂದು ತೊಟ್ಟೂ ಇಲ್ಲ. ಭೂಂಗಿ ಮಗುವಿಗೆ ದಾದಿಯೂ ಆದಳು; ಹಾಲು ಕೊಡುವವಳೂ ಆದಳು.

---

*ಹಾಲಿನಿಂದ ಮಾಡಿದ ಒಂದು ಭಕ್ಷ್ಯ; ಬಾಣಂತಿಯರಿಗೆ ಬಲವರ್ಧನಕ್ಕಾಗಿ ಕೊಡುತ್ತಾರೆ.

ಯಜಮಾನಿ ಹೇಳುತ್ತಿದ್ದಳು – "ಭೂಂಗಿ, ನನ್ನ ಕಂದಂಗೆ ಹಾಲು ಕೊಟ್ಟು ಬೆಳಸಿದರೆ, ನೀನು ಬದುಕಿರೋವರೆಗೂ ಕೂತುಕೊಂಡು ತಿಂತಿರಬಹುದು. ಐದು ಬೀಘಾ ಜಮೀನು ಕೊಡಸ್ತೀನಿ. ಮೊಮ್ಮಕ್ಕಳು ಮರಿಮಕ್ಕಳ ಕಾಲದವರೆಗೆ ಸುಖವಾಗಿರಬಹುದು, ನೋಡು."

ಭೂಂಗಿಯ ಮಗು ಹೊರಗಿನ ಹಾಲನ್ನು ಅರಗಿಸಿಕೊಳ್ಳಲಾರದೆ ಮತ್ತೆ ಮತ್ತೆ ವಾಂತಿ ಮಾಡಿಕೊಳ್ಳುತ್ತಿತ್ತು; ದಿನದಿನಕ್ಕೆ ಬಡವಾಗುತ್ತ ಹೋಯಿತು.

ಭೂಂಗಿ ಹೇಳುತ್ತಿದ್ದಳು– "ಅಮ್ಮಾವ್ರೇ, ಈಗಲೇ ಹೇಳಿಬಿಟ್ಟಿದ್ದೀನಿ. ಮಗೂನ ಚೌಲದಲ್ಲಿ ನನಗೆ ಬಳೆ ಕೊಡಬೇಕು."

ಯಜಮಾನಿ ಉತ್ತರ ಕೊಡುತ್ತಿದ್ದಳು – "ಹ್ಞೂ, ಹ್ಞೂ, ಕೊಡೋಣಂತೆ. ಯಾಕೆ ಬೆದರಿಕೆ ಹಾಕ್ತಿ. ಬೆಳ್ಳೀದು ಬೇಕೋ, ಚಿನ್ನದ್ದು ಬೇಕೋ."

"ಸರಿಹೋಯ್ತು ಅಮ್ಮಾವ್ರೇ, ಬೆಳ್ಳೀ ಬಳೆ ತೊಟ್ಟುಕೊಂಡು ಯಾರಿಗೆ ಮುಖ ತೋರಿಸಲಿ. ಆಮೇಲೆ ಜನ ಯಾರನ್ನ ಆಡಿಕೊಳ್ತಾರೆ, ಹೇಳಿ."

"ಒಳ್ಳೇದು, ಚಿನ್ನದ್ದೇ ಕೊಡೋಣಂತೆ, ಹೇಳಿಬಿಟ್ಟಿದೀನಲ್ಲ."

"ಅಲ್ಲದೇ ಮದುವೇಲಿ ಕತ್ತಿನ ಸರ ಕೊಡಬೇಕು. ನಮ್ಮೋರಿಗೆ ಕೈಗೆ ತೋಡಾ ಕೊಡಬೇಕು."

"ಅದನ್ನು ಕೊಡೋಣಂತೆ. ದೇವರು ಆ ದಿನ ಕಾಣಿಸೋದಾಗಲಿ."

ಮನೆಯಲ್ಲಿ ಯಜಮಾನಿಯ ನಂತರ ಭೂಂಗಿಯದೇ ರಾಜ್ಯ. ನೀರಾಳು, ಅಡಿಗೆಯಾಳು ಮತ್ತು ಇತರ ಆಳುಕಾಳುಗಳೆಲ್ಲರೂ ಅವಳ ದರ್ಪಕ್ಕೆ ತಲೆಬಾಗುತ್ತಿದ್ದರು. ಅವಳು ಒಂದು ಸಲ ಮಹೇಶನಾಥರನ್ನೇ ಅಟ್ಟಿಕೊಂಡಿದ್ದಳು. ಆದರೆ ಅದು ಹೇಗೋ ನಗುವಿನಲ್ಲಿ ತೇಲಿಹೋಯಿತು. ಜಾಡಮಾಲಿಗಳ ಮಾತು ಬಂದಿತ್ತು. ಮಹೇಶನಾಥರು ಹೇಳಿದರು– "ಪ್ರಪಂಚದಲ್ಲಿ ಏನು ಬೇಕಾದರೂ ಆಗಬಹುದು. ಆದರೆ ಜಾಡಮಾಲಿಗಳು ಮಾತ್ರ ಜಾಡಮಾಲಿಗಳಾಗಿಯೇ ಇರ್ತಾರೆ. ಅವರನ್ನ ಮನುಷ್ಯರನ್ನಾಗಿ ಮಾಡೋದು ಕಷ್ಟ."

ಅದಕ್ಕೆ ಭೂಂಗಿ ಉತ್ತರ ಕೊಟ್ಟಿದ್ದಳು – "ಜಾಡಮಾಲಿಗಳು ದೊಡ್ಡದೊಡ್ಡೋರನ್ನೆಲ್ಲಾ ಮನುಷ್ಯರನ್ನಾಗಿ ಮಾಡ್ತಾರೆ. ಅವರನ್ನ ಯಾರು ಏನು ಮನುಷ್ಯರನ್ನಾಗಿ ಮಾಡಬೇಕು."

ಬೇರೆ ಯಾವುದಾದರೂ ಸಂದರ್ಭದಲ್ಲಿ ಈ ಬಗೆಯ ದಿಟ್ಟತನ ತೋರಿಸಿದ್ದಿದ್ದರೆ ಭೂಂಗಿ ಬದುಕಿ ಉಳಿಯುತ್ತಿದ್ದಳೆ ? ಆದರೆ ಇವತ್ತು ಬಾಬೂ ಸಾಹೇಬರು ಖೊಕ್ಕನೆ ನಗುತ್ತ ಹೇಳಿದರು– "ಭೂಂಗಿ ಬಲು ನಾಜೋಕಾಗಿ ಮಾತಾಡ್ತಾಳೆ."

## 3

ಭೂಂಗಿಯ ದರ್ಬಾರು ಒಂದು ವರ್ಷಕ್ಕೂ ಹೆಚ್ಚುಕಾಲ ನಡೆಯುವುದಾಗಲಿಲ್ಲ.

ಮಹೇಶನಾಥರ ಮನೆದೇವರುಗಳು ಜಾಡಮಾಲಿಯಿಂದ ಹಾಲು ಕುಡಿಸುವುದಕ್ಕೆ ಅಡ್ಡಿ ಒಡ್ಡಿದ್ದರು. ಮೋಟೇರಾಮಶಾಸ್ತ್ರಿಗಳಂತೂ ಪ್ರಾಯಶ್ಚಿತ್ತವಾಗಬೇಕೆಂದು ಪಟ್ಟು ಹಿಡಿದರು. ಹಾಲನ್ನೇನೋ ಬಿಡಿಸಿದ್ದಾಯಿತು; ಆದರೆ ಪ್ರಾಯಶ್ಚಿತ್ತದ ಮಾತು ನಗುವಿನಲ್ಲಿ ಹಾರಿಹೋಯಿತು. ಮಹೇಶನಾಥರು ಗದರಿಕೆಯ ಧ್ವನಿಯಲ್ಲಿ ಹೇಳಿದರು– "ಚೆನ್ನಾಗಿ ಹೇಳಿದಿರಿ ಪ್ರಾಯಶ್ಚಿತ್ತ ಅಂತ. ನಿನ್ನೆ ತನಕ ಅದೇ ಜಾಡಮಾಲಿಯ ರಕ್ತದ ಮೇಲೆ ಮಗೂ ಬೆಳೀತು. ಈಗ ಅದರಲ್ಲಿ ಸೋಂಕು ಬಂದುಬಿಡ್ತು ಅಲ್ಲವೆ ? ಚೆನ್ನಾಗಿದೆ ನಿಮ್ಮ ಧರ್ಮ."

ಶಾಸ್ತ್ರಿಗಳು ಜುಟ್ಟನ್ನು ಜಾಡಿಸುತ್ತ ಹೇಳಿದರು– "ನಿನ್ನೆ ತನಕ ಮಗು ಜಾಡಮಾಲಿಯ ರಕ್ತದ ಮೇಲೆ ಬೆಳೀತು ಅನ್ನೋದು ನಿಜ. ಮಾಂಸದ ಮೇಲೂ ಬೆಳೀತು, ಅದೂ ನಿಜ. ಆದರೆ ನಿನ್ನೆಯ ಮಾತು ನಿನ್ನೇಗಾಯಿತು, ಇವತ್ತಿನ ಮಾತು ಇವತ್ತಿಗೆ. ಜಗನ್ನಾಥ ಪುರಿಯಲ್ಲಿ ಸ್ಪೃಶ್ಯ–ಅಸ್ಪೃಶ್ಯರಿಬ್ಬರೂ ಒಂದೇ ಪಂಕ್ತೀಲಿ ಊಟ ಮಾಡ್ತಾರೆ. ಮೈಗೆ ಹುಷಾರಿಲ್ಲದಾಗ ಬಟ್ಟೆ ಹಾಕ್ಕೊಂಡೇ ಉಣ್ತೇವಿ; ಬೇಯಿಸಿದ ಕಿಚಡೀನ ಸಹ ತಿಂತೀವಿ. ಆದರೆ ಹುಷಾರಾದ ಮೇಲೆ ನೇಮಾನ ಪಾಲಿಸಲೇಬೇಕಾಗುತ್ತೆ. ಅಪದ್ಧರ್ಮದ ಮಾತೇ ಬೇರೆ ಆಗುತ್ತೆ."

"ಅಂದರೆ ಇದರ ಅರ್ಥ ಧರ್ಮ ಬದಲಾಯಿಸ್ತಾ ಇರುತ್ತೆ – ಒಮ್ಮೆ ಒಂದು ತರಹ, ಇನ್ನೊಮ್ಮೆ ಇನ್ನೊಂದು ತರಹ ಅಂತಾನೇ."

"ಮತ್ತೇನು ? ರಾಜನ ಧರ್ಮ ಬೇರೆ. ಪ್ರಜೆಯ ಧರ್ಮ ಬೇರೆ; ಶ್ರೀಮಂತರ ಧರ್ಮ ಬೇರೆ, ಬಡವರ ಧರ್ಮ ಬೇರೆ. ರಾಜಮಹಾರಾಜರು ಏನು ಬೇಕಾದರೂ ತಿನ್ನಬಹುದು; ಯಾರ ಕೈಯಿಂದ ಬೇಕಾದರೂ ತಿನ್ನಬಹುದು. ಯಾರನ್ನಬೇಕಾದರೂ ಮದುವೆಯಾಗಬಹುದು. ಅವರಿಗೇನೂ ಬಂಧನವಿಲ್ಲ. ಅವರು ಸಮರ್ಥ ಪುರುಷರು. ಬಂಧನ ಯಾವಾಗಲೂ ನಡುವಿನವರಿಗೆ."

ಪ್ರಾಯಶ್ಚಿತ್ತ ನಡೆಯಲಿಲ್ಲ. ಆದರೆ ಭೂಂಗಿ ಪಟ್ಟ ಬಿಟ್ಟು ಕೆಳಗಿಳಿಯಬೇಕಾಯಿತು. ಹೌದು, ತನ್ನೊಬ್ಬಳಿಂದ ಹೊರಲಾರದಷ್ಟು ದಾನ ದಕ್ಷಿಣೆ ಸಿಕ್ಕಿತು, ಚಿನ್ನದ ಬಳೆಯೂ ಸಿಕ್ಕಿತು. ಒಂದಲ್ಲ, ಎರಡು ಸುಂದರವಾದ ಹೊಸ ಸೀರೆಗಳು – ಹೆಣ್ಣುಮಕ್ಕಳು ಹುಟ್ಟಿದಾಗ ಸಿಕ್ಕಿದ್ದಂತಹ ಮಾಮೂಲಿನ ಥಳಕಿನದಲ್ಲ.

## 4

ಅದೇ ವರ್ಷ ಊರಿಗೆ ಪ್ಲೇಗುಮಾರಿ ಜೋರಾಗಿ ಬಡಿಯಿತು. ಎಲ್ಲರಿಗಿಂತ ಮುಂಚೆ ಅದಕ್ಕೆ ಗೂದಡ ತುತ್ತಾದ. ಭೂಂಗಿ ಒಬ್ಬಂಟಿಯಾಗಿ ಉಳಿದಳು, ಆದರೆ ಅವಳ ಸಂಸಾರ ಎಂದಿನಂತೆ ಸಾಗುತ್ತಿತ್ತು. ಇನ್ನು ಭೂಂಗಿ ಹಾಳಾದಳೆಂದುಕೊಂಡು ಜನ ಸಮಯ ಕಾದು ಕುಳಿತರು. ಅವಳಿಗೆ ಮತ್ತೆ ಮದುವೆ ಮಾಡಿಸುವ ವಿಷಯದಲ್ಲಿ ಯಾವನೋ ಜಾಡಮಾಲಿಯೊಡನೆ ಮಾತುಕತೆಯಾಯಿತು; ಯಾವನೋ ಕುಲದ

ಮುಖ್ಯಸ್ಥ ಬಂದ. ಆದರೆ ಭೂಂಗಿ ಎಲ್ಲೂ ಹೋಗಲಿಲ್ಲ, ಬರಲಿಲ್ಲ. ಐದು ವರ್ಷ ಕಳೆಯಿತು. ಅವಳ ಮಗ ಮಂಗಳ ಸದಾ ರೋಗದಿಂದ ಬಳಲುತ್ತ ದುರ್ಬಲನಾಗಿದ್ದರೂ ಓಡಾಡತೊಡಗಿದ. ಮಹೇಶನಾಥರ ಮಗ ಸುರೇಶನ ಮುಂದೆ ಅವನು ತುಂಬ ಪಿಚಾಗಿ ಕಾಣುತ್ತಿದ್ದ.

ಒಂದು ದಿನ ಭೂಂಗಿ ಮಹೇಶನಾಥರ ಮನೆಯ ಬಚ್ಚಲು ತೊಳೆಯುತ್ತಿದ್ದಳು. ತಿಂಗಳುಗಟ್ಟಲೆಯಿಂದ ಗಲೀಜು ಕಟ್ಟಿಕೊಂಡಿತ್ತು. ಅಂಗಳದಲ್ಲಿ ನೀರು ತುಂಬಿಕೊಳ್ಳತೊಡಗಿತ್ತು. ಬಚ್ಚಲಿಗೆ ಉದ್ದನೆಯ ಗಳುವನ್ನು ತೂರಿಸಿ ಜೋರಾಗಿ ಅಳ್ಳಾಡಿಸುತ್ತಿದ್ದಳು. ಇಡೀ ಬಲಗೈ ಬಚ್ಚಲೊಳಗಿತ್ತು. ಭೂಂಗಿ ಇದ್ದಕ್ಕಿದ್ದಂತೆ ಕಿರಿಚಿ ಕೈ ಹೊರತೆಗೆದಳು. ಅದೇ ಹೊತ್ತಿಗೆ ಕರಿಯ ಹಾವೊಂದು ಬಚ್ಚಲೊಳಗಿನಿಂದ ಹೊರಬಂದು ಹರಿದುಹೋಯಿತು. ಜನ ಓಡಿಬಂದು ಅದನ್ನು ಹೊಡೆದು ಹಾಕಿದರು. ಆದರೆ ಭೂಂಗಿಯನ್ನು ಉಳಿಸಲಾಗಲಿಲ್ಲ. ನೀರುಹಾವು, ವಿಷವಿರುವುದಿಲ್ಲ ಎಂದುಕೊಂಡು ಮೊದಮೊದಲು ಅಲಕ್ಷ್ಯ ಮಾಡಿದರು. ಆದರೆ ವಿಷ ದೇಹದಲ್ಲಿ ಹರಡಿ, ಚಳುಕು ಷುರುವಾದಾಗ ಗೊತ್ತಾಯಿತು, ಅದು ನೀರುಹಾವಲ್ಲ, ಗೋದಿನಾಗರವೆಂದು.

ಮಂಗಳ ಅನಾಥನಾದ. ಈಗ ಅವನಿಗೆ ದಿನವಿಡೀ ಮಹೇಶನಾಥರ ಮನೆ ಬಾಗಿಲಲ್ಲಿ ಸುಳಿದಾಡುವುದೊಂದೇ ಕೆಲಸ. ಅವರ ಮನೆಯಲ್ಲಿ ಅವನಂತಹ ಐದು ಹತ್ತು ಹುಡುಗರು ಉಂಡು ಬೆಳೆಯುವಷ್ಟು ಎಂಜಲು-ತಂಗಳು ಉಳಿಯುತ್ತಿತ್ತು. ಊಟಕ್ಕೇನೂ ಕೊರತೆಯಿರಲಿಲ್ಲ, ನಿಜ. ಆದರೆ ಒಂದು ಮಾತ್ರ ಅವನಿಗೆ ಸರಿಬೀಳುತ್ತಿರಲಿಲ್ಲ. ಎಲ್ಲರೂ ಉಂಡಾದಮೇಲೆ ಅವನಿಗೆ ಮಣ್ಣಿನ ತಟ್ಟೆಯಲ್ಲಿ ಅನ್ನವಿಕ್ಕುತ್ತಿದ್ದರು. ಅದೂ ಮುಟ್ಟಿಸಿಕೊಳ್ಳದಂತೆ, ದೂರದಿಂದ ಎಲ್ಲರೂ ಒಳ್ಳೊಳ್ಳೆಯ ಪಾತ್ರೆಗಳಲ್ಲಿ ಊಟ ಮಾಡಿದರೆ ಅವನಿಗೆ ಮಾತ್ರ ಮಣ್ಣಿನ ತಟ್ಟೆ!

ಅವನಿಗೆ ಈ ಭೇದಭಾವದ ಪ್ರಜ್ಞೆಯೇ ಇರಲಿಲ್ಲ. ಆದರೆ ಜೊತೆಯ ಹುಡುಗರು ಅವನನ್ನು ಚುಡಾಯಿಸಿ ಅವಮಾನ ಮಾಡುತ್ತಿದ್ದರು. ಅವನ ಜೊತೆ ಯಾರೂ ಆಡುತ್ತಲೂ ಇರಲಿಲ್ಲ. ಅವನು ಮಲಗುತ್ತಿದ್ದ ಮಂಚ ಸಹ ಅಸ್ಪೃಶ್ಯವೆನಿಸಿಕೊಳ್ಳುವಷ್ಟರಮಟ್ಟಿಗೆ ಈ ವರ್ತನೆ ಹೋಗಿತ್ತು. ಮನೆಯ ಮುಂದೆ ಒಂದು ಬೇವಿನ ಮರವಿತ್ತು. ಆ ಮರದ ಕೆಳಗೆ ಮಂಗಳನ ಬಿಡಾರ. ಒಂದು ಮುರಿದ ತುಂಡಾದ ಮಂಚ, ಎರಡು ಮಣ್ಣಿನ ತಟ್ಟೆ, ಸುರೇಶಬಾಬು ಉಟ್ಟುಬಿಟ್ಟಿದ್ದ ಒಂದು ಪಂಚೆ – ಇವು ಅವನ ಆಸ್ತಿ. ಬೇಸಿಗೆ, ಚಳಿಗಾಲ, ಮಳೆಗಾಲ – ಯಾವುದೇ ಹವಾಮಾನದಲ್ಲಾಗಲೀ ಆ ಜಾಗ ಒಂದೇ ರೀತಿ ಆರಾಮ ಕೊಡುತ್ತಿತ್ತು. ಅದೃಷ್ಟವೆಂದರೆ ಮೈ ಸುಡುವ ಬಿಸಿಗಾಳಿಯಲ್ಲಾಗಲೀ, ಮೈ ಮುದುಡಿಸುವ ಚಳಿಗಾಳಿಯಲ್ಲಾಗಲೀ, ಮುಸಲಧಾರೆಯಂತೆ ಬೀಳುವ ಮಳೆಯಲ್ಲಾಗಲೀ ಮಂಗಳ ಬದುಕಿ ಉಳಿದಿದ್ದುದಷ್ಟೇ ಅಲ್ಲ, ಮೊದಲಿಗಿಂತ ಸ್ವಲ್ಪ ಚೆನ್ನಾಗಿಯೇ ಆರೋಗ್ಯವಾಗಿದ್ದ. ಅವನಿಗೆ ತನ್ನದೆಂದುಕೊಳ್ಳುವುದೇನಾದರೂ ಇದ್ದರೆ ಅದು ಆ ಹಳ್ಳಿಯ ಒಂದು ನಾಯಿ. ಅದು ತನ್ನ ಜೊತೆನಾಯಿಗಳ ಕಾಟ ಸಹಸಲಾರದೆ

ಮಂಗಳನ ಆಶ್ರಯ ಪಡೆದಿತ್ತು. ಮಂಗಳ, ಆ ನಾಯಿ ಇಬ್ಬರೂ ಒಂದೇ ಊಟ ಮಾಡುತ್ತಿದ್ದರು; ಒಂದೇ ಮಂಚದ ಮೇಲೆ ಮಲಗುತ್ತಿದ್ದರು. ಪ್ರಕೃತಿ ಸಹ ಇಬ್ಬರದೂ ಒಂದೇ ಆಗಿತ್ತು. ಇಬ್ಬರೂ ಒಬ್ಬರು ಇನ್ನೊಬ್ಬರ ಸ್ವಭಾವವನ್ನು ಚೆನ್ನಾಗಿ ಅರಿತುಕೊಂಡಿದ್ದರು. ಅವರ ನಡುವೆ ಯಾವಾಗಲೂ ಜಗಳವಾಗುತ್ತಿರಲಿಲ್ಲ.

ಹಳ್ಳಿಯ ಧರ್ಮಸಂರಕ್ಷಕರು ಬಾಬೂಸಾಹೇಬರ ಈ ಉದಾರತೆಯನ್ನು ಕಂಡು ಆಶ್ಚರ್ಯಪಡುತ್ತಿದ್ದರು. ಮಹೇಶನಾಥರ ಮನೆಯ ಬಾಗಿಲಿಗೆ ಎದುರಾಗಿ, ಐವತ್ತು ಅಡಿಗೂ ಕಡಿಮೆ ದೂರದಲ್ಲಿ ಮಂಗಳ ವಾಸಿಸುತ್ತಿದ್ದುದು ಅವರಿಗೆ ಹದಿನಾರಾಣೆ ಧರ್ಮ ವಿರುದ್ಧವೆಂದು ತೋರಿತ್ತು. "ಛೀ ! ಇದೇ ಸ್ಥಿತಿಯಾದರೆ ಕೆಲವೇ ದಿನಗಳಲ್ಲಿ ಧರ್ಮದ ಅಂತ್ಯವೆಂದುಕೊಳ್ಳಿ. ಜಾಡಮಾಲಿಗಳನ್ನು ಮಾಡಿದವನೂ ದೇವರೇ. ಅದು ನಮಗೂ ಗೊತ್ತು. ಅವರಿಗೆ ಯಾವ ತರಹದ ಅನ್ಯಾಯವನ್ನೂ ಮಾಡಬಾರದೆಂದು ಯಾರು ತಿಳಿಯರು ? ಸ್ವತಃ ಭಗವಂತನ ಹೆಸರೇ 'ಪತಿತ-ಪಾವನ' ಎಂದಿದೆ. ಆದರೆ ಸಾಮಾಜಿಕ ಮರ್ಯಾದೆಯೆಂಬುದೂ ಒಂದಿದೆಯಲ್ಲವೆ! ಅವರ ಮನೆ ಬಾಗಿಲ ಬಳಿ ಹೋಗುವುದಕ್ಕೂ ಸಂಕೋಚವಾಗುತ್ತದೆ. ಹಳ್ಳಿಯ ಯಜಮಾನರು; ಹೋಗದೆ ವಿಧಿಯಿಲ್ಲ. ಆದರೆ ಇಷ್ಟು ತಿಳಿದುಕೊಳ್ಳಿ, ಹೋದರೆ ಜುಗುಪ್ಸೆಯಾಗುತ್ತದೆ" ಎಂದು ಅನ್ನುತ್ತಿದ್ದರು.

ಮಂಗಳ ಟಾಮಿಯರಲ್ಲಿ ಗಾಢವಾದ ಮೈತ್ರಿ ಬೆಳೆದಿತ್ತು. ಮಂಗಳ ಹೇಳುತ್ತಿದ್ದ– "ನೋಡು, ಟಾಮಿ, ಸ್ವಲ್ಪ ಒತ್ತಿಕೊಂಡು ಮಲಕ್ಕೋ. ಇಲ್ಲದೇ ಹೋದರೆ ನಾನೆಲ್ಲಿ ಕಾಲು ಚಾಚಲಿ ಹೇಳು. ಇಡೀ ಮಂಚಾನೇ ನೀನು ಆಕ್ರಮಿಸಿಕೊಂಡಿದೆ."

ಟಾಮಿ ಕುಯ್ಯೆಂದು ಬಾಲ ಅಲ್ಲಾಡಿಸುತ್ತ ಪಕ್ಕಕ್ಕೆ ಒತ್ತಿಕೊಳ್ಳುವ ಬದಲು ಇದ್ದಿದ್ದೂ ಮೈಮೇಲೆ ಹತ್ತಿ ಮಂಗಳನ ಮುಖ ನೆಕ್ಕುತ್ತಿತ್ತು.

ಮಂಗಳ ದಿನವೂ ಒಂದು ಸಲ ತನ್ನ ಮನೆಗೆ ಹೋಗುತ್ತಿದ್ದ – ಸ್ವಲ್ಪ ಹೊತ್ತು ಅಲ್ಲಿದ್ದು, ಅತ್ತು ಬರಲೆಂದು. ತಾಯಿ ಸತ್ತ ಮೊದಲು ವರ್ಷ ಹುಲ್ಲಿನ ಚಪ್ಪರ ಮುರಿದುಬಿತ್ತು; ಎರಡನೆಯ ವರ್ಷ ಗೋಡೆ ಕೆಳಗುರುಳಿತು. ಈಗ ಕೇವಲ ಮುರುಕು ಗೋಡೆಗಳಷ್ಟೇ ತಮ್ಮ ಮೊನಚಾದ ಮೇಲುತುದಿಯನ್ನು ತೋರಿಸುತ್ತ ನಿಂತಿದ್ದವು. ಅವನಿಗೆ ಪ್ರೀತಿಯ ಸಂಪತ್ತು ದೊರೆತಿದ್ದುದು ಇಲ್ಲಿಯೇ. ಅದೇ ಸ್ಮೃತಿ, ಅದೇ ಆಕರ್ಷಣೆ, ಅದೇ ತೃಷೆ ಅವನನ್ನು ದಿನಕ್ಕೊಂದು ಸಲ ಆ ಪಾಳಿಗೆ ಎಳೆದುಕೊಂಡು ಹೋಗುತ್ತಿತ್ತು. ಟಾಮಿ ಸದಾ ಅವನ ಜೊತೆಗಿರುತ್ತಿತ್ತು. ಮಂಗಳ ಮನೆಯ ಮೋಟುಗೋಡೆಯ ಮೇಲೆ ಕುಳಿತುಕೊಂಡು ಜೀವನದ ಕಳೆದ ಹಾಗೂ ಮುಂಬರುವ ಸ್ವಪ್ನಗಳನ್ನು ಕಾಣುತ್ತಿದ್ದ. ಟಾಮಿ ಮತ್ತೆ ಮತ್ತೆ ನೆಗೆದು ಅವನ ತೊಡೆಯ ಮೇಲೆ ಕುಳಿತುಕೊಳ್ಳುವ ಅಸಫಲ ಪ್ರಯತ್ನ ಮಾಡುತ್ತಿತ್ತು.

## 5

ಒಂದು ದಿನ ಕೆಲವು ಹುಡುಗರು ಆಡುತ್ತಿದ್ದರು. ಮಂಗಳನೂ ಅಲ್ಲಿ ಬಂದು ದೂರ ನಿಂತುಕೊಂಡ. ಸುರೇಶನಿಗೆ ಅವನ ಮೇಲೆ ದಯೆ ಬಂತೋ, ಆಡುವವರ ಜೋಡಿ ಸಾಲದೆ ಬಿತ್ತೋ ಹೇಳಲಾಗುವುದಿಲ್ಲ. ಏನೇ ಇರಲಿ, ಅವತ್ತು ಮಂಗಳನನ್ನು ಆಟಕ್ಕೆ ಸೇರಿಸಿಕೊಳ್ಳಲು ಅವನು ಒಪ್ಪಿಗೆ ಕೊಟ್ಟ. ಇಲ್ಲಿ ನೋಡುವುದಕ್ಕೆ ಯಾರು ಬರುತ್ತಾರೆ. "ಏನೋ, ಮಂಗಳ, ಆಡ್ತೀಯೇನೋ ?"

ಮಂಗಳ ಹೇಳಿದ– "ಇಲ್ಲಣ್ಣ, ದಣೇರು ನೋಡಿದರೆ ನನ್ನ ಚರ್ಮ ಸುಲೀತಾರೆ. ನಿನಗೇನಂತೆ, ನಿನ್ನ ಪಾಡಿಗೆ ನೀನು ಸುಮ್ಮನಿರ್ತಿ."

"ಅರೆ, ಇಲ್ಲಿ ನೋಡೋಕ್ಕೆ ಯಾರು ಬರ್ತಾರೋ. ಬಾ, ನಾವು ಸವಾರಿ ಆಟ ಆಡೋಣ. ನೀನು ಕುದುರೆಯಾಗು, ನಾವು ನಿನ್ನ ಮೇಲೆ ಹತ್ತಿ ಸವಾರಿ ಮಾಡ್ತೀವಿ."

ಮಂಗಳ ಅನುಮಾನಿಸಿದ– "ನಾನೇನು ಬರೀ ಕುದುರೆಯೇ ಆಗಿರ್ತೀನೋ, ಸವಾರೀನೂ ಮಾಡ್ತೀನೋ, ಇದು ಹೇಳಿ."

ಈ ಪ್ರಶ್ನೆಯಲ್ಲಿ ಡೊಂಕಿತ್ತು. ಇದರ ಬಗ್ಗೆ ಯಾರೂ ವಿಚಾರ ಮಾಡಿರಲಿಲ್ಲ. ಸುರೇಶ ಒಂದು ಕ್ಷಣ ಯೋಚಿಸಿ ಹೇಳಿದ– "ನಿನ್ನನ್ನು ಯಾರು ಬೆನ್ನ ಮೇಲೆ ಕೂರಿಸಿಕೋತಾರೆ ಯೋಚಿಸು ? ನೀನು ಜಾಡಮಾಲಿಯೋ ಅಲ್ಲವೋ ?"

ಮಂಗಳನೂ ಕೊಂಚ ಬಿರುಸಾಗಿಯೇ ಹೇಳಿದ– "ನಾನು ಜಾಡಮಾಲಿ ಅಲ್ಲ ಅಂತ ಯಾವಾಗ ಹೇಳಿದೆ ? ಆದರೆ ನಿನಗೆ ಹಾಲು ಕೊಟ್ಟು ಬೆಳೆಸಿದೋಳು ನಮ್ಮವ್ವನೇ. ನನಗೂ ಸವಾರಿ ಮಾಡೋಕ್ಕೆ ಅವಕಾಶ ಕೊಡದೆ ಹೋದರೆ ನಾನು ಕುದುರೆಯಾಗೋಲ್ಲ. ನೀವು ಬಲು ಜಾಣರು. ನೀವು ಮಜವಾಗಿ ಸವಾರಿ ಮಾಡ್ತೀರಿ, ನಾನು ಕುದುರೆಯಾಗಿಯೇ ಇರ್ತೀನಿ."

"ನೀನು ಕುದುರೆಯಾಗಲೇಬೇಕು" ಎಂದು ಗದರಿಸಿಕೊಂಡು ಸುರೇಶ ಮಂಗಳನನ್ನು ಹಿಡಿಯಲು ಹೋದ. ಮಂಗಳ ಓಡಿದ; ಸುರೇಶ ಅವನನ್ನು ಅಟ್ಟಿಸಿಕೊಂಡು ಹೋದ. ಮಂಗಳ ಹೆಜ್ಜೆಯನ್ನು ಜೋರು ಮಾಡಿದ; ಸುರೇಶನೂ ಜೋರಾಗಿ ಓಡಿದ. ಆದರೆ ಚೆನ್ನಾಗಿ ತಿಂದೂ ತಿಂದೂ ಅವನ ಮೈ ಜೋತುಬಿದ್ದಿತು. ಓಡಿದಾಗ ಅವನಿಗೆ ಉಸಿರುಕಟ್ಟುತ್ತಿತ್ತು.

ಕೊನೆಗೆ ಸುರೇಶ ಓಡುವುದನ್ನು ನಿಲ್ಲಿಸಿ ಹೇಳಿದ– "ಬಂದು ಕುದುರೆಯಾಗೋ, ಮಂಗಳ. ಇಲ್ಲದೇ ಹೋದರೆ ನೀನು ಕೈಗೆ ಸಿಕ್ಕಿದಾಗ ಚೆನ್ನಾಗಿ ಹಾಕಿ ಹೊಡೀತೀನಿ, ನೋಡು."

"ಹಾಗಾದರೆ ನೀನೂ ಕುದುರೆಯಾಗಬೇಕು."

"ಒಳ್ಳೇದು ಆಗ್ತೀನಿ."

"ಇಲ್ಲ, ನೀನು ಆಮೇಲಿಂದ ತಪ್ಪಿಸಿಕೋತಿ. ಮೊದಲು ನೀನು ಕುದುರೆಯಾಗು,

ನಾನು ಸವಾರಿ ಮಾಡ್ತೀನಿ. ಆಮೇಲೆ ನಾನು ಕುದುರೆಯಾಗ್ತೀನಿ.''

ಸುರೇಶ ನಿಜವಾಗಿಯೂ ಮೋಸಮಾಡಬಯಸಿದ್ದ. ಮಂಗಳನ ವಾದವನ್ನು ಕೇಳಿ ತನ್ನ ಜೊತೆಗಾರರಿಗೆ ಹೇಳಿದ– ''ನೋಡಿದಿರಾ ಇವನ ದುಷ್ಟತನಾನ ? ಎಷ್ಟಾದರೂ ಜಾಡಮಾಲಿ ಅಲ್ಲವೆ !''

ಮೂವರು ಮಂಗಳನನ್ನು ಮುತ್ತಿದರು, ಬಲವಂತದಿಂದ ಕುದುರೆ ಮಾಡಿದರು. ಸುರೇಶ ಅವನ ಬೆನ್ನಿನ ಮೇಲೆ ಕೂತು, 'ಹಶ್' 'ಹಶ್' ಎನ್ನುತ್ತ ಹೇಳಿದ– ''ನಡಿ, ಕುದುರೆ. ನಡಿ !''

ಮಂಗಳ ಸ್ವಲ್ಪ ದೂರ ನಡೆದ. ಆದರೆ ಸುರೇಶನ ಭಾರಕ್ಕೆ ಅವನ ಸೊಂಟ ಮುರಿದಂತಾಗುತ್ತಿತ್ತು. ಅವನು ಮೆಲ್ಲನೆ ಬೆನ್ನನ್ನು ಮುದುಡಿಕೊಂಡು ಸುರೇಶನ ತೊಡೆಯ ಸಂದಿನಿಂದ ಜಾರಿಕೊಂಡ. ಸುರೇಶ ಧೊಪ್ಪನೆ ನೆಲಕ್ಕೆ ಬಿದ್ದು ಬೊಂಬಡ ಹೊಡೆಯತೊಡಗಿದ.

ಸುರೇಶ ಅಳುತ್ತಿದ್ದುದು ತಾಯಿಗೆ ಕೇಳಿಸಿತು.

ಸುರೇಶ ಎಲ್ಲೇ ಅತ್ತರೂ ಅವಳ ಚುರುಕು ಕಿವಿಗೆ ಅದರ ನಾದ ಕೇಳಿಸದೇ ಇರುತ್ತಿರಲಿಲ್ಲ. ಅವನು ಸಹ ವಿಲಕ್ಷಣವಾಗಿ ಅಳುತ್ತಿದ್ದ – ನ್ಯಾರೋಗೇಜಿನ ಇಂಜನ್ನು ಸಿಳ್ಳುಹಾಕಿದಂತೆ !

''ಸುರೇಶ ಎಲ್ಲೋ ಅಳ್ತಿದಾನೆ. ಯಾರಾದರೂ ಹೊಡೆದರೇ ನೋಡು'' ಎಂದು ತಾಯಿ ಮುಸುರೆ ತಿಕ್ಕುವವಳಿಗೆ ಹೇಳಿದಳು.

ಅಷ್ಟರಲ್ಲಿ ಸುರೇಶ ತಾನೇ ಕಣ್ಣುಜ್ಜಿಕೊಳ್ಳುತ್ತ ಬಂದ. ಅವನಿಗೆ ಅಳುವ ಅವಕಾಶ ಸಿಕ್ಕಿದಾಗಲೆಲ್ಲಾ ಅಮ್ಮನ ಹತ್ತಿರ ತಪ್ಪದೆ ದೂರು ತೆಗೆದುಕೊಂಡು ಬರುತ್ತಿದ್ದ. ಅಮ್ಮ ಮಿಠಾಯಿಯನ್ನೋ ದ್ರಾಕ್ಷಿಬಾದಾಮಿಗಳನ್ನೋ ಕೊಟ್ಟು ಕಣ್ಣೊರಸುತ್ತಿದ್ದಳು. ವಯಸ್ಸು ಎಂಟಾದರೂ ಸುರೇಶ ಶುದ್ಧ ಮೂರ್ಖನಾಗಿದ್ದ. ಮಿತಿಮೀರಿದ ಆಹಾರದಿಂದ ಅವನ ದೇಹದ ಮೇಲೆ ಯಾವ ಪರಿಣಾಮವಾಗಿತ್ತೋ ಮಿತಿಮೀರಿದ ಪ್ರೀತಿಯಿಂದ ಅವನ ಬುದ್ಧಿಯ ಮೇಲೆ ಅದೇ ಪರಿಣಾಮವಾಗಿತ್ತು.

ತಾಯಿ ಕೇಳಿದಳು– ''ಯಾಕೆ ಅಳ್ತಿ, ಸುರೇಶ ? ಯಾರು ಹೊಡೆದರು ?''

ಸುರೇಶ ಅಳುತ್ತ ಹೇಳಿದ– ''ಮಂಗಳ ಮುಟ್ಟಿಬಿಟ್ಟ !''

ತಾಯಿಗೆ ನಂಬಿಕೆ ಬರಲಿಲ್ಲ. ಮಂಗಳ ಎಷ್ಟು ಶಾಂತಿಪ್ರಿಯನಾಗಿದ್ದನೆಂದರೆ ಅವನು ಏನಾದರೂ ಚೇಷ್ಟೆ ಮಾಡಿದನೆಂದು ಅನುಮಾನಿಸುವುದೂ ಸಾಧ್ಯವಿರಲಿಲ್ಲ. ಆದರೆ ಸುರೇಶ ಆಣೆ ಪ್ರಮಾಣ ಮಾಡಲು ಶುರು ಮಾಡಿದಾಗ ಅವನನ್ನು ನಂಬಲೇಬೇಕಾಯಿತು. ಯಜಮಾನಿ ಮಂಗಳನನ್ನು ಕರೆಸಿ ಜೋರುಮಾಡಿದಳು– ''ಯಾಕೋ ಮಂಗಳ, ನಿನಗೆ ಈಗ ಈ ಕೆಟ್ಟ ಬುದ್ಧಿ ಬಂತು ? ಸುರೇಶನನ್ನು ಯಾವಾಗಲೂ ಮುಟ್ಟಕೂಡದು ಅಂತ ಹೇಳಿರಲಿಲ್ಲವೆ ? ಜ್ಞಾಪಕವಿದೆಯೋ ಇಲ್ಲವೋ ಹೇಳು.''

ಮಂಗಳ ಮೆಲುದನಿಯಲ್ಲಿ ಹೇಳಿದ– ''ಯಾಕೆ ಜ್ಞಾಪಕವಿಲ್ಲ !''

''ಹಾಗಾದರೆ ನೀನು ಅವನನ್ನ ಯಾಕೆ ಮುಟ್ಟಿದೆ ?''

"ನಾನು ಮುಟ್ಟಲಿಲ್ಲ."

"ನೀನು ಮುಟ್ಟದಿದ್ದರೆ ಅವನು ಅಳ್ತಿದ್ದನೆ?"

"ಕೆಳಗೆ ಬಿದ್ದ, ಅದಕ್ಕೋಸ್ಕರ ಅಳ್ತಿದಾನೆ."

"ಕಳ್ಳ ಕದ್ದದ್ದಲ್ಲದೆ ಮೇಲೆಬಿದ್ದು ಹೊಡೆದ ಅನ್ನೋ ಲೆಕ್ಕಾಚಾರವಾಯಿತು!" – ಯಜಮಾನಿ ಹಲ್ಲು ಕಡಿದು ಸುಮ್ಮನಾದಳು. ಮಂಗಳನನ್ನು ಹೊಡೆದರೆ ಹೋಗಿ ಮುಳುಗುಹಾಕಿ ಬರಬೇಕಾಗುತ್ತಿತ್ತು. ಛಡಿಯನ್ನೇನೋ ಕೈಗೆ ತೆಗೆದುಕೊಳ್ಳಲೇಬೇಕಾಯಿತು. ಆದರೆ ಹೊಡೆದರೆ ಅಸ್ಪೃಶ್ಯತೆಯ ವಿದ್ಯುತ್ ಪ್ರವಾಹ ಆ ಛಡಿಯ ಮುಖಾಂತರ ಅವಳ ದೇಹದಲ್ಲಿ ಬೆರೆತುಬಿಡುತ್ತಿತ್ತು. ಆದ್ದರಿಂದ ಬೈಯುವಷ್ಟೂ ಬೈದಳು. ತಕ್ಷಣ ಅಲ್ಲಿಂದ ಹೊರಟುಹೋಗಬೇಕೆಂದು ಅಪ್ಪಣೆ ಮಾಡಿದಳು. ಮತ್ತೆ ನಮ್ಮ ಮನೆ ಬಾಗಿಲಲ್ಲಿ ನಿನ್ನ ಮುಖ ಕಂಡಿತು ಅಂದರೆ ರಕ್ತ ಹೀರಿಬಿಡ್ತೀನಿ, ಬಿಟ್ಟಿ ಅನ್ನ ತಿಂದೂ ತಿಂದೂ ಕುಚೇಷ್ಟೆಗೆ ಮನಸ್ಸಾಗುತ್ತಲ್ಲವೆ, ಇತ್ಯಾದಿ.

ಮಂಗಳನಿಗೆ ಅವಮಾನವೇನು ಬಂತು? ಭಯವೇನೋ ಇತ್ತು, ನಿಜ. ಅವನು ಸದ್ದಿಲ್ಲದೆ ತನ್ನ ತಟ್ಟೆಯೆತ್ತಿಕೊಂಡು, ಮುರುಕು ಮಂಚವನ್ನು ಬಗಲಿಗೆ ಸಿಕ್ಕಿಸಿ, ಧೋತಿಯನ್ನು ಹೆಗಲ ಮೇಲೆ ಹಾಕಿಕೊಂಡು ಅಳುತ್ತ ಅಲ್ಲಿಂದ ಹೊರಟುಹೋದ. ಮತ್ತೆ ಎಂದೆಂದೂ ಇಲ್ಲಿ ಕಾಲಿಡುವುದಿಲ್ಲ. ಹಸಿವಿನಿಂದ ಸಾಯಬೇಕಾಗುತ್ತದೆ ತಾನೆ? ಏನು ನಷ್ಟ? ಹೀಗೆ ಬದುಕಿದ್ದು ಬಂದ ಲಾಭವೇನು? ಹಳ್ಳಿಯಲ್ಲಿ ಬೇರೆ ಎಲ್ಲಾದರೂ ಸ್ಥಳವಿತ್ತೆ? ಜಾಡಮಾಲಿಗೆ ಯಾರು ಆಶ್ರಯ ಕೊಡುತ್ತಾರೆ? ಹಿಂದಿನ ಒಳ್ಳೆಯ ದಿನಗಳ ನೆನಪು ತಂದುಕೊಟ್ಟು ಸಮಾಧಾನ ನೀಡುತ್ತಿದ್ದ ತನ್ನ ಆ ಪಾಳುಮನೆಯ ಕಡೆಗೇ ನಡೆದ ಮಂಗಳ. ಅಲ್ಲಿ ಹೋಗಿ ಬಿಕ್ಕಿ ಬಿಕ್ಕಿ ಚೆನ್ನಾಗಿ ಅತ್ತ.

## 6

ಆದರೆ ದಿನದ ಪ್ರಕಾಶ ಕ್ಷೀಣವಾಗುತ್ತ ಹೋದಂತೆಲ್ಲಾ ಮಂಗಳನ ದುಃಖವೂ ಕಡಿಮೆಯಾಗುತ್ತ ಹೋಯಿತು. ಎಳೆಯ ಮನಸ್ಸಿಗೆ ಅಶಾಂತಿಯನ್ನುಂಟುಮಾಡುವ ಹಸಿವು ದೇಹದ ರಕ್ತವನ್ನೆಲ್ಲಾ ಹೀರಿ ಹೀರಿ ಇದ್ದಿದ್ದೂ ಪ್ರಬಲವಾಗುತ್ತ ಹೋಯಿತು. ಕಣ್ಣು ಮತ್ತೆ ಮತ್ತೆ ತಟ್ಟೆಯ ಕಡೆಗೆ ಹೋಗುತ್ತಿತ್ತು. ಸುರೇಶನ ಮನೆಯಲ್ಲಾದರೆ ಇಷ್ಟು ಹೊತ್ತಿಗೆ ಅವನು ತಿಂದು ಬಿಟ್ಟ ಎಂಜಲ ಸಿಹಿತಿಂಡಿ ಸಿಕ್ಕಿರುತ್ತಿತ್ತು. ಇಲ್ಲೇನು ಮಣ್ಣು ತಿನ್ನುವುದೆ?

ಅವನು ಟಾಮಿಯ ಸಲಹೆ ಕೇಳಿದ– "ನೀನೇನು ತಿಂತಿ, ಟಾಮಿ? ನಾನಂತೂ ಹಸಿದುಕೊಂಡೇ ಮಲಕ್ಕೊತೀನಿ."

ಟಾಮಿ ಕುಯ್ಞ್ ಕುಯ್ಞ್ ಎನ್ನುತ್ತ ಪ್ರಾಯಶಃ ಹೀಗೆಂದಿತೇನೋ – "ಈ ತರಹದ ಅಪಮಾನಾನ ಜೀವನಪೂರ್ತಿ ಸಹಿಸಬೇಕಾಗುತ್ತೆ. ಧೈರ್ಯ ಕಳೆದುಕೊಂಡರೆ ಕೆಲಸ ನಡೆಯೋ ಬಗೆ ಹೇಗೆ? ನನ್ನನ್ನು ನೋಡು. ಯಾರೋ ದೊಣ್ಣೇಲಿ

ಹೊಡೀತಾರೆ, ಅರಚ್ತೀನಿ, ಮತ್ತೆ ಕೊಂಚ ಹೊತ್ತಾದ ಮೇಲೆ ಬಾಲ ಅಲ್ಲಾಡಿಸುತ್ತ ಅವರ ಹತ್ತಿರವೇ ಹೋಗ್ತೀನಿ. ನಾನೂ ನೀನೂ ಇಬ್ಬರೂ ಅಣ್ಣತಮ್ಮಂದಿರಾಗಿರೋದು ಇದಕ್ಕೇನೇ."

ಮಂಗಳ ಹೇಳಿದ– "ಹಾಗಾದರೆ ನೀನು ಹೋಗು. ಏನು ಸಿಗುತ್ತೋ ತಿನ್ನು, ನನ್ನ ಚಿಂತೆ ಮಾಡಬೇಡ."

ಟಾಮಿ ತನ್ನ ಶ್ವಾನಭಾಷೆಯಲ್ಲಿ ಹೇಳಿತು– "ನಾನು ಒಂಟಿ ಹೋಗೋಲ್ಲ. ನಿನ್ನನ್ನೂ ಜೊತೇಲಿ ಕರಕೊಂಡು ಹೋಗ್ತೀನಿ."

"ನಾನು ಬರೋಲ್ಲ."

"ಹಾಗಾದರೆ ನಾನೂ ಹೋಗೋಲ್ಲ."

"ಹೊಟ್ಟೆ ಹಸಿವಿನಿಂದ ಸತ್ತುಹೋಗ್ತಿ."

"ಹಾಗಾದರೆ ನೀನೇನು ಬದುಕಿರ್ತೀಯಾ !"

"ನಾನು ಸತ್ತರೆ ಅಳೋಕ್ಕೆ ಯಾರು ಕಾದುಕೊಂಡು ಕೂತಿದಾರೆ ?"

"ಇಲ್ಲೂ ಅದೇ ಪರಿಸ್ಥಿತಿ. ಆಶ್ವೀಜದ ತಿಳಿಬೆಳದಿಂಗಳಲ್ಲಿ ಯಾವ ಹೆಣ್ಣುನಾಯಿಯನ್ನ ಪ್ರೀತಿಸಿದ್ದೆನೋ ಅದು ನಂಬಿಕೆದ್ರೋಹ ಮಾಡಿ ಈಗ ಕುಲ್ಲೂನ ಜೊತೆ ಕೂಡಿಕೊಂಡಿದೆ. ಪುಣ್ಯಕ್ಕೆ ಅದು ತನ್ನ ಮಕ್ಕಳನ್ನ ಜೊತೆಗೆ ಕರಕೊಂಡು ಹೋಯಿತು. ಇಲ್ಲದೇ ಹೋಗಿದ್ದರೆ ನನ್ನ ಬದುಕು ಕಷ್ಟದಲ್ಲಿ ಸಿಕ್ಕಿಬಿದ್ದಿರೋದು. ಐದೈದು ಮಕ್ಕಳನ್ನ ಸಾಕೋಕ್ಕೆ ಯಾರ ಕೈಲಿ ಆಗುತ್ತೆ ?"

ಒಂದು ಕ್ಷಣ ಬಿಟ್ಟು ಮಂಗಳನ ಹಸಿವು ಇನ್ನೊಂದು ಯುಕ್ತಿಯನ್ನು ಆಲೋಚಿಸಿತು.

"ಯಜಮಾನಿ ನಮ್ಮನ್ನ ಹುಡುಕ್ತಿರಬಹುದು. ಏನಂತೆ ಟಾಮಿ ?"

"ಮತ್ತೇನು ? ಬಾಬೂಜೀನೂ ಸುರೇಶನೂ ಊಟ ಮಾಡಿ ಮುಗಿಸಿರಬಹುದು. ಕೆಲಸದವನು ಅವರ ತಟ್ಟೆಯ ಎಂಜಲು ಬಳಿದು ನಮ್ಮನ್ನ ಕೂಗ್ತಿರಬಹುದು."

"ಬಾಬೂಜಿ ಸುರೇಶ ಇಬ್ಬರ ತಟ್ಟೆಯಲ್ಲೂ ತುಂಬ ತುಂಬ ತುಪ್ಪ ಇರುತ್ತೆ. ಅಲ್ಲದೆ ಸಿಹಿಸಿಹಿಯಾದ ತಿಂಡಿ – ಹೌದು, ಕೆನೆ !"

"ಎಲ್ಲನ್ನೂ ತೆಗೆದು ತಿಪ್ಪೇಲಿ ಹಾಕಿಬಿಡ್ತಾರೆ."

"ನೋಡೋಣ, ನಮ್ಮನ್ನ ಹುಡುಕ್ಕೊಂಡು ಯಾರಾದರೂ ಬರ್ತಾರೆಯೆ ಅಂತ."

"ಹುಡುಕ್ಕೊಂಡು ಬರ್ತಾರೆ ಅಂದುಕೊಳ್ಳೋಕೆ ನಾವೇನು ಪುರೋಹಿತರೆ ? ಒಂದು ಸಲ 'ಮಂಗಳ', 'ಮಂಗಳ' ಅಂತ ಕರೀತಾರೆ. ಸರಿ, ತಟ್ಟೇನ ತೊಳೆಯೋಕ್ಕೆ ಹಾಕ್ತಾರೆ."

"ಒಳ್ಳೇದು, ನಡಿ ಹೋಗೋಣ. ಆದರೆ ನಾನು ಅವಿತುಕೊಂಡಿರ್ತೀನಿ. ಯಾರೂ ನನ್ನ ಹೆಸರು ಹಿಡಿದು ಕರೀದೇ ಹೋದರೆ ವಾಪಸು ಬಂದುಬಿಡ್ತೀನಿ. ಚೆನ್ನಾಗಿ ತಿಳಿದಿರಲಿ."

ಇಬ್ಬರೂ ಅಲ್ಲಿಂದ ಹೊರಟು, ಮಹೇಶನಾಥರ ಮನೆ ಬಾಗಿಲಿಗೆ ಬಂದು ಕತ್ತಲಲ್ಲಿ ಅಡಗಿ ನಿಂತುಕೊಂಡರು. ಆದರೆ ಟಾಮಿಗೆ ತಾಳ್ಮೆ ಎಲ್ಲಿ ಬರಬೇಕು ? ಅದು ಮೆಲ್ಲಗೆ

ಒಳ ನುಗ್ಗಿತು. ನೋಡಿದರೆ ಮಹೇಶನಾಥರೂ ಸುರೇಶನೂ ತಟ್ಟೆಯ ಮುಂದೆ ಕುಳಿತಿದ್ದಾರೆ. ಟಾಮಿ ದಿವಾನಖಾನೆಯಲ್ಲಿ ಮೆಲ್ಲಗೆ ಕುಳಿತುಕೊಂಡಿತು. ಆದರೆ ಯಾರು ಎಲ್ಲಿ ದೊಣ್ಣೆಯಿಂದ ಹೊಡೆಯುವರೋ ಎಂದು ಅದಕ್ಕೆ ಹೆದರಿಕೆ.

ಆಳುಗಳಲ್ಲಿ ಮಾತು ನಡೆದಿತ್ತು. ಒಬ್ಬ ಹೇಳಿದ– "ಇವತ್ತು ಆ ಮಂಗಳ ಎಲ್ಲೋ ಕಾಣ್ತೋಲ್ಲ. ಯಜಮಾನಿ ಬೈದರು. ಅದಕ್ಕೋಸ್ಕರ ಓಡಿಹೋದನೋ ಏನೋ."

ಇನ್ನೊಬ್ಬ ಹೇಳಿದ– "ಆಚೆಗೆ ಅಟ್ಟಿದ್ದು ಒಳ್ಳೇದೇ ಆಯಿತು. ಬೆಳಗ್ಗೆ ಎದ್ದೇಟಿಗೆ ಜಾಡಮಾಲಿಯ ಮುಖ ನೋಡಬೇಕಾಗೋದು."

ಮಂಗಳ ಕತ್ತಲಿನಲ್ಲಿ ಇದ್ದಿದ್ದೂ ಹೆಚ್ಚಾಗಿ ಹುದುಗಿಕೊಂಡ. ಆಸೆಯೆಂಬುದು ಆಳವಾದ ನೀರಲ್ಲಿ ಮುಳುಗಿಹೋಯಿತು.

ಮಹೇಶನಾಥರು ತಟ್ಟೆ ಬಿಟ್ಟೆದ್ದರು. ಆಳು ಅವರ ಕೈಗೆ ನೀರು ಹಾಕುತ್ತಿದ್ದಾನೆ. ಇನ್ನು ಹುಕ್ಕಾ ಕುಡಿಯುತ್ತಾರೆ, ಮಲಗುತ್ತಾರೆ. ಸುರೇಶ ಅಮ್ಮನ ಹತ್ತಿರ ಕುಳಿತು, ಯಾವುದೋ ಕಥೆ ಕೇಳುತ್ತ ಕೇಳುತ್ತ ನಿದ್ರೆ ಹೋಗುತ್ತಾನೆ. ಬಡ ಮಂಗಳನ ಬಗ್ಗೆ ಯಾರು ಚಿಂತಿಸಬೇಕು ? ಎಷ್ಟು ಹೊತ್ತಾದರೂ ಮರೆತು ಸಹ ಯಾರೂ ಅವನನ್ನು ಕರೆಯಲಿಲ್ಲ.

ಸ್ವಲ್ಪ ಹೊತ್ತು ಅವನು ಅಲ್ಲಿ ನಿರಾಶನಾದವನಂತೆ ನಿಂತಿದ್ದ. ಮತ್ತೆ ಒಮ್ಮೆ ದೀರ್ಘವಾಗಿ ನಿಟ್ಟುಸಿರುಬಿಟ್ಟು ಹೊರಡುವುದರಲ್ಲಿದ್ದ. ಅಷ್ಟರಲ್ಲಿ ಆಳು ತಟ್ಟೆಯ ಎಂಜಲ ಅನ್ನವನ್ನು ಎಲೆಯಲ್ಲಿ ಹಾಕಿಕೊಂಡು ತರುತ್ತಿರುವುದು ಕಾಣಿಸಿತು.

ಮಂಗಳ ಕತ್ತಲಿನಿಂದ ಬೆಳಕಿಗೆ ಬಂದ. ಈಗ ಮನಸ್ಸನ್ನು ಬಿಗಿಹಿಡಿಯುವುದು ಹೇಗೆ ?

ಮುಸುರೆಯಾಳು ಹೇಳಿದ– "ಅರೆ, ಇಲ್ಲಿದ್ದೆಯೇನೋ ನೀನು. ನೀನು ಎಲ್ಲೋ ಹೊರಟುಹೋದೆ ಅಂತ ನಾವು ಅಂದುಕೊಂಡಿದ್ದೆವು. ತೊಗೋ ತಿನ್ನು. ನಾನು ಆಚೆಗೆ ಎಸೆಯೋಕ್ಕೆ ಹೊರಟಿದ್ದೆ."

ಮಂಗಳ ದೈನ್ಯದಿಂದ ಹೇಳಿದ– "ನಾನು ಬಹಳ ಹೊತ್ತಿನಿಂದ ಇಲ್ಲೇ ನಿಂತಿದೀನಿ."

"ಹಾಗಾದರೆ ಯಾಕೆ ಬಾಯಿ ಬಿಡಲಿಲ್ಲ ?"

"ಭಯವಾಯಿತು."

"ಒಳ್ಳೇದು. ತೊಗೋ, ತಿನ್ನು."

ಆಳು ಎಲೆಯನ್ನು ಮೇಲೆತ್ತಿ ಮಂಗಳನ ಚಾಚಿದ ಕೈಯಲ್ಲಿ ಹಾಕಿದ. ಮಂಗಳ ದೈನ್ಯ ಕೃತಜ್ಞತೆಗಳು ತುಂಬಿದ ಕಣ್ಣಿನಿಂದ ಅವನನ್ನು ನೋಡಿದ.

ಟಾಮಿಯೂ ಒಳಗಿನಿಂದ ಹೊರಬಂದಿತ್ತು. ಇಬ್ಬರೂ ಅದೇ ಬೇವಿನ ಮರದ ಕೆಳಗೆ ಕುಳಿತು ಒಂದೇ ಎಲೆಯಲ್ಲಿ ತಿನ್ನತೊಡಗಿದರು.

ಮಂಗಳ ಒಂದು ಕೈಯಿಂದ ಟಾಮಿಯ ತಲೆಯನ್ನು ನೇವರಿಸುತ್ತ ಹೇಳಿದ –

"ನೋಡಿದೆಯಾ, ಹೊಟ್ಟೆಯ ಬೆಂಕಿ ಎಂದರೆ ಹೇಗಿರುತ್ತೆ ಅಂತ ? ಈ ಅಪಮಾನದ ಅನ್ನ ಸಿಗದೇ ಹೋಗಿದ್ದರೆ ಏನು ಮಾಡ್ತಿದ್ದೆ ?"

ಟಾಮಿ ಬಾಲ ಅಲ್ಲಾಡಿಸಿತು.

"ಸುರೇಶನ್ನ ನಮ್ಮಮ್ಮ ಬೆಳೆಸಿದ್ದಳು."

ಟಾಮಿ ಮತ್ತೆ ಬಾಲ ಅಲ್ಲಾಡಿಸಿತು.

"ಜನ ಹೇಳ್ತಾರೆ, ಹಾಲಿನ ಋಣಾನ ಯಾರ ಕೈಯಲ್ಲೂ ತೀರಿಸೋಕ್ಕೆ ಆಗೋಲ್ಲ ಅಂತ. ನನಗೆ ಸಿಕ್ತಿರೋ ಹಾಲಿನ ಋಣ ಅಂದರೆ ಇದು!"

ಟಾಮಿ ಮತ್ತೆ ಬಾಲ ಅಲ್ಲಾಡಿಸಿತು.

# ೯. ಜೋಡೆತ್ತಿನ ಕಥೆ

ಪ್ರಾಣಿಗಳಲ್ಲೆಲ್ಲಾ ಕತ್ತೆ ಹೆಚ್ಚು ಬುದ್ಧಿಗೇಡಿ ಎನಿಸಿಕೊಂಡಿದೆ. ನಾವು ಯಾವನನ್ನಾದರೂ ತುಂಬ ಮೂರ್ಖ ಎಂದು ಕರೆಯಬೇಕೆನಿಸಿದಾಗ ಅವನನ್ನು 'ಕತ್ತೆ' ಎನ್ನುತ್ತೇವೆ. ಕತ್ತೆ ನಿಜಕ್ಕೂ ತುಂಬ ಮೂರ್ಖ ಪ್ರಾಣಿ. ಅದಕ್ಕೆ ಈ ಪದವಿಯನ್ನು ತಂದುಕೊಟ್ಟಿರುವುದು ಅದರ ಸಾಚಾತನವೋ ಇಲ್ಲವೇ ನಿರ್ದುಷ್ಟವಾದ ತಾಳ್ಮೆಯ ಸ್ವಭಾವವೋ ಎಂದು ನಿರ್ಧರಿಸುವುದು ಕಷ್ಟ. ಆಕಳು ಹಾಯುತ್ತದೆ; ಈದ ಹಸುವಂತೂ ಅನಾಯಾಸವಾಗಿ ಹೆಣ್ಣು ಸಿಂಹದ ರೂಪ ಧರಿಸುತ್ತದೆ. ನಾಯಿ ತುಂಬ ಬಡಪಾಯಿ; ಆದರೆ ಒಮ್ಮೊಮ್ಮೆ ಅದಕ್ಕೂ ಕೋಪ ಬರುವುದುಂಟು. ಆದರೆ ಕತ್ತೆ ಕೋಪಿಸಿಕೊಂಡುದನ್ನು ಮಾತ್ರ ಯಾರೂ ನೋಡಿಲ್ಲ, ಕೇಳಿಲ್ಲ. ಆ ಬಡಪಾಯಿಗೆ ಎಷ್ಟೇ ಹೊಡೆಯಲಿ, ಎಷ್ಟೇ ಕೊಳೆತ ಕೆಟ್ಟ ಹುಲ್ಲನ್ನು ಹಾಕಲಿ, ಅದರ ಮುಖದ ಮೇಲೆ ಒಂದಿಷ್ಟೂ ಅಸಂತೋಷದ ಛಾಯೆ ಸುಳಿಯುವುದಿಲ್ಲ. ವಸಂತಮಾಸದಲ್ಲಿ ಅದು ಒಂದೆರಡು ಸಲ ಕುಣಿದು ಕುಪ್ಪಳಿಸಬಹುದೇನೊ. ಆದರೆ ಅದು ಹರ್ಷದಿಂದಿರುವುದನ್ನು ನಾವಂತೂ ನೋಡಿಲ್ಲ. ಅದರ ಮುಖದ ಮೇಲೆ ಯಾವದೋ ಒಂದು ಸ್ಥಾಯೀ ವಿಷಾದ ಸ್ಥಾಯೀ ರೂಪದಲ್ಲಿ ಕವಿದಿರುತ್ತದೆ. ಸುಖ-ದುಃಖ, ಲಾಭ-ನಷ್ಟ - ಯಾವದೇ ಸ್ಥಿತಿಯಲ್ಲಾಗಲೀ ಅದು ಬದಲಾದುದನ್ನು ನಾವು ನೋಡಿಲ್ಲ. ಋಷಿಮುನಿಗಳ ಗುಣಗಳೆಲ್ಲವೂ ಅದರಲ್ಲಿ ಪರಾಕಾಷ್ಠೆ ಮುಟ್ಟಿವೆ. ಆದರೂ ಮನುಷ್ಯ ಅದನ್ನು ಮೂರ್ಖನೆನ್ನುತ್ತಾನೆ. ಸದ್ಗುಣಗಳು ಹೀಗೆ ಅನಾದರಕ್ಕೆ ಗುರಿಯಾದುದನ್ನು ನಾವು ಇನ್ನೆಲ್ಲೂ ನೋಡಿಲ್ಲ. ಪ್ರಾಯಶಃ ಸಾಚಾತನದಿಂದ ಜಗತ್ತಿಗೆ ಪ್ರಯೋಜನವಿಲ್ಲವೇನೋ. ನೋಡಿ, ಆಫ್ರಿಕದಲ್ಲಿ ಭಾರತೀಯರು ಯಾಕೆ ದುರ್ದೆಸೆಗೆ ತುತ್ತಾಗಿದ್ದಾರೆ? ಅಮೆರಿಕದಲ್ಲಿ ಅವರನ್ನು ಯಾಕೆ ಒಳ ಬರಗೊಡುವುದಿಲ್ಲ? ಆ ಬಡಪಾಯಿಗಳು ಮದ್ಯ ಕುಡಿಯುವುದಿಲ್ಲ, ಕಷ್ಟ ಕಾಲಕ್ಕೆಂದು ನಾಲ್ಕು ಕಾಸು ಕೂಡಿಡುತ್ತಾರೆ. ಯಾರೊಡನೆಯೂ ಜಗಳ - ಕದನ ಮಾಡುವುದಿಲ್ಲ. ನಾಲ್ಕು ಮಾತು ಅನ್ನಿಸಿಕೊಂಡರೂ ದುಃಖ ನುಂಗಿಕೊಂಡು ಸುಮ್ಮನಿರುತ್ತಾರೆ. ಆದರೂ ಅವರಿಗೆ ಕೆಟ್ಟ ಹೆಸರು ತಪ್ಪಿದ್ದಲ್ಲ. ಅವರು ಜೀವನದ ಆದರ್ಶಗಳನ್ನು ಹಾಳುಗೆಡಿಸುತ್ತಾರಂತೆ! ಇಟ್ಟಿಗೆಯಿಂದ ಹೊಡೆದವರಿಗೆ ಕಲ್ಲಿನಿಂದ ಜವಾಬು ಕೊಡುವುದನ್ನು ಕಲಿತರೆ ಅವರೂ ನಾಗರಿಕರೆನಿಸಿಕೊಳ್ಳುತ್ತಾರೋ ಏನೋ.

ಜಪಾನಿನ ಉದಾಹರಣೆ ನಮ್ಮ ಕಣ್ಣ ಮುಂದಿದೆ. ಒಂದೇ ಒಂದು ವಿಜಯ ಅವರನ್ನು ಜಗತ್ತಿನ ನಾಗರಿಕ ಜನಾಂಗಗಳಲ್ಲಿ ಗಣ್ಯರನ್ನಾಗಿ ಮಾಡಿದೆ.

ಕತ್ತೆಯ ತಮ್ಮನೂ ಒಂದಿದೆ. ಕತ್ತೆಗಿಂತ ಕೊಂಚ ಕಡಿಮೆ ಕತ್ತೆ ಅದು. ಅದೆಂದರೆ ಎತ್ತು. ನಾವು ಯಾವ ಅರ್ಥದಲ್ಲಿ 'ಕತ್ತೆ' ಎನ್ನುತ್ತೇವೆಯೋ ಅದಕ್ಕೆ ಸರಿಸಮಾನವಾದ ಅರ್ಥದಲ್ಲಿ 'ಎತ್ತಿನ ದೊಡ್ಡಪ್ಪ'* ಎಂದು ಪ್ರಯೋಗಿಸುತ್ತೇವೆ. ಕೆಲವರು ಎತ್ತನ್ನು ಮೂರ್ಖರಲ್ಲೆಲ್ಲಾ ಸರ್ವಶ್ರೇಷ್ಠವಾದುದು ಎನ್ನಬಹುದು. ಆದರೆ ನಮ್ಮ ವಿಚಾರ ಹಾಗಲ್ಲ. ಎತ್ತು ಒಮ್ಮೊಮ್ಮೆ ಒದೆಯುವುದೂ ಉಂಟು; ಎತ್ತುಗಳಲ್ಲಿ ಬಲು ಮೊಂಡಾದವೂ ಇರುತ್ತವೆ. ಇನ್ನೂ ಕೆಲವಾರು ರೀತಿಗಳಲ್ಲಿ ಅದು ತನ್ನ ಅಸಂತೋಷವನ್ನು ಪ್ರಕಟಿಸುತ್ತದೆ. ಆದರೂ ಕೂಡ ಅದರ ಸ್ಥಾನ ಕತ್ತೆಯದಕ್ಕಿಂತಲೂ ಕೀಳಾಗಿದೆ.

ಝೂರಿ ಕಾಛಿಯ ಜೋಡೆತ್ತುಗಳ ಹೆಸರು ಹೀರಾ ಮತ್ತು ಮೋತಿ. ಎರಡೂ ಸೀಮೆಯ ಜಾತಿಯವು – ಎತ್ತರವಾದ ಮೈಕಟ್ಟು, ಚೆಲುವಾದ ರೂಪ, ಕೆಲಸದಲ್ಲಿ ಚುರುಕು. ಬಹಳ ದಿನ ಜೊತೆಜೊತೆಯಾಗಿದ್ದು ಅವೆರಡರಲ್ಲಿಯೂ ಭ್ರಾತೃಭಾವ ಬೆಳೆದುಬಿಟ್ಟಿತ್ತು. ಎರಡೂ ಎದುರುಬದುರಿಗೋ ಅಕ್ಕಪಕ್ಕದಲ್ಲಿಯೋ ಕುಳಿತು ಪರಸ್ಪರ ಮೂಕಭಾಷೆಯಲ್ಲಿ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದವು. ಒಂದು ಇನ್ನೊಂದಕ್ಕೆ ತನ್ನ ಮನಸ್ಸಿನಲ್ಲಿದ್ದ ಸಂಗತಿಗಳನ್ನು ಹೇಗೆ ತಿಳಿಸುತ್ತಿತ್ತೆಂದು ಹೇಳಲಾಗುವುದಿಲ್ಲ. ಪ್ರಾಣಿಗಳಲ್ಲೆಲ್ಲಾ ತಾನು ಶ್ರೇಷ್ಠನೆಂದುಕೊಳ್ಳುವ ಮನುಷ್ಯನಿಗಿಲ್ಲದ ಯಾವುದೋ ಗುಪ್ತಶಕ್ತಿ ಅವಶ್ಯವಾಗಿ ಅವಕ್ಕಿತ್ತು! ಎರಡೂ ಒಂದು ಇನ್ನೊಂದನ್ನು ಮೂಸಿ, ನೆಕ್ಕಿ, ಪ್ರೀತಿ ಪ್ರಕಟಿಸುತ್ತಿದ್ದವು. ಒಮ್ಮೊಮ್ಮೆ ಎರಡೂ ಕೊಂಬು ಮಿಲಾಯಿಸುತ್ತಿದ್ದುದೂ ಉಂಟು – ಜಗಳಕ್ಕಾಗಿಯಲ್ಲ, ಕೇವಲ ವಿನೋದಕ್ಕಾಗಿ, ಆತ್ಮೀಯತೆಯ ಭಾವದಿಂದ, ಮಿತ್ರರಲ್ಲಿ ಗಾಢಸ್ನೇಹ ಇದ್ದೂ ಹೊಡೆದಾಟವಾಗುವಂತೆ. ಅದಿಲ್ಲದಿದ್ದರೆ ಸ್ನೇಹ ಏನೋ ನಿಷ್ಪ್ರಾಣವಾದಂತೆ, ಟೊಳ್ಳಾದಂತೆ, ಹಗುರವಾದಂತೆ ಕಾಣುತ್ತದೆ. ಅಂತಹ ಸ್ನೇಹವನ್ನು ನೆಚ್ಚಲಾಗುವುದಿಲ್ಲ. ಈ ಜೋಡೆತ್ತುಗಳನ್ನು ನೇಗಿಲು ಇಲ್ಲವೇ ಗಾಡಿಗೆ ಹೂಡಿ, ಅವು ಕೊರಳು ಕೊಂಕಿಸುತ್ತ ನಡೆದಾಗ, ಅವುಗಳಲ್ಲಿ ಒಂದೊಂದೂ ತನ್ನ ಹೆಗಲ ಮೇಲೆಯೇ ಹೆಚ್ಚು ಭಾರ ಬೀಳುವಂತೆ ಪ್ರಯತ್ನಿಸುತ್ತಿತ್ತು. ದಿನದ ಕೆಲಸ ಮುಗಿದು ಮಧ್ಯಾಹ್ನ ಇಲ್ಲವೇ ಸಂಜೆಗೆ ಅವನ್ನು ಬಿಚ್ಚಿದಾಗ ಅವು ಒಂದು ಇನ್ನೊಂದನ್ನು ನೆಕ್ಕುತ್ತ ತಮ್ಮ ಆಯಾಸ ಕಳೆದುಕೊಳ್ಳುತ್ತಿದ್ದವು. ತೊಟ್ಟಿಯಲ್ಲಿ ಹಿಂಡಿ – ಭೂಸ ಬಿದ್ದಾಗ ಎರಡೂ ಜೊತೆಜೊತೆಯಾಗಿ ಏಳುತ್ತಿದ್ದವು; ಒಟ್ಟಿಗೆ ತೊಟ್ಟಿಗೆ ಬಾಯಿ ಹಾಕುತ್ತಿದ್ದವು; ತಿಂದು ಮುಗಿಸಿ ಒಟ್ಟಿಗೆ ಕುಳಿತುಕೊಳ್ಳುತ್ತಿದ್ದವು. ಒಂದು ತಿನ್ನದೇ ಬಿಟ್ಟರೆ ಇನ್ನೊಂದು ತಿನ್ನುತ್ತಿರಲಿಲ್ಲ.

ಒಂದು ಸಲ ಝೂರಿ ಎತ್ತುಗಳನ್ನು ತನ್ನ ಮಾವನ ಮನೆಗೆ ಕಳಿಸಿಕೊಟ್ಟ.

* 'ಬಛಿಯಾ ಕಿ ತಾವ್' ಎಂಬ ಹಿಂದೀ ಪಡೆನುಡಿ.

ತಮ್ಮನ್ನು ಏತಕ್ಕೆ ಕಳಿಸಲಾಗುತ್ತಿದೆಯೆಂದು ಎತ್ತುಗಳಿಗೆ ಏನು ಗೊತ್ತು ? ಯಜಮಾನ ತಮ್ಮನ್ನು ಮಾರಿಬಿಟ್ಟನೆಂದು ಕೊಂಡವು. ಹಾಗೆ ಮಾರಿಬಿಟ್ಟಿದ್ದು ಅವಕ್ಕೆ ಸರಿಯೆನಿಸಿತೋ ಕೆಡುಕೆನಿಸಿತೋ ಯಾರು ಬಲ್ಲರು ? ಆದರೆ ಝೂರಿಯ ಭಾವ್ಮೈದ ಗಯನಿಗೆ ಮಾತ್ರ ಎತ್ತುಗಳನ್ನು ಮನೆ ಮುಟ್ಟಿಸುವಷ್ಟರಲ್ಲಿ ಸಾಕುಸಾಕಾಯಿತು. ಹಿಂದಿನಿಂದ ಬೆನ್ನು ತಟ್ಟಿದರೆ ಒಂದು ಎಡಕ್ಕೂ ಇನ್ನೊಂದು ಬಲಕ್ಕೂ ಓಡುತ್ತಿತ್ತು. ಮುಂದಿನಿಂದ ಮೂಗುದಾರ ಹಿಡಿದು ಎಳೆದರೆ ಎರಡೂ ಹಿಂದಕ್ಕೆ ಜಗ್ಗುತ್ತಿದ್ದವು. ಹೊಡೆದರೆ ಕೊಂಬು ಕೆಳ ಮಾಡಿಕೊಂಡು ಹೂಂಕರಿಸುತ್ತಿದ್ದವು. ದೇವರೇನಾದರೂ ಅವಕ್ಕೆ ಮಾತು ಕೊಟ್ಟಿದ್ದಿದ್ದರೆ ಅವು ಝೂರಿಯನ್ನು ಕೇಳುತ್ತಿದ್ದವು – "ನಾವು ಬಡಪಾಯಿಗಳನ್ನೇಕೆ ಮನೆಯಿಂದ ಹೊರಗೆ ಅಟ್ಟಿದಿ ? ನಾವು ನಿನ್ನ ಸೇವೇಲಿ ಏನಾದರೂ ಕೊರತೆ ಮಾಡಿದೇವೆಯೆ ? ಇಷ್ಟು ಶ್ರಮಪಟ್ಟು ಕೆಲಸ ಮಾಡಿದ್ದೂ. ಸಾಕಾಗಲಿಲ್ಲವೆಂದರೆ ಇನ್ನೂ ಅಷ್ಟು ಕೆಲಸ ಮಾಡಿಸಬಹುದಾಗಿತ್ತು. ನಮಗೆ ನಿನ್ನ ಚಾಕರಿ ಮಾಡುಮಾಡುತ್ತ ಸಾಯೋದು ಅಂದರೆ ಸಂತೋಷವೇ. ನಾವು ಎಂದಾದರೂ ನಮಗೆ ಹಾಕಿದ ಮೇವಿನ ಬಗ್ಗೆ ದೂರು ಹೇಳಿದೇವೆಯೆ ? ನೀನು ಹಾಕಿದ್ದನ್ನ ತಲೆತಗ್ಗಿಸಿಕೊಂಡು ತಿಂದಿದೀವಿ. ಅಂದಮೇಲೆ ನಮ್ಮನ್ನ ಈ ಕ್ರೂರಿಗೆ ಮಾರಿದ್ದೇಕೆ ?"

ಸಂಜೆಯ ಹೊತ್ತಿಗೆ ಎತ್ತುಗಳು ತಮ್ಮ ಸ್ಥಳವನ್ನು ತಲುಪಿದವು. ಅವು ಇಡೀ ದಿನ ಹಸಿದಿದ್ದವು. ಆದರೆ ತೊಟ್ಟಿಯಲ್ಲಿ ಮೇವು ಬಿದ್ದಾಗ ಎರಡರಲ್ಲಿ ಒಂದಾದರೂ ಅದಕ್ಕೆ ಬಾಯಿ ಹಾಕಲಿಲ್ಲ. ಅವುಗಳ ಎದೆ ಭಾರವಾಗಿತ್ತು. ಯಾವುದನ್ನು ತಮ್ಮ ಮನೆಯೆಂದು ಕೊಂಡಿದ್ದವೋ ಅದು ಇವತ್ತು ಕಡಿದುಹೋಗಿತ್ತು. ಈ ಹೊಸ ಮನೆ, ಹೊಸ ಹಳ್ಳಿ, ಹೊಸ ಜನ ಎಲ್ಲವೂ ಅವಕ್ಕೆ ಪರಕೀಯವಾಗಿ ಕಾಣುತ್ತಿದ್ದವು.

ಎರಡೂ ಮೂಕಭಾಷೆಯಲ್ಲಿ ಒಂದು ಇನ್ನೊಂದರ ಅಭಿಪ್ರಾಯ ತಿಳಿದುಕೊಂಡವು; ಓರೆಗಣ್ಣಿಂದ ನೋಡಿದವು; ಮಲಗಿಕೊಂಡವು. ರಾತ್ರಿ ಊರಿಗೆ ಊರೇ ಮಲಗಿದ್ದಾಗ ಎರಡೂ ಜೋರಾಗಿ ಜಗ್ಗಿ ಹಗ್ಗ ಕಿತ್ತುಕೊಂಡು ಮನೆಯ ಕಡೆ ಓಡಿದವು. ಹಗ್ಗ ಬಲು ಗಟ್ಟಿಯಾಗಿತ್ತು. ಎತ್ತುಗಳು ಅದನ್ನು ಕೀಳಬಹುದೆಂಬ ಅನುಮಾನವೂ ಬರುತ್ತಿರಲಿಲ್ಲ. ಆದರೆ ಈಗ ಅವುಗಳಲ್ಲಿ ಎರಡು ಪಟ್ಟು ಶಕ್ತಿ ಬಂದಿತ್ತು. ಒಂದೇ ಎಳೆತಕ್ಕೆ ಹಗ್ಗ ಕಿತ್ತು ಬಂದಿತ್ತು.

ಝೂರಿ ಬೆಳಗ್ಗೆ ನಿದ್ರೆಯಿಂದೆದ್ದು ನೋಡುವಾಗ ಎತ್ತುಗಳೆರಡೂ ತೊಟ್ಟಿಯ ಹತ್ತಿರ ನಿಂತಿವೆ. ಎರಡರ ಕತ್ತಿನಲ್ಲೂ ಕೊರಳ ಹಗ್ಗ ನೇತಾಡುತ್ತಿದೆ. ಮಂಡಿಯ ತನಕ ಕಾಲು ಕೆಸರಾಗಿದೆ. ಎರಡರ ಕಣ್ಣಿನಲ್ಲಿಯೂ ಕ್ರಾಂತಿ ತುಂಬಿದ ಪ್ರೀತಿ ಹೊಳೆಯುತ್ತಿದೆ.

ಎತ್ತುಗಳನ್ನು ನೋಡಿ ಝೂರಿಗೆ ಗಂಟಲು ಬಿಗಿಯಿತು. ಓಡಿಬಂದು ಅವನ್ನು ಅಪ್ಪಿಕೊಂಡು ಮುದ್ದಾಡಿದ ಆ ದೃಶ್ಯ ತುಂಬ ಮನೋಹರವಾಗಿತ್ತು.

ಮನೆ ಹಾಗೂ ಹಳ್ಳಿಯ ಹುಡುಗರೆಲ್ಲರೂ ಗುಂಪುಗೂಡಿದರು. ಚಪ್ಪಾಳೆ ತಟ್ಟುತ್ತ ಎತ್ತುಗಳಿಗೆ ಸ್ವಾಗತ ಕೊಟ್ಟರು. ಹಳ್ಳಿಯ ಇತಿಹಾಸದಲ್ಲಿ ಈ ಘಟನೆ

ಅಭೂತಪೂರ್ವವಲ್ಲದಿದ್ದರೂ ಮಹತ್ವಪೂರ್ಣದ್ದಾಗಿತ್ತು. ಈ ಪ್ರಾಣಿವೀರರನ್ನು ಅಭಿನಂದಿಸುವುದೆಂದು ಊರ ಹುಡುಗರ ಕೂಟ ನಿಶ್ಚಯಿಸಿತು. ತನ್ನ ಮನೆಯಿಂದ ರೊಟ್ಟಿ ತಂದ, ಇನ್ನೊಬ್ಬ ಬೆಲ್ಲ ತಂದ, ಮತ್ತೊಬ್ಬ ತವಡು, ಮಗುದೊಬ್ಬ ಭೂಸ.

ಒಬ್ಬ ಹೇಳಿದ – "ಇಂಥ ಎತ್ತುಗಳು ಯಾರ ಹತ್ತಿರವೂ ಇಲ್ಲ."

ಇನ್ನೊಬ್ಬ ಸಮರ್ಥಿಸಿದ – "ತಾವು ತಾವೇ ಅಷ್ಟು ದೂರದಿಂದ ಬಂದಿವೆಯಲ್ಲ."

ಮೂರನೆಯವ ಹೇಳಿದ – "ಇವು ಎತ್ತುಗಳಲ್ಲ, ಹಿಂದಿನ ಜನ್ಮದಲ್ಲಿ ಮನುಷ್ಯರಾಗಿದ್ದವು."

ಈ ಮಾತಿಗೆ ಎದುರಾಡಲು ಯಾರಿಗೂ ಸಾಹಸವಾಗಲಿಲ್ಲ.

ಝೂರಿಯ ಹೆಂಡತಿ ಬಾಗಿಲಲ್ಲಿ ಎತ್ತುಗಳ ಮುಖ ಕಂಡೊಡನೆಯೇ ಉರಿದುಬಿದ್ದಳು. ಅವಳಂದಳು – "ಉಂಡ ಮನೆಗೆ ಎರಡು ಬಗೆಯೋ ಎತ್ತುಗಳಿವು. ಒಂದು ದಿನವಾದರೂ ಅಲ್ಲಿ ಕೆಲಸ ಮಾಡದೆ ಓಡಿಬಂದಿವೆಯಲ್ಲ."

ಝೂರಿಗೆ ತನ್ನ ಎತ್ತುಗಳ ಮೇಲಿನ ಈ ಆಕ್ಷೇಪಣೆಯನ್ನು ಕೇಳಲಾಗಲಿಲ್ಲ. "ಉಂಡ ಮನೆಗೆ ಯಾಕೆ ಎರಡು ಬಗೆಯುತ್ತವೆ ? ಮೇವು ಕೊಡಲಿಲ್ಲ ಅಂತ ಕಾಣುತ್ತೆ. ಓಡಿ ಬರದೆ ಇನ್ನೇನು ತಾನೇ ಮಾಡಿಯಾವು ?"

ಹೆಂಡತಿ ಗತ್ತಿನಿಂದ ಹೇಳಿದಳು – "ಹೌದು, ನಿನಗೊಬ್ಬನಿಗೇ ಎತ್ತಿಗೆ ಮೇವು ಹಾಕೋದು ಗೊತ್ತು. ಬಾಕಿಯೋರೆಲ್ಲಾ ನೀರು ಕುಡಿಸಿ, ಕುಡಿಸಿ ಎತ್ತು ಸಾಕ್ತಾರೆ ಅಲ್ಲವೇ ?"

ಝೂರಿ ಅವಳನ್ನು ರೇಗಿಸಿದ – "ಮೇವು ಸಿಕ್ಕಿದ್ದಿದ್ದರೆ ಯಾಕೆ ತಾನೆ ಓಡಿ ಬರ್ತಿದ್ದವು !"

ಹೆಂಡತಿ ರೇಗಿದಳು – "ಯಾಕೆ ಓಡಿಬಂದವು ಅಂದರೆ ಜನ ನಿನ್ನ ಹಾಗೆ ಮೂರ್ಖರಾಗಿ ಎತ್ತುಗಳ ಬೆನ್ನು ನೇವರಿಸೋದಿಲ್ಲ. ಹೊಟ್ಟೆಗೆ ಹಾಕ್ತಾರೆ ಅಂದ ಮೇಲೆ ಕೆಲಸಾನೂ ತೂಗೋತಾರೆ. ಈ ಮೈಗಳ್ಳ ಮುಂಡೇವು ಓಡಿಬಂದಿವೆ. ನೋಡ್ತೀನಿ, ಇನ್ನು ಮೇಲೆ ಇವಕ್ಕೆ ಎಲ್ಲಿಂದ ತವಡು – ಹಿಂಡಿ ಸಿಗುತ್ತಂತೆ. ಒಣ ಭೂಸ ಬಿಟ್ಟು ಇನ್ನೇನನ್ನೂ ಕೊಡೋಲ್ಲ. ಬೇಕಾದರೆ ಇರಲಿ, ಇಲ್ಲವೇ ಸಾಯಲಿ."

ಆದದ್ದೂ ಹಾಗೆಯೇ. ಎತ್ತುಗಳಿಗೆ ಒಣ ಭೂಸ ಹಾಕಬೇಕೆಂದು ಕೂಲಿಯಾಳಿಗೆ ತಾಕೀತಾಯಿತು.

ಎತ್ತುಗಳು ತೊಟ್ಟಿಗೆ ಬಾಯಿ ಹಾಕಿದರೆ ಸಪ್ಪೆಯೋ ಸಪ್ಪೆ. ರಸವಿಲ್ಲ. ಏನೆಂದು ತಿನ್ನುವುದು ? ಆಸೆ ತುಂಬಿದ ಕಣ್ಣುಗಳಿಂದ ಬಾಗಿಲ ಕಡೆ ನೋಡತೊಡಗಿದವು.

ಝೂರಿ ಆಳಿಗೆ ಹೇಳಿದ – "ಒಂದಿಷ್ಟು ಹಿಂಡಿ ಯಾಕೋ ಹಾಕೋಲ್ಲ ?"

"ಹಿಂಡಿ ಹಾಕಿದರೆ ಯಜಮಾನಿ ನನಗೆ ಹೊಡೀದೇ ಬಿಡೋಲ್ಲ."

"ಅವಳಿಗೆ ಕಾಣದ ಹಾಗೆ ತಂದುಹಾಕೋ."

"ಇಲ್ಲಣ್ಣ, ಆಮೇಲೆ ನೀವೂ ಅವರ ಜೊತೆ ಸೇರ್ಕೊಂಡು ಬಯ್ತೀರಿ."

## 2

ಮಾರನೆಯ ದಿನ ಝೂರಿಯ ಭಾವ್ಮೈದ ಮತ್ತೆ ಬಂದು, ಎತ್ತುಗಳನ್ನು ಅಟ್ಟಿಕೊಂಡು ಹೋದ. ಈ ಸಲ ಅವನು ಎರಡನ್ನೂ ಗಾಡಿಗೆ ಹೂಡಿದ್ದ.

ಒಂದೆರಡು ಸಲ ಮೋತಿಗೆ ಗಾಡಿಯನ್ನು ದಾರಿಯ ಬದಿಯ ಕಂದಕದಲ್ಲಿ ಕೆಡುವುವ ಇಚ್ಛೆಯಾಯಿತು. ಆದರೆ ಹೀರಾ ಸಂಭಾಳಿಸಿತು. ಅದರದ್ದು ಮೋತಿಗಿಂತ ಹೆಚ್ಚು ತಾಳ್ಮೆಯ ಸ್ವಭಾವ.

ಸಂಜೆ ಮನೆ ತಲುಪಿದಾಗ ಝೂರಿಯ ಭಾವ್ಮೈದ ಅವನ್ನು ದಪ್ಪ ಹಗ್ಗದಲ್ಲಿ ಕಟ್ಟಿ, ಹಿಂದಿನ ದಿನದ ಚೇಷ್ಟೆಗೆ ತಕ್ಕ ಬುದ್ಧಿ ಕಲಿಸಿದ. ಮತ್ತೆ ಅದೇ ಒಣ ಭೂಸ ಹಾಕಿದ. ತನ್ನೆರಡು ಎತ್ತುಗಳಿಗೆ ಮಾತ್ರ ಹಿಂಡಿ – ನುಚ್ಚು ಕೊಟ್ಟ.

ಎತ್ತುಗಳಿಗೆ ಹಿಂದೆಂದೂ ಇಂತಹ ಅಪಮಾನವಾಗಿರಲಿಲ್ಲ. ಝೂರಿ ಹೂವಿನ ಛಡಿಯನ್ನು ಸಹ ಅವುಗಳ ಮೈಗೆ ತಾಕಿಸುತ್ತಿರಲಿಲ್ಲ. ತಮ್ಮ ಮನೆಯಲ್ಲಿ 'ಹಚ' 'ಹಚ' ಎಂದು ಶಬ್ದ ಮಾಡಿದರೆ ಸಾಕು, ಅವು ಎದ್ದು ನಿಲ್ಲುತ್ತಿದ್ದವು. ಇಲ್ಲಿ ಏಟು ತಿಂದ ವ್ಯಥೆ ಸಾಲದೆಂಬಂತೆ ಮೇಲೆ ಒಣ ಭೂಸ. ಅವು ತೊಟ್ಟಿಯ ಕಡೆ ಕಣ್ಣೆತ್ತಿಯೂ ನೋಡಲಿಲ್ಲ.

ಮಾರನೆಯ ದಿನ ಗಯಾ ಎತ್ತುಗಳನ್ನು ನೇಗಿಲಿಗೆ ಹೂಡಿದ. ಆದರೆ ಅವೆರಡೂ ಕಾಲೆತ್ತುವುದಿಲ್ಲವೆಂದು ಆಣೆ ಮಾಡಿದ್ದವು.ಗಯನಿಗೆ ಹೊಡೆದೂ ಹೊಡೆದೂ ಸುಸ್ತಾಯಿತು. ಆದರೂ ಎತ್ತುಗಳು ಮಾತ್ರ ಕಾಲೆತ್ತಲಿಲ್ಲ. ಒಂದು ಸಲ ಆ ನಿರ್ದಯಿ ಹೀರನ ಮೂಗಿನ ಮೇಲೆ ಕೋಲಿನಿಂದ ಚೆನ್ನಾಗಿ ಥಳಿಸಿದ. ಮೋತಿಯ ಕೋಪ ಹದ್ದು ಮೀರಿತು. ಅದು ನೊಗದ ಸಮೇತವೇ ಓಡಿತು. ನೇಗಿಲು, ಹಗ್ಗ, ನೊಗ ಎಲ್ಲವೂ ಕಿತ್ತು ಚೆಲ್ಲಾಪಿಲ್ಲಿಯಾದವು. ಕೊರಳಲ್ಲಿ ದಪ್ಪದಪ್ಪನಾದ ಹಗ್ಗವಿಲ್ಲದೇ ಹೋಗಿದ್ದರೆ ಅವುಗಳನ್ನು ಅವತ್ತು ಹಿಡಿಯಲಾಗುತ್ತಿರಲಿಲ್ಲ.

ಹೀರಾ ಮೂಕಭಾಷೆಯಲ್ಲಿ ಹೇಳಿತು – "ಓಡಿ ಹೋಗೋದರಿಂದ ಪ್ರಯೋಜನವಿಲ್ಲ."

ಮೋತಿ ಉತ್ತರ ಕೊಟ್ಟಿತು – "ಇವನು ಇವತ್ತು ನಿನ್ನ ಪ್ರಾಣ ತೊಗೊಂಡುಬಿಡ್ತಿದ್ದನಲ್ಲ."

"ಇವತ್ತು ತುಂಬಾ ಹೊಡೆತ ತಿನ್ನಬೇಕಾಗುತ್ತೆ."

"ತಿನ್ನೋಣಂತೆ ಬಿಡು. ಎತ್ತಿನ ಜನ್ಮ ಪಡೆದು ಹುಟ್ಟಿಬಂದಿದೀವಿ. ಏಟು ತಪ್ಪಿಸಿಕೊಳ್ಳೋಕಾಗುತ್ತೆಯೆ ?"

"ಗಯಾ ಯಾರೋ ಇಬ್ಬರನ್ನು ಕಟ್ಟಿಕೊಂಡು ಓಡಿಬರ್ತಿದಾನೆ. ಇಬ್ಬರ ಕೈಯಲ್ಲೂ ಲಾಠಿ ಆದೆ."

ಮೋತಿ ಹೇಳಿತು – "ಲಾಠಿ ತೊಗೊಂಡು ಬರ್ತಿದಾರಲ್ಲವೇ. ನೀನು 'ಹ್ಞೂ' ಅನ್ನು, ನಾನೂ ಸ್ವಲ್ಪ ತಮಾಷೆ ತೋರಿಸ್ತೀನಿ."

ಹೀರಾ ಬುದ್ಧಿ ಹೇಳಿತು "ಬೇಡಪ್ಪ, ಎದ್ದು ನಿಂತುಕೋ."

"ನನಗೆ ಹೊಡೀಲಿ ನೋಡು, ನಾನೂ ಒಬ್ಬಿಬ್ಬರನ್ನ ಕೆಳಗೆ ಕೆಡವ್ತೀನಿ." ಮೋತಿ ಎದೆ ಗಟ್ಟಿಮಾಡಿಕೊಂಡು ನಿಂತಿತು. ಗಯಾ ಬಂದ. ಎತ್ತುಗಳನ್ನು ಹಿಡಿದುಕೊಂಡು ಹೋದ. ಪುಣ್ಯಕ್ಕೆ ಈ ಸಲ ಅವನು ಅವನ್ನು ಹೊಡೆಯಲಿಲ್ಲ. ಹೊಡೆದಿದ್ದರೆ ಮೋತಿಯೂ ತಿರುಗಿ ಬೀಳುತ್ತಿತ್ತು. ಅದರ ಕೆಂಗಣ್ಣನ್ನು ನೋಡಿ ಗಯಾ ಹಾಗೂ ಅವನ ಸಂಗಡಿಗರು ಈಗ ಸುಮ್ಮನಿರುವುದೇ ಲೇಸೆಂದುಕೊಂಡರು.

ಇವತ್ತು ಮತ್ತೆ ಎತ್ತುಗಳ ಮುಂದೆ ಒಣ ಭೂಸವನ್ನೇ ತಂದಿಡಲಾಯಿತು. ಅವೆರಡೂ ಮೌನವಾಗಿ ನಿಂತಿದ್ದವು. ಮನೆಯವರು ಊಟ ಮಾಡತೊಡಗಿದರು. ಒಬ್ಬ ಪುಟ್ಟ ಹುಡುಗಿ ಎರಡು ರೊಟ್ಟಿ ತಂದು ಅವುಗಳ ಬಾಯಲ್ಲಿ ಒಂದೊಂದಿಟ್ಟು ಹೋದಳು. ಆ ಒಂದು ರೊಟ್ಟಿಯಿಂದ ಅವುಗಳ ಹಸಿವು ಏನು ತಾನೇ ಇಂಗಿಯಾತು; ಆದರೂ ಅದರಿಂದ ಅವುಗಳ ಹೃದಯಕ್ಕೆ ಭೋಜನ ದೊರೆತಂತಾಯಿತು. ಇಲ್ಲೂ ಯಾರೋ ಸಜ್ಜನರಿದ್ದಾರೆ! ರೊಟ್ಟಿ ತಂದುಕೊಟ್ಟ ಹುಡುಗಿ ಭೈರೋನ ಮಗಳು. ಅವಳ ತಾಯಿ ತೀರಿಕೊಂಡಿದ್ದಳು. ಮಲತಾಯಿ ಅವಳಿಗೆ ತುಂಬ ಹೊಡೆಯುತ್ತಿದ್ದಳು. ಆದಕಾರಣ ಅವಳಿಗೆ ಎತ್ತುಗಳನ್ನು ಕಂಡು ಒಂದು ಬಗೆಯ ಆತ್ಮೀಯತೆ ಉಂಟಾಗತ್ತು.

ಎರಡಕ್ಕೂ ಇಡೀ ದಿನ ನೇಗಿಲೆಳೆದೂ ಎಳೆದೂ ಸುಸ್ತಾಗುತ್ತಿತ್ತು. ಅವು ಹೊಡೆತ ತಿನ್ನುತ್ತಿದ್ದವು; ಮೊಂಡು ಹಿಡಿಯುತ್ತಿದ್ದವು. ಸಂಜೆ ಅವನ್ನು ಕೊಟ್ಟಿಗೆಯಲ್ಲಿ ಕಟ್ಟಿಹಾಕುತ್ತಿದ್ದರು. ರಾತ್ರಿ ಅದೇ ಹುಡುಗಿ ಬಂದು ಅವಕ್ಕೆ ಒಂದೊಂದು ರೊಟ್ಟಿ ತಿನ್ನಿಸಿ ಹೋಗುತ್ತಿದ್ದಳು. ಪ್ರೀತಿಯ ಈ ಪ್ರಸಾದದ ಮಹಿಮೆಯೆಂದರೆ ಎರಡೆರಡು ಹಿಡಿ ಒಣ ಭೂಸ ತಿಂದೂ ಅವು ದುರ್ಬಲವಾಗಲಿಲ್ಲ. ಆದರೆ ಅವುಗಳ ಕಣ್ಣಿನಲ್ಲಿ, ರೋಮರೋಮಗಳಲ್ಲಿ ವಿದ್ರೋಹ ತುಂಬಿತ್ತು.

ಒಂದು ದಿನ ಮೋತಿ ಮೂಕಭಾಷೆಯಲ್ಲಿ ಹೇಳಿತು – "ಇನ್ನು ಸಹಿಸೋಕ್ಕಾಗೋಲ್ಲ, ಹೀರಾ!"

"ಹಾಗಾದರೆ ಏನು ಮಾಡಬೇಕೂಂತಿ?"

"ಒಂದಿಬ್ಬರನ್ನ ಕೊಂಬಿನಲ್ಲೆತ್ತಿ ಎಸೀತೀನಿ."

"ಆದರೆ ನಮಗೆ ರೊಟ್ಟಿ ತಂದುಕೊಡೋ ಆ ಮುದ್ದುಹುಡುಗಿ ಈ ಮನೆಯ ಯಜಮಾನನ ಮಗಳು ಅಂತ ಗೊತ್ತು ತಾನೆ? ಆ ಬಡಪಾಯಿ ಅನಾಥಳಾಗೋಲ್ಲವೆ?"

"ಹಾಗಾದರೆ ಮನೆ ಯಜಮಾನಿಯನ್ನೇ ಎತ್ತಿ ಎಸೀಲೇನು? ಅವಳೇ ತಾನೇ ಆ ಹುಡುಗೀನ ಹೊಡೆಯೋಳು."

"ಆದರೆ ಹೆಂಗಸರ ಮೇಲೆ ಹಾಯೋದು ಧರ್ಮವಲ್ಲ; ಇದನ್ನ ಮರೆತುಬಿಡ್ತೀಯಲ್ಲ."

"ನೀನಂತೂ ಯಾವುದಕ್ಕೂ ಒಪ್ಪೋದಿಲ್ಲ. ಹೇಳು, ಇವತ್ತು ಹಗ್ಗ ಬಿಚ್ಚಿಕೊಂಡು ಹೋಗೋಣವೆ?"

"ಓಹೋ, ಅದಕ್ಕೆ ನಾನು ಒಪ್ತೀನಿ. ಆದರೆ ಇಷ್ಟು ದಪ್ಪ ಹಗ್ಗ ಹರಿಯೋ ಬಗೆ ಹೇಗೆ ?"

"ಅದಕ್ಕೊಂದು ಉಪಾಯ ಇದೆ. ಮೊದಲು ಹಗ್ಗಾನ ಕೊಂಚ ಅಗಿದರೆ ಆಮೇಲೆ ಒಂದೇ ಎಳೆತಕ್ಕೆ ಅದು ಕಿತ್ತು ಬರುತ್ತೆ."

ರಾತ್ರಿ ಹುಡುಗಿ ರೊಟ್ಟಿ ತಿನ್ನಿಸಿ ಹೋದಮೇಲೆ ಎರಡು ಎತ್ತುಗಳೂ ಹಗ್ಗವನ್ನು ಅಗಿಯತೊಡಗಿದವು. ಆದರೆ ದಪ್ಪ ಹಗ್ಗ ಬಾಯಿಗೆ ಹರಿಯುತ್ತಿರಲಿಲ್ಲ. ಆ ಬಡಪ್ರಾಣಿಗಳು ಜೋರಾಗಿ ಕಚ್ಚಿ ಕಚ್ಚಿ ಸುಮ್ಮನಾಗುತ್ತಿದ್ದವು.

ಇದ್ದಕ್ಕಿದ್ದಂತೆ ಮನೆಯ ಬಾಗಿಲು ತೆರೆಯಿತು. ಅದೇ ಹುಡುಗಿ ಹೊರಬಂದಳು. ಎತ್ತುಗಳೆರಡೂ ತಲೆ ತಗ್ಗಿಸಿ ಅವಳ ಕೈ ನೆಕ್ಕತೊಡಗಿದವು. ಎರಡರ ಬಾಲಗಳೂ ನಿಗರಿ ನಿಂತವು. ಹುಡುಗಿ ಅವುಗಳ ಹಣೆ ನೇವರಿಸುತ್ತ ಹೇಳಿದಳು – "ಹಗ್ಗ ಬಿಚ್ಚಿಬಿಡ್ತೀನಿ. ಸದ್ದಿಲ್ಲದೆ ಹೊರಟುಹೋಗಿ. ಇಲ್ಲದೇ ಹೋದರೆ ಈ ಜನ ನಿಮ್ಮನ್ನ ಕೊಂದುಹಾಕ್ತಾರೆ. ನಿಮಗೆ ಮೂಗುದಾರ ಹಾಕಬೇಕು ಅಂತ ಇವತ್ತು ಮನೇಲಿ ಮಾತುಕತೆ ಆಗ್ತಿತ್ತು."

ಹುಡುಗಿ ಕೊರಳ ಹಗ್ಗ ಬಿಚ್ಚಿದಳು. ಎತ್ತುಗಳು ಸುಮ್ಮನೆ ನಿಂತಿದ್ದವು.

ಮೋತಿ ತನ್ನ ಮಾತಿನಲ್ಲಿ ಹೇಳಿತು – "ಯಾಕೆ ಹೊರಡ್ತಿಲ್ಲ ?"

ಹೀರಾ ಹೇಳಿತು – "ಹೋಗಬಹುದು. ಆದರೆ ನಾಳೆ ಈ ಅನಾಥಳಿಗೆ ಕಷ್ಟಕ್ಕಿಟ್ಟುಕೊಳ್ಳುತ್ತೆ. ಎಲ್ಲರೂ ಇವಳ ಮೇಲೆಯೇ ಅನುಮಾನ ಪಡ್ತಾರೆ."

ಇದ್ದಕ್ಕಿದ್ದಂತೆ ಹುಡುಗಿ ಅರಚತೊಡಗಿದಳು – "ಮಾವನ ಮನೆಯ ಎತ್ತುಗಳೆರಡೂ ಓಡಿಹೋಗ್ತಿವೆ. ಓ ಅಪ್ಪಾ ! ಅಪ್ಪಾ ! ಎರಡೂ ಓಡಿಹೋಗ್ತಿವೆ. ಬೇಗ ಓಡಿ ಬಾ."

ಗಯಾ ಗಡಿಬಿಡಿಯಿಂದ ಹೊರಗೆ ಬಂದು ಎತ್ತುಗಳನ್ನು ಹಿಡಿಯಲು ಹೋದ. ಅವೆರಡೂ ಓಡಿದವು. ಗಯಾ ಬೆನ್ನಟ್ಟಿದ. ಅವು ಇದ್ದಿದ್ದೂ ಜೋರಾಗಿ ಓಡಿದವು. ಗಯಾ ಕೂಗಿಕೊಂಡ. ಮತ್ತೆ ಹಳ್ಳಿಯಲ್ಲಿ ಕೆಲವರನ್ನು ಜೊತೆಗೆ ಕರೆದುಕೊಂಡು ಹೋಗಲೆಂದು ಹಿಂದಿರುಗಿ ಬಂದ. ಮಿತ್ರರಿಬ್ಬರಿಗೂ ತಪ್ಪಿಸಿಕೊಳ್ಳಲು ಒಳ್ಳೆಯ ಅವಕಾಶ ಸಿಕ್ಕಿತು. ಯಾವ ದಾರಿಯಲ್ಲಿ ಹೋಗುತ್ತಿದ್ದೇವೆಂಬ ಅರಿವೂ ಇಲ್ಲದೆ ನೇರವಾಗಿ ಓಡುತ್ತಾ ಹೊರಟವು. ಹಿಂದೆ ತಾವು ಬಂದಿದ್ದ ದಾರಿಯ ಯಾವ ಗುರುತೂ ಕಾಣುತ್ತಿರಲಿಲ್ಲ. ಹೊಸ ಹೊಸ ಹಳ್ಳಿಗಳು ಸಿಕ್ಕಿದವು. ಎರಡೂ ಒಂದು ಹೊಲದ ದಂಡೆಯಲ್ಲಿ ನಿಂತು ಮುಂದೇನು ಮಾಡುವುದೆಂದು ಯೋಚಿಸತೊಡಗಿದವು.

ಹೀರಾ ಹೇಳಿತು – "ದಾರಿ ತಪ್ಪಿತು ಅಂತ ಕಾಣುತ್ತೆ."

"ನೀನು ಹಿಂದೆ ಮುಂದೆ ನೋಡದೆ ಓಡಿದೆ. ಅಲ್ಲೇ ಅವನನ್ನ ಕೆಡವಬೇಕಾಗಿತ್ತು !"

"ಅವನನ್ನು ಕೆಳಕ್ಕೆ ಕೆಡವಿದ್ದರೆ ಲೋಕ ಏನು ಅಂತಿತ್ತು. ಅವನು ಅವನ ಧರ್ಮ ಬಿಡಬಹುದು; ನಾವು ನಮ್ಮ ಧರ್ಮ ಬಿಡೋದುಂಟೆ ?"

ಎರಡೂ ಹಸಿವಿನಿಂದ ಕಂಗಾಲಾಗಿದ್ದವು. ಹೊಲದಲ್ಲಿ ಬಟಾಣಿ ಬೆಳೆದು ನಿಂತಿತ್ತು.

ಮೇಯುತೊಡಗಿದವು. ಯಾರಾದರೂ ಬರುತ್ತಿದ್ದಾರೆಯೋ ಹೇಗೆ ಎಂದು ಬಿಟ್ಟುಬಿಟ್ಟು ಸಪ್ಪಳಕ್ಕೆ ಕಿವಿಗೊಡುತ್ತಿದ್ದವು.

ಹೊಟ್ಟೆ ತುಂಬಿದ ಮೇಲೆ ಎತ್ತುಗಳೆರಡೂ ಸ್ವಾತಂತ್ರ್ಯದ ಅನುಭವದಿಂದ ಮತ್ತಾಗಿ ಕುಣಿದಾಡತೊಡಗಿದವು. ಮೊದಲು ಎರಡೂ ತೇಗಿದವು. ಆಮೇಲೆ ಕೊಂಬಿಗೆ ಕೊಂಬು ಹಚ್ಚಿ ಒಂದು ಇನ್ನೊಂದನ್ನು ತಳ್ಳತೊಡಗಿದವು. ಮೋತಿ ಹೀರನನ್ನು ಕಂದಕಕ್ಕೆ ಬೀಳವಂತೆ ಕೆಲವಾರು ಹೆಜ್ಜೆ ಹಿಂದೆ ತಳ್ಳಿತು. ಆಗ ಹೀರಾಗೂ ಕೋಪ ಬಂತು. ಸವರಿಕೊಂಡೆದ್ದು ಮತ್ತೆ ಮೋತಿಯೊಡನೆ ಹೋರಾಡಿತು. ಆಟ ಗುದ್ದಾಟಕ್ಕೆ ತಿರುಗುತ್ತಿರುವುದನ್ನು ಕಂಡು ಮೋತಿ ಪಕ್ಕಕ್ಕೆ ಸರಿಯಿತು.

## 3

ಅರ್ರೆ! ಇದೇನು ? ಯಾವುದೋ ಗೂಳಿ ಗುಟುರು ಹಾಕುತ್ತಾ ಬರುತ್ತಿದೆ. ಹೌದು, ಗೂಳಿಯೇ. ಅದು ಮುಂದೆ ಬಂತು. ಮಿತ್ರರಿಬ್ಬರೂ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದರು. ಗೂಳಿ ಒಳ್ಳೆಯ ಆನೆಯಿದ್ದಂತಿದೆ. ಅದರೊಡನೆ ಹೋರಾಡುವುದೆಂದರೆ ಪ್ರಾಣದ ಆಸೆ ತೊರೆದಂತೆಯೇ ಸರಿ. ಆದರೆ ಹೋರಾಡದೆ ಬಿಟ್ಟರೂ ಪ್ರಾಣ ಉಳಿಯುವ ಲಕ್ಷಣವಿಲ್ಲ. ಇವುಗಳ ಕಡೆಯೇ ನುಗ್ಗಿ ಬರುತ್ತಿದೆ. ಎಷ್ಟು ಭಯಂಕರ ಮುಖ ಅದರದ್ದು!

ಮೋತಿ ಮೂಕಭಾಷೆಯಲ್ಲಿ ಹೇಳಿತು – "ಬಲು ಕೆಟ್ಟದಾಗಿ ಸಿಕ್ಕಿಬಿದ್ದೆವು. ಈಗ ಪ್ರಾಣ ಉಳಿಯೋ ಬಗೆ ಹೇಗೆ ? ಏನಾದರೂ ಉಪಾಯ ಯೋಚಿಸು."

ಹೀರಾ ಚಿಂತೆಯ ಧ್ವನಿಯಲ್ಲಿ ಹೇಳಿತು – "ಅಹಂಕಾರದಲ್ಲಿ ಮೈಮರೆತಿದೆ. ನಾವು ಗೋಗರೆದರೆ ಅದು ಕೇಳೋಲ್ಲ."

"ಓಡಿ ಯಾಕೆ ಹೋಗಬಾರದು ?"

"ಓಡಿ ಹೋಗೋದು ಹೇಡಿತನ."

"ಹಾಗಾದರೆ ಇಲ್ಲೇ ಸಾಯಿ. ನಾನಂತೂ ಓಡಿಹೋಗ್ತೀನಿ."

"ಅದು ಅಟ್ಟಿಸಿಕೊಂಡು ಬಂದರೆ ?"

"ಹಾಗಾದರೆ ಬೇರೆ ಏನಾದರೂ ಉಪಾಯ ಯೋಚಿಸು !"

"ಇಬ್ಬರೂ ಒಟ್ಟಿಗೆ ಸೇರಿ ಅದಕ್ಕೆ ತಿವಿಯೋದೊಂದೇ ಉಪಾಯ. ನಾನು ಮುಂದಿನಿಂದ ಅದನ್ನ ಅಟ್ಟುತೀನಿ; ನೀನು ಹಿಂದಿನಿಂದ ಅಟ್ಟು. ಎರಡೂ ಕಡೆಯಿಂದ ಹೊಡೆತ ಬಿದ್ದಾಗ ಅದೇ ಓಡಿಹೋಗುತ್ತೆ. ಅದು ನನ್ನ ಮೇಲೆ ಹಾಯ್ದಾಗ ನೀನು ಪಕ್ಕದಿಂದ ಅದರ ಹೊಟ್ಟೇನ ತಿವಿ. ಪ್ರಾಣಕ್ಕೆ ಅಪಾಯ ಒದಗಿದೆ; ಬೇರೆ ಉಪಾಯವೇ ಇಲ್ಲ."

ಮಿತ್ರರಿಬ್ಬರೂ ಅಂಗೈಯಲ್ಲಿ ಜೀವವಿಟ್ಟುಕೊಂಡು ಗೂಳಿಯ ಮೇಲೆ ಬಿದ್ದರು.

ಗೂಳಿಗೂ ಹೀಗೆ ಒಟ್ಟಾಗಿ ಬಂದ ಶತ್ರುಗಳೊಡನೆ ಹೋರಾಡಿ ಅನುಭವವಿರಲಿಲ್ಲ. ಒಂದೇ ಶತ್ರುವಿನೊಡನೆ ಹೋರಾಡಿ ಅಭ್ಯಾಸವಿತ್ತು. ಅದು ಹೀರನ ಮೇಲೆ ಹಾಯ್ದಾಗ ಮೋತಿ ಹಿಂದಿನಿಂದ ತಿವಿಯಿತು. ಮೋತಿಯು ಕಡೆತಿರುಗಿದಾಗ ಹೀರಾ ತಿವಿಯಿತು. ಒಂದೊಂದಾಗಿ ಎರಡನ್ನೂ ಕೆಳಗೆ ಬೀಳಿಸುವುದೆಂದು ಗೂಳಿ ಅಂದುಕೊಂಡಿತ್ತು. ಆದರೆ ಇವೆರಡೂ ಐನಾತಿ. ಅದಕ್ಕೆ ಅವಕಾಶವನ್ನೇ ಕೊಡುತ್ತಿರಲಿಲ್ಲ. ಒಂದು ಸಲ ಅದು ಸಿಟ್ಟಿನಿಂದ ಹೀರನನ್ನು ಮುಗಿಸಿಬಿಡುವುದೆಂದುಕೊಂಡು ನುಗ್ಗಿದಾಗ ಮೋತಿ ಪಕ್ಕದಿಂದ ಬಂದು ಅದರ ಹೊಟ್ಟೆ ಇರಿಯಿತು. ಗೂಳಿ ಕೋಪದಿಂದ ಹಿಂದೆ ತಿರುಗಿದಾಗ ಹೀರಾ ಎರಡನೆಯ ವರಸೆಯಲ್ಲಿ ಕೊಂಬೂರಿತು. ಕಟ್ಟಕಡೆಗೆ ಬಡಪಾಯಿ ಗೂಳಿ ಗಾಯಗೊಂಡು ಓಡಿತು. ಎತ್ತುಗಳೆರಡೂ ಬಹುದೂರದವರೆಗೆ ಅದನ್ನು ಬೆನ್ನಟ್ಟಿ ಹೋದವು. ಗೂಳಿ ಉಸಿರುಗಟ್ಟಿ ಕೆಳಕ್ಕೆ ಬಿದ್ದಿತು. ಆಗ ಎತ್ತುಗಳು ಅದರ ಪಾಡಿಗೆ ಅದನ್ನು ಬಿಟ್ಟವು.

ಮಿತ್ರರಿಬ್ಬರೂ ವಿಜಯದ ಅಮಲಿನಲ್ಲಿ ಬೀಗುತ್ತ ಬರುತ್ತಿದ್ದವು.

ಮೋತಿ ತನ್ನ ಸಾಂಕೇತಿಕ ಭಾಷೆಯಲ್ಲಿ ಹೇಳಿತು – "ಆ ಬಡ್ಡೀದನ್ನ ಮುಗಿಸೇಬಿಡಬೇಕು ಅಂತ ಮನಸ್ಸಾಗಿತ್ತು."

ಹೀರಾ ತಿರಸ್ಕಾರದಿಂದ ಹೇಳಿತು – "ಕೆಳಬಿದ್ದವರನ್ನ ತಿವೀಬಾರದು."

"ಅದೆಲ್ಲಾ ಶುದ್ಧ ತಪ್ಪು. ಶತ್ರೂನ ಮತ್ತೆ ಮೇಲೇಳದ ಹಾಗೆ ಹೊಡೆದು ಹಾಕಬೇಕು."

"ಈಗ ಮನೆ ಹೇಗೆ ತಲಪೋದು ಅಂತ ಯೋಚಿಸು."

"ಮೊದಲು ಒಂದಿಷ್ಟು ಹೊಟ್ಟೇಗೆ ಆಗಲಿ, ಆಮೇಲೆ ಯೋಚಿಸೋಣ."

ಎದುರುಗಡೆ ಬಟಾಣಿಯ ಹೊಲವಿತ್ತು. ಮೋತಿ ಅಲ್ಲಿಗೆ ನುಗ್ಗಿತು. ಹೀರಾ ಬೇಡವೆಂದರೂ ಅದು ಕೇಳಲಿಲ್ಲ. ಇನ್ನೂ ಒಂದೆರಡು ತೆನೆ ತಿನ್ನುವುದಕ್ಕಿಲ್ಲ, ಇಬ್ಬರು ಮನುಷ್ಯರು ಲಾಠಿ ಹಿಡಿದು ಓಡಿಬಂದು ಎತ್ತುಗಳನ್ನು ಮುತ್ತಿದರು. ಹೀರಾ ಒಡ್ಡಿನ ಮೇಲಿದ್ದುದು ಓಡಿ ತಪ್ಪಿಸಿಕೊಂಡಿತು. ಮೋತಿ ನೀರು ಹಾಯಿಸಿದ್ದ ಹೊಲದೊಳಗಿತ್ತು. ಅದರ ಕಾಲು ಕೆಸರಿನಲ್ಲಿ ಹೂತುಕೊಳ್ಳತೊಡಗಿತು. ಅದಕ್ಕೆ ಓಡುವುದಾಗಲಿಲ್ಲ, ಸಿಕ್ಕಿಬಿದ್ದಿತು. ಜೊತೆಗಾರ ಸಂಕಟದಲ್ಲಿರುವುದನ್ನು ನೋಡಿ ಹೀರಾ ಹಿಂದಿರುಗಿ ಬಂದಿತು. ಸಿಕ್ಕಿಬೀಳುವುದಾದರೆ ಇಬ್ಬರೂ ಸಿಕ್ಕಿಬೀಳಬೇಕಲ್ಲವೆ. ಕಾವಲುಗಾರರು ಅದನ್ನೂ ಹಿಡಿದರು.

ಬೆಳಗ್ಗೆ ಎತ್ತುಗಳೆರಡನ್ನೂ ದೊಡ್ಡಿಯಲ್ಲಿ ಕೂಡಿದರು.

## 4

ಎತ್ತುಗಳ ಜೀವನದಲ್ಲಿ ಮೊದಲ ಬಾರಿಗೆ ಇಡೀ ದಿನ ಕಳೆದರೂ ತಿನ್ನಲು ಒಂದು ಹುಲ್ಲು ಕಡ್ಡಿಯಾದರೂ ಸಿಗದಂತಹ ಪರಿಸ್ಥಿತಿ ಬಂದಿತು. ಇಲ್ಲಿಯ ಯಜಮಾನ

ಎಂಥವನೆಂದೇ ಅರ್ಥವಾಗುತ್ತಿರಲಿಲ್ಲ. ಇವನಿಗಿಂತ ಗಯನೇ ಎಷ್ಟೋ ಮೇಲು. ಇಲ್ಲಿ ಅನೇಕ ಎಮ್ಮೆ, ಕುರಿ, ಕುದುರೆ, ಕತ್ತೆಗಳಿದ್ದವು. ಆದರೆ ಯಾವುದರ ಮುಂದೆಯೂ ಮೇವಿರಲಿಲ್ಲ. ಎಲ್ಲವೂ ಹೆಣಗಳಂತೆ ಬಿದ್ದಿದ್ದವು. ಕೆಲವಂತೂ ನಿಂತುಕೊಳ್ಳಲಾರದಷ್ಟು ನಿಶ್ಯಕ್ತವಾಗಿದ್ದವು. ಎತ್ತುಗಳೆರಡೂ ಇಡೀ ದಿನ ಹೆಬ್ಬಾಗಿಲ ಕಡೆ ದೃಷ್ಟಿ ನೆಟ್ಟು ಕಾಯುತ್ತಿದ್ದವು. ಆದರೆ ಯಾರೂ ಮೇವು ತರುವುದು ಕಾಣಲಿಲ್ಲ. ವಿಧಿಯಿಲ್ಲದೆ ಅವು ಗೋಡೆಯ ಉಪ್ಪು ಮಣ್ಣನ್ನು ನೆಕ್ಕತೊಡಗಿದವು. ಆದರೆ ಅದರಿಂದ ಏನು ತಾನೇ ತೃಪ್ತಿಯಾದೀತು ?

ಅವತ್ತು ರಾತ್ರಿಯೂ ಆಹಾರ ಸಿಗದಿದ್ದಾಗ ಹೀರನ ಎದೆಯಲ್ಲಿ ಬಂಡಾಯದ ಜ್ವಾಲೆ ಉರಿಯತೊಡಗಿತು. ಅದು ಮೋತಿಗೆ ಹೇಳಿತು – "ಇನ್ನು ತಡೆಯೋಕ್ಕಾಗೋಲ್ಲ, ಮೋತಿ !"

ಮೋತಿ ತಲೆದೂಗುತ್ತ ಉತ್ತರ ಕೊಟ್ಟಿತು – "ನನಗಂತೂ ಜೀವವೇ ಹೋಗ್ತಿದೆ ಅಂತ ಅನ್ನಿಸುತ್ತೆ."

"ಇಷ್ಟು ಸುಲಭವಾಗಿ ಧೈರ್ಯ ಕಳೆದುಕೊಳ್ಳಬೇಡಣ್ಣ ! ಇಲ್ಲಿಂದ ತಪ್ಪಿಸಿಕೊಂಡು ಹೋಗೋಕ್ಕೆ ಏನಾದರೂ ಉಪಾಯ ಹುಡುಕಬೇಕು."

"ಬಾ, ಗೋಡೆ ಒಡೆದುಹಾಕೋಣ."

"ನನ್ನ ಕೈಲಿ ಈಗ ಏನೂ ಹರಿಯೋಲ್ಲ."

"ಅಷ್ಟೊಂದು ದರ್ಪ ತೋರಿಸ್ತಿದ್ದೆಯಲ್ಲ, ಇಷ್ಟೇನೇ ಶಕ್ತಿ ?"

"ದರ್ಪವೆಲ್ಲಾ ಕರಗಿಹೋಯ್ತು."

ದೊಡ್ಡಿಯ ಗೋಡೆ ಮಣ್ಣಿನದು. ಹೀರಾ ಗಟ್ಟಿಮುಟ್ಟಾಗಿತ್ತು. ಅದು ತನ್ನ ಕೊಂಬಿನ ಮೊನೆಯನ್ನು ಗೋಡೆಗೆ ಊರಿ ಜೋರಾಗಿ ಒತ್ತಿದಾಗ ಮಣ್ಣಿನ ಕಿಪ್ಪೆ ಕಿತ್ತುಬಂದಿತು. ಆಗ ಅದರ ಸಾಹಸ ಇದ್ದಿದ್ದೂ ಹೆಚ್ಚಾಯಿತು. ಅದು ನುಗ್ಗಿ ನುಗ್ಗಿ ಬಂದು ಗೋಡೆಗೆ ಢಿಕ್ಕಿ ಹೊಡೆಯತೊಡಗಿತು. ಒಂದೊಂದು ಸಲಕ್ಕೂ ಸ್ವಲ್ಪ ಸ್ವಲ್ಪ ಮಣ್ಣು ಕೆಳಗೆ ಬೀಳುತ್ತಿತ್ತು.

ಅದೇ ಹೊತ್ತಿಗೆ ದೊಡ್ಡಿಯ ಕಾವಲುಗಾರ ಪ್ರಾಣಿಗಳ ಹಾಜರಿ ತೆಗೆದುಕೊಳ್ಳಲೆಂದು ಲಾಟೀನು ಹಿಡಿದುಕೊಂಡು ಬಂದ. ಹೀರನ ಈ ಪುಂಡತನವನ್ನು ನೋಡಿ ಅವನು ದೊಣ್ಣೆಯಿಂದ ನಾಲ್ಕು ಕೊಟ್ಟು ದಪ್ಪ ಹಗ್ಗ ಬಿಗಿದುಹೋದ.

ಮೋತಿ ಬಿದ್ದುಕೊಂಡಿದ್ದಂತೆಯೇ ಹೇಳಿತು – "ನೋಡಿದೆಯಾ ? ಕೊನೆಗೆ ಹೊಡೆತ ತಿನ್ನಬೇಕಾಯಿತು. ಇನ್ನೇನು ತಾನೇ ಸಿಕ್ಕಿತು !"

"ಏನೂ ಪರವಾಗಿಲ್ಲ. ಎಲ್ಲಾದರೂ ಸಾಯಲೇಬೇಕು. ಯೋಚಿಸಿ ನೋಡು. ಗೋಡೆ ಉರುಳಿಬಿದ್ದಿದ್ದರೆ ಎಷ್ಟೊಂದು ಜೀವಗಳು ಉಳೀತಿದ್ದವು. ಇಷ್ಟೊಂದು ಜನ ಬಂಧುಗಳು ಇಲ್ಲಿ ಬಂದಿಯಾಗಿದ್ದಾರೆ. ಯಾವೊಂದರ ದೇಹದಲ್ಲೂ ತ್ರಾಣವಿಲ್ಲ. ಇನ್ನೊಂದು ನಾಲ್ಕು ದಿನ ಇದೇ ಸ್ಥಿತಿ ಮುಂದುವರಿದರೆ ಎಲ್ಲವೂ ಸತ್ತುಹೋಗುತ್ತವೆ."

"ಹೌದು, ಅದೇನೋ ನಿಜ. ಒಳ್ಳೇದು, ತೊಗೋ, ನಾನೂ ಬಲ ಬಿಟ್ಟು ತಿವೀತೀನಿ."

ಮೋತಿಯೂ ಅದೇ ಜಾಗದಲ್ಲಿ ಗೋಡೆಗೆ ಕೊಂಬು ಹಾಕಿ ತಿವಿಯಿತು. ಇನ್ನೂ ಒಂದಿಷ್ಟು ಮಣ್ಣು ಬಿದ್ದಿತು. ಎತ್ತುಗಳ ಧೈರ್ಯ ಹೆಚ್ಚಿತು. ಯಾವನೋ ಶತ್ರುವಿನೊಡನೆ ಹೋರಾಡುತ್ತಿವೆಯೋ ಎಂಬಂತೆ ಅವು ಗೋಡೆಗೆ ಕೊಂಬು ಹಾಕಿ ಜೋರಾಗಿ ಒತ್ತತೊಡಗಿದವು. ಕೊನೆಗೆ ಎರಡು ಗಂಟೆಯ ಸಾಹಸದ ನಂತರ ಗೋಡೆ ಮೇಲಿನಿಂದ ಸುಮಾರು ಒಂದು ಮೊಳದಷ್ಟು ಉರುಳಿತು. ಅವು ಎರಡನೆಯ ಸಲ ಎರಡು ಪಟ್ಟು ಬಲದಿಂದ ಢಿಕ್ಕಿ ಹೊಡೆದಾಗ ಅರ್ಧ ಗೋಡೆ ಉರುಳಿತು.

ಗೋಡೆ ಬಿದ್ದುದನ್ನು ನೋಡಿ, ಅರೆ ಸತ್ತುಬಿದ್ದಿದ್ದ ಪ್ರಾಣಿಗಳೆಲ್ಲವೂ ಚೇತರಿಸಿಕೊಂಡು ಎದ್ದವು. ಇದ್ದ ಮೂರು ಕುದುರೆಗಳು ನಾಗಾಲೋಟದಿಂದ ಹೊರಗೋಡಿದವು. ಆಮೇಲೆ ಕುರಿಗಳು ಹೊರಟವು. ಅವುಗಳ ನಂತರ ಎಮ್ಮೆಗಳೂ ಜಾರಿಕೊಂಡವು. ಆದರೆ ಕತ್ತೆಗಳು ಮಾತ್ರ ಇದ್ದಲ್ಲೇ ಇದ್ದವು.

ಹೀರಾ ಅದನ್ನು ಕೇಳಿತು – "ನೀವಿಬ್ಬರೂ ಯಾಕೆ ಓಡಿಹೋಗೋದಿಲ್ಲ?"

ಒಂದು ಕತ್ತೆ ಹೇಳಿತು – "ಮತ್ತೆ ಸಿಕ್ಕಿಬಿದ್ದರೆ?"

"ಏನು ನಷ್ಟ? ಈಗಂತೂ ಓಡಿಹೋಗೋಕ್ಕೆ ಅವಕಾಶ ಸಿಕ್ಕಿದೆಯಲ್ಲ."

"ನಮಗೆ ಭಯವಾಗುತ್ತೆ. ನಾವಿಲ್ಲೇ ಇರ್ತೀವಿ."

ನಡುರಾತ್ರಿ ಮೀರಿತ್ತು. ಕತ್ತೆಗಳೆರಡೂ ನಿಂತಲ್ಲೇ ನಿಂತುಕೊಂಡು ಓಡಿಹೋಗುವುದೋ ಬೇಡವೋ ಎಂದು ಯೋಚಿಸುತ್ತಿದ್ದವು. ಮೋತಿ ತನ್ನ ಗೆಳೆಯನ ಕೊರಳ ಹಗ್ಗವನ್ನು ಕಡಿಯುವುದರಲ್ಲಿ ತೊಡಗಿತ್ತು. ಮೋತಿ ಇನ್ನು ಕಡಿಯಲಾಗದೆ ಸೋತಾಗ ಹೀರಾ ಹೇಳಿತು – "ನನ್ನನ್ನ ಬಿಟ್ಟು ನೀನು ಹೋಗು. ಮತ್ತೆ ಎಲ್ಲಿಯಾದರೂ ಭೇಟಿಯಾಗೋಣಂತೆ."

ಮೋತಿ ಕಣ್ಣಲ್ಲಿ ನೀರು ತಂದುಕೊಂಡು ಹೇಳಿತು – "ನೀನು ನನ್ನನ್ನು ಅಷ್ಟು ಸ್ವಾರ್ಥಿ ಅಂದುಕೊಂಡೆಯಾ, ಹೀರಾ? ನಾನೂ ನೀನೂ ಇಷ್ಟು ದಿನ ಒಟ್ಟಿಗಿದ್ದೆವು. ಇವತ್ತು ನೀನು ಸಂಕಟದಲ್ಲಿ ಸಿಕ್ಕಿದಿ ಅಂತ ನಿನ್ನನ್ನ ಬಿಟ್ಟುಹೋಗಲೆ?"

ಹೀರಾ ಹೇಳಿತು – "ತುಂಬ ಏಟು ಬೀಳುತ್ತೆ. ಇದು ನಿನ್ನದೇ ಚೇಷ್ಟೆ ಅಂತ ಜನಕ್ಕೆ ಗೊತ್ತಾಗುತ್ತೆ."

ಮೋತಿ ಜಂಬದಿಂದ ಹೇಳಿತು – "ಯಾವ ಅಪರಾಧಕ್ಕಾಗಿ ನಿನ್ನ ಕೊರಳಿಗೆ ಕಟ್ಟು ಬಿದ್ದಿತೋ ಅದೇ ಅಪರಾಧಕ್ಕೆ ನನಗೆ ಏಟು ಬಿದ್ದರೆ ಏನು ಚಿಂತೆ? ಎಂಟು ಹತ್ತು ಪ್ರಾಣಿಗಳ ಜೀವ ಉಳಿದದ್ದಾಗಿದೆ. ಅವೆಲ್ಲಾ ಆಶೀರ್ವಾದ ಕೊಡುತ್ವೆ."

ಹೀಗೆನ್ನುತ್ತ ಮೋತಿ ಎರಡೂ ಕತ್ತೆಗಳನ್ನು ಕೊಂಬಿನಲ್ಲಿ ತಿವಿದೂ ತಿವಿದೂ ದೊಡ್ಡಿಯ ಹೊರಗೆ ಓಡಿಸಿ ತನ್ನ ಬಂಧುವಿನ ಹತ್ತಿರ ಬಂದು ಮಲಗಿಬಿಟ್ಟಿತು.

ಬೆಳಕು ಹರಿದೊಡನೆಯೇ ಗುಮಾಸ್ತ, ಕಾವಲುಗಾರ ಹಾಗೂ ಇತರ ಕೆಲಸಗಾರರಲ್ಲಿ ಎಷ್ಟು ಗದ್ದಲವೆದ್ದಿತೆಂದು ಹೇಳುವ ಅವಶ್ಯಕತೆಯೇ ಇಲ್ಲ. ಮೋತಿಗೆ ಚೆನ್ನಾಗಿ ಶಾಸ್ತಿಯಾಯಿತು. ಅದರ ಕೊರಳಿಗೂ ದಪ್ಪ ಹಗ್ಗ ಬಿತ್ತು.

## 5

ವಾರ ಕಾಲ ಇಬ್ಬರು ಮಿತ್ರರೂ ಅಲ್ಲಿಯೇ ಕಟ್ಟಿಬಿದ್ದಿದ್ದರು. ಯಾರೂ ಒಂದು ಹುಲ್ಲು ಕಡ್ಡಿಯಷ್ಟೂ ಮೇವು ಹಾಕಲಿಲ್ಲ. ದಿನಕ್ಕೊಮ್ಮೆ ನೀರು ತೋರಿಸಿ ಹೋಗುತ್ತಿದ್ದರು. ಅಷ್ಟೇ. ಅದೇ ಆ ಎತ್ತುಗಳಿಗೆ ಆಧಾರವಾಯಿತು. ಅವೆರಡೂ ಏಳಲಾರದಷ್ಟೂ ದುರ್ಬಲವಾಗಿದ್ದವು. ಅವುಗಳ ಮೈಮೂಳೆ ಬಿಟ್ಟುಕೊಳ್ಳತೊಡಗಿತು.

ಒಂದು ದಿನ ದೊಡ್ಡಿಯ ಮುಂದೆ ತಮಟೆಯ ಶಬ್ದ ಕೇಳಿಬಂದಿತು. ಮಧ್ಯಾಹ್ನವಾಗುವಾಗ ಅಲ್ಲಿ ಐವತ್ತು ಅರವತ್ತು ಜನ ಗುಂಪುಗೂಡಿದರು. ಯಾರೋ ಎರಡು ಎತ್ತುಗಳನ್ನೂ ಹೊರತಂದರು. ಅವುಗಳ ಪರೀಕ್ಷೆ ಷುರುವಾಯಿತು. ಜನ ಬಂದು ಬಂದು ಅವುಗಳ ಮುಖ ನೋಡುತ್ತಿದ್ದರು; ಅಸಂತೋಷದಿಂದ ಹೊರಟುಹೋಗುತ್ತಿದ್ದರು. ಹೀಗೆ ಸತ್ತ ಹೆಣದಂತಿರುವ ಎತ್ತುಗಳನ್ನು ಯಾರು ಕೊಳ್ಳಬೇಕು ?

ಇದ್ದಕ್ಕಿದ್ದಂತೆ ಒಬ್ಬ ಠೊಣೆಯ ಬಂದ. ಅವನ ಮುಖ ಕೆಂಪಗಿತ್ತು. ಮುಖ ಮುದ್ರೆ ಕಠೋರವಾಗಿತ್ತು. ಬಂದವನೇ ಅವನು ಎತ್ತುಗಳ ಕಿಬ್ಬೊಟ್ಟೆಯ ಕೆಳಗೆ ಬೆರಳೊತ್ತಿ ನೋಡಿ ಗುಮಾಸ್ತನೊಡನೆ ಮಾತಾಡತೊಡಗಿದ. ಅವನ ಮುಖ ಕಂಡು, ಅಂತರ್ಜ್ಞಾನದಿಂದ ಎತ್ತುಗಳ ಎದೆ ನಡುಗತೊಡಗಿತು. ಅವನು ಯಾರು, ಅವನು ಏನನ್ನು ಅರಸುತ್ತಿದ್ದಾನೆಂಬುದರ ಬಗ್ಗೆ ಅವುಗಳ ಮನಸ್ಸಿನಲ್ಲಿ ಯಾವ ಸಂದೇಹವೂ ಉಳಿಯಲಿಲ್ಲ. ಅವೆರಡೂ ಒಂದನ್ನೊಂದನ್ನು ಬೆದರಿದ ಕಣ್ಣಿನಿಂದ ನೋಡಿ ತಲೆತಗ್ಗಿಸಿದವು.

ಹೀರಾ ಹೇಳಿತು – "ಸುಮ್ಮನೆ ಗಯನ ಮನೆಬಿಟ್ಟು ಬಂದದ್ದಾಯಿತು. ಇನ್ನು ಪ್ರಾಣ ಉಳಿಯೋದಿಲ್ಲ."

ಮೋತಿ ಅಶ್ರದ್ಧೆಯ ಭಾವನೆಯಿಂದ ಉತ್ತರ ಕೊಟ್ಟಿತು – "ದೇವರು ಎಲ್ಲರಿಗೂ ದಯೆ ತೋರಿಸ್ತಾನೆ ಅಂತಾರೆ. ನಮ್ಮ ಮೇಲೆ ಯಾಕೆ ಅವನಿಗೆ ದಯೆ ಬರೋದಿಲ್ಲವೊ ?"

"ದೇವರಿಗೆ ನಾವು ಬದುಕೋದು ಸಾಯೋದು ಎರಡೂ ಒಂದೇ. ಬಿಡು, ಒಳ್ಳೇದೇ ಆಯ್ತು, ಒಂದಿಷ್ಟು ದಿನ ಇವನ ಜೊತೆ ಹೇಗೂ ಇರ್ತೀವಿ. ದೇವರು ಒಂದು ಸಲ ಆ ಹುಡುಗಿಯ ರೂಪದಲ್ಲಿ ಬಂದು ನಮ್ಮನ್ನ ಕಾಪಾಡಿದ್ದ. ಈಗ ಕಾಪಾಡನೆ ?"

"ಈ ಮನುಷ್ಯ ಕತ್ತು ಕತ್ತರಿಸಿ ಹಾಕ್ತಾನೆ, ನೋಡ್ತಿರು."

"ಏನು ನಷ್ಟ ? ಮಾಂಸ, ಚರ್ಮ, ಕೊಂಬು, ಮೂಳೆ ಎಲ್ಲವೂ ಒಂದಲ್ಲ ಒಂದು ಕೆಲಸಕ್ಕೆ ಬರುತ್ತೆ."

ಹರಾಜಾದ ಮೇಲೆ ಎತ್ತುಗಳೆರಡೂ ಆ ಠೊಣೆಯನ ಜೊತೆ ಹೊರಟವು. ಎರಡರ

ನರನರವೂ ನಡುಗುತ್ತಿತ್ತು. ಬಡಪಾಯಿಗಳಿಗೆ ಕಾಲೆತ್ತಲು ಸಹ ಆಗುತ್ತಿರಲಿಲ್ಲ. ಆದರೂ ಹೆದರಿಕೆಯಿಂದಾಗಿ ಏಳುತ್ತ ಬೀಳುತ್ತ ಓಡುತ್ತಿದ್ದವು. ಅವುಗಳ ನಡಿಗೆ ಸ್ವಲ್ಪ ನಿಧಾನವಾದರೂ ಆ ಠೊಣೆಯು ಜೋರಾಗಿ ಏಟುಬಿಗಿಯುತ್ತಿದ್ದ.

ದಾರಿಯಲ್ಲಿ ಎತ್ತು ಹಸುಗಳ ಮಂದೆಯೊಂದು ಕಣದಲ್ಲಿ ಮೇಯುತ್ತಿರುವುದು ಕಾಣಿಸಿತು. ಆ ಪ್ರಾಣಿಗಳೆಲ್ಲವೂ ಚುರುಕಾಗಿ ಮಿರುಗುತ್ತ ಸಂತೋಷದಿಂದಿದ್ದವು. ಕೆಲವು ನೆಗೆದಾಡುತ್ತಿದ್ದವು, ಕೆಲವು ಕುಳಿತು ಆನಂದದಿಂದ ಮೆಲುಕು ಹಾಕುತ್ತಿದ್ದವು. ಅವುಗಳದ್ದು ಎಂತಹ ಸುಖಜೀವನ! ಆದರೆ ಅವು ಎಷ್ಟು ಸ್ವಾರ್ಥಿಗಳು. ಅವುಗಳ ಇಬ್ಬರು ಬಂಧುಗಳು ಕಟುಕನ ಕೈಗೆ ಸಿಕ್ಕಿ ನರಳುತ್ತಿದ್ದರೆ ಅವಕ್ಕೇನಾದರೂ ಚಿಂತೆಯಿದೆಯೆ?

ಇದ್ದಕ್ಕಿದ್ದಂತೆ ಎತ್ತುಗಳಿಗೆ ತಾವು ಬರುತ್ತಿದ್ದ ದಾರಿ ಪರಿಚಿತವಾಗಿರುವಂತೆ ತೋರಿತು. ಹೌದು, ಗಯಾ ತಮ್ಮನ್ನು ಕರೆದೊಯ್ದಿದ್ದುದು ಇದೇ ರಸ್ತೆಯಿಂದ. ಅವೇ ಹೊಲಗಳು, ಅವೇ ತೋಟಗಳು, ಅವೇ ಹಳ್ಳಿಗಳು ಸಿಗತೊಡಗಿದವು. ಅವುಗಳ ನಡಿಗೆ ಚುರುಕಾಯಿತು. ದಣಿವು, ದುರ್ಬಲತೆಗಳೆಲ್ಲಾ ಮಾಯವಾದವು. ಆಹಾ! ಇದು ನೋಡಿ, ತಮ್ಮದೇ ಕಣ ಬಂದಿತು. ಹಿಂದೆ ಇದೇ ಬಾವಿಗೆ ಏತ ಎಳೆಯಲು ಬರುತ್ತಿದ್ದವು. ಹೌದು, ಇದೇ ಬಾವಿ!

ಮೋತಿ ಹೇಳಿತು – "ನಮ್ಮ ಮನೆ ಹತ್ತಿರ ಬಂತು."

ಹೀರಾ ಅಂದಿತು – "ದೇವರ ದಯೆ."

"ನಾನಂತೂ ಮನೆಗೆ ಓಡ್ತೀನಿ."

"ಇವನು ಓಡಿಹೋಗೋಕ್ಕೆ ಬಿಡ್ತಾನೆಯೆ?"

"ನಾನು ಇವನನ್ನ ತಿವಿದು ಕೆಳಗೆ ಕೆಡವ್ತೀನಿ."

"ಬೇಡ, ಬೇಡ. ಓಡಿ ಕೊಟ್ಟಿಗೆ ಸೇರಿಕೊಳ್ಳೋಣ, ನಡಿ. ಅಲ್ಲಿಂದ ಎಲ್ಲೂ ಹೋಗೋದು ಬೇಡ."

ಎತ್ತುಗಳೆರಡೂ ಉನ್ಮತ್ತವಾಗಿ ಕರುಗಳಂತೆ ನೆಗೆಯುತ್ತ ಮನೆಯ ಕಡೆ ಓಡಿದವು. ಅಲ್ಲೇ ಅವುಗಳ ಕೊಟ್ಟಿಗೆ. ಓಡೋಡಿ ಬಂದು ತಮ್ಮ ಕೊಟ್ಟಿಗೆ ಸೇರಿ ನಿಂತುಬಿಟ್ಟವು. ಠೊಣೆಯನೂ ಹಿಂದಿನಿಂದ ಓಡುತ್ತ ಬರುತ್ತಿದ್ದ.

ಝುೂರಿ ಹಟ್ಟಿಯ ಬಾಗಿಲಲ್ಲಿ ಬಿಸಿಲು ಕಾಯಿಸುತ್ತ ಕುಳಿತಿದ್ದ. ಎತ್ತುಗಳನ್ನ ಕಂಡೊಡನೆಯೇ ಎದ್ದು ಓಡಿಬಂದು ಅವುಗಳನ್ನು ಮತ್ತೆ ಮತ್ತೆ ಅಪ್ಪಿಕೊಂಡ. ಎತ್ತುಗಳ ಕಣ್ಣಿಂದ ಆನಂದಬಾಷ್ಪ ಸುರಿಯತೊಡಗಿತು. ಅವುಗಳಲ್ಲೊಂದು ಝುೂರಿಯ ಕೈ ನೆಕ್ಕುತ್ತಿತ್ತು.

ಠೊಣೆಯ ಬಂದು ಎತ್ತುಗಳ ಕೊರಳ ಹಗ್ಗ ಹಿಡಿದುಕೊಂಡ.

ಝುೂರಿ ಹೇಳಿದ – "ಇವು ನನ್ನ ಎತ್ತು."

"ನಿನ್ನ ಎತ್ತು ಹೇಗೆ? ನಾನು ಹರಾಜಿನಲ್ಲಿ ಕೊಂಡುಕೊಂಡು ದೊಡ್ಡಿಯಿಂದ ತಂದಿದೀನಿ."

"ನೀನು ಇವನ್ನ ಕದ್ದು ತೊಗೊಂಡು ಹೋಗೋಕ್ಕೆ ಬಂದಿದಿ ಅಂತ ನಾನಂತೀನಿ.

ಬಾಯಿ ಮುಚ್ಚಿಕೊಂಡು ಹೊರಟುಹೋಗು. ಇವು ನನ್ನ ಎತ್ತು. ನಾನು ಮಾರಿದಾಗ ತಾನೇ ಯಾರಾದರೂ ಕೊಂಡುಕೊಳ್ಳೋದು. ನನ್ನ ಎತ್ತುಗಳನ್ನ ಹರಾಜು ಹಾಕೋಕ್ಕೆ ಯಾರಿಗೇನು ಅಧಿಕಾರ?"

"ಹೋಗಿ ಠಾಣೇಲಿ ದೂರು ಕೊಡ್ತೀನಿ, ನೋಡು."

"ಇವು ನನ್ನ ಎತ್ತು ಅನ್ನೋಕ್ಕೆ ಪ್ರಮಾಣ ಅಂದರೆ ಇವು ನನ್ನ ಬಾಗಿಲ ಮುಂದೆ ನಿಂತಿವೆ."

ಶೋಣೆಯ ಕೋಪದಿಂದ ಎತ್ತುಗಳನ್ನು ಬಲವಂತವಾಗಿ ಹಿಡಿದುಕೊಳ್ಳಲು ನುಗ್ಗಿದ. ಅದೇ ಹೊತ್ತಿಗೆ ಮೋತಿ ಅವನ ಮೇಲೆ ಹಾಯಿತು. ಶೋಣೆಯ ಹಿಂದೆ ಸರಿದ. ಮೋತಿ ಅವನನ್ನು ಅಟ್ಟಿಸಿಕೊಂಡು ಹೋಯಿತು. ಶೋಣೆಯ ಓಡಿದ; ಮೋತಿಯೂ ಹಿಂದೆ ಓಡಿತು. ಹಳ್ಳಿಯಾಚೆ ಬಂದು ನಿಂತು ಶೋಣೆಯನ ದಾರಿಯನ್ನೇ ಕಾಯತೊಡಗಿತು. ಶೋಣೆಯ ದೂರದಲ್ಲಿ ನಿಂತು ಬೆದರಿಕೆ ಹಾಕಿದ, ಬೈದ, ಕಲ್ಲೆಸೆದ. ಮೋತಿ ವಿಜಯಶೂರನಂತೆ ಅವನ ದಾರಿಗೆ ಅಡ್ಡವಾಗಿ ನಿಂತಿತು. ಹಳ್ಳಿಯ ಜನ ಈ ತಮಾಷೆಯನ್ನು ನೋಡಿ ನಗುತ್ತಿದ್ದರು.

ಶೋಣೆಯ ಸೋತು ಹೊರಟುಹೋದ ಮೇಲೆ ಮೋತಿ ಜಂಬದಿಂದ ಹಿಂದಿರುಗಿತು.

ಹೀರಾ ಹೇಳಿತು – "ನೀನು ಎಲ್ಲಾದರೂ ಕೋಪದಲ್ಲಿ ಅವನನ್ನ ಸಾಯಿಸಿಬಿಡ್ತೀಯೇನೋ ಅಂತ ಹೆದರಿದ್ದೆ."

"ಅವನು ನನ್ನನ್ನು ಹಿಡಿದುಕೊಂಡಿದ್ದರೆ ಸಾಯಿಸದೇ ಬಿಡ್ತಿರಲಿಲ್ಲ."

"ಇನ್ನು ಬರೋದಿಲ್ಲ."

"ಬಂದರೆ ದೂರದಿಂದಲೇ ಗೊತ್ತಾಗುತ್ತೆ ನೋಡೋಣ, ಅದು ಹೇಗೆ ತೊಗೊಂಡು ಹೋಗ್ತಾನೆ ಅಂತ."

"ಅವನು ಗುಂಡುಹಾಕಿ ಸಾಯಿಸಿದರೆ?"

"ಸಾಯ್ತೀನಿ. ಆದರೆ ಅವನ ಕೆಲಸಕ್ಕೆ ಮಾತ್ರ ಬರೋಲ್ಲ."

"ನಮ್ಮ ಜೀವಾನ ಯಾರೂ ಜೀವ ಅಂತಾನೇ ತಿಳಿಯೋಲ್ಲ."

"ಯಾಕೆ ಅಂದರೆ ನಾವು ಸಾಬಾ ಪ್ರಾಣಿಗಳು, ಅದಕ್ಕೆ."

ಸ್ವಲ್ಪ ಹೊತ್ತಿನಲ್ಲೇ ಹಿಂಡಿ, ಭೂಸ, ಹೊಟ್ಟು, ಕಾಳುಗಳಿಂದ ತೊಟ್ಟಿ ತುಂಬಿತು. ಎತ್ತುಗಳೆರಡೂ ತಿನ್ನಲಾರಂಭಿಸಿದವು. ಝೂರಿ ಹತ್ತಿರ ನಿಂತು ಅವುಗಳ ಮೈ ನೇವರಿಸುತ್ತಿದ್ದ. ಹತ್ತಿಪ್ಪತ್ತು ಹುಡುಗರು ಈ ತಮಾಷೆ ನೋಡುತ್ತಿದ್ದರು. ಇಡೀ ಹಳ್ಳಿಯೇ ಉತ್ಸಾಹದಿಂದ ತುಂಬಿದಂತೆ ತೋರುತ್ತಿತ್ತು.

ಅದೇ ಹೊತ್ತಿಗೆ ಯಜಮಾನಿ ಬಂದು ಎತ್ತುಗಳ ಹಣೆಗೆ ಮುತ್ತಿಟ್ಟಳು.

# 10. ಉಪ್ಪಿನ ದರೋಗ

ಉಪ್ಪಿನ ಹೊಸ ಇಲಾಖೆ ಷುರುವಾಗಿ ದೇವರು ಕೊಟ್ಟ ಆ ವಸ್ತುವನ್ನು ಕೊಡಕೊಳ್ಳುವುದರ ಮೇಲೆ ನಿಷೇಧ ಹೇರಿದಾಗ ಜನ ಕಳ್ಳತನದಿಂದ ಅದರ ವ್ಯಾಪಾರಕ್ಕೆ ತೊಡಗಿದರು. ಜೊತೆಗೇ ಬಗೆಬಗೆಯ ಮೋಸಕ್ಕೂ ಷುರುವಾಯಿತು. ಕೆಲವರು ಲಂಚದಿಂದ ಕೆಲಸ ನಡೆಸುತ್ತಿದ್ದರು, ಮತ್ತೆ ಕೆಲವರು ಚತುರತೆಯಿಂದ. ಅಧಿಕಾರಿಗಳ ಕೈ ಮೇಲಾಯಿತು. ಜನ ಶಾನುಭೋಗಿಕೆಯಂತಹ ಗೌರವದ ಪದವಿಯನ್ನು ತೊರೆದು ಉಪ್ಪಿನ ಇಲಾಖೆಯಲ್ಲಿ ಪಹರೆಯ ಕೆಲಸ ಮಾಡತೊಡಗಿದರು. ಉಪ್ಪಿನ ಇಲಾಖೆಯಲ್ಲಿ ದರೋಗನ ಹುದ್ದೆಗೆ ವಕೀಲರುಗಳೂ ಆಸೆಪಡತೊಡಗಿದರು. ಇಂಗ್ಲಿಷ್ ವಿದ್ಯಾಭ್ಯಾಸ, ಈಸಾಯಿ ಧರ್ಮ ಇವೆರಡೂ ಒಂದೇ ಎಂದು ಜನ ತಿಳಿದಿದ್ದ ಕಾಲ ಅದು. ಫಾರಸೀ ಭಾಷೆ ಪ್ರಾಬಲ್ಯದಲ್ಲಿತ್ತು. ಫಾರಸೀ ಬಲ್ಲ ಜನ ಪ್ರೇಮಕಥೆಗಳನ್ನೋ, ಶೃಂಗಾರಕಾವ್ಯಗಳನ್ನೋ ಬರೆದು ಉನ್ನತ ಪದವಿಗಳಿಗೆ ನೇಮಕವಾಗುತ್ತಿದ್ದರು. ಮುನಿಷಿ ವಂಶೀಧರ ಸಹ ಜುಲೇಖಳ ವಿರಹದ ಕಥೆಯನ್ನು ಮುಗಿಸಿ, ನಳ–ನೀಲರ ಹೋರಾಟಕ್ಕಿಂತ, ಅಮೇರಿಕಾದ ಶೋಧನೆಗಿಂತ ಮಜನೂ ಫರಹಾದರ ಪ್ರೇಮವೃತ್ತಾಂತವೇ ಹೆಚ್ಚಿನ ಮಹತ್ವದ ವಿಷಯವೆಂದು ಭಾವಿಸುತ್ತ ನೌಕರಿ ಹುಡುಕಿಕೊಂಡು ಹೊರಟ. ಅವನ ತಂದೆ ಅನುಭವಸ್ಥ ವ್ಯಕ್ತಿ. ಅವನು ಮಗನಿಗೆ ತಿಳಿವಳಿಕೆ ಹೇಳಿದ – "ಮಗೂ, ಮನೆಯ ಸ್ಥಿತಿಗತಿ ನಿನಗೆ ಗೊತ್ತೇ ಇದೆ. ಸಾಲದ ಭಾರ ಹೇರಿಕೊಂಡಿದೆ. ಮನೇಲಿ ಹೆಣ್ಣು ಮಕ್ಕಳು ಹುಲ್ಲುಸೊಪ್ಪು ಬೆಳೆದ ಹಾಗೆ ಬೆಳೀತಾ ಇದಾರೆ; ನಾನಂತೂ ಮುದಿ ಮರ; ಯಾವಾಗ ಉರುಳಿ ಬೀಳ್ತೀನೋ ಗೊತ್ತಿಲ್ಲ. ಈಗ ನೀನೇ ಮನೆಗೆ ಮುಖಂಡ. ದೊಡ್ಡ ಹುದ್ದೆಯೇ ಆಗಬೇಕು ಅಂತ ಕೂತುಕೋಬೇಡ. ನೌಕರಿ ಪೀರಸಾಹೇಬರ ಗೋರಿ ಇದ್ದಹಾಗೆ; ಕಣ್ಣು ನೈವೇದ್ಯ ಹಾಗೂ ಹೊದಿಸಿದ ಬಟ್ಟೆಯ ಮೇಲಿರಬೇಕು. ಸ್ವಲ್ಪ ಮೇಲು ಸಂಪಾದನೆ ಇರೋ ಅಂಥ ಕೆಲಸಾನೇ ಹುಡುಕು; ತಿಂಗಳ ಸಂಬಳ ಹುಣ್ಣಿಮೆ ಚಂದ್ರ ಇದ್ದ ಹಾಗೆ; ಒಂದು ದಿನ ಕಾಣಿಸಿಕೊಂಡು ಬರುಬರುತ್ತಾ ಕಡಿಮೆಯಾಗಿ ಕಣ್ಮರೆಯಾಗಿ ಹೋಗುತ್ತೆ. ಅದೇ ಮೇಲು ಸಂಪಾದನೆಯಾದರೆ ಹರೀತಾ ಇರೋ ನದಿ ಇದ್ದ ಹಾಗೆ; ಅದರಿಂದ ಸದಾಕಾಲ ಬಾಯಾರಿಕೆ ಹೋಗಲಾಡಿಸಿಕೊಳ್ಳಬಹುದು. ಸಂಬಳ ಕೊಡೋನು ಮನುಷ್ಯ, ಮೇಲುಸಂಪಾದನೆ ಕೊಡೋನು ದೇವರು.

ಸಂಪಾದನೆಯಿಂದ ಏಳಿಗೆಯಾಗೋಲ್ಲ; ಮೇಲುಸಂಪಾದನೆಯಿಂದ ಭಾಗ್ಯ ಬೆಳಗುತ್ತೆ. ನೀನು ಸ್ವತಃ ವಿದ್ಯಾವಂತ. ನಿನಗೆ ತಿಳಿವಳಿಕೆ ಹೇಳಬೇಕೆ ? ಈ ವಿಷಯದಲ್ಲಿ ವಿವೇಕದ ಅಗತ್ಯ ತುಂಬ ಇದೆ. ಆಸಾಮೀನ ನೋಡು. ಅವನ ಅಗತ್ಯ ನೋಡು, ಸಂದರ್ಭ ನೋಡು ಆಮೇಲೆ ಹೇಗೆ ಉಚಿತ ಅಂತ ಅನ್ನಿಸುತ್ತೋ ಹಾಗೆ ಮಾಡು. ಅಗತ್ಯದಲ್ಲಿರೋ ಮನುಷ್ಯನ ಹತ್ತಿರ ಎಷ್ಟು ಕಠೋರವಾಗಿ ನಡಕೊಂಡರೆ ಅಷ್ಟು ಲಾಭ. ಯಾವನಿಗೆ ಅಗತ್ಯವಿಲ್ಲವೋ ಅವನನ್ನು ಪಟ್ಟಿಗೆ ಸಿಕ್ಕಿಸೋದು ಸ್ವಲ್ಪ ಕಷ್ಟ. ಈ ಮಾತನ್ನ ಗಮನದಲ್ಲಿಟ್ಟಿರು. ಇದೇ ನನ್ನ ಇಡೀ ಬದುಕಿನ ಸಂಪಾದನೆ !''

ಅಪ್ಪ ಹೀಗೆ ಉಪದೇಶ ಮಾಡಿ ಆಶೀರ್ವಾದ ಮಾಡಿದ. ವಂಶೀಧರ ಅಪ್ಪಣೆಗೆ ತಲೆ ಬಾಗುವ ಮಗ. ಅವನು ಅಪ್ಪನ ಮಾತನ್ನು ಗಮನವಿಟ್ಟು ಕೇಳಿ ಮನೆಬಿಟ್ಟುಹೊರಟ. ಈ ವಿಶಾಲ ಪ್ರಪಂಚದಲ್ಲಿ ಧೈರ್ಯವೇ ಅವನ ಸ್ನೇಹಿತನಾಗಿತ್ತು; ಬುದ್ಧಿಯೇ ಪಥ ಪ್ರದರ್ಶಕನಾಗಿತ್ತು; ಆತ್ಮಾವಲಂಬನೆಯೇ ಅವನಿಗೆ ಸಹಾಯಕನಾಗಿತ್ತು. ಶುಭಶಕುನದಲ್ಲಿಯೇ ಅವನು ಮನೆಬಿಟ್ಟು ಹೊರಟಿದ್ದ; ಹೋಗುತ್ತ ಹೋಗುತ್ತ ಉಪ್ಪಿನ ಇಲಾಖೆಯ ದರೋಗನಾಗಿ ಪ್ರತಿಷ್ಠಿತನಾದ. ಒಳ್ಳೆಯ ಸಂಬಳ; ಮೇಲು ಸಂಪಾದನೆಗಂತೂ ಬೇಕಾದಷ್ಟು ಅವಕಾಶ. ಮುದಿ ಮುನಿಷಿಗೆ ಸುದ್ದಿ ತಿಳಿದಾಗ ಅವನ ಸಂತೋಷಕ್ಕೆ ಪಾರವೇ ಇಲ್ಲ. ಅವನಿಗೆ ಸಾಲ ಕೊಟ್ಟಿದ್ದ ಸಾಹುಕಾರರು ಕೊಂಚ ಮೆತ್ತಗಾದರು. ಹೆಂಡದಂಗಡಿಯವರ ಆಶಾಲತೆ ಚಿಗುರಿತು, ನೆರೆಹೊರೆಯವರಿಗೆ ಎದೆಶೂಲೆಯಾಯಿತು.

## 2

ಚಳಿಗಾಲ. ರಾತ್ರಿಯ ಹೊತ್ತು. ಉಪ್ಪಿನ ಇಲಾಖೆಯ ಸಿಪಾಯಿಗಳೂ ಕಾವಲುಗಾರರೂ ಅಮಲಿನಲ್ಲಿ ತೇಲುತ್ತಿದ್ದರು. ವಂಶೀಧರ ಇಲ್ಲಿ ಬಂದು ಆರು ತಿಂಗಳ ಮೇಲಾಗಿರಲಿಲ್ಲ. ಆದರೂ ಸಹ ಈ ಅಲ್ಪಕಾಲದಲ್ಲಿಯೇ ಅವನು ತನ್ನ ಕಾರ್ಯಕುಶಲತೆ, ಉತ್ತಮ ವ್ಯವಹಾರಗಳಿಂದ ಅಧಿಕಾರಿಗಳನ್ನು ಒಲಿಸಿಕೊಂಡಿದ್ದ. ಅಧಿಕಾರಿಗಳು ಅವನ ಮೇಲೆ ತುಂಬ ವಿಶ್ವಾಸವಿಡತೊಡಗಿದರು. ಉಪ್ಪಿನ ಕಚೇರಿಯಿಂದ ಒಂದು ಮೈಲಿ ಪೂರ್ವಕ್ಕೆ ಯಮುನಾ ನದಿ ಹರಿಯುತ್ತಿತ್ತು. ಅಲ್ಲಿ ನಾವೆಗಳದ್ದೇ ಒಂದು ಸೇತುವೆ ನಿರ್ಮಾಣವಾಗಿತ್ತು. ವಂಶೀಧರ ಬಾಗಿಲ ಚಿಲಕ ಹಾಕಿ ನಿದ್ರೆ ಮಾಡುತ್ತ ಮಲಗಿದ್ದ. ಇದ್ದಕ್ಕಿದ್ದಂತೆ ಕಣ್ಣು ತೆರೆದು ನೋಡಿದಾಗ ನದಿಯ ಪ್ರವಾಹದ ಶಬ್ದದ ಬದಲು ಗಾಡಿಗಳ ಗಡಗಡ ಶಬ್ದ ಹಾಗೂ ಬೆಸ್ತರ ಕೋಲಾಹಲ ಕೇಳಿಸಿತು. ವಂಶೀಧರ ಎದ್ದು ಕುಳಿತ. ಈ ಇಳಿರಾತ್ರಿಯಲ್ಲಿ ಗಾಡಿಗಳು ಯಾಕೆ ನದಿ ದಾಟಬೇಕು ? ಇದರಲ್ಲಿ ಖಂಡಿತವಾಗಿ ಏನೋ ಗೊಂದಲವಿರಬೇಕು. ತರ್ಕ ಅನುಮಾನಕ್ಕೆ ಪುಷ್ಟಿಕೊಟ್ಟಿತ್ತು. ಪೋಷಾಕು ತೊಟ್ಟು, ಪಿಸ್ತೂಲನ್ನು ಜೇಬಿನಲ್ಲಿಟ್ಟು

ಒಂದು ಕ್ಷಣದಲ್ಲಿ ಕುದುರೆ ಹತ್ತಿ ವಂಶೀಧರ ಸೇತುವೆಯ ಬಳಿ ಬಂದ. ಗಾಡಿಗಳ ಒಂದು ದೊಡ್ಡ ಸಾಲು ಸೇತುವೆ ದಾಟುತ್ತಿರುವುದು ಕಂಡಿತು. ಈ ಗಾಡಿಗಳು ಯಾರವು ಎಂದು ವಂಶೀಧರ ದರ್ಪದಿಂದ ಕೇಳಿದ.

ಸ್ವಲ್ಪ ಹೊತ್ತು ಸ್ತಬ್ಧತೆ ಕವಿಯಿತು. ಜನ ತಮ್ಮತಮ್ಮಲ್ಲಿ ಏನೋ ಗುಸಪಿಸ ಮಾತಾಡಿಕೊಂಡರು. ಆಮೇಲೆ ಮುಂದಿದ್ದವನು ಹೇಳಿದ – "ಪಂಡಿತ ಅಲೋಪೀದೀನರದ್ದು."

"ಪಂಡಿತ ಅಲೋಪೀದೀನ ಅಂದರೆ ಯಾರು ?"

"ದಾತಾಗಂಜಿನವರು"

ಮುನಿಷಿ ವಂಶೀಧರ ಬೆಚ್ಚಿಬಿದ್ದ. ಪಂಡಿತ ಅಲೋಪೀದೀನ ಆ ಸೀಮೆಯ ತುಂಬ ಪ್ರತಿಷ್ಠಿತ ಜಮೀನುದಾರ. ಲಕ್ಷಾಂತರ ರೂಪಾಯಿಯ ಲೇವಾದೇವಿ ಮಾಡುತ್ತಿದ್ದ. ಚಿಕ್ಕವರಿಂದ ಹಿಡಿದು ದೊಡ್ಡವರವರೆಗೆ ಅವನಿಗೆ ಋಣಿಯಾಗಿರದಿದ್ದವರೇ ಇರಲಿಲ್ಲ. ವ್ಯಾಪಾರವೂ ತುಂಬ ದೊಡ್ಡದಿತ್ತು. ಆಸಾಮಿ ಮಹಾ ಗಟ್ಟಿಗ. ಸ್ವತಃ ಇಂಗ್ಲಿಷ್ ಅಧಿಕಾರಿಗಳು ಶಿಕಾರಿಗೆಂದು ಅವನ ಪ್ರಾಂತಕ್ಕೆ ಬರುತ್ತಿದ್ದರು, ಅವನ ಅತಿಥಿಯಾಗಿ ಉಳಿಯುತ್ತಿದ್ದರು. ಹನ್ನೆರಡು ತಿಂಗಳೂ ಇದೇ ವ್ರತ ನಡೆಯುತ್ತಿತ್ತು.

ಗಾಡಿಗಳು ಎಲ್ಲಿ ಹೊರಟಿವೆಯೆಂದು ವಂಶೀಧರ ಕೇಳಿದ. ಕಾನಪುರಕ್ಕೆ ಎಂದು ಉತ್ತರ ಬಂತು. ಗಾಡಿಗಳಲ್ಲಿ ಏನಿದೆಯೆಂದು ಕೇಳಿದಾಗ ಮೌನ ಕವಿಯಿತು. ವಂಶೀಧರನ ಸಂದೇಹ ಇದ್ದಿದ್ದೂ ಹೆಚ್ಚಾಯಿತು. ಸ್ವಲ್ಪ ಹೊತ್ತು ಉತ್ತರದ ದಾರಿ ಕಾದು ಅವನು ಜೋರಾಗಿ ಹೇಳಿದ – "ಏನು, ನೀವೆಲ್ಲರೂ ಮೂಕರೇನು ? ಇದರಲ್ಲಿ ಏನು ತುಂಬಿದೆ ಅಂತ ನಾನು ಕೇಳಿದೆ."

ಆಗಲೂ ಉತ್ತರ ಬರದಿದ್ದಾಗ ಕುದುರೆಯನ್ನು ಒಂದು ಗಾಡಿಯ ಹತ್ತಿರ ನಡೆಸಿಕೊಂಡು ಹೋಗಿ, ಚೀಲಗಳ ಮೇಲೆ ಕೈಯಾಡಿಸಿ ನೋಡಿದ. ಶಂಕೆ ದೂರವಾಯಿತು. ಗಾಡಿಗಳಲ್ಲಿದ್ದುದು ಉಪ್ಪಿನ ಹೊರೆ !

## 3

ಪಂಡಿತ ಅಲೋಪೀದೀನ ಸೊಗಸಾಗಿ ಸಜ್ಜು ಮಾಡಿದ ರಥದ ಮೇಲೆ ಕುಳಿತು, ಬಿಟ್ಟು ಬಿಟ್ಟು ಮಲಗುತ್ತ ಏಳುತ್ತ ಬರುತ್ತಿದ್ದ. ಇದ್ದಕ್ಕಿದ್ದಂತೆ ಗಾಡಿಯವರು ಗಾಬರಿಯಿಂದ ಓಡಿಬಂದು ಅವನನ್ನು ಎಬ್ಬಿಸಿ ಹೇಳಿದರು – "ಸ್ವಾಮಿ, ಉಪ್ಪಿನ ದರೋಗರು ಗಾಡಿಗಳನ್ನ ತಡೆದು ನಿಲ್ಲಿಸಿದ್ದಾರೆ. ಘಾಟೀಲಿ ನಿಂತಿದಾರೆ, ತಮಗೆ ಬರಹೇಳಿದ್ದಾರೆ."

ಪಂಡಿತ ಅಲೋಪೀದೀನನಿಗೆ ಲಕ್ಷ್ಮೀದೇವಿಯಲ್ಲಿ ಅಖಂಡ ವಿಶ್ವಾಸವಿತ್ತು. ಪ್ರಪಂಚದ ಮಾತು ಹಾಗಿರಲಿ, ಸ್ವರ್ಗದಲ್ಲಿ ಸಹ ಅವಳದೇ ರಾಜ್ಯಭಾರವೆಂದು ಅವನು ಹೇಳುತ್ತಿದ್ದ, ಅವನ ಮಾತು ಸತ್ಯವೇ. ನ್ಯಾಯನೀತಿಗಳೆಲ್ಲವೂ ಲಕ್ಷ್ಮಿಯ

ಆಟದ ವಸ್ತುಗಳು. ಅವನ್ನು ಅವಳು ತನಗೆ ಬೇಕಾದಂತೆ ಕುಣಿಸುತ್ತಾಳೆ. ಅಲೋಪೀದೀನ ಮಲಗಿದ್ದಂತೆಯೇ ಗತ್ತಿನಿಂದ "ನಡೀರಿ, ಬರ್ತೀನಿ" ಎಂದ. ಹೀಗಂದು ತುಂಬ ನಿಶ್ಚಿಂತೆಯಿಂದ ಒಂದು ಬೀಡ ಮಡಿಸಿ ತಿಂದ. ಆಮೇಲೆ ರಜಾಯಿ ಹೊದ್ದು ದರೋಗನ ಬಳಿ ಬಂದು ಹೇಳಿದ – "ಬಾಬೂಜೀಗೆ ಆಶೀರ್ವಾದ! ಹೇಳಿ, ಗಾಡಿಗಳನ್ನ ತಡೆದು ನಿಲ್ಲಿಸೋಕೆ ನಮ್ಮಿಂದ ಅದು ಯಾವ ಅಪರಾಧವಾಯಿತು? ನಾವು ಬ್ರಾಹ್ಮಣರ ಮೇಲಾದರೂ ನಿಮ್ಮ ಕೃಪೆ ಇರಬೇಕು."

ವಂಶೀಧರ ಬಿರುಸಾಗಿ ಹೇಳಿದ – "ಸರಕಾರೀ ಅಪ್ಪಣೆ."

ಪಂಡಿತ ಅಲೋಪೀದೀನ ನಗುತ್ತ ಹೇಳಿದ – "ನಮಗೆ ಯಾವ ಸರಕಾರವೂ ತಿಳೀದು, ಸರಕಾರೀ ಅಪ್ಪಣೆಯೂ ತಿಳೀದು. ನಮ್ಮ ಸರಕಾರ ಅಂದರೆ ನೀವೇಯೇ. ನಮ್ಮ ನಿಮ್ಮ ನಡುವಿನ ವ್ಯವಹಾರ ಮನೆಯ ವ್ಯವಹಾರ ಇದ್ದ ಹಾಗೆ! ನಾವು ಎಂದಾದರೂ ನಿಮ್ಮಿಂದ ಬೇರೆಯಾಗೋದು ಸಾಧ್ಯವೆ? ನೀವು ವೃಥಾ ತೊಂದರೆ ತೊಗೊಂಡಿರಿ. ಈ ಘಾಟಿಯ ದೇವರಿಗೆ ಕಾಣಿಕೆ ಅರ್ಪಿಸದೇ ನಾವು ಈ ಕಡೆ ಹೋಗೋದು ಸಾಧ್ಯವೇ ಇಲ್ಲ. ನಾನೇ ಸ್ವತಃ ನಿಮ್ಮ ಸೇವೆಗೆ ಹಾಜರಾಗೋನಿದ್ದೆ."

ವಂಶೀಧರನ ಮೇಲೆ ಹಣದ ಮೋಹನ – ಮುರಳಿಯ ಪ್ರಭಾವ ಬೀಳಲಿಲ್ಲ. ಅವನಿಗೆ ಪ್ರಾಮಾಣಿಕತೆಯ ಹೊಸ ಹುರುಪು. ಕಟುವಾಗಿ ಹೇಳಿದ – "ಒಂದು ಕವಡೆಯ ಬೆಲೆಗೆ ತಮ್ಮ ನಿಯತ್ತನ್ನ ತಾವು ಮಾರಿಕೊಳ್ಳೋ 'ನಮಕ್ ಹರಾಮ್' ಜಾತಿಗೆ ಸೇರಿದೋರಲ್ಲ ನಾವು. ನೀವು ಈಗ ದಸ್ತಗಿರಿಯಾಗಿದೀರಿ. ಇದು ನನ್ನ ಅಪ್ಪಣೆ."

ಪಂಡಿತ ಅಲೋಪೀದೀನ ಸನ್ನಿಬಡಿದವನಂತಾದ. ಗಾಡಿಯವರಲ್ಲಿ ಕೋಲಾಹಲವೆದ್ದಿತು. ಪಂಡಿತನ ಬಾಳಿನಲ್ಲಿ ಇಂತಹ ಕಠೋರವಾದ ಮಾತುಗಳನ್ನು ಕೇಳಬೇಕಾಗಿ ಬಂದುದು ಪ್ರಾಯಶಃ ಇದೇ ಮೊದಲು. ಅವನನ್ನು ದಸ್ತಗಿರಿ ಮಾಡಲು ಬದಲೂಸಿಂಹ ಮುನ್ನುಗ್ಗಿದ. ಆದರೆ ಪಂಡಿತನ ವರ್ಚಸ್ಸಿಗೆ ಹೆದರಿ ಅವನ ಕೈ ಹಿಡಿಯುವ ಸಾಹಸವಾಗಲಿಲ್ಲ. ಹೀಗೆ ಧರ್ಮ ಧನದ ತಿರಸ್ಕಾರ ಮಾಡಿದುದನ್ನು ಅಲೋಪೀದೀನ ಹಿಂದೆಂದೂ ನೋಡಿರಲಿಲ್ಲ. "ಈ ಹುಡುಗನಿನ್ನೂ ಉದ್ದಂಡ. ಮೋಹಮಾಯೆಗಳ ಜಾಲದಲ್ಲಿ ಬಿದ್ದಿಲ್ಲ. ಮುಗ್ಧ, ಹಿಂಜರೀತಾನೆ" ಎಂದು ತನಗೆ ತಾನೇ ಯೋಚಿಸಿ ಬಹು ವಿನಮ್ರನಾಗಿ ಹೇಳಿದ – "ಹೀಗೆ ಮಾಡಬೇಡಿ, ಸ್ವಾಮಿ. ನಾವು ಹಾಳಾಗಿಹೋಗ್ತೀವಿ. ನಮ್ಮ ಮರ್ಯಾದೆ ಮಣ್ಣಾಗುತ್ತೆ. ನಮಗೆ ಅಪಮಾನ ಮಾಡಿದರೆ ನಿಮಗೆ ಏನು ಬಂದಹಾಗೆ ಆಯ್ತು? ನಾವು ಯಾವ ರೀತೀಲೂ ನಿಮ್ಮಿಂದ ಬೇರೆಯಲ್ಲ!"

ವಂಶೀಧರ ಕಠೋರವಾಗಿ ಉತ್ತರಿಸಿದ – "ನಮಗೆ ಇಂಥ ಮಾತನ್ನ ಕೇಳೋಕ್ಕೆ ಇಷ್ಟವಿಲ್ಲ."

ಅಲೋಪೀದೀನ ಯಾವ ಆಸರೆಯನ್ನು ಗಟ್ಟಿಯಾದ ಕಲ್ಲುಬಂಡೆಯೆಂದು ತಿಳಿದಿದ್ದನೋ ಅದು ಕಾಲ ಕೆಳಗೆ ಕುಸಿಯುತ್ತಿರುವಂತೆ ಕಂಡಿತು. ಅವನ ಸ್ವಾಭಿಮಾನ, ಧನದೌಲತ್ತುಗಳಿಗೆ ಭಾರೀ ಪೆಟ್ಟು ತಗಲಿತು. ಆದರೆ ಹಣದ ಸಾಂಖ್ಯಿಕ ಶಕ್ತಿಯಲ್ಲಿ

ಅವನಿಗಿನ್ನೂ ವಿಶ್ವಾಸವಿತ್ತು. ಅವನು ತನ್ನ ಮೊಖ್ತಾರನಿಗೆ ಹೇಳಿದ – "ಲಾಲಾಜೀ, ಸಾವಿರ ರೂಪಾಯಿಯ ಒಂದು ನೋಟನ್ನ ಸಾಹೇಬರಿಗೆ ಕಾಣಿಕೆ ಒಪ್ಪಿಸಿ. ಅವರು ಈ ಹೊತ್ತು ಹಸಿದ ಸಿಂಹವಾಗಿದ್ದಾರೆ."

ವಂಶೀಧರ ರೇಗಿ ಹೇಳಿದ – "ಸಾವಿರವಲ್ಲ, ಲಕ್ಷ ರೂಪಾಯಿ ಸಹ ನನ್ನನ್ನು ಸತ್ಯದ ಮಾರ್ಗದಿಂದ ಸರಿಸಲಾರದು."

ಧರ್ಮದ ಈ ಬುದ್ಧಿಹೀನ ದೃಢತೆ ಹಾಗೂ ದೇವದುರ್ಲಭವಾದ ತ್ಯಾಗಗಳ ನಡುವೆ ಮನಸ್ಸು ತೂಗಾಡತೊಡಗಿತು. ಎರಡೂ ಶಕ್ತಿಗಳ ನಡುವೆ ಸಂಗ್ರಾಮವಾಗತೊಡಗಿತು. ಹಣ ಮೈಮೇಲೆ ಬಿದ್ದು ಆಕ್ರಮಣ ಮಾಡತೊಡಗಿತು. ಒಂದರಿಂದ ಐದು, ಐದರಿಂದ ಹತ್ತು, ಹತ್ತರಿಂದ ಹದಿನೈದು, ಹದಿನೈದರಿಂದ ಇಪ್ಪತ್ತು ಸಾವಿರದ ಎಲ್ಲೆಯುವರೆಗೆ ಕಾಣಿಕೆ ಏರಿತು. ಆದರೆ ಧರ್ಮ ಅಲೌಕಿಕ ಧೈರ್ಯದಿಂದ ಈ ಬಹುಸಂಖ್ಯಾತ ಸೇನೆಯ ಎದುರು ಏಕಾಕಿಯಾಗಿ, ಪರ್ವತದಂತೆ ದೃಢವಾಗಿ, ಅಚಲವಾಗಿ ನಿಂತಿತ್ತು.

ಅಲೋಪೀದೀನ ನಿರಾಶನಾಗಿ ಹೇಳಿದ – "ಇದಕ್ಕಿಂತ ಹೆಚ್ಚು ಸಾಹಸ ನನ್ನಲ್ಲಿಲ್ಲ. ಇನ್ನು ನೀವುಂಟು, ನಿಮ್ಮ ಅಧಿಕಾರವುಂಟು."

ವಂಶೀಧರ ತನ್ನ ಜಮೇದಾರನನ್ನು ಕೂಗಿ ಕರೆದ. ಬದಲೂಸಿಂಹ ಮನಸ್ಸಿನಲ್ಲಿಯೇ ದರೋಗನನ್ನು ಶಪಿಸುತ್ತ ಅಲೋಪೀದೀನನ ಕಡೆ ಹೆಜ್ಜೆಯಿಟ್ಟ. ಪಂಡಿತ ಗಾಬರಿಯಿಂದ ಎರಡು ಮೂರು ಹೆಜ್ಜೆ ಹಿಂದೆ ಸರಿದ – "ಬಾಬೂ ಸಾಹೇಬರೇ, ನನ್ನ ಮೇಲೆ ದಯೆ ಇಡಿ. ಇಪ್ಪತ್ತೈದು ಸಾವಿರಕ್ಕೆ ಫೈಸಲು ಮಾಡೋಕ್ಕೆ ನಾನು ಸಿದ್ಧನಾಗಿದೀನಿ."

"ಸಾಧ್ಯವಿಲ್ಲ!"

"ಮೂವತ್ತು ಸಾವಿರ ?"

"ಎಷ್ಟಕ್ಕೂ ಸಾಧ್ಯವಿಲ್ಲ."

"ಏನು, ನಲವತ್ತು ಸಾವಿರಕ್ಕೂ ಇಲ್ಲವೆ ?"

"ಬದಲೂಸಿಂಹ, ಈತನನ್ನ ದಸ್ತಗಿರಿ ಮಾಡು. ಇವನ ಬಾಯಿಂದ ಇನ್ನೊಂದು ಮಾತನ್ನ ಕೇಳೋದೂ ಸಾಧ್ಯವಿಲ್ಲ."

ಧರ್ಮ ಧನವನ್ನು ತನ್ನ ಕಾಲ ಕೆಳಗೆ ಹಾಕಿ ಹೊಸೆಯಿತು. ಅಲೋಪೀದೀನನಿಗೆ ಹೃಷ್ಟಪುಷ್ಟನಾದೊಬ್ಬ ಮನುಷ್ಯ ಕೈಯಲ್ಲಿ ಬೇಡಿ ಹಿಡಿದು ತನ್ನ ಕಡೆಗೆ ಬರುತ್ತಿರುವುದು ಕಾಣಿಸಿತು. ಅವನು ಸುತ್ತಲೂ ನಿರಾಶೆ ಹಾಗೂ ಕಾತರತೆಯಿಂದ ನೋಡತೊಡಗಿದ. ಇದ್ದಕ್ಕಿದ್ದಂತೆ ಮೂರ್ಛೆಗೊಂಡು ಕೆಳಬಿದ್ದ.

## 4

ಪ್ರಪಂಚ ಮಲಗಿತ್ತು. ಆದರೆ ಅದರ ನಾಲಗೆ ಎಚ್ಚರವಾಗಿತ್ತು. ಬೆಳಗ್ಗೆ ಎದ್ದು ನೋಡಿದರೆ ಹುಡುಗರು ಮುದುಕರು ಎಲ್ಲರ ಬಾಯಿಯಲ್ಲಿಯೂ ಇದೇ ಮಾತು. ಯಾರನ್ನ ನೋಡಲಿ, ಪಂಡಿತನ ಈ ವ್ಯವಹಾರದ ಮೇಲೆಯೇ ಟೀಕೆ ಟಿಪ್ಪಣಿ ಮಾಡುತ್ತಿದ್ದರು, ನಿಂದೆಯ ಮಳೆಗರೆಯುತ್ತಿದ್ದರು – ಪ್ರಪಂಚದಲ್ಲಿ ಇನ್ನು ಪಾಪವೇ ಉಳಿದಿಲ್ಲವೇನೋ ಎಂಬಂತೆ! ಹಾಲಿನ ಹೆಸರಿನಲ್ಲಿ ನೀರು ಮಾರುವ ಗೌಳಿಗ, ಕಲ್ಪಿತ ದಿನಚರಿ ತುಂಬುವ ಅಧಿಕಾರೀ ವರ್ಗ, ಟಿಕೆಟ್ಟಿಲ್ಲದೇ ರೈಲು ಪ್ರಯಾಣ ಮಾಡುವ ಗುಮಾಸ್ತರು, ಕಳ್ಳಲೆಕ್ಕ ಬರೆಯುವ ಸೇಠರು, ಸಾಹುಕಾರರು ಎಲ್ಲರೂ ಗಂಟಲು ಹರಿದುಕೊಳ್ಳುತ್ತಿದ್ದರು. ಮರುದಿನ ಅಲೋಪೀದೀನ ಆರೋಪಿಯಾಗಿ, ಕೈಗೆ ಬೇಡಿ ತೊಟ್ಟು, ಎದೆಯಲ್ಲಿ ಚಿಂತೆ ದುಃಖ ಹೊತ್ತು, ನಾಚಿಕೆಯಿಂದ ತಲೆ ತಗ್ಗಿಸಿ ಕಾನ್‌ಸ್ಟೇಬಲಿನ ಜೊತೆ ಕೋರ್ಟಿಗೆ ಬಂದಾಗ ಇಡೀ ಊರಿನಲ್ಲಿ ಕೋಲಾಹಲ ತುಂಬಿತು. ಜಾತ್ರೆಯಲ್ಲಿ ಸಹ ಜನರ ಕಣ್ಣಿನಲ್ಲಿ ಅಂತಹ ಆತುರತೆ ತುಂಬಿರುತ್ತಿರಲಿಲ್ಲ. ಜನಸಂದಣಿಯಿಂದಾಗಿ ಗೋಡೆ ಮೇಲುಮಾಳಿಗೆಗಳ ನಡುವೆ ವ್ಯತ್ಯಾಸವೇ ಕಾಣುತ್ತಿರಲಿಲ್ಲ.

ಕೋರ್ಟು ತಲುಪುವುದು ವಿಳಂಬವಾಯಿತು. ಪಂಡಿತ ಅಲೋಪೀದೀನ ಕೋರ್ಟಿನ ಅಗಾಧವಾದ ಕಾಡಿನಲ್ಲಿ ಸಿಂಹದಂತಿದ್ದ. ಅಲ್ಲಿನ ಅಧಿಕಾರಿಗಳು ಅವನ ಭಕ್ತರಾಗಿದ್ದರು, ಕೆಲಸಗಾರರು ಅವನ ಸೇವಕರಾಗಿದ್ದರು, ವಕೀಲರೂ ಮೊಖ್ತಾರರೂ ಅವನ ಆಜ್ಞಾಪಾಲಕರಾಗಿದ್ದರು, ಪೋಷಾಕು ತೊಟ್ಟ ಜವಾನರೂ ಕಾವಲುಗಾರರೂ ಅವನ ಬಿಟ್ಟಿ ಗುಲಾಮರಾಗಿದ್ದರು. ಅವನನ್ನು ಕಂಡೊಡನೆಯೇ ಜನ ನಾಲ್ಕೂ ದಿಕ್ಕಿನಿಂದ ಓಡಿಬಂದರು. ಎಲ್ಲರಿಗೂ ಆಶ್ಚರ್ಯವಾಗುತ್ತಿತ್ತು, ಅವನು ಯಾಕೆ ತಪ್ಪು ಮಾಡಿದನೆಂದಲ್ಲ, ಕಾನೂನಿನ ಮುಷ್ಟಿಯಲ್ಲಿ ಹೇಗೆ ಸಿಕ್ಕಿಬಿದ್ದನೆಂದು! ಅಸಾಧ್ಯ ಸಾಧನಗಳನ್ನು ಗಳಿಸಿಕೊಡುವ ಧನ ಹಾಗೂ ಅನನ್ಯವಾದ ವಾಚಾಳಿತನವಿರುವ ಅವನಂತಹ ಮನುಷ್ಯ ಕಾನೂನಿನ ಮುಷ್ಟಿಯಲ್ಲಿ ಏಕೆ ತಾನೆ ಸಿಕ್ಕಿಬೀಳಬೇಕು? ಪ್ರತಿಯೊಬ್ಬರೂ ಅಲೋಪೀದೀನನ ಬಗೆಗೆ ಸಹಾನುಭೂತಿ ವ್ಯಕ್ತಪಡಿಸುತ್ತಿದ್ದರು. ಅವನ ಮೇಲಿನ ಆಕ್ರಮಣವನ್ನು ತಡೆಯುವ ಸಲುವಾಗಿ ತುಂಬ ತತ್ಪರತೆಯಿಂದ ವಕೀಲರ ಒಂದು ಸೇನೆಯೇ ಸಿದ್ಧವಾಯಿತು. ನ್ಯಾಯದ ಮೈದಾನದಲ್ಲಿ ಧರ್ಮ ಧನಗಳ ನಡುವೆ ಕಾಳಗ ಷುರುವಾಯಿತು. ವಂಶೀಧರ ಮೌನವಾಗಿ ನಿಂತಿದ್ದ. ಅವನ ಬಳಿ ಖಂಡಿತವಾದ ಮಾತಿನ ಹೊರತು ಬೇರೆ ಶಸ್ತ್ರವಿರಲಿಲ್ಲ. ಸಾಕ್ಷಿಗಳೇನೋ ಇದ್ದರು, ಆದರೆ ಲೋಭ ಅವರನ್ನು ಅಸ್ಥಿರರನ್ನಾಗಿ ಮಾಡಿತ್ತು.

ಮುನಿಷಿಗೆ ನ್ಯಾಯ ಸಹ ತನ್ನಿಂದ ಕೊಂಚ ದೂರ ಸರಿದುಹೋಗುತ್ತಿರುವಂತೆ ಕಂಡಿತು. ಅದು ನ್ಯಾಯಾಸ್ಥಾನವೇನೋ ಆಗಿತ್ತು ನಿಜ. ಆದರೆ ಅಲ್ಲಿನ ಕೆಲಸಗಾರರ

ಮೇಲೆ ಪಕ್ಷಪಾತದ ಅಮಲು ಕವಿದಿತ್ತು. ಪಕ್ಷಪಾತಕ್ಕೂ ನ್ಯಾಯಕ್ಕೂ ಎಲ್ಲಿಯ ಮೇಳ? ಪಕ್ಷ ಪಾತವಿದ್ದೆಡೆ ನ್ಯಾಯದ ಕಲ್ಪನೆ ಮಾಡುವುದು ಸಹ ಸಾಧ್ಯವಿಲ್ಲ. ಮೊಕದ್ದಮೆ ಬೇಗನೆ ಮುಕ್ತಾಯವಾಯಿತು. ಡೆಪ್ಯುಟಿ ಮ್ಯಾಜಿಸ್ಟ್ರೇಟ್ ತನ್ನ ತೀರ್ಪಿನಲ್ಲಿ ಹೀಗೆ ಬರೆದ – "ಅಲೋಪೀದೀನರ ವಿರುದ್ಧ ಮಂಡಿಸಿದ ಪ್ರಮಾಣಕ್ಕೆ ತಲೆಬುಡವಿಲ್ಲ; ಅದು ಭ್ರಮೆಯಿಂದ ಕೂಡಿದುದಾಗಿದೆ. ಅಲೋಪೀದೀನರು ಭಾರೀ ದೊಡ್ಡ ಮನುಷ್ಯರು. ಅವರು ಅಲ್ಪ ಲಾಭದ ಆಸೆಗಾಗಿ ಈ ದುಸ್ಸಾಹಸಕ್ಕೆ ಕೈಹಾಕುವರೆಂಬುವುದು ಕಲ್ಪನೆಗೂ ಮೀರಿದ್ದು. ಉಪ್ಪಿನ ದರೋಗರಾದ ಮುನಿಷಿ ವಂಶೀಧರರು ಹೆಚ್ಚು ದೋಷಕ್ಕೆ ಕಾರಣರಲ್ಲವಾದರೂ ಅವರ ದುಡುಕಿನಿಂದಾಗಿ, ವಿಚಾರಹೀನತೆಯಿಂದಾಗಿ ಗಣ್ಯವ್ಯಕ್ತಿಯೊಬ್ಬರಿಗೆ ತೊಂದರೆಯಾದುದು ವಿಷಾದದ ಸಂಗತಿ. ಮುನಿಷಿ ವಂಶೀಧರರು ತಮ್ಮ ಕೆಲಸದಲ್ಲಿ ಎಚ್ಚರ, ಜಾಗರೂಕತೆಗಳಿಂದಿರುವುದು ಸಂತೋಷದ ಸಂಗತಿಯಾದರೂ ದಿನೇ ದಿನೇ ಹೆಚ್ಚುತ್ತಿರುವ ಉಪ್ಪಿನ ವ್ಯವಹಾರ ಅವರ ಬುದ್ಧಿವಿವೇಕಗಳನ್ನು ಭ್ರಷ್ಟಗೊಳಿಸಿದೆ. ಭವಿಷ್ಯದಲ್ಲಿ ಅವರು ಈ ಬಗ್ಗೆ ಎಚ್ಚರವಹಿಸುವುದು ಅವಶ್ಯಕ."

ಈ ತೀರ್ಪನ್ನು ಕೇಳಿ ವಕೀಲರು ಕುಣಿದಾಡಿದರು. ಪಂಡಿತ ಅಲೋಪೀದೀನ ಮುಗುಳು ನಗುತ್ತ ಕೋರ್ಟಿನಿಂದ ಹೊರಬಂದ. ಅವನ ಸ್ವಜನಬಾಂಧವರು ರೂಪಾಯಿಯನ್ನು ಚೆಲ್ಲಾಡಿದರು; ಔದಾರ್ಯದ ಸಾಗರ ಉಕ್ಕಿ ಹರಿಯಿತು. ಅದರ ಅಲೆಗಳು ಕೋರ್ಟಿನ ತಳಪಾಯವನ್ನು ಅಲುಗಾಡಿಸಿದವು. ವಂಶೀಧರ ಹೊರಬಂದಾಗ ನಾಲ್ಕೂ ಕಡೆಯಿಂದ ಅವನ ಮೇಲೆ ವ್ಯಂಗ್ಯದ ಮಳೆಯಾಯಿತು. ಕೋರ್ಟಿನ ಜವಾನರೇನೋ ಬಗ್ಗಿ ಬಗ್ಗಿ ನಮಸ್ಕಾರ ಮಾಡಿದರು. ಆದರೆ ಈ ಹೊತ್ತು ಒಂದೊಂದು ಕಟುವಾಕ್ಯವೂ ಒಂದೊಂದು ಸಂಕೇತವೂ ಅವನ ಗರ್ವಾಗ್ನಿಯನ್ನು ಕೆರಳಿಸುತ್ತಿತ್ತು. ಅವನು ಮೊಕದ್ದಮೆಯಲ್ಲಿ ಗೆದ್ದಿದ್ದರೆ ಪ್ರಾಯಶಃ ಹೀಗೆ ಬೀಗಿ ನಡೆಯುತ್ತಿರಲಿಲ್ಲವೇನೋ. ಇವತ್ತು ಅವನಿಗೆ ಜಗತ್ತಿನ ಬಗ್ಗೆ ವಿಷಾದಪೂರ್ಣವಾದ ಒಂದು ವಿಚಿತ್ರ ಅನುಭವವಾಯಿತು. ನ್ಯಾಯ, ವಿದ್ವತ್ತು, ಉದ್ದುದ್ದನೆಯ ಡಿಗ್ರಿಗಳು, ಉದ್ದುದ್ದ ಗಡ್ಡದ ಜನ, ಅಳ್ಳಕವಾದ ಮೇಲಂಗಿ – ಇವೊಂದೂ ನಿಜವಾದ ಆದರಕ್ಕೆ ಪಾತ್ರವಾದುವುಗಳಲ್ಲ ಎಂದು ಅವನಿಗೆ ಅನ್ನಿಸಿತು.

ವಂಶೀಧರ ಧನದೊಂದಿಗೆ ವೈರ ಕಟ್ಟಿಕೊಂಡಿದ್ದ; ಅದರ ಬೆಲೆ ತೆರದೇ ವಿಧಿಯಿರಲಿಲ್ಲ. ಇನ್ನೂ ಒಂದು ವಾರ ಸಹ ಕಳೆದಿರಲಿಲ್ಲ. ಅವನ ನಿವೃತ್ತಿಯ ಆಜ್ಞೆ ಬಂದು ಕೈಸೇರಿತು. ಕಾರ್ಯಪರಾಯಣತೆಗೆ ತಕ್ಕ ದಂಡ ಸಿಕ್ಕಿತು. ಬಡಪಾಯಿ ದುಃಖ – ವಿಷಾದಗಳಿಂದ ಕಂಗೆಟ್ಟು ನೊಂದ ಹೃದಯದೊಂದಿಗೆ ಮನೆ ತಲಪಿದ. ಅವರ ಅಪ್ಪ ಮುದಿ ಮುನಿ, ಮೊದಲೇ ಒಳಗೊಳಗೇ ಗೊಣಗುಟ್ಟುತ್ತಿದ್ದ – "ಹೋಗುವ ಹೊತ್ತಿನಲ್ಲಿ ಈ ಹುಡುಗನಿಗೆ ಬುದ್ಧಿವಾದ ಹೇಳಿ ಕಳಿಸಿದ್ದೆನಿ. ಆದರೆ ಇವನು ಅದನ್ನು ಕಿವಿಗೂ ಹಾಕಿಕೊಳ್ಳಲಿಲ್ಲ. ಎಲ್ಲರೂ ಮನಸೋ ಇಚ್ಛೆ ಮಾಡುವವರೇ. ನಾನು ಕಸಾಯಿಗಳ, ಕಳ್ಳು ಶೇಂದಿ ಮಾರುವವರ ತಗಾದೆ ಸಹಿಸಿದ್ದಾಯಿತು; ವೃದ್ಧಾಪ್ಯದಲ್ಲಿ ಸನ್ಯಾಸಿಯಾಗಿ ಕುಳಿತಿದ್ದಾಯಿತು. ಸರಿ, ಇವನಿಗಂತೂ ಒಣ ಸಂಬಳ ಬಿಟ್ಟು

ಬೇರೇನಿಲ್ಲ. ನಾನೂ ನೌಕರಿ ಮಾಡಿದ್ದೀನಿ. ನಾನೇನೂ ದೊಡ್ಡ ಅಧಿಕಾರಿಯೇನೂ ಆಗಿರಲಿಲ್ಲ. ಆದರೆ ದುಡಿದಿದ್ದೀನಿ, ಮನಸ್ಸಿಟ್ಟು ದುಡಿದಿದ್ದೀನಿ. ಆದರೆ ಈ ನನ್ನ ಮಗ ದೊಡ್ಡ ಪ್ರಾಮಾಣಿಕನಾಗಲು ಹೊರಟಿದ್ದಾನೆ. ಮನೆ ಕತ್ತಲಾಗಿದ್ದರೂ ಪರವಾಗಿಲ್ಲ, ಗುಡೀಲಿ ದೀಪ ಬೆಳಗಲಿ ಅನ್ನೋ ಜಾತಿ. ಇಂಥ ವಿವೇಕಕ್ಕೆ ಏನು ಹೇಳೋಣ. ಓದು ಬರೆದದ್ದೆಲ್ಲಾ ನಿಷ್ಪ್ರಯೋಜನವಾಯಿತು."

ಅಪ್ಪ ಹೀಗೆ ಕುದಿಯುತ್ತಿರುವಾಗ ಮಗ ದುರವಸ್ಥೆ ಪಟ್ಟು ಮನೆ ತಲಪಿದ. ಮುದಿ ಅಪ್ಪನಿಗೆ ಸಮಾಚಾರ ತಿಳಿದಾಗ ಅವನು ತಲೆತಲೆ ಚಚ್ಚಿಕೊಂಡ. ನಿನ್ನ ತಲೇನೂ ಒಡೆದು, ನನ್ನ ತಲೇನೂ ಒಡಕೊಳ್ಳೋಣ ಅನ್ನಿಸುತ್ತೆ ಅಂದ. ಬಹು ಹೊತ್ತಿನವರೆಗೆ ಪಶ್ಚಾತ್ತಾಪದಿಂದ ಕೈ ಕೈ ಹಿಸುಕಿಕೊಳ್ಳುತ್ತಿದ್ದ. ಕೋಪದಲ್ಲಿ ಕಠೋರವಾದ ಮಾತುಗಳನ್ನೂ ಆಡಿದ. ವಂಶೀಧರ ಜಾಗ ಬಿಟ್ಟು ಎದ್ದು ಹೋಗದೆ ಇದ್ದಿದ್ದರೆ ಅಪ್ಪನ ಕೋಪ ವಿಕಟರೂಪವನ್ನು ತಾಳುತ್ತಿತ್ತು. ವಂಶೀಧರನ ಮುದಿತಾಯಿಗೂ ದುಃಖವಾಯಿತು. ಅವಳ ಜಗನ್ನಾಥ, ರಾಮೇಶ್ವರನ ಕನಸು ಮಣ್ಣು ಕಂಡಿತು. ಹೆಂಡತಿಯಂತೂ ಕೆಲದಿನಗಳವರೆಗೆ ಮುಖಕ್ಕೆ ಮುಖ ಕೊಟ್ಟು ಮಾತು ಸಹ ಆಡಲಿಲ್ಲ.

ಹೀಗೆಯೇ ಒಂದು ವಾರ ಕಳೆಯಿತು. ಸಂಜೆಯ ಹೊತ್ತು. ಮುದಿ ಮುನಿಷಿ ಮಾಲೆ ಹಿಡಿದು ರಾಮನಾಮ ಜಪಿಸುತ್ತ ಕುಳಿತಿದ್ದ. ಅದೇ ಹೊತ್ತಿಗೆ ಅವನ ಮನೆಬಾಗಿಲ ಮುಂದೆ ಸಜ್ಜಾದ ರಥವೊಂದು ಬಂದು ನಿಂತಿತು. ಹಸಿರು, ಗುಲಾಬಿ ಬಣ್ಣಗಳ ಪರದೆ, ಶೀಮೆಎತ್ತುಗಳ ಜೋಡಿ, ಅವುಗಳ ಕೊರಳಲ್ಲಿ ನೀಲಿಯ ಹಗ್ಗ, ಕೊಂಬಿಗೆ ಹಿತ್ತಾಳೆಯ ಕಟ್ಟು. ಹೆಗಲ ಮೇಲೆ ಲಾಠಿ ಹೊತ್ತ ಆಳುಗಳು ಕೆಲವರು ಜೊತೆಗಿದ್ದರು. ಮುನಿಷಿ ಬಂದವರನ್ನು ಎದುರುಗೊಳ್ಳಲು ಓಡಿದ. ನೋಡಿದರೆ ಪಂಡಿತ ಅಲೋಪೀದೀನ ! ಮುದಿ ಮುನಿಷಿ ಬಗ್ಗಿ ಸಾಷ್ಟಾಂಗ ಮಾಡಿ ಮುಖಸ್ತುತಿಗೆ ಷುರು ಮಾಡಿದ – " ನೀವು ನಮ್ಮಲ್ಲಿಗೆ ಪಾದ ಬೆಳೆಸಿದ್ದರಿಂದ ನಮ್ಮ ಭಾಗ್ಯೋದಯವಾಯಿತು. ನೀವು ನಮ್ಮ ಭಾಗದ ದೇವರು. ಈ ಮಸಿ ಬಳಿದ ಮುಖವನ್ನು ನಿಮಗೆ ಹೇಗೆ ತಾನೇ ತೋರಿಸಲಿ ? ಆದರೇನು ಮಾಡೋದು ಹೇಳಿ. ಎಲ್ಲಾ ಈ ದುರ್ಭಾಗ್ಯ ಕುಪುತ್ರನಿಂದಾಗಿ. ಇಲ್ಲದೇ ಹೋದರೆ ನಿಮ್ಮಿಂದ ಮುಖ ಮರೆಸಿಕೊಂಡು ಇರಬೇಕಾಗಿತ್ತೆ ? ದೇವರು ನಮ್ಮನ್ನು ನಿಸ್ಸಂತಾನರನ್ನಾಗಿ ಮಾಡಿದರೂ ಚಿಂತಿಲ್ಲ, ಇಂಥ ಮಕ್ಕಳನ್ನ ಕೊಡಕೂಡದು."

ಅಲೋಪೀದೀನ ಹೇಳಿದ – "ಇಲ್ಲ ಅಣ್ಣಯ್ಯ, ಹಾಗೆ ಹೇಳಬೇಡಿ."

ಮುನಿಷಿ ಚಕಿತನಾಗಿ ಹೇಳಿದ – "ಇಂಥ ಮಕ್ಕಳಿಗೆ ಇನ್ನೇನು ಅನ್ನೋಣ ಹೇಳಿ."

ಅಲೋಪೀದೀನ ವಾತ್ಸಲ್ಯದಿಂದ ಹೇಳಿದ – "ಈ ಪ್ರಪಂಚದಲ್ಲಿ ನಿಮ್ಮ ಕುಲತಿಲಕರ ಕೀರ್ತಿ ಉಜ್ವಲವಾಗಿ ಬೆಳಗುತ್ತೆ. ಇಲ್ಲಿ ಧರ್ಮಕ್ಕಾಗಿ ತಮ್ಮ ಸರ್ವಸ್ವವನ್ನೂ ಅರ್ಪಣೆ ಮಾಡೋ ಧರ್ಮಪರಾಯಣ ವ್ಯಕ್ತಿಗಳು ಎಷ್ಟು ಜನ ಇದಾರೆ ?" ಆಮೇಲೆ ಪಂಡಿತ ಅಲೋಪೀದೀನ ವಂಶೀಧರನ ಕಡೆ ತಿರುಗಿ ಹೇಳಿದ – "ದರೋಗರೇ, ನಿಮಗೆ ಖುಶಾಮತ್ತು ಮಾಡ್ತಿದೀನಿ ಅಂದುಕೋಬೇಡಿ.

ಖುಶಾಮತ್ತು ಮಾಡೋದಿದ್ದರೆ ನಾನು ಇಷ್ಟು ತೊಂದರೆ ತೊಗೊಳ್ಳೋ ಅಗತ್ಯವಿರಲಿಲ್ಲ. ಅವತ್ತು ರಾತ್ರಿ ನೀವು ನಿಮ್ಮ ಅಧಿಕಾರಬಲದಿಂದ ನನ್ನನ್ನ ಕೈಸೆರೆ ಹಿಡಿದಿದ್ದೀರಿ. ಆದರೆ ಇವತ್ತು ನಾನು ನನ್ನ ಸ್ವಂತ ಇಚ್ಛೆಯಿಂದ ನಿಮಗೆ ಕೈಸೆರೆಯಾಗಿದೀನಿ. ನಾನು ಸಾವಿರಾರು ಜನ ಶ್ರೀಮಂತರನ್ನ, ಸಾಹುಕಾರರನ್ನ ನೋಡಿದೀನಿ. ಸಾವಿರಾರು ಜನ ದೊಡ್ಡ ದೊಡ್ಡ ಅಧಿಕಾರಿಗಳ ಜೊತೆ ವ್ಯವಹಾರ ಮಾಡಿದೀನಿ. ಆದರೆ ನನ್ನನ್ನ ಸೋಲಿಸಿದವರು ಅಂದರೆ ನೀವು. ನಾನು ಎಲ್ಲರನ್ನೂ ನನ್ನ ಗುಲಾಮರನ್ನಾಗಿ, ನನ್ನ ಹಣದ ಗುಲಾಮರನ್ನಾಗಿ ಮಾಡಿಕೊಂಡು ಬಿಟ್ಟುಬಿಟ್ಟೆ. ನಿಮ್ಮ ಅಪ್ಪಣೆಯಾದರೆ ನಾನೊಂದು ಅರಿಕೆ ಮಾಡಿಕೋತೀನಿ."

ವಂಶೀಧರ ಅಲೋಪೀದೀನ ಬಂದಾಗ ಎದ್ದು ಸ್ವಾಗತಿಸಿದ್ದ, ಆದರೆ ಸ್ವಾಭಿಮಾನದಿಂದ. ಈ ಮಹಾಶಯ ತನಗೆ ಅವಮಾನ ಮಾಡಲು, ತನ್ನ ಎದೆ ಉರಿಸಲು ಬಂದಿದ್ದಾನೆಂದು ಅಂದುಕೊಂಡಿದ್ದ. ಅವನು ಕ್ಷಮಾಪಣೆ ಕೇಳಿಕೊಳ್ಳುವ ತಂಟೆಗೇ ಹೋಗಿರಲಿಲ್ಲ. ತಂದೆ ಮಾಡಿದ್ದ ಮುಖಸ್ತುತಿ ಅವನಿಗೆ ಅಸಹ್ಯವಾಗಿ ತೋರಿತ್ತು. ಆದರೆ ಈಗ ಅಲೋಪೀದೀನನ ಮಾತು ಕೇಳಿ ಅವನ ಮನಸ್ಸಿನ ಮೈಲಿಗೆ ಹರಿದಂತಾಯಿತು. ಪಂಡಿತನ ಕಡೆ ಕಂಡೂ ಕಾಣದಂತೆ ದೃಷ್ಟಿ ಹರಿಸಿದ. ಅವನ ಮುಖದಲ್ಲಿ ಸದ್ಭಾವನೆ ತುಳುಕುತ್ತಿತ್ತು. ಗರ್ವ ನಾಚಿಕೆಯ ಮುಂದೆ ತಲೆ ತಗ್ಗಿಸಿತು. ವಂಶೀಧರ ಶಾಂತಸ್ವರದಲ್ಲಿ ಹೇಳಿದ – "ಹಾಗೆ ಹೇಳೋದು ನಿಮ್ಮ ಔದಾರ್ಯ. ನನ್ನಿಂದ ಏನಾದರೂ ಅವಿನಯವಾಗಿದ್ದರೆ ಕ್ಷಮಿಸಿಬಿಡಿ. ಧರ್ಮದ ಬೇಡಿ ನನ್ನನ್ನು ಬಿಗಿದಿತ್ತು. ಇಲ್ಲವಾದರೆ ನಾನು ನಿಮ್ಮ ದಾಸನೇ, ನಿಮ್ಮ ಅಪ್ಪಣೆಯನ್ನು ಶಿರಸಾವಹಿಸಿ ನಡೆಸುವವನೇ."

ಅಲೋಪೀದೀನ ವಿನೀತನಾಗಿ ಹೇಳಿದ – "ಅವತ್ತು ನದಿಯ ದಡದಲ್ಲಿ ನೀವು ನನ್ನ ಪ್ರಾರ್ಥನೆಗೆ ಕಿವಿಗೊಡಲಿಲ್ಲ. ಆದರೆ ಇವತ್ತಂತೂ ಒಪ್ಪಲೇಬೇಕು."

ವಂಶೀಧರ ಹೇಳಿದ – "ನಾನು ಯಾವುದಕ್ಕೆ ತಾನೇ ಯೋಗ್ಯ ? ಆದರೂ ಸಹ ನನ್ನಿಂದ ಏನಾದರೂ ಸೇವೆ ಸಾಧ್ಯವಿದ್ದಲ್ಲಿ ಅದರಲ್ಲಿ ಕೊರತೆಯಾಗದಂತೆ ಮಾಡ್ತೀನಿ."

ಅಲೋಪೀದೀನ ಸ್ಟಾಂಪು ಹಚ್ಚಿದ ಒಂದು ಪತ್ರ ತೆಗೆದು ವಂಶೀಧರನ ಮುಂದಿಟ್ಟು ಹೇಳಿದ – "ಈ ಹುದ್ದೆಯನ್ನು ಸ್ವೀಕರಿಸಿ; ಕಾಗದಕ್ಕೆ ರುಜುಹಾಕಿ. ನಾನು ಬ್ರಾಹ್ಮಣ. ನನ್ನ ಕೋರಿಕೆ ಪೂರೈಸುವವರೆಗೆ ನಿಮ್ಮ ಬಾಗಿಲು ಬಿಟ್ಟು ಹೋಗೋನಲ್ಲ."

ಮುನಿಷಿ ವಂಶೀಧರ ಆ ಕಾಗದವನ್ನು ಓದಿದಾಗ ಅವನ ಕಣ್ಣಲ್ಲಿ ಕೃತಜ್ಞತೆಯಿಂದ ನೀರು ತುಂಬಿತು. ಪಂಡಿತ ಅಲೋಪೀದೀನ ಅವನನ್ನು ತನ್ನೆಲ್ಲ ಆಸ್ತಿಗೂ ಖಾಯಂ ಮ್ಯಾನೇಜರನನ್ನಾಗಿ ನೇಮಕ ಮಾಡಿದ್ದ. ವರ್ಷಕ್ಕೆ ಆರು ಸಾವಿರ ರೂಪಾಯಿ ಸಂಬಳ. ಮೇಲೆ ದಿನನಿತ್ಯದ ಖರ್ಚಿಗೆ ಬೇರೆ. ಸವಾರಿಗೆ ಕುದುರೆ, ಇರಲು ಬಂಗಲೆ, ಪುಕ್ಕಟೆ ಆಳುಕಾಳು. ವಂಶೀಧರ ನಡುಗುವ ಧ್ವನಿಯಲ್ಲಿ ಹೇಳಿದ – "ಪಂಡಿತಜೀ, ನಿಮ್ಮ ಔದಾರ್ಯವನ್ನು ಹೊಗಳುವ ಸಾಮರ್ಥ್ಯ ನನ್ನಲ್ಲಿಲ್ಲ. ಆದರೆ ಇಂಥ ಉಚ್ಚ ಪದವಿಗೆ ನಾನು ಯೋಗ್ಯನಲ್ಲ."

ಅಲೋಪೀದಿನ ನಗುತ್ತ ಹೇಳಿದ – "ನನಗೆ ಈಗೊಬ್ಬ ಅಯೋಗ್ಯ ಮನುಷ್ಯನ ಅವಶ್ಯಕತೆಯೇ ಇದೆ!"

ವಂಶೀಧರ ಗಂಭೀರ ಭಾವದಿಂದ ಹೇಳಿದ – "ನಾನೇನೋ ನಿಮ್ಮ ದಾಸ. ನಿಮ್ಮಂಥ ಕೀರ್ತಿವಂತ ಸಜ್ಜನರ ಸೇವೆ ಮಾಡೋದೆಂದರೆ ಸೌಭಾಗ್ಯವೇ ಸರಿ. ಆದರೆ ನನಗೆ ವಿದ್ಯೆಯಿಲ್ಲ, ಬುದ್ಧಿಯಿಲ್ಲ. ಈ ಕೊರತೆಗಳನ್ನೆಲ್ಲಾ ತುಂಬಬಲ್ಲಂತಹ ಸ್ವಭಾವವೂ ಇಲ್ಲ. ಈ ದೊಡ್ಡ ಕೆಲಸಕ್ಕೆ ತುಂಬ ಮರ್ಮಜ್ಞರಾದ ಅನುಭವೀ ವ್ಯಕ್ತಿಯ ಅವಶ್ಯಕತೆಯಿದೆ."

ಅಲೋಪೀದೀನ ಶಾಯಿಕುಡಿಕೆಯಿಂದ ಲೇಖನಿ ತೆಗೆದು ವಂಶೀಧರನ ಕೈಗೆ ಕೊಡುತ್ತ ಹೇಳಿದ – "ವಿದ್ವತ್ತು, ಅನುಭವ, ಮರ್ಮಜ್ಞತೆ, ಕಾರ್ಯಕುಶಲತೆ – ಇವ್ಯೊಂದೂ ನನಗೆ ಬೇಕಾಗಿಲ್ಲ. ಈ ಗುಣಗಳ ಮಹತ್ವದ ಪರಿಚಯ ನನಗೆ ಚೆನ್ನಾಗಿದೆ. ಸೌಭಾಗ್ಯ, ಸದವಕಾಶಗಳ ಕೃಪೆಯಿಂದಾಗಿ ನನಗೀಗ ಯೋಗ್ಯತೆ, ವಿದ್ವತ್ತುಗಳನ್ನು ಮಂದಗೊಳಿಸುವಂತಹ ಮುತ್ತು ಸಿಕ್ಕಿದೆ. ತಗೊಳ್ಳಿ, ಈ ಲೇಖನಿ. ಹೆಚ್ಚು ಯೋಚನೆ ವಿಚಾರಗಳ ಗೋಜಿಗೆ ಹೋಗಬೇಡಿ. ರುಜು ಹಾಕಿ. ನೀವು ಅವತ್ತು ನದಿಯ ದಂಡೆಯ ಮೇಲಿದ್ದಂತೆ ನಿಮ್ಮನ್ನು ದೇವರು ಸದಾ ಉದ್ದಂಡ, ಕಠೋರ, ನಿರ್ದಾಕ್ಷಿಣ್ಯ ಆದರೂ ಧರ್ಮನಿಷ್ಠ ವ್ಯಕ್ತಿಯನ್ನಾಗಿಯೇ ಇಟ್ಟಿರಲೆಂದು ಪ್ರಾರ್ಥನೆ."

ವಂಶೀಧರನ ಕಣ್ಣಿನಲ್ಲಿ ನೀರು ತುಂಬಿತು. ಹೃದಯದ ಸಣ್ಣಪಾತ್ರೆಗೆ ಅಷ್ಟೊಂದು ಕೃತಜ್ಞತೆಯನ್ನು ತಡೆದುಕೊಳ್ಳುವುದು ಕಷ್ಟವಾಯಿತು. ಮತ್ತೊಮ್ಮೆ ಪಂಡಿತನ ಕಡೆ ಶ್ರದ್ಧಾಭಕ್ತಿಗಳಿಂದ ನೋಡಿ, ನಡುಗುವ ಕೈಯಿಂದ ಮ್ಯಾನೇಜರ್ ಹುದ್ದೆಯ ಕಾಗದಕ್ಕೆ ರುಜು ಹಾಕಿದ.

ಅಲೋಪೀದೀನ ಹಿಗ್ಗಿನಿಂದ ಅವನನ್ನು ತಬ್ಬಿಕೊಂಡ.

# 11. ಹಿಟ್ಟಿನ ಗೋಮತಿಯ ಬಾವಿ

ಮೃತ್ಯುಶಯ್ಯೆಯ ಮೇಲೆ ಮಲಗಿದ್ದ ಗೋಮತಿ ಚೌಧರಿ ವಿನಾಯಕಸಿಂಹನಿಗೆ ಹೇಳಿದಳು – "ಚೌಧರಿ, ನನಗೆ ಬದುಕಿನಲ್ಲಿದ್ದ ಒಂದೇ ಒಂದು ಆಸೆಯೆಂದರೆ ಇದು."

ಚೌಧರಿ ಗಂಭೀರನಾಗಿ ಹೇಳಿದ – "ನೀನೇನೂ ಯೋಚನೆ ಮಾಡಬೇಡ, ಚಿಕ್ಕಮ್ಮ. ನಿನ್ನ ಆಸೇನ ದೇವರು ಪೂರೈಸ್ತಾನೆ. ನಾನು ಇವತ್ತೇ ಆಳುಗಳನ್ನ ಕರಸಿ ಕೆಲಸ ಷುರು ಮಾಡಿಸ್ತೀನಿ. ದೈವೇಚ್ಛೆ ಇದ್ದರೆ ನಿನ್ನ ಬಾವಿಯ ನೀರನ್ನು ನೀನೂ ಕುಡೀದೇ ಇರೋಲ್ಲ. ನೀನು ಎಣಿಸಿರಬೇಕಲ್ಲವೆ, ಎಷ್ಟು ದುಡ್ಡಿದೆ ಅಂತ."

ಗೋಮತಿ ಒಂದು ಕ್ಷಣ ಕಣ್ಣು ಮುಚ್ಚಿ ಚದುರಿಹೋಗಿದ್ದ ನೆನಪನ್ನು ಒಟ್ಟುಗೂಡಿಸಿಕೊಳ್ಳುತ್ತ ಹೇಳಿದಳು – "ಎಷ್ಟಿದೆ ಅಂತ ನನಗೇನು ಗೊತ್ತು? ಇರೋದೆಲ್ಲಾ ಈ ಕುಡಿಕೇಲೇ ಇದೆ. ಇಷ್ಟರಲ್ಲಿ ಕೆಲಸ ಸಾಗಿಸು. ಕಡಿಮೆ ಬಿದ್ದರೆ ಯಾರ ಮುಂದೆ ಕೈಯೊಡ್ಡಿಕೊಂಡು ಓಡಾಡ್ತಿ?"

ಚೌಧರಿ ಬಾಯಿಕಟ್ಟಿದ್ದ ಕುಡಿಕೆಯನ್ನೆತ್ತಿ ಕೈಯಿಂದ ತೂಗಿ ನೋಡುತ್ತ ಹೇಳಿದ – "ಹಾಗೆಯೇ ಮಾಡೋಣಂತೆ, ಚಿಕ್ಕವ್ವ. ಕೊಡೋ ದಾನಿಗಳು ಯಾರಿದಾರೆ? ಒಬ್ಬರ ಮನೇಲೂ ಒಂದು ಹಿಡಿ ಭಿಕ್ಷೆ ಹುಟ್ಟೋಲ್ಲ, ಇನ್ನು ಬಾವಿ ತೋಡಿಸೋಕ್ಕೆ ಹಣ ಕೊಡ್ತಾರೆಯೆ? ನೀನು ನಿನ್ನ ಬದುಕಿನ ಸಂಪಾದನೇನೆಲ್ಲಾ ಈ ಧರ್ಮಕಾರ್ಯಕ್ಕೆ ಕೊಡ್ತಿರೋದು ಪುಣ್ಯ."

ಗೋಮತಿ ಹೆಮ್ಮೆಯಿಂದ ಹೇಳಿದಳು – "ಆಗ ನೀನಿನ್ನೂ ತುಂಬ ಚಿಕ್ಕವನು. ನಿಮ್ಮ ಚಿಕ್ಕಪ್ಪ ಸತ್ತಾಗ ನನ್ನ ಹತ್ತಿರ ಒಂದು ಕವಡೆಯೂ ಇರಲಿಲ್ಲ. ದಿನಗಟ್ಟಲೆ ಹೊಟ್ಟೆಗಿಲ್ಲದೆ ಬಿದ್ದಿರ್ತಿದ್ದೆ. ಅವರ ಹತ್ತಿರ ಇದ್ದದ್ದೆಲ್ಲಾ ಅವರ ಕಾಹಿಲೆಗೇ ಹೋಯಿತು. ಅವರಿಗೆ ದೇವರಲ್ಲಿ ತುಂಬ ಭಕ್ತಿ. ಅದಕ್ಕೇಯೇ ದೇವರು ಅವರನ್ನ ಬೇಗನೆ ಕರಸಿಕೊಂಡ. ಅವತ್ತಿನಿಂದ ಹಿಡಿದು ಇವತ್ತಿನ ತನಕ ನಾನು ಹೇಗೆ ಕಾಲ ಹಾಕಿದೀನಿ ಅಂತ ನಿನಗೆ ಗೊತ್ತು. ಒಂದೊಂದು ರಾತ್ರೀಲಿ ಮಣಗಟ್ಟಲೆ ಹಿಟ್ಟು ಬೀಸ್ತಿದ್ದೆ, ಮಗು. ನೋಡೋರಿಗೆ ಆಶ್ಚರ್ಯವಾಗೋದು. ನನಗೆ ಅಷ್ಟೊಂದು ಶಕ್ತಿ ಎಲ್ಲಿಂದ ಬರ್ತಿತ್ತು ಅಂತ ಗೊತ್ತಿಲ್ಲ. ಈಗ ಇರೋದೊಂದು ಆಸೆ ಅಂದರೆ ಅವರ ಹೆಸರಿನಲ್ಲಿ ಒಂದು ಸಣ್ಣ ಬಾವಿ ಆಗಲಿ ಅಂತ. ಜಗತ್ತಿನಲ್ಲಿ ಹೆಸರು ಉಳೀಬೇಕು.

ಅದಕ್ಕೇ ಅಲ್ಲವೇ ಜನ ಮಕ್ಕಳು, ಮಕ್ಕಳು ಅಂತ ಒದ್ದಾಡೋದು."

ಹೀಗೆ ಮುದಿ ಗೋಮತಿ ಚೌಧರಿ ವಿನಾಯಕಸಿಂಹನಿಗೆ ಉಯಿಲು ಒಪ್ಪಿಸಿ ಅವತ್ತು ರಾತ್ರಿಯೇ ಪರಲೋಕ ಸೇರಿದಳು. "ಬಾವಿ ತೋಡಿಸೋದು ತಡಮಾಡಬೇಡ" ಎಂಬುದೇ ಸಾಯುವಾಗ ಅವಳ ಬಾಯಿಂದ ಹೊರಟ ಕೊನೆಯ ಮಾತು. ಅವಳಲ್ಲಿ ಹಣವಿದೆಯೆಂದು ಜನರಿಗೆ ಅನುಮಾನವಿತ್ತು. ಆದರೆ ಎರಡು ಸಾವಿರ ರೂಪಾಯಿಯಷ್ಟಿದೆಯೆಂದು ಯಾರಿಗೂ ಗೊತ್ತಿರಲಿಲ್ಲ. ಜನ ತಮ್ಮ ಕೊರತೆಯನ್ನು ಅಡಗಿಸಿಡುವಂತೆ ಮುದುಕಿ ಹಣವನ್ನು ಅಡಗಿಸಿಟ್ಟಿದ್ದಳು. ಚೌಧರಿ ಹಳ್ಳಿಯ ಮುಖಂಡ, ನಿಯತ್ತಿನ ಮನುಷ್ಯ. ಆ ಕಾರಣದಿಂದಾಗಿ ಮುದುಕಿ ತನ್ನ ಕೊನೆಯ ಆದೇಶವನ್ನು ಅವನಿಗೆ ಕೊಟ್ಟಿದ್ದಳು.

## 2

ಗೋಮತಿಯ ಕ್ರಿಯಾಕರ್ಮಕ್ಕೆ ಚೌಧರಿ ಹೆಚ್ಚು ಖರ್ಚು ಮಾಡಲಿಲ್ಲ. ಆ ಸಂಸ್ಕಾರಗಳಿಂದ ಬಿಡುವು ದೊರೆತ ಕೂಡಲೇ ಮಗ ಹರನಾಥಸಿಂಹನನ್ನು ಕರೆದು ಕಲ್ಲು, ಇಟ್ಟಿಗೆ, ಸುಣ್ಣಗಳಿಗೆ ಎಷ್ಟು ಹಣ ಬೇಕೆಂದು ಅಂದಾಜು ಮಾಡಿಸಿದ. ಹರನಾಥ ದವಸದ ವ್ಯಾಪಾರ ಮಾಡುತ್ತಿದ್ದ. ಅವನು ತಂದೆ ಹೇಳುವುದನ್ನು ಕೊಂಚ ಹೊತ್ತು ಕುಳಿತು ಕೇಳುತ್ತಿದ್ದು ಆಮೇಲೆ "ಇನ್ನೊಂದು ಮೂರು ನಾಲ್ಕು ತಿಂಗಳು ಬಾವಿ ತೋಡಿಸೋದು ತಡವಾದರೆ ಏನಾದರೂ ಬಾಧಕವಿದೆಯೆ ?" ಅಂದ.

"ಬಾಧಕವೇನೂ ಇಲ್ಲ. ಆದರೆ ತಡ ಯಾಕೆ ಆಗಬೇಕು ? ಅವಳಂತೂ ದುಡ್ಡು ಕೊಟ್ಟಾಗಿದೆ. ನಮಗೂ ಬಿಟ್ಟಿ ಹೆಸರು ಬರುತ್ತೆ. ಸಾಯುವ ಗಳಿಗೇಲಿ ಸಹ 'ಬೇಗನೆ ಬಾವಿ ತೋಡಿಸು' ಅಂತ ಹೇಳಿ ಹೋದಳು" ಎಂದು ಚೌಧರಿ ರಾಗ ತೆಗೆದ.

"ಹೇಳಿದ್ದಳು, ನಿಜ. ಆದರೆ ಈಗ ಪೇಟೇಲಿ ಧಾರಣೆ ಚೆನ್ನಾಗಿದೆ. ಎರಡು ಮೂರು ಸಾವಿರ ರೂಪಾಯಿಯ ದವಸ ತುಂಬಿದರೆ ಮಾರ್ಗಶಿರ – ಪುಷ್ಯದ ಹೊತ್ತಿಗೆ ಬೆಲೆ ಒಂದೂ ಕಾಲರಷ್ಟಾಗುತ್ತೆ. ನಾನು ನಿಮಗೊಂದಿಷ್ಟು ಬಡ್ಡೀನೂ ಕೊಡ್ತೀನಿ."

ಚೌಧರಿಯ ಮನಸ್ಸು ಈಗ ಶಂಕಾಭಯಗಳ ಇಕ್ಕಳದಲ್ಲಿ ಸಿಕ್ಕಿಕೊಂಡಿತು. ಎರಡು ಸಾವಿರವಿದ್ದದ್ದು ಎರಡೂವರೆ ಸಾವಿರವಾದರೆ ಹೇಳುವುದೇನಿದೆ ? ಬಾವಿಯ ದಾರಿಯಲ್ಲಿ ಬಿಲ್ವದ ಮರಗಳನ್ನೂ ನೆಡಿಸಿಬಿಡಬಹುದು. ಆದರೆ ಭಯವೆಂದರೆ ನಷ್ಟದ್ದೇ. ಚೌಧರಿಗೆ ಶಂಕೆಯನ್ನು ಮುಚ್ಚಿಟ್ಟುಕೊಳ್ಳಲಾಗಲಿಲ್ಲ. ಅವನಂದ – "ಎಲ್ಲಾದರೂ ನಷ್ಟವಾದರೆ ?"

ಹರನಾಥನೂ ತಳಮಳದಿಂದಲೇ ಹೇಳಿದ – "ನಷ್ಟ ಯಾಕಾಗುತ್ತೆ ? ಏನಾದರೂ ಅಂಥ ವಿಶೇಷವಿದೆಯೆ ?"

"ನಷ್ಟವಾಯಿತು ಅಂತ ಇಟ್ಟುಕೋ, ಆಗ ?"

ಹರನಾಥ ಆವೇಶದಿಂದ ಹೇಳಿದ – "ಹಣ ಕೊಡೋಕ್ಕೆ ಮನಸ್ಸಿಲ್ಲ ಅಂತ ಹೇಳಿ.

ನೀವು ಭಲೇ ದೊಡ್ಡ ಧರ್ಮಾತ್ಮರು!"

ಇತರೆಲ್ಲ ಮುದಿ ವಯಸ್ಸಿನವರಂತೆಯೇ ಚೌಧರಿಯೂ ಮಗನಿಗೆ ಹೆದರುತ್ತಿದ್ದ. ಅವನು ಕಾತರದ ಧ್ವನಿಯಲ್ಲಿ ಹೇಳಿದ – "ನಾನೆಲ್ಲಿಂದೆ ಹಣ ಕೊಡೋಲ್ಲ ಅಂತ? ಆದರೆ ಇದು ಬೇರೆಯೋರ ಹಣ. ಚೆನ್ನಾಗಿ ಆಲೋಚನೆ ಮಾಡಿ ಅದನ್ನ ಮುಟ್ಟಬೇಕಾಗುತ್ತೆ. ವ್ಯಾಪಾರದ್ದು ಹೀಗೇನೇ ಅಂತ ಹೇಗೆ ಹೇಳೋಕ್ಕಾಗುತ್ತೆ? ಬೆಲೆ ಇಳಿದುಹೋದರೆ? ದವಸಕ್ಕೆ ಹುಳು ಹಿಡಿದರೆ? ಯಾರಾದರೂ ಆಗದವರು ಬೆಂಕಿ ಹಾಕಿದರೆ? ಎಲ್ಲಾನ್ನೂ ಚೆನ್ನಾಗಿ ಯೋಚಿಸು."

ಹರನಾಥ ವ್ಯಂಗ್ಯದಿಂದ ಹೇಳಿದ – "ಹಾಗೆ ಯೋಚಿಸೋದಾದರೆ ಕಳ್ಳರೇ ಹಣ ಹೊತ್ತುಕೊಂಡು ಹೋದರೆ ಹೇಗೆ ಅಂತ ಯೋಚಿಸಬಹುದು; ಕಟ್ಟಿದ ಗೋಡೆ ಕುಸಿದುಬಿದ್ದರೆ ಹೇಗೆ ಅಂತ ಯೋಚಿಸಬಹುದು. ಇವೂ ಇಲ್ಲಿ ನಡೆಯೋದೇ ತಾನೆ?"

ಚೌಧರಿಗೆ ಬೇರೆ ಉಪಾಯವೇ ಇರಲಿಲ್ಲ. ಆ ದುರ್ಬಲ ಸಿಪಾಯಿ ಚಪ್ಪಾಳೆ ತಟ್ಟಿದ ತಪ್ಪಿಗೆ ಕಣಕ್ಕೆ ಇಳಿದದ್ದಾಗಿತ್ತು. ಆದರೆ ಕತ್ತಿಯ ಝಳಪನ್ನು ನೋಡಿ ಅವನ ಕೈಕಾಲು ಕುಸಿಯಿತು. ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದ ಚೌಧರಿ ಹೇಳಿದ – "ಹಾಗಾದರೆ ಎಷ್ಟು ಬೇಕು?" ಶತ್ರು ಹಿಂದೆ ಸರಿಯುತ್ತಿರುವುದನ್ನು ನೋಡಿ ಮುನ್ನುಗ್ಗಿ ಮೈಮೇಲೆ ಬೀಳುವ ಚತುರ ಯೋಧನಂತೆ ಹರನಾಥ ಹೇಳಿದ – "ಎಲ್ಲಾನ್ನೂ ಕೊಡಿ. ಐವತ್ತೂ ನೂರು ತೊಗೊಳ್ಳೋಕ್ಕೆ ಅದೇನು ಆಟವೆ?"

ಚೌಧರಿ ಸೋತ. ಗೋಮತಿ ಅವನಿಗೆ ಹಣ ಕೊಟ್ಟಿದ್ದುದನ್ನು ಯಾರೂ ನೋಡಿರಲಿಲ್ಲ. ಆದ್ದರಿಂದ ಲೋಕ ನಿಂದಿಸುವ ಸಂಭವವೂ ಇರಲಿಲ್ಲ. ಹರನಾಥ ದವಸ ತುಂಬಿದ. ಮನೆಯಲ್ಲಿ ಎಲ್ಲೆಲ್ಲಿ ನೋಡಲಿ, ದವಸ ತುಂಬಿದ ಮೂಟೆಗಳ ರಾಶಿಯೋ ರಾಶಿ. ಆರಾಮವಾಗಿ ಸಿಹಿನಿದ್ರೆ ಮಾಡುತ್ತಿದ್ದ ಚೌಧರಿ ಈಗ ಇಡೀರಾತ್ರಿ ಕಾವಲು ಕಾಯುತ್ತ ಕುಳಿತಿರುತ್ತಿದ್ದ. ಒಂದು ಇಲಿಯೂ ಅಲ್ಲಿ ನುಸುಳಿ ಹೋಗುವ ಸಾಹಸ ಮಾಡುತ್ತಿರಲಿಲ್ಲ. ಬೆಕ್ಕು ಸಹ ನಾಚುವಂತೆ ಚೌಧರಿ ನೆಗೆದುಬರುತ್ತಿದ್ದ. ಹೀಗೆ ಆರು ತಿಂಗಳು ಕಳೆಯಿತು. ಪುಷ್ಯಮಾಸದಲ್ಲಿ ದವಸದ ಮಾರಾಟವಾಯಿತು. ಒಟ್ಟು ಐನೂರು ರೂಪಾಯಿ ಲಾಭ ಬಂದಿತ್ತು.

ಹರನಾಥ ಹೇಳಿದ – "ಇದರಲ್ಲಿ ಐವತ್ತು ರೂಪಾಯಿ ನೀವು ತೊಗೊಳ್ಳಿ."

ಚೌಧರಿ ಕಿಡಿಕಿಡಿಯಾಗಿ ಹೇಳಿದ – "ಐವತ್ತು ರೂಪಾಯಿಯನ್ನೇನು ದಾನ ಅಂತ ತೊಗೊಳ್ಳಲೆ? ಯಾವನಾದರೂ ಸಾಹುಕಾರನಿಂದ ಇಷ್ಟು ಹಣ ಸಾಲ ತಂದಿದ್ದರೆ ಕನಿಷ್ಠ ಇನ್ನೂರು ರೂಪಾಯಿ ಬಡ್ಡಿ ಆಗ್ತಾ ಇತ್ತು. ಅಷ್ಟು ಬೇಕಾದರೆ ನನಗೊಂದು ಹತ್ತು ರೂಪಾಯಿ ಕಡಮೆ ಕೊಡು."

ಹರನಾಥ ಹೆಚ್ಚು ಮಾತಿಗೆ ಹೋಗಲಿಲ್ಲ. ಚೌಧರಿಗೆ ನೂರೈವತ್ತು ರೂಪಾಯಿ ಕೊಟ್ಟುಬಿಟ್ಟ. ಚೌಧರಿಯ ಮನಸ್ಸು ಹಿಂದೆಂದೂ ಇಷ್ಟು ಪ್ರಸನ್ನವಾಗಿರಲಿಲ್ಲ. ರಾತ್ರಿ ಮಲಗಲೆಂದು ತನ್ನ ಕೋಣೆಗೆ ಹೋದಾಗ ಮುದಿ ಗೋಮತಿ ದೊಡ್ಡದಾಗಿ ಮುಗುಳುನಗೆ ಬೀರುತ್ತ ನಿಂತಂತೆ ಭಾಸವಾಯಿತು. ಚೌಧರಿಯ ಎದೆ

ಬಡಿದುಕೊಳ್ಳಲಾರಂಭಸಿತು. ಅವನೇನೂ ನಿದ್ರೆಯಲ್ಲಿರಲಿಲ್ಲ; ಯಾವ ಮಾದಕ ಪದಾರ್ಥವನ್ನೂ ತಿಂದಿರಲಿಲ್ಲ. ಆದರೂ ಗೋಮತಿ ಎದುರಿಗೆ ನಿಂತು ದೊಡ್ಡದಾಗಿ ನಗುತ್ತಿದ್ದಳು. ಹೌದು, ಆ ಸುಕ್ಕಿದ ಮುಖದ ಮೇಲೆ ಯಾವದೋ ವಿಚಿತ್ರವಾದ ಸ್ಫೂರ್ತಿ ಎದ್ದು ಕಾಣುತ್ತಿತ್ತು!

## 3

ಎಷ್ಟೋ ವರ್ಷಗಳು ಕಳೆದವು. ಚೌಧರಿ ಒಂದೇ ಸಮನೆ ಹರನಾಥನಿಂದ ಹಣ ವಸೂಲು ಮಾಡುವ ಪ್ರಯತ್ನದಲ್ಲೇ ಇರುತ್ತಿದ್ದ. ಆದರೆ ಹರನಾಥ ಯಾವಾಗಲೂ ಏನಾದರೂ ಹೇಳಿಕೊಂಡೇ ಕಾಲ ತಳ್ಳುತ್ತಿದ್ದ. ವರ್ಷಕ್ಕೆ ಸ್ವಲ್ಪ ಬಡ್ಡಿಯನ್ನೇನೋ ಕೊಟ್ಟುಬಿಡುತ್ತಿದ್ದ. ಆದರೆ ಅಸಲಿನ ಬಗ್ಗೆ ನೂರು ನೆಪ ತೆಗೆಯುತ್ತಿದ್ದ. ಒಮ್ಮೆ ಒಂದು ಗೋಳಾದರೆ ಇನ್ನೊಮ್ಮೆ ಇನ್ನೊಂದು. ಅವನ ವ್ಯವಹಾರ ಬೆಳೆಯುತ್ತ ಹೋಗುತ್ತಿತ್ತು. ಕೊನೆಗೊಂದು ದಿನ ಚೌಧರಿ ಅವನಿಗೆ ಖಡಾಖಂಡಿತವಾಗಿ ಹೇಳಿಬಿಟ್ಟ – "ನಿನ್ನ ವ್ಯವಹಾರ ಮುಳುಗಲಿ, ತೇಲಲಿ ನನಗೆ ಅದೊಂದೂ ಗೊತ್ತಿಲ್ಲ, ಈ ತಿಂಗಳೊಳಗೆ ತಪ್ಪದೇ ಹಣ ತೀರಿಸಬೇಕು." ಹರನಾಥ ಏನೇನೋ ಹಾರಿಕೆಯ ನೆಪ ಹೇಳಿದ, ಆದರೆ ಚೌಧರಿ ಪಟ್ಟು ಹಿಡಿದು ಕುಳಿತ.

ಹರನಾಥ ಕಿಡಿಕಿಡಿಯಾಗಿ ಹೇಳಿದ – "ಇನ್ನೆರಡು ತಿಂಗಳು ತಡೀರಿ ಅಂತ ಹೇಳ್ತಿದೀನಿ. ಮಾಲು ಮಾರಾಟವಾದ ತಕ್ಷಣ ರೂಪಾಯಿ ಕೊಟ್ಟುಬಿಡ್ತೀನಿ."

ಚೌಧರಿ ಅಷ್ಟೇ ಕಟ್ಟುನಿಟ್ಟಾಗಿ ಹೇಳಿದ – "ನಿನ್ನ ಮಾಲು ಎಂದಿಗೂ ಮಾರಾಟವಾಗೋಲ್ಲ. ನಿನ್ನ ಎರಡು ತಿಂಗಳ ವಾಯಿದೆ ಎಂದಿಗೂ ಮುಗಿಯೋಲ್ಲ. ನನಗೆ ಇವತ್ತೇ ಹಣ ಬೇಕು."

ಹರನಾಥ ಆ ಕ್ಷಣ ಕೋಪದಿಂದೆದ್ದು ಎರಡು ಸಾವಿರ ರೂಪಾಯಿ ತಂದು ಚೌಧರಿಯ ಮುಂದೆ ಜೋರಾಗಿ ಕುಕ್ಕಿದ.

ಚೌಧರಿ ಈಗ ಕೊಂಚ ನಾಚಿ ಹೇಳಿದ – "ಹಣ ನಿನ್ನಲ್ಲಿತ್ತಲ್ಲ."

"ಇನ್ನೇನು ಮಾತಿನಿಂದ ವ್ಯಾಪಾರ ನಡೆಯುತ್ತದೆಯೆ ?"

"ನನಗೆ ಈಗ ಐನೂರು ರೂಪಾಯಿ ಕೊಡು ಸಾಕು. ಉಳಿದದ್ದನ್ನ ಎರಡು ತಿಂಗಳಲ್ಲಿ ಕೊಟ್ಟರೆ ಆಗುತ್ತೆ. ಎಲ್ಲಾ ಹಣಾನೂ ಇವತ್ತೇ ಖರ್ಚಾಗೋಲ್ಲ, ಏನಿಲ್ಲ."

ಹರನಾಥ ಗತ್ತಿನಿಂದ ಹೇಳಿದ – "ಬೇಕಾದರೆ ಖರ್ಚು ಮಾಡಿ, ಇಲ್ಲವೇ ಕೂಡಿಡಿ. ನನಗೂ ನಿಮ್ಮ ಹಣಕ್ಕೂ ಸಂಬಂಧವಿಲ್ಲ. ಏನು, ಪ್ರಪಂಚದಲ್ಲಿ ಸಾಹುಕಾರರೆಲ್ಲಾ ಸತ್ತು ಹೋಗಿದ್ದಾರೆಯೆ, ನಿಮ್ಮ ತಗಾದೆ ಸಹಿಸಿಕೊಂಡಿರೋಕ್ಕೆ ?"

ಚೌಧರಿ ಹಣ ತೆಗೆದುಕೊಂಡು ಗೋಡೆಯ ಗೂಡಲ್ಲಿಟ್ಟ. ಬಾವಿಯ ಗುದ್ದಲಿಪೂಜೆಯ ಉತ್ಸಾಹವೆಲ್ಲಾ ತಣ್ಣಗಾಯಿತು.

ಹರನಾಥ ಹಣವನ್ನೇನೋ ಹಿಂದಿರುಗಿಸಿದ್ದ. ಆದರೆ ಅವನ ಮನಸ್ಸಿನಲ್ಲಿ

ಹವಣಿಕೆಯೋ ಬೇರೆ. ನಡುರಾತ್ರಿ ಮನೆಯೆಲ್ಲಾ ಸ್ತಬ್ಧವಾದಾಗ ಹರನಾಥ ಚೌಧರಿಯ ಕೊಠಡಿಯ ಬಾಗಿಲು ಸರಿಸಿ ಮೆಲ್ಲಗೆ ಒಳನುಗ್ಗಿದ. ಚೌಧರಿ ನಿಶ್ಚಿಂತನಾಗಿ ಮಲಗಿದ್ದ. ದುಡ್ಡಿದ್ದ ಎರಡೂ ಚೀಲಗಳನ್ನೆತ್ತಿಕೊಂಡು ಹೊರಹೋಗುವುದೆಂದು ಹರನಾಥ ಯೋಚಿಸಿದ್ದ. ಆದರೆ ಕೈ ಚಾಚಿದಾಗ ಅವನ ಮುಂದೆ ಗೋಮತಿ ನಿಂತಿದ್ದುದು ಕಾಣಿಸಿತು. ಅವಳು ಒಂದೊಂದು ಕೈಯಲ್ಲಿ ಒಂದೊಂದು ಚೀಲ ಹಿಡಿದುಕೊಂಡಿದ್ದಳು. ಹರನಾಥ ಭಯದಿಂದ ಹಿಂದಕ್ಕೆ ಸರಿದ. ಆದರೆ ತನ್ನ ಮನಸ್ಸೇಲ್ಲೋ ತನಗೆ ಮೋಸ ಮಾಡುತ್ತಿರಬಹುದೆಂದುಕೊಂಡು ಮತ್ತೆ ಕೈಚಾಚಿದ. ಆದರೆ ಗೋಮತಿಯ ಮೂರ್ತಿ ಈಗ ಎಷ್ಟು ಭಯಂಕರವಾಯಿತೆಂದರೆ ಅವನಿಗೆ ಅಲ್ಲಿ ಒಂದು ಕ್ಷಣ ಸಹ ನಿಲ್ಲಲಾಗಲಿಲ್ಲ. ಕಾಲಿಗೆ ಬುದ್ಧಿ ಹೇಳಿದ. ಆದರೆ ಹೋಗುತ್ತ ಹೋಗುತ್ತ ವರಾಂಡದಲ್ಲಿ ಪ್ರಜ್ಞೆತಪ್ಪಿ ಬಿದ್ದ.

ಹರನಾಥ ವ್ಯಾಪಾರಿಗಳಿಗೆ ಕೊಡಲೆಂದು ಎಲ್ಲೆಲ್ಲಿಂದಲೋ ಹಣ ಎತ್ತಿದ್ದ. ಚೌಧರಿ ತಗಾದೆ ಮಾಡಿದಾಗ ಆ ಹಣವನ್ನು ತಂದು ಅವನ ಮುಂದೆ ಎಸೆದಿದ್ದ. ರಾತ್ರಿ ಅಪ್ಪ ಮಲಗಿದ ಮೇಲೆ ಆ ಹಣವನ್ನು ಹಾರಿಸಿದರಾಯಿತು ಎಂದು ಯೋಚಿಸಿ ಅವನು ಹಾಗೆ ಮಾಡಿದ್ದ. 'ಕಳ್ಳ', 'ಕಳ್ಳ' ಎಂದು ಕೂಗೆಬ್ಬಿಸಿದರಾಯಿತು, ತನ್ನ ಮೇಲೆ ಅನುಮಾನ ಬಾರದು ಎಂದು ಅವನಂದುಕೊಂಡಿದ್ದ. ಆದರೆ ಅವನ ಈ ಹಂಚಿಕೆ ಸರಿಹೋಗಲಿಲ್ಲ. ವ್ಯಾಪಾರಿಗಳು ತಗಾದೆಗೆ ಷುರು ಮಾಡಿದರು. ವಾಯಿದೆಯ ಮೇಲೆ ಜನ ಎಷ್ಟು ದಿನ ತಡೆದಾರು ? ಹೇಳಬಹುದಾದ ನೆಪಗಳನ್ನೆಲ್ಲಾ ಹೇಳಿದ್ದಾಯಿತು. ಕೊನೆಗೆ ಅವರು ಕೋರ್ಟಿಗೆ ಹೋಗುವುದಾಗಿ ಬೆದರಿಸಿದರು. ಒಬ್ಬನಂತೂ ಮುನ್ನೂರು ರೂಪಾಯಿಗೆ ದಾವ ಹಾಕಿಯೂ ಬಿಟ್ಟ. ಬಡಪಾಯಿ ಚೌಧರಿ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದ. ಅಂಗಡಿ ನೋಡಿಕೊಳ್ಳುತ್ತಿದ್ದವನು ಹರನಾಥ. ಚೌಧರಿಗೂ ಅದಕ್ಕೂ ಏನೂ ಸಂಬಂಧವಿರಲಿಲ್ಲ. ಆದರೆ ಅದಕ್ಕೆ ಬೆಲೆಯಿದ್ದುದು ಚೌಧರಿಯಿಂದಾಗಿ. ಜನ ಚೌಧರಿಯನ್ನು ಯೋಗ್ಯ, ವ್ಯವಹಾರದಲ್ಲಿ ನಿರ್ದುಷ್ಟ ಎಂದು ತಿಳಿದಿದ್ದರು. ಅವರಲ್ಲಿ ಕೆಲವರು ಇನ್ನೂ ತಗಾದೆಗೆ ಷುರು ಮಾಡಿರದಿದ್ದರೆ ಅದಕ್ಕೆ ಚೌಧರಿ ಅವರಿಂದ ಮುಖ ಮರೆಸಿಕೊಂಡು ಓಡಾಡುತ್ತಿದ್ದುದೇ ಕಾರಣ. ಆದರೆ ಏನೇ ಬರಲಿ, ಬಾವಿಯ ಹಣವನ್ನು ಮುಟ್ಟುವುದಿಲ್ಲ ಎಂದು ಅವನು ನಿರ್ಧಾರ ಮಾಡಿದ್ದ.

ಅವತ್ತು ರಾತ್ರಿ ವ್ಯಾಪಾರಿಗಳಲ್ಲೊಬ್ಬನ ಮುಸಲಮಾನ ಆಳು ಬಂದು ಚೌಧರಿಯ ಮನೆಯ ಮುಂದೆ ಸಾವಿರ ಬೈಗಳ ಒದರಿ ಹೋದ. ಚೌಧರಿಗೆ ಹೋಗಿ ಅವನ ಮೀಸೆ ಕಿತ್ತುಹಾಕಬೇಕೆನ್ನುವಷ್ಟು ಕೋಪ ಬರುತ್ತಿತ್ತು. ಆದರೆ ನನಗೂ ಇದಕ್ಕೂ ಏನು ಸಂಬಂಧ, ಮಗನ ಸಾಲ ತೀರಿಸುವುದೇನೂ ಅಪ್ಪನ ಧರ್ಮ ಅಲ್ಲವಲ್ಲ ಎಂದು ತನಗೆ ತಾನೇ ಸಮಜಾಯಿಷಿ ಹೇಳಿಕೊಂಡು ಸುಮ್ಮನಾಗಿದ್ದ.

ಊಟಕ್ಕೆ ಕುಳಿತಾಗ ಅವನ ಹೆಂಡತಿ ಕೇಳಿದಳು – "ಇದೇನಿದು ಈಗ ಎದ್ದಿರೋ ರಂಪ ?"

ಚೌಧರಿ ಕಟುವಾಗಿ ಹೇಳಿದ – "ಏನು ನಾನು ರಂಪ ಎಬ್ಬಿಸಿದ್ದೀನೆಯೆ ?"

"ಮತ್ಯಾರು ? ತನ್ನ ಹತ್ತಿರ ಮಾಲು ಸ್ವಲ್ಪ ಮಾತ್ರ ಇದೆ, ಇದ್ದ

ರೂಪಾಯಿಯನ್ನೆಲ್ಲಾ ನೀವು ಇಸಕೊಂಡಿರಿ ಅಂತ ಮಗೂ ಆಣೆ ಮಾಡಿ ಹೇಳ್ತಾನೆ."

"ಇಸಕೊಳ್ಳದೇ ಏನು ಮಾಡಲಿ ? ಒಬ್ಬರ ಹಣಾನ ತೆಗೆದು ಇನ್ನೊಬ್ಬರಿಗೆ ದಾನ ಕೊಡೋಕ್ಕೆ ನನಗೆ ಇಷ್ಟವಿಲ್ಲ !"

"ಈಗ ಮರ್ಯಾದೆ ಮಣ್ಣಾಗ್ತಿದೆಯಲ್ಲ, ಅದು ಚೆನ್ನವೆ ?"

"ಅದಕ್ಕೆ ನಾನೇನು ಮಾಡಲಿ ಹೇಳು. ಐದು ವರ್ಷ ಆಗಿಹೋಯಿತು. ಬಾವಿ ತೋಡಿಸಬೇಕೋ ಬೇಡವೋ ?"

"ಇವತ್ತು ಅವನು ಊಟಾನೇ ಮಾಡಲಿಲ್ಲ. ಒಂದು ತುತ್ತು ಬಾಯಿಗಿಟ್ಟವನು ಹಾಗೆಯೇ ಎದ್ದುಬಿಟ್ಟ."

"ನೀನು ಅವನಿಗೆ ಬುದ್ಧಿ ಹೇಳಬೇಕಾಗಿತ್ತು. ಅನ್ನ ನೀರು ಬಿಟ್ಟು ಕೂತುಕೊಂಡರೆ ಏನು ರೂಪಾಯಿ ಬರುತ್ತೆಯೆ ?"

"ನೀವೇ ಯಾಕೆ ಹೇಳಬಾರದು ?"

"ಅವನು ಈಗ ನನ್ನನ್ನು ತನ್ನ ವೈರಿ ಅಂದುಕೊಂಡಿದಾನೆ !"

"ನಾನು ಹಣ ತೊಗೊಂಡು ಹೋಗಿ ಅವನಿಗೆ ಕೊಡ್ತೀನಿ. ಮುಂದೆ ಕೈಗೆ ಹಣ ಬಂದಾಗ ಬಾವಿ ತೋಡಿಸೋರಂತೆ."

"ಬ್ಯಾಡ, ಬ್ಯಾಡ, ಹಾಗೆಲ್ಲಾ ಅನರ್ಥ ಮಾಡಬೇಡ. ಮನೆ ಮಣ್ಣಾದರೂ ಸರಿ, ನಾನು ಇಷ್ಟು ದೊಡ್ಡ ನಂಬಿಕೆ ದ್ರೋಹ ಮಾಡೋಲ್ಲ."

ಆದರೆ ಹೆಂಡತಿ ಗಂಡನ ಮಾತಿಗೆ ಗಮನ ಕೊಡಲಿಲ್ಲ. ಅವಳು ಫಟ್ಟನೆ ಎದ್ದು ಕೋಣೆಯೊಳಗೆ ಹೋದಳು. ಇನ್ನೇನು ಚೀಲಕ್ಕೆ ಕೈ ಹಾಕಬೇಕೆನ್ನುವಷ್ಟರಲ್ಲಿ ಕಿಟ್ಟನೆ ಕಿರಿಚಿಕೊಂಡು ಹಿಂದೆ ಸರಿದಳು. ಅವಳ ಇಡೀ ದೇಹ ತಂತಿಯಂತೆ ಕಂಪಿಸತೊಡಗಿತು.

ಚೌಧರಿ ಗಾಬರಿಯಿಂದ ಕೇಳಿದ – "ಯಾಕೆ, ಏನಾಯಿತು ? ತಲೆ ಸುತ್ತು ಬಂತೆ ?"

ಹೆಂಡತಿ ಗೂಡಿನ ಕಡೆ ಭಯದಿಂದ ನೋಡುತ್ತ ಹೇಳಿದಳು – "ಅವಳು, ಆ ದೆವ್ವ, ಅಲ್ಲೇ ನಿಂತಿದ್ದಾಳೆ."

ಚೌಧರಿಯೂ ಗೂಡಿನ ಕಡೆ ನೋಡುತ್ತ ಹೇಳಿದ – "ಯಾವ ದೆವ್ವ ? ನನಗೇನೂ ಕಾಣಿಸೋಲ್ಲವೆ !"

"ನನ್ನೆದೆ ಹೊಡಕೊಳ್ತಿದೆ. ಆ ಮುದುಕಿ ನನ್ನ ಕೈ ಹಿಡಕೊಂಡಹಾಗಾಯ್ತು."

"ಇದೆಲ್ಲಾ ಭ್ರಮೆ. ಮುದುಕಿ ಸತ್ತು ಹತ್ತು ವರ್ಷವಾಯಿತು. ಅವಳಿನ್ನೂ ಅಲ್ಲಿ ಕೂತಿರ್ತಾಳೆಯೆ ?"

"ನಾನು ಸ್ಪಷ್ಟವಾಗಿ ನೋಡಿದೆ. ಅವಳೇಯೇ. ಮಗೂನೂ ಹೇಳ್ತಿದ್ದ, ರಾತ್ರಿ ಅವಳು ಚೀಲಕ್ಕೆ ಕೈ ಹಾಕಿದ್ದನ್ನ ನೋಡಿದನಂತೆ."

"ಅವನು ರಾತ್ರಿ ನನ್ನ ಕೊಠಡಿಗೆ ಯಾವಾಗ ಬಂದಿದ್ದ ?"

"ನಿಮ್ಮ ಹತ್ತಿರ ಹಣದ ವಿಷಯ ಏನೋ ಮಾತಾಡೋಕ್ಕೆ ಬಂದಿದ್ದನಂತೆ. ಅವಳನ್ನ ಕಂಡ ತಕ್ಷಣ ಓಡಿದನಂತೆ."

"ಒಳ್ಳೇದು, ಇನ್ನೊಂದು ಸಲ ಒಳಹೋಗು. ನಾನು ನೋಡ್ತಿರ್ತೀನಿ."

ಹೆಂಡತಿ ಕಿವಿ ಮುಚ್ಚಿಕೊಳ್ಳುತ್ತ ಹೇಳಿದಳು – "ಇಲ್ಲ, ಇಲ್ಲ. ನಾನು ಖಂಡಿತ ಆ ಕೊಠಡಿ ಒಳಗೆ ಕಾಲಿಡೋಲ್ಲ."

"ಒಳ್ಳೇದು ನಾನು ಹೋಗಿ ನೋಡ್ತೀನಿ."

ಚೌಧರಿ ಕೊಠಡಿಯೊಳಗೆ ಹೋಗಿ ಗೂಡಿನಿಂದ ಎರಡೂ ಚೀಲಗಳನ್ನು ಕೈಗೆತ್ತಿಕೊಂಡ. ಯಾವ ರೀತಿಯ ಶಂಕೆಯೂ ಇರಲಿಲ್ಲ. ಗೋವಮತಿಯ ನೆರಳಿನ ಹೆಸರು ಸಹ ಇರಲಿಲ್ಲ. ಹೆಂಡತಿ ಬಾಗಿಲ ಹತ್ತಿರ ನಿಂತು ನೋಡುತ್ತಿದ್ದಳು. ಚೌಧರಿ ಬಂದು ಜಂಬದಿಂದ ಹೇಳಿಕೊಂಡ – "ನನಗಂತೂ ಏನೂ ಕಾಣಿಸಲಿಲ್ಲ. ಅವಳು ಅಲ್ಲಿ ಇದ್ದಿದ್ದಾದರೆ ಎಲ್ಲಿ ಹೋದಳು ?"

"ನಿಮಗೆ ಯಾಕೆ ಕಾಣಿಸಲಿಲ್ಲ ಅಂತ ನನಗೇನು ಗೊತ್ತು. ನಿಮಗೂ ಅವಳಿಗೂ ಸ್ನೇಹವಿತ್ತು. ಅಂತಾನೇ ದೂರ ಸರಿದಳೋ ಏನೋ."

"ನಿನಗೆ ಬರೀ ಭ್ರಮೆ, ಬೇರೇನೂ ಇಲ್ಲ."

"ತಾಳಿ, ಮಗೂನ ಕರೆದು ಕೇಳ್ತೀನಿ"

"ನಾನು ನಿಂತಿದೀನಲ್ಲ. ನೀನೇ ಬಂದು ಯಾಕೆ ನೋಡಬಾರದು ?"

ಹೆಂಡತಿಗೆ ಸ್ವಲ್ಪ ನಂಬಿಕೆ ಬಂತು. ಗೂಡಿನ ಹತ್ತಿರ ಬಂದು ಅಂಜಂಜುತ್ತಲೇ ಕೈ ಚಾಚಿದಳು. ಆದರೆ ಜೋರಾಗಿ ಕಿರುಚುತ್ತ ಹೊರಗೋಡಿದಳು. ಅಂಗಳ ತಲಪುವವರೆಗೆ ಉಸಿರಾಡಲಿಲ್ಲ.

ಚೌಧರಿಯೂ ಅವಳೊಡನೆ ಅಂಗಳಕ್ಕೆ ಬಂದು ಆಶ್ಚರ್ಯದಿಂದ ಕೇಳಿದ – "ಏನು, ಏನಾಯಿತು ? ನೀನು ಸುಮ್ಮಸುಮ್ಮನೆ ಓಡಿಬಂದೆ. ನನಗಂತೂ ಏನೂ ಕಾಣಿಸಲಿಲ್ಲ."

ಹೆಂಡತಿ ಏದುಸಿರು ಬಿಡುತ್ತ ತಿರಸ್ಕಾರದ ಧ್ವನಿಯಲ್ಲಿ ಹೇಳಿದಳು – "ನಡೀರಿ, ನೀವು ದೂರ. ನಿಮ್ಮ ಮಾತು ಕೇಳಿಕೊಂಡು ನನ್ನ ಪ್ರಾಣಾನೇ ಹೋಗ್ತಿತ್ತು. ನಿಮ್ಮ ಕಣ್ಣಿಗೆ ಏನಾಗಿದೆಯೋ ಗೊತ್ತಿಲ್ಲ. ಆ ಪಿಶಾಚಿ ಅಲ್ಲೇ ನಿಂತಿದಾಳೆ."

ಅಷ್ಟರಲ್ಲಿ ಹರನಾಥನೂ ಅಲ್ಲಿ ಬಂದ. ತಾಯಿ ಅಂಗಳದಲ್ಲಿ ಬಿದ್ದಿರುವುದನ್ನು ನೋಡಿ ಹೇಳಿದ – "ಯಾಕವ್ವ, ಏನಾಯ್ತು ? ಹುಷಾರಾಗಿದಿ ತಾನೆ ?"

"ಇವತ್ತು ಆ ಪಿಶಾಚಿ ಎರಡು ಸಲ ಕಾಣಿಸಿಕೊಂಡಳು. 'ಕೊಡಿ, ಆ ಹಣ ತೊಗೊಂಡು ನಿನಗೆ ಕೊಡ್ತೀನಿ, ಮತ್ತೆ ಕೈಯಲ್ಲಿ ಹಣ ಕೂಡಿದಾಗ ಬಾವಿ ತೋಡಿಸಿದರಾಯಿತು' ಅಂತ ಅಂದೆ. ಆದರೆ ಚೀಲಕ್ಕೆ ಕೈಹಾಕಿದಾಗ ಆ ಪಿಶಾಚಿ ನನ್ನ ರಟ್ಟೆ ಹಿಡಿದುಕೊಂಡಳು. ಪ್ರಾಣ ಹೋದಹಾಗೆ ಆಯ್ತು."

ಹರನಾಥ ಹೇಳಿದ – "ಯಾವನಾದರೂ ಸರಿಯಾದ ಓಝ*ನ್ನ ಕರಸಿ ಅವಳನ್ನ ಓಡಿಸಬೇಕು."

ಚೌಧರಿ ಕೇಳಿದ – "ಏನು ರಾತ್ರಿ ನಿನಗೂ ಕಾಣಿಸಿಕೊಂಡಿದ್ದಳೆ ?"

---

*ಮಂತ್ರಮಾಟಗಳಿಂದ ದೆವ್ವಭೂತ ಓಡಿಸುವ ವೃತ್ತಿಯವನು.

"ಹೌದು, ಯಾವದೋ ವಿಷಯದಲ್ಲಿ ನಿಮ್ಮ ಸಲಹೆ ಕೇಳೋಣಾಂತ ನಿಮ್ಮ ಕೊಠಡೀಗೆ ಬಂದೆ. ಒಳಗೆ ಕಾಲಿಟ್ಟ ತಕ್ಷಣ ಆ ಪಿಶಾಚಿ ಗೂಡಿನ ಹತ್ತಿರ ನಿಂತಿದ್ದದ್ದು ಕಾಣಿಸಿತು. ಮೈಮೇಲೆ ಎಚ್ಚರ ತಪ್ಪಿ ಓಡಿದೆ."

"ಒಳ್ಳೇದು, ಈಗ ಅಲ್ಲಿಗೆ ಹೋಗಿ ಬಾ, ನೋಡೋಣ."

"ಯಾರಾದರೂ ಲಕ್ಷ ರೂಪಾಯಿ ಕೊಟ್ಟರೂ ನಾನು ಇವನಿಗೆ ಅಲ್ಲಿ ಹೋಗೋಕ್ಕೆ ಬಿಡೋಲ್ಲ." – ತಾಯಿ ಹೇಳಿದಳು.

"ನಾನು ಹೋಗೋಲ್ಲ!" – ಹರನಾಥ ಹೇಳಿದ.

"ನನಗೇನೂ ಕಾಣಿಸೋಲ್ಲವೆ? ಏನು ಸಂಗತಿ ಇದು?"

"ಯಾರಿಗೆ ಗೊತ್ತು ನಿಮಗೆ ಹೆದರುತ್ತೆ ಅಂತ ಕಾಣುತ್ತೆ. ಇವತ್ತು ಯಾವನಾದರೂ ಓಝನ್ನ ಕರೆಸಲೇಬೇಕು."

ಚೌಧರಿ ಮಾತು ಮುಂದುವರಿಸಿದ – "ಇದೇನು ಸಂಗತಿ ಅಂತ ಹೊಳೀತಿಲ್ಲ. ಬೈಜೂ ಪಾಂಡೇದು ಡಿಕ್ರಿ ಏನಾಯ್ತು?"

ಈಚೀಚೆಗೆ ಹರನಾಥನಿಗೆ ಅಪ್ಪನ ಬಗ್ಗೆ ಎಷ್ಟರ ಮಟ್ಟಿಗೆ ದ್ವೇಷವಿತ್ತೆಂದರೆ ಅಂಗಡಿಯ ಸುದ್ದಿಯೊಂದನ್ನೂ ಅವನಿಗೆ ಹೇಳುತ್ತಿರಲಿಲ್ಲ. ಅಂಗಳದ ಕಡೆ ನೋಡುತ್ತ ಗಾಳಿಗೆ ಹೇಳುವವನಂತೆ ಹೇಳಿದ – "ಏನಾಗೋದಿದೆಯೋ ಆಗುತ್ತೆ. ಹೆಚ್ಚು ಅಂದರೆ ನನ್ನ ಪ್ರಾಣ ತೊಗೋತಾನೆ. ಇನ್ನೇನು ತಾನೆ ತೊಗೊಂಡಾನು? ನುಂಗಿದ್ದನ್ನ ಉಗುಳೋಕ್ಕಾಗುತ್ತೆಯೆ?"

"ಅವನು ಡಿಕ್ರಿ ಜಾರಿ ಮಾಡಿದರೆ?"

"ಮಾಡಿದರೆ ಮಾಡಲಿ. ಅಂಗಡೀಲಿ ನಾನೂರು ಐನೂರು ರೂಪಾಯಿನ ಮಾಲಿದೆ. ಅದು ಹರಾಜಾಗುತ್ತೆ."

"ವ್ಯಾಪಾರವೆಲ್ಲಾ ಹಾಳಾಗಿಹೋಗುತ್ತೆ."

"ವ್ಯಾಪಾರ, ವ್ಯಾಪಾರ ಅಂತ ಎಲ್ಲೀತನಕ ಗೋಳಾಡೋದು. ನೀವು ಇಷ್ಟು ಬೇಗ ಬಾವಿ ತೋಡಿಸೋರಿದೀರಿ ಅಂತ ಮೊದಲೇ ಗೊತ್ತಿದ್ದಿದ್ದರೆ ಈ ಕೆಲಸಕ್ಕೇ ಕೈ ಹಾಕ್ತಿರಲಿಲ್ಲ. ಹೇಗೂ ಉಪ್ಪುಗಂಜೀಗೆ ಕಷ್ಟವಿರಲಿಲ್ಲ. ಈಗ ಹೆಚ್ಚೂ ಅಂದರೆ ನಾಲ್ಕಾರು ತಿಂಗಳು ಜೈಲಿನಲ್ಲಿರಬೇಕಾಗುತ್ತೆ. ಅದಕ್ಕೂ ಹೆಚ್ಚು ಏನು ತಾನೇ ಆಗುತ್ತೆ?"

ತಾಯಿ ಹೇಳಿದಳು – "ನಿನ್ನನ್ನ ಜೈಲಿಗೆ ಹಾಕಿಸೋನ ಮುಖ ಸುಟ್ಟುಹಾಕೇನು! ನಾವು ಬದುಕಿರುವಾಗಲೇ ನೀನು ಜೈಲಿಗೆ ಹೋಗೋಣ ಅಂದರೇನು?"

ಹರನಾಥ ವೇದಾಂತಿಯಂತೆ ಹೇಳಿದ – "ಅಪ್ಪ ಅಮ್ಮ ಬದುಕಿಗೆಮ ಜೊತೆಯಾಗ್ತಾರೆಯೇ ಹೊರತು, ನಮ್ಮ ಕರ್ಮಕ್ಕೆ ಜೊತೆಯಾಗ್ತಾರೆಯೆ?"

ಚೌಧರಿಗೆ ಮಗನ ಮೇಲೆ ಗಾಢವಾದ ಪ್ರೇಮವಿತ್ತು. ಹರನಾಥ ಹಣವನ್ನು ನುಂಗಿ ಹಾಕುವ ಇಚ್ಛೆಯಿಂದ ಇವತ್ತು ನಾಳೆಯೆಂಬ ನೆಪ ಹೇಳುತ್ತಿದ್ದಾನೆಂದು ಅವನಿಗೆ ಅನುಮಾನ ಬಂದಿತ್ತು. ಆ ಕಾರಣ ಒತ್ತಾಯದಿಂದ ಹಣ ವಸೂಲು ಮಾಡಿದ್ದ. ಹರನಾಥನಿಗೆ ನಿಜವಾಗಿಯೂ ಪ್ರಾಣ ಸಂಕಟಕ್ಕಿಟ್ಟುಕೊಂಡಿದೆಯೆಂದು ಈಗ

ಗೊತ್ತಾಯಿತು. ಅವನು ಯೋಚಿಸಿದ – "ಅಂಗಡಿ ಜಪ್ತಾಗಿ, ಮಗನಿಗೆ ಜೈಲಾದರೆ ಮನೆಯ ಮರ್ಯಾದೆ ಮಣ್ಣು ಪಾಲಾಗುತ್ತೆ. ಗೋಮತಿಯ ಹಣವನ್ನೇ ಅವನಿಗೆ ಮತ್ತೆ ಕೊಟ್ಟರೆ ಹೇಗೆ? ಅಂಗಡಿ ನಡೆಯುತ್ತಿದ್ದರೆ ಒಂದಲ್ಲ ಒಂದು ದಿನ ಹಣ ವಾಪಸು ಬಂದೇ ಬರುತ್ತೆ."

ಇದ್ದಕ್ಕಿದ್ದಂತೆ ಹೊರಗಿನಿಂದ ಯಾರೋ 'ಹರನಾಥಸಿಂಹ' ಎಂದು ಕೂಗಿದರು. ಹರನಾಥನ ಮುಖ ಬಿಳಿಚಿಕೊಂಡಿತು. ಚೌಧರಿ ಕೇಳಿದ – "ಯಾರದು?"

"ಜಪ್ತಿಯ ಅಮೀನ!"

"ಏನು, ಅಂಗಡಿಯ ಜಪ್ತಿಗೆ ಬಂದಿದಾನೆಯೆ?"

"ಹೌದು ಅಂತ ಕಾಣುತ್ತೆ."

"ಎಷ್ಟು ರೂಪಾಯಿಗೆ ಡಿಕ್ರಿಯಾಗಿದೆ?"

"ಸಾವಿರದ ಇನ್ನೂರಕ್ಕೆ."

"ಅಮೀನಿನ ಕೈಗೆ ಏನಾದರೂ ಹಾಕಿದರೆ ಅವನು ತಡೀಲಾರನೆ?"

"ತಡೀಬಹುದು. ಆದರೆ ಸಾಹುಕಾರ ಅವನ ಜೊತೆಗಿರ್ತಾನೆ. ತಿನ್ನೋದನ್ನೆಲ್ಲಾ ಅವನಿಂದ ತಿಂದಿರ್ತಾನೆ!"

"ಹೋಗಲಿ, ಗೋಮತಿಯ ಹಣದಿಂದ ಸಾವಿರದ ಇನ್ನೂರು ರೂಪಾಯಿ ಕೊಟ್ಟು ಬಿಡು."

"ಅವಳ ಹಣಾನ ಯಾರು ಮುಟ್ಟೋರು? ಮನೇಗೆ ಯಾವ ವಿಪತ್ತು ಬಂದು ಬಡಿಯುತ್ತೇ ಅಂತ ಯಾರಿಗೆ ಗೊತ್ತು?"

"ಅವಳ ಹಣಾನ ಏನು ನುಂಗಿಹಾಕ್ತಿದೀವೆಯೆ? ನಡಿ, ನಾನೇ ಹೋಗಿ ತಂದು ಕೊಡ್ತೀನಿ."

ತನಗೂ ಗೋಮತಿಯ ಪಿಶಾಚಿ ಕಾಣಿಸಿಕೊಂಡರೆ ಹೇಗೆ ಎಂದು ಚೌಧರಿಗೆ ಭಯವಾಯಿತು. ಆದರೆ ಆ ಅನುಮಾನಕ್ಕೆ ಜುಡವಿರಲಿಲ್ಲ. ಅವನು ಚೀಲದಿಂದ ಸಾವಿರದ ಇನ್ನೂರು ರೂಪಾಯಿ ತೆಗೆದುಕೊಟ್ಟ. ಸಂಜೆಯ ಹೊತ್ತಿಗೆ ಒಟ್ಟು ಎರಡು ಸಾವಿರ ರೂಪಾಯಿಗಳ ಮೊತ್ತದಲ್ಲಿ ಒಂದು ಕಾಸೂ ಉಳಿದಿರಲಿಲ್ಲ!

## 4

ಹನ್ನೆರಡು ವರ್ಷ ಕಳೆದಿವೆ. ಈಗ ಚೌಧರಿಯೂ ಬದುಕಿಲ್ಲ, ಹರನಾಥನೂ ಬದುಕಿಲ್ಲ. ಬದುಕಿರುವವರೆಗೆ ಚೌಧರಿಗೆ ಬಾವಿಯ ಚಿಂತೆ ಅಂಟಿಕೊಂಡಿತ್ತು. ಸಾಯುವ ಹೊತ್ತಿನಲ್ಲಿ ಸಹ ಅವನ ಬಾಯಿ 'ಬಾವಿ' 'ಬಾವಿ' ಎಂದೇ ಜಪಿಸುತ್ತಿತ್ತು. ಆದರೆ ಅಂಗಡಿಯಲ್ಲಿ ಹಣದ ಕೊರತೆಯಿಲ್ಲದ ದಿನವೇ ಇರಲಿಲ್ಲ. ಚೌಧರಿ ಸತ್ತೊಡನೆಯೇ ವ್ಯಾಪಾರವೆಲ್ಲಾ ಮಣ್ಣುಗೂಡಿತು. ಹರನಾಥ ಆಣೆ ರೂಪಾಯಿಗಳ ಲಾಭದಿಂದ ತೃಪ್ತನಾಗದೆ ಎರಡು ಮೂರು ಪಟ್ಟು ಲಾಭದ ವ್ಯವಹಾರಕ್ಕೆ ಕೈಹಾಕಿದ

ಜೂಜಾಡಲು ಮೊದಲು ಮಾಡಿದ. ವರ್ಷ ಕಳೆಯುವುದರೊಳಗೆ ಅಂಗಡಿ ಮುಚ್ಚಿತು. ಒಡವೆ – ಬಟ್ಟೆ, ಪಾತ್ರೆ – ಪಡಗ ಎಲ್ಲವೂ ಮಣ್ಣು ಪಾಲಾದವು. ಚೌಧರಿ ಸತ್ತ ಒಂದು ವರ್ಷಕ್ಕೆ ಸರಿಯಾಗಿ ಹರನಾಥನೂ ಈ ಲಾಭ–ನಷ್ಟಗಳ ಪ್ರಪಂಚ ಬಿಟ್ಟು ಪ್ರಯಾಣ ಮಾಡಿದ. ತಾಯಿಯ ಬದುಕಿಗೆ ಏನೂ ಆಸರೆ ಇಲ್ಲದಂತಾಯಿತು. ಅವಳು ಕಾಹಿಲೆ ಬಿದ್ದಳು. ಔಷಧೋಪಚಾರಕ್ಕೆ ಗತಿಯಿಲ್ಲದಂತಾಯಿತು. ಮೂರು ನಾಲ್ಕು ತಿಂಗಳ ಕಾಲ ನಾನಾ ಪ್ರಕಾರದ ಕಷ್ಟ ಅನುಭವಿಸಿ ಅವಳೂ ಹೊರಟಳು. ಇನ್ನು ಉಳಿದಿದ್ದವಳೆಂದರೆ ಹರನಾಥನ ಹೆಂಡತಿ. ಆಗ ಅವಳು ಗರ್ಭಿಣಿ. ಆ ಬಡಪಾಯಿಗೆ ಯಾವ ಆಧಾರವೂ ಇರಲಿಲ್ಲ. ಅವಳ ಆ ಸ್ಥಿತಿಯಲ್ಲಿ ಕೂಲಿನಾಲಿಯನ್ನೂ ಮಾಡುವಂತಿರಲಿಲ್ಲ. ನೆರೆಹೊರೆಯವರ ಬಟ್ಟೆ ಹೊಲಿದುಕೊಟ್ಟು ಹೇಗೋ ಐದಾರು ತಿಂಗಳು ಕಳೆದಳು. ಗಂಡು ಮಗುವಾಗುತ್ತದೆಂದುಕೊಂಡಿದ್ದಳು. ಲಕ್ಷಣವೆಲ್ಲಾ ಹಾಗೇ ಇತ್ತು. ಆ ಆಸೆಯೊಂದೇ ಅವಳ ಬದುಕಿನ ಆಧಾರವಾಗಿತ್ತು. ಆದರೆ ಹುಟ್ಟಿದ್ದು ಹೆಣ್ಣು. ಇದ್ದ ಆಧಾರವೂ ಉರುಳಿಬಿತ್ತು. ಅವಳು ಮಗುವಿಗೆ ಮೊಲೆ ಕೊಡದಷ್ಟೂ ಹೃದಯವನ್ನು ಕಲ್ಲು ಮಾಡಿಕೊಂಡಳು. ಆದರೆ ನೆರೆಹೊರೆಯವರು ಎಷ್ಟೋ ಹೇಳಿದ ಮೇಲೆ ಮೊಲೆ ಕೊಟ್ಟಳು. ಆದರೆ ಅಲ್ಲಿ ಒಂದು ಹನಿಯಾದರೂ ಹಾಲಿರಲಿಲ್ಲ. ಆಗ ಆ ದುರ್ಭಾಗ್ಯೆಯ ಹೃದಯದಲ್ಲಿ ಕರುಣೆ, ವಾತ್ಸಲ್ಯ, ಮೋಹಗಳ ಒಂದು ಭಾರೀ ಭೂಕಂಪವೇ ಆಯಿತು. ಹೇಗಾದರೂ ಎದೆಯಲ್ಲಿ ತೊಟ್ಟಾದರೂ ಹಾಲು ಬಂದಿದ್ದಿದ್ದರೆ ತಾನು ಧನ್ಯಳೆಂದುಕೊಳ್ಳುತ್ತಿದ್ದಳು.

ಮಗುವಿನ ಆ ಮುಗ್ಧ, ದೀನ, ಯಾಚನಾಮಯ, ಹಸಿವಿನ ಚಿತ್ರವನ್ನು ನೋಡಿದಾಗ ಅವಳ ತಾಯಿಕರುಳಿಗೆ ನೂರು ಕಣ್ಣುಗಳಿಂದ ಒಮ್ಮೆಲೇ ಅತ್ತ ಅನುಭವವಾಗುತ್ತಿತ್ತು. ಅವಳ ಹೃದಯದಲ್ಲಿನ ಎಲ್ಲ ಶುಭಾಶಯಗಳೂ ಹಾರೈಕೆಗಳೂ ಪ್ರೀತಿ ಅನುರಾಗಗಳೂ ಕಣ್ಣಿನ ಮೂಲಕ ಇಳಿದುಬಂದು ಚಂದ್ರನ ಶೀತಲ ಪ್ರಕಾಶ ಹೂಗಳನ್ನು ರಂಜಿಸುವಂತೆ ಮಗುವನ್ನು ರಂಜಿಸುತ್ತಿದ್ದವು. ಆದರೆ ಮಗುವಿನ ಭಾಗ್ಯದಲ್ಲಿ ಮಾತೃಪ್ರೇಮದ ಸುಖ ಬರೆದಿರಲಿಲ್ಲ. ಹೊರಹಾಲಿನ ಜೊತೆಗೆ ತನ್ನ ಕಣ್ಣೀರು ಬೆರಸಿ ಮಗುವನ್ನು ಬದುಕಿಸಿದಳು. ಆದರೆ ದಿನೇ ದಿನೇ ಅವಳ ಸ್ಥಿತಿ ಹದಗೆಡುತ್ತ ಹೋಯಿತು.

ಒಂದು ದಿನ ಊರ ಜನ ಬಂದು ನೋಡಿದಾಗ ಅವಳು ನೆಲದ ಮೇಲೆ ಬಿದ್ದುಕೊಂಡಿದ್ದಳು. ಮಗು ಅವಳೆದೆಗೆ ಅಂಟಿಕೊಂಡು ಮೊಲೆ ಚೀಪುತ್ತಿತ್ತು. ದುಃಖ–ದಾರಿದ್ರ್ಯಗಳಿಂದ ನಶಿಸಿಹೋಗಿದ್ದ ಆ ಶರೀರದಲ್ಲಿ ರಕ್ತವೆಲ್ಲಿಂದ ಬರಬೇಕು, ಹಾಲಾಗಲು !

ನೆರೆಹೊರೆಯವ ದಯಾಭಿಕ್ಷೆಯ ಮೇಲೆ ಮಗು ಬೆಳೆದು ಹುಡುಗಿಯಾದಳು. ಒಂದು ದಿನ ಆ ಹುಡುಗಿ ಹುಲ್ಲು ಕೀಳುತ್ತ ಕೀಳುತ್ತ ಮುದಿ ಗೋಮತಿ ವಾಸಿಸುತ್ತಿದ್ದ ಮನೆಯ ಜಾಗಕ್ಕೆ ಬಂದಳು. ಮನೆಯ ಹಂದರ ಎಂದೋ ಪಂಚಭೂತಗಳೊಡನೆ ಒಂದಾಗಿತ್ತು. ಅಲ್ಲಲ್ಲಿ ಮುರುಕುಗೋಡೆಯ ತುಂಡುಗಳು ಅಲ್ಲಿ ಮನೆಯಿದ್ದುದರ

ಚಿಹ್ನೆಯಾಗಿ ಉಳಿದಿದ್ದವು. ಹುಡುಗಿ ಇದ್ದಕ್ಕಿದ್ದಂತೆ ಅಲ್ಲಿ ಹುಲ್ಲು ಕೀಳುವ ಕುರ್ಚಿಗೆಯಿಂದ ಹೊಂಡ ತೆಗೆಯಲು ಷುರು ಮಾಡಿದಳು. ಹುಡುಗಿಗೆ ಅನ್ನ ನೀರಿನ ಯೋಚನೆಯಿರಲಿಲ್ಲ, ಯಾವ ಶಂಕೆ ಭಯಗಳೂ ಇರಲಿಲ್ಲ. ಕತ್ತಲಾಯಿತು.ಅವಳು ಕೂತುಕೂತಿದ್ದಂತೆಯೇ ಹೊಂಡ ತೆಗೆಯುತ್ತಿದ್ದಳು. ಆ ಹೊತ್ತಿನಲ್ಲಿ ಊರಿನ ರೈತಜನ ಮರೆತು ಸಹ ಆ ಕಡೆ ಕಾಲಿಡುತ್ತಿರಲಿಲ್ಲ. ಆದರೆ ಹುಡುಗಿ ಯಾವ ಅಂಜಿಕೆಯೂ ಇಲ್ಲದೆ ಮಣ್ಣು ತೋಡುತ್ತಿದ್ದಳು. ಕತ್ತಲಾದ ಮೇಲೆ ಅಲ್ಲಿಂದ ಎದ್ದಳು.

ಮಾರನೆಯ ದಿನ ಅವಳು ಹೊತ್ತಿಗೆ ಮುಂಚೆಯೇ ಎದ್ದು ಇಡೀ ದಿನದಲ್ಲಿ ಕೀಳದಷ್ಟು ಹುಲ್ಲು ಕಿತ್ತಳು. ಮಧ್ಯಾಹ್ನದ ಮೇಲೆ ತನ್ನ ಕುರ್ಚಿಗೆ, ಮಕರಿಗಳೊಡನೆ ಅದೇ ಪಾಳು ಜಾಗಕ್ಕೆ ಬಂದಳು. ಆದರೆ ಅವಳು ಒಂಟಿಯಾಗಿರಲಿಲ್ಲ. ಜೊತೆಗೆ ಇಬ್ಬರು ಹುಡುಗರಿದ್ದರು. ಮೂವರೂ ಸಂಜೆಯ ತನಕ ಬಾವಿ ತೋಡುವ ಆಟ ಆಡುತ್ತಿರುವವರಂತೆ ನೆಲ ತೋಡುತ್ತಿದ್ದರು. ಹುಡುಗಿ ಹೊಂಡದೊಳಗೆ ಇಳಿದು ಅಗೆಯುತ್ತಿದ್ದಳು, ಹುಡುಗರಿಬ್ಬರೂ ಮಣ್ಣೆತ್ತಿ ಎತ್ತಿ ಹೊರಹಾಕುತ್ತಿದ್ದರು.

ಮೂರನೆಯ ದಿನ ಇನ್ನೂ ಇಬ್ಬರು ಹುಡುಗರು ಆಟಕ್ಕೆ ಸೇರಿಕೊಂಡರು. ಸಂಜೆಯವರೆಗೂ ಆಟ ನಡೆಯುತ್ತಿತ್ತು. ಇವತ್ತು ಹೊಂಡ ಎರಡು ಮಾರಿನಷ್ಟು ಆಳವಾಗಿತ್ತು. ಊರ ಹುಡುಗ ಹುಡುಗಿಯರಿಗೆ ಈ ವಿಲಕ್ಷಣ ಆಟದಿಂದ ಉತ್ಸಾಹ ಮೂಡಿತ್ತು.

ನಾಲ್ಕನೆಯ ದಿನ ಇನ್ನೂ ಅನೇಕ ಹುಡುಗರು ಸೇರಿಕೊಂಡರು. ಹೊಂಡದೊಳಗೆ ಯಾರಿರಬೇಕು. ಯಾರು ಮಣ್ಣೆತ್ತಬೇಕು ಎಂಬ ಬಗ್ಗೆ ಅವರವರಲ್ಲೇ ಚರ್ಚೆಯಾಯಿತು. ಹೊಂಡ ನಾಲ್ಕು ಮಾರು ಆಳವಾಯಿತು. ಆದರೂ ಸಹ, ಹುಡುಗರ ವಿನಹ ದೊಡ್ಡವರು ಯಾರಿಗೂ ಅದರ ಸುದ್ದಿ ತಿಳಿದಿರಲಿಲ್ಲ.

ಒಂದು ದಿನ ರಾತ್ರಿ ಒಬ್ಬ ರೈತ ತಪ್ಪಿಸಿಕೊಂಡಿದ್ದ ತನ್ನ ಎಮ್ಮೆಯನ್ನು ಹುಡುಕಿಕೊಂಡು ಆ ಪಾಳಿಗೆ ಬಂದ. ಪಾಳಿನ ನಡುವೆ ಎತ್ತರವಾದ ಒಂದು ಮಣ್ಣಿನ ಗುಡ್ಡ, ಬದಿಯಲ್ಲಿ ದೊಡ್ಡ ಹೊಂಡ, ಮಿಣುಕುಮಿಣುಕಾಗಿ ಉರಿಯುತ್ತಿದ್ದ ದೀಪಗಳನ್ನು ನೋಡಿ ಹೆದರಿ ಓಡಿದ. ಆಮೇಲೆ ಇತರ ಎಷ್ಟೋ ಜನ, ಅವರಲ್ಲಿ ಹಲವರು ಗಂಡಸರು, ಅಲ್ಲಿಗೆ ಬಂದು ನೋಡಿದರು. ಭಯಕ್ಕೆ ಕಾರಣವಿರಲಿಲ್ಲ. ಹತ್ತಿರ ಬಂದು ನೋಡುವಾಗ ಹುಡುಗಿ ಅಲ್ಲಿ ಕುಳಿತಿದ್ದುದು ಕಂಡಿತು.

ಒಬ್ಬ ಕೇಳಿದ – "ಏನಮ್ಮೀ, ಈ ಹೊಂಡ ನೀನು ತೆಗೆದೆಯಾ ?"

ಹುಡುಗಿ ಹೌದೆಂದಳು.

"ಹೊಂಡ ತೆಗೆದು ಏನು ಮಾಡ್ತೀ ?"

"ಬಾವಿ ತೋಡ್ತೀನಿ."

"ಬಾವಿ ಹೇಗೆ ತೋಡ್ತಿ ?"

"ಹೇಗೆ ಇಷ್ಟು ತೋಡಿದೆನೋ ಹಾಗೇನೇ ಇನ್ನಷ್ಟು ತೋಡ್ತೀನಿ. ಊರ ಕಟ್ಟುಮಸ್ತಾದ ಹುಡುಗರು ಇಲ್ಲಿ ಆಟಕ್ಕೆ ಅಂತ ಬಂದು ತೋಡ್ತಾರೆ."

“ನೀನೂ ಪ್ರಾಣ ಕೊಡ್ತಿ, ಹುಡುಗರ ಪ್ರಾಣಾನೂ ತೊಗೋತಿ. ನಾಳೆಯಿಂದ ಇನ್ನು ತೋಡಿಗೀಡಿದರೆ ಹುಷಾರ್.”

ಮಾರನೆಯ ದಿನ ಉಳಿದ ಹುಡುಗರು ಬರಲಿಲ್ಲ. ಹುಡುಗಿಯೂ ದಿನವಿಡೀ ಕೂಲಿ ಮಾಡುತ್ತಿದ್ದಳು. ಆದರೆ ಸಂಜೆ ಅಲ್ಲಿ ಎಂದಿನಂತೆ ದೀಪ ಹೊತ್ತಿತ್ತು. ಹುಡುಗಿ ಕುರ್ಚಿಗೆ ಹಿಡಿದುಕೊಂಡು ಅಲ್ಲಿ ಕುಳಿತಿದ್ದುದು ಕಾಣಿಸಿತು.

ಹಳ್ಳಿಯವರು ಅವಳನ್ನು ಬೈದರು, ಹೊಡೆದರು. ಕೋಣೆಯಲ್ಲಿ ಕೂಡಿಹಾಕಿದರು. ಆದರೆ ಅವಕಾಶ ಸಿಕ್ಕಿದೊಡನೆಯೇ ಅವಳು ಪಾಳಿಗೆ ಬಂದುಬಿಡುತ್ತಿದ್ದಳು.

ಸಾಧಾರಣವಾಗಿ ಹಳ್ಳಿಯ ಜನ ಶ್ರದ್ಧಾವಂತರು. ಹುಡುಗಿಯ ಈ ಅಲೌಕಿಕ ಮೋಹ ಕೊನೆಗೆ ಅವರಲ್ಲಿಯೂ ಮೋಹ ಹುಟ್ಟಿಸಿತು. ಸ್ವತಃ ಅವರೇ ಬಾವಿ ತೋಡುವುದನ್ನು ಮುಂದುವರಿಸಿದರು.

ಈ ಕಡೆ ಇವರು ಬಾವಿ ತೋಡುತ್ತಿದ್ದರೆ ಆ ಕಡೆ ಹುಡುಗಿ ಮಣ್ಣಿಂದ ಇಟ್ಟಿಗೆ ಮಾಡುತ್ತಿದ್ದಳು. ಈ ಆಟದಲ್ಲಿ ಊರ ಹುಡುಗರೆಲ್ಲರೂ ಸೇರಿದ್ದರು. ಬೆಳದಿಂಗಳ ರಾತ್ರಿಯಲ್ಲಿ ಎಲ್ಲರೂ ಮಲಗಿದ ಮೇಲೆ ಆ ಹುಡುಗಿ ಇಟ್ಟಿಗೆ ತಟ್ಟುತ್ತಿರುವುದು ಕಾಣಿಸುತ್ತಿತ್ತು. ಅವಳಿಗೆ ಇಷ್ಟರ ಮಟ್ಟಿನ ತತ್ಪರತೆ ಎಲ್ಲಿಂದ ಬಂತೋ ಯಾರು ಬಲ್ಲರು? ಏಳು ವರ್ಷದ ವಯಸ್ಸೂ ವಯಸ್ಸೇ? ಆದರೆ ಆ ಏಳು ವರ್ಷದ ಹುಡುಗಿ ಮಾತುಬುದ್ಧಿಗಳಲ್ಲಿ ತನ್ನ ಮೂರು ಪಟ್ಟು ವಯಸ್ಸಿನವರನ್ನು ಸೋಲಿಸುತ್ತಿದ್ದಳು.

ಕೊನೆಗೆ ಬಾವಿ ತೋಡಿ ಮುಗಿದು, ಸುತ್ತಲ ಕಟ್ಟೆಯೂ ಸಿದ್ಧವಾಗುವ ದಿನ ಬಂತು. ಹುಡುಗಿ ಅವತ್ತು ಆ ಕಟ್ಟೆಯ ಮೇಲೆಯೇ ಮಲಗಿದಳು. ಅವತ್ತು ಅವಳ ಹರ್ಷಕ್ಕೆ ಎಣೆಯಿರಲಿಲ್ಲ. ಹಾಡುತ್ತಿದ್ದಳು, ಹಕ್ಕಿಯಂತೆ ಚಿಲಿಪಿಲಿಗುಟ್ಟುತ್ತಿದ್ದಳು.

ಬೆಳಗ್ಗೆ ಎದ್ದು ನೋಡುವಾಗ ಅಲ್ಲಿ ಅವಳ ಹೆಣ ಬಿದ್ದಿತ್ತು. ಅವತ್ತಿನಿಂದ ಹಳ್ಳಿಯ ಜನ ಅವಳು ಮುದಿ ಗೋಮತಿಯೇ ಇರಬೇಕು ಎಂದು ಹೇಳತೊಡಗಿದರು. ಆ ಬಾವಿಗೆ ‘ಹಿಟ್ಟಿನ ಗೋಮತಿಯ ಬಾವಿ’ ಎಂದೇ ಹೆಸರಾಯಿತು.

# 12. ಮಾಗಿಯ ರಾತ್ರಿ

ಹಲ್ಯಾ ಒಳಬಂದು ಹೆಂಡತಿಗೆ ಹೇಳಿದ – "ಸಹನಾ ಬಂದಿದ್ದಾನೆ. ಇಟ್ಟಿರೋ ಹಣಾನ ಅವನಿಗೆ ಕೊಟ್ಟುಬಿಡ್ತೀನಿ, ಕೊಡು. ಹೇಗಾದರೂ ತಲೆ ಉಳಿದರೆ ಸಾಕು."

ಮುನ್ನೀ ಕಸ ಗುಡಿಸುತ್ತಿದ್ದವಳು ಹಿಂತಿರುಗಿ ನೋಡಿ ಹೇಳಿದಳು – "ಇರೋದೇ ಮೂರು ರೂಪಾಯಿ. ಅದನ್ನೂ ಕೊಟ್ಟುಬಿಟ್ಟರೆ ಕಂಬಳಿ ಎಲ್ಲಿಂದ ಬರುತ್ತೆ? ಕಣದಲ್ಲಿ ಮಾಗಿಯ ರಾತ್ರಿ ಕಳೆಯೋದು ಹೇಗೆ? ಫಸಲು ಬಂದ ಮೇಲೆ ಹಣ ಕೊಡ್ತೀವಿ, ಈಗಿಲ್ಲ ಅಂತ ಅವನಿಗೆ ಹೇಳಿ ಕಳಿಸಿ."

ಹಲ್ಯಾ ಒಂದು ಕ್ಷಣ ಅನಿಶ್ಚಿತನಾಗಿ ನಿಂತಿದ್ದ. ಚಳಿಗಾಲ ತಲೆಯ ಮೇಲೆ ಬಂದು ಕುಳಿತಿದೆ. ಕಂಬಳಿಯಿಲ್ಲದೇ ಗದ್ದೆಯಲ್ಲಿ ರಾತ್ರಿಯ ಹೊತ್ತು ಮಲಗುವುದಾಗುವುದಿಲ್ಲ. ಆದರೆ ಸಹನಾ ಒಪ್ಪುವುದಿಲ್ಲ. ಬೈಯುತ್ತಾನೆ, ಬೆದರಿಕೆ ಹಾಕುತ್ತಾನೆ. ಚಳಿಯಲ್ಲಿ ಸತ್ತರೂ ಪರವಾಗಿಲ್ಲ, ತಲೆಯ ಮೇಲಿರೋ ಗಂಡಾಂತರ ತಪ್ಪುತ್ತೆ. ಹೀಗೆ ಯೋಚಿಸುತ್ತ ಅವನು ತನ್ನ 'ಹಲ್ಯಾ' ಅರ್ಥಾತ್ 'ಹಗುರ' ಎಂಬ ಹೆಸರನ್ನೂ ಸುಳ್ಳು ಮಾಡುತ್ತಿದ್ದ ಧಡೂತಿ ದೇಹವನ್ನು ಹೊತ್ತುಕೊಂಡು ಹೆಂಡತಿಯ ಸನಿಹಕ್ಕೆ ಹೋಗಿ ಖುಶಾಮತ್ತು ಮಾಡುತ್ತ ಹೇಳಿದ – "ತಾ, ರೂಪಾಯಿ ಕೊಡು. ಈಗ ತಲೆ ಉಳಿದರೆ ಸಾಕು. ಕಂಬಳಿಗೆ ಏನಾದರೂ ಬೇರೆ ಉಪಾಯ ಯೋಚಿಸ್ತೀನಿ."

ಮುನ್ನಿ ಅವನಿಂದ ದೂರ ಸರಿದು ದುರದುರನೆ ನೋಡುತ್ತ ಹೇಳಿದಳು – "ಬೇರೆ ಉಪಾಯ ಯೋಚಿಸ್ತೀರಿ ಅಲ್ಲವೆ? ಎಲ್ಲಿ, ಅದೇನು ಉಪಾಯ ಅಂತ ನನಗೂ ಸ್ವಲ್ಪ ಹೇಳಿ, ಕೇಳೋಣ. ಕಂಬಳೀನ ಯಾರೂ ದಾನ ಕೊಡೋಲ್ಲವಲ್ಲ. ತೀರಿಸೋಕ್ಕೆ ಆಗದೇ ಇರೋದು ಇನ್ನೂ ಅದೆಷ್ಟು ಬಾಕಿ ಇದೆಯೋ ಕಾಣೆ. ಈ ಬೇಸಾಯಾನ ಯಾಕೆ ಬಿಟ್ಟು ಬಿಡಬಾರದು ಅಂತೀನಿ. ಹಾಗೆ ಮೈಮುರಿಯ ಕೆಲಸ ಮಾಡೋದು, ಏನಾದರೂ ಹುಟ್ಟುವಳಿಯಾದರೆ ಬಾಕಿ ತೀರಿಸಿ ಕೈ ತೊಳಕೊಳ್ಳೋದು. ಬಾಕಿ ತೀರಿಸೋಕ್ಕೇ ಅಂತಾನೇ ಹುಟ್ಟಿದೀವಿ. ಇನ್ನು ಹೊಟ್ಟೆಪಾಡಿಗೆ ಕೂಲಿನಾಲಿ ಮಾಡೋದು. ಸಾಕಾಯ್ತು ಈ ಬೇಸಾಯ. ಇಲ್ಲ, ನಾನು ಖಂಡಿತವಾಗಿಯೂ ದುಡ್ಡು ಕೊಡೋಲ್ಲ."

ಹಲ್ಯಾ ಖಿನ್ನನಾಗಿ ಹೇಳಿದ – "ಹಾಗಾದರೆ ಏನು ಅವನ ಕೈಲಿ ಬೈಗಳ ತಿನ್ನಲೆ?"

ಮುನ್ನೀ ತಳಮಳದಿಂದ ಹೇಳಿದಳು – "ಬೈಯ್ಯೋದು ಯಾಕೆ ಬೈತಾನೆ? ಇದೇನು ಅವನ ರಾಜ್ಯವೆ?"

ಹೀಗೆ ಹೇಳಹೇಳುತ್ತಿರುವಂತೆಯೇ ಅವಳ ಹುಬ್ಬುಗಂಟು ಸಡಿಲಿಸಿತು. ಹಲ್ಕುವಿನ ಮಾತಿನಲ್ಲಿದ್ದ ಕಠೋರ ಸತ್ಯ ಯಾವುದೋ ಭೀಷಣ ಮೃಗದಂತೆ ಅವಳನ್ನು ಎದುರಿಸಿತು.

ಮುನ್ನೀ ಹೋಗಿ ಗೂಡಿನಲ್ಲಿಟ್ಟಿದ್ದ ಹಣ ತಂದು ಹಲ್ಕೂವಿನ ಕೈಯಲ್ಲಿಟ್ಟಳು. ಮತ್ತೆ ಹೇಳಿದಳು – "ಇವತ್ತಿನಿಂದ ನೀವು ಬೇಸಾಯ ಬಿಟ್ಟುಬಿಡಿ. ಕೂಲಿ ಮಾಡಿದರೆ ತಿನ್ನೋಕೆ ಸುಖವಾಗಿ ಒಂದು ಹೊತ್ತು ರೊಟ್ಟಿಯಾದರೂ ಸಿಗುತ್ತೊ? ಯಾರ ಬೆದರಿಕೆಯೂ ಇರೋಲ್ಲವೊ? ಇದು ಒಳ್ಳೇ ಬೇಸಾಯ. ಕೂಲಿ ಮಾಡಿ ಎರಡು ಕಾಸು ಸಂಪಾದಿಸಿ ಅದನ್ನೂ ಇದರಲ್ಲಿ ಮುಳುಗಿಸೋದು. ಮೇಲೆ ಬೆದರಿಕೇನೂ ಎದುರಿಸೋದು."

ಹಲ್ಕೂ ಹಣ ತೊಗೊಂಡು, ತನ್ನ ಹೃದಯವನ್ನೇ ಕಿತ್ತುಕೊಡಲು ಹೊರಟಿರುವವನಂತೆ ಹೊರಬಂದ. ಅವನು ಸಂಪಾದಿಸಿದ ಕೂಲಿಯಲ್ಲಿ ಕಾಸಿಗೆ ಕಾಸು ಕೂಡಿಸಿ ಕಂಬಳಿಗೆಂದು ಮೂರು ರೂಪಾಯಿ ಜೊತೆ ಮಾಡಿದ್ದ. ಅದು ಇವತ್ತು ಕೈಬಿಟ್ಟು ಹೋಗುತ್ತಿತ್ತು. ಒಂದೊಂದು ಹೆಜ್ಜೆ ಇಟ್ಟಂತೆಯೂ ದೈನ್ಯದ ಭಾರಕ್ಕೆ ಅವನ ತಲೆ ತಗ್ಗುತ್ತ ಹೋಗುತ್ತಿತ್ತು.

## 2

ಪುಷ್ಯಮಾಸದ ಕತ್ತಲ ರಾತ್ರಿ! ಆಕಾಶದಲ್ಲಿ ನಕ್ಷತ್ರಗಳು ಸಹ ಚಳಿಗೆ ನಡುಗುತ್ತಿವೆಯೋ ಎನ್ನುವಂತೆ ತೋರುತ್ತಿತ್ತು. ಹಲ್ಕೂ ತನ್ನ ಗದ್ದೆಯಂಚಿನಲ್ಲಿ ಕಬ್ಬಿನ ಗರಿ ಹೊದಿಸಿ ಕಟ್ಟಿದ್ದ ಹಂದರದ ಕೆಳಗೆ, ಬೊಂಬಿನ ಮಂಚದ ಮೇಲೆ, ಒರಟಾದ ಹಳೆಯ ಹಚ್ಚಡ ಹೊದ್ದು ನಡುಗುತ್ತ ಕುಳಿತಿದ್ದ. ಮಂಚದ ಕೆಳಗೆ ಅವನ ಸಂಗಡಿಗ ನಾಯಿ ಜಬರಾ ಹೊಟ್ಟೆಗೆ ಮುಖ ಅವುಚಿ, ಚಳಿಗೆ ಕ್ಕೂ ಕ್ಕೂ ಅನ್ನುತ್ತಿತ್ತು. ಇಬ್ಬರಲ್ಲಿ ಯಾರಿಗೂ ನಿದ್ರೆ ಹತ್ತುತ್ತಿರಲಿಲ್ಲ.

ಹಲ್ಕೂ ಮಂಡಿಯೊಳಗೆ ತಲೆ ಮುಚ್ಚಿಕೊಳ್ಳುತ್ತ ಹೇಳಿದ – "ಏನು ಜಬರಾ, ಚಳಿಯಾಗುತ್ತಯೆ? ಹೇಳಿದೆ, ಮನೇಲಿ ಬೆಚ್ಚಗೆ ಜೋಳದ ಕಡ್ಡಿ ರಾಶಿಯ ಮೇಲೆ ಮಲಗಿರೋ ಅಂತ. ಇಲ್ಲಿ ಏನು ಕೊಳ್ಳೆಹೋಗುತ್ತೆ ಅಂತ ಬಂದೆ. ನಾನೇನು ಮಾಡಲಿ, ಉಣ್ಣು ಚಳೀನ! ನಾನು ಹಲ್ವಾ – ಪೂರಿ ತರೋಕ್ಕೆ ಹೊರಟಿದೀನಿ ಅಂದುಕೊಂಡು ಓಡೋಡಿ ಮುಂದೆ ಮುಂದೆ ಬಂದೆಯಾ? ಈಗ ಅಳು, ನಿಮ್ಮಜ್ಜಿ ಹೆಸರು ಹೇಳಿಕೊಂಡು!"

ಜಬರಾ ಇದ್ದಲ್ಲಿಂದಲೇ ಬಾಲ ಅಲ್ಲಾಡಿಸಿ, ತನ್ನ ಕ್ಕೂ ಕ್ಕೂ ನಾದವನ್ನು ಇದ್ದಿದ್ದೂ ನೀಳವಾಗಿ ಎಳೆಯುತ್ತ ಒಮ್ಮೆ ಆಕಳಿಸಿ ಸುಮ್ಮನಾಯಿತು. ತನ್ನ ಕ್ಕೂ ಕ್ಕೂ ನಾದದಿಂದ ದಣಿಗೆ ನಿದ್ರೆ ಹತ್ತುತ್ತಿಲ್ಲವೆಂದು ಅದರ ಶ್ವಾನಬುದ್ಧಿಗೆ ಹೊಳೆಯಿತೇನೋ.

ಹಲ್ಕೂ ಕೈ ಹೊರಗೆ ತೆಗೆದು ನಾಯಿಯ ತಣ್ಣಗಿನ ಬೆನ್ನನ್ನು ನೇವರಿಸುತ್ತ ಹೇಳಿದ

– "ನಾಳೆಯಿಂದ ನನ್ನ ಜೊತೆ ಬರಬೇಡ. ಇಲ್ಲದೇ ಹೋದರೆ ತಣ್ಣಗಾಗಿಬಿಡ್ತಿ, ನೋಡು. ಈ ಸೂಳೇಮಗಂದು ಪಡುವಣ ಗಾಳಿ ಎಲ್ಲಿಂದ ಇಷ್ಟೊಂದು ಹಿಮಗಡ್ಡೆ ಹೊತ್ಕೊಂಡು ಬರ್ತಿದೆಯೋ ಗೊತ್ತಿಲ್ಲ. ಎದ್ದು ಇನ್ನೊಂದು ಸಲ ಚಿಲುಮೆ ತುಂಬೋಣ. ಹೇಗಾದರೂ ರಾತ್ರಿ ಕಳೆದರೆ ಸಾಕಾಗಿದೆ. ಎಂಟುಚಿಲುಮೆ ಕುಡಿದದ್ದಾಯ್ತು. ಬೇಸಾಯದ ಮುಖ ಅಂದರೆ ಇದು! ನಮ್ಮಲ್ಲಿ ಕೆಲವು ಭಾಗ್ಯವಂತರು ಹೇಗಿದಾರೆ ಅಂದರೆ ಅವರ ಹತ್ತಿರಕ್ಕೆ ಚಳಿ ಹೋಯ್ತು ಅಂದರೆ ಸೆಕೇಗೆ ಹೆದರಿಕೊಂಡು ವಾಪಸು ಓಡಿಬರುತ್ತೆ – ದಪ್ಪ ದಪ್ಪ ಮೆತ್ತೆ, ರಜಾಯಿ, ಕಂಬಳಿ! ಈ ಚಳಿಗಾಲ ಕಳೆಯೋದು ಒಂದು ಸಾಹಸವೇ ಸರಿ. ಅದೃಷ್ಟದ ವೈಶಿಷ್ಟ್ಯ ಅಂದರೆ ಇದು – ಕೂಲಿ ಮಾಡೋರು ನಾವು, ಅದರ ಫಲ ಅನುಭೋಗಿಸೋರು ಇನ್ನೊಬ್ಬರು!"

ಹಲ್ಕೂ ಎದ್ದ. ಗುಣಿಯಿಂದ ಒಂದು ಕೆಂಡ ತೆಗೆದು ಚಿಲುಮೆ ತುಂಬಿದ. ನಾಯಿಯೂ ಎದ್ದು ಕೂತಿತು.

ಹಲ್ಕೂ ಚಿಲುಮೆ ಸೇದುತ್ತ ಹೇಳಿದ – "ಕುಡೀತೀಯಾ, ಚಿಲುಮೆ ? ಇದರಿಂದ ಚಳಿ ಏನು ಹೋಗುತ್ತೆ, ಮಣ್ಣು ? ಮನಸ್ಸಿಗೆ ಸ್ವಲ್ಪ ಉಲ್ಲಾಸ ಸಿಗುತ್ತೆ ಅಷ್ಟೇ."

ಜಬರಾ ಪ್ರೀತಿ ತುಳುಕುವ ಕಣ್ಣುಗಳಿಂದ ಅವನ ಮುಖ ನೋಡಿತು.

ಹಲ್ಕೂ – "ಇವತ್ತೊಂದು ದಿನ ಚಳಿ ಸಹಿಸಿಕೋ. ನಾಳೆಯಿಂದ ನಾನು ಇಲ್ಲೇ ಜೋಳದ ಕಡ್ಡಿ ಹರಡಿಕೊಡ್ತೀನಿ. ಅದರೊಳಗೆ ಕೂತ್ಕೊಳ್ಳೋವಂತೆ. ಚಳಿ ತಟ್ಟೋಲ್ಲ"

ಜಬರಾ ತನ್ನ ಅಂಗಾಲನ್ನು ಅವನ ಮಂಡಿಯ ಮೇಲೂರಿ ಮುಖಕ್ಕೆ ಮುಖ ಹಾಕಿ ನಿಂತುಕೊಂಡಿತು. ಹಲ್ಕೂವಿಗೆ ಅದರ ಬಿಸಿಯುಸಿರು ತಾಕಿತು.

ಚಿಲುಮೆ ಸೇದಿ ಮುಗಿಸಿ, ಹಲ್ಕೂ ಮತ್ತೆ ಕಾಲು ಚಾಚಿದ. ಏನೇ ಆಗಲಿ, ಈ ಸಲ ಮಲಗಿಯೇ ತೀರುವೆನೆಂದುಕೊಂಡು ಕಾಲು ಚಾಚಿದ. ಆದರೆ ಒಂದೇ ಕ್ಷಣದಲ್ಲಿ ಅವನ ಎದೆಯಲ್ಲಿ ನಡುಕ ಹುಟ್ಟಿತು. ಒಮ್ಮೆ ಈ ಕಡೆ ಹೊರಳಿದ; ಒಮ್ಮೆ ಆ ಕಡೆ ಹೊರಳಿದ. ಆದರೆ ಚಳಿ ಯಾವುದೋ ಪಿಶಾಚಿಯಂತೆ ಅವನ ಎದೆಯನ್ನು ಮೆಟ್ಟಿ ಹಿಡಿದಿತ್ತು.

ಏನೇನು ಮಾಡಿದರೂ ಮಲಗಲು ಸಾಧ್ಯವಾಗದೇ ಹೋದಾಗ ಅವನು ನಾಯಿಯನ್ನು ಮೆಲ್ಲಗೆ ಎತ್ತಿಕೊಂಡು ಅದರ ತಲೆ ತಟ್ಟುತ್ತ ತನ್ನ ತೊಡೆಯ ಮೇಲೆ ಮಲಗಿಸಿಕೊಂಡ. ನಾಯಿಯ ಮೈಯಿಂದ ದುರ್ಗಂಧ ಬರುತ್ತಿತ್ತು. ಆದರೂ ಅದು ಅವನ ತೊಡೆಗೆ ಹತ್ತಿಕೊಂಡಿದ್ದುದರಿಂದ ಅವನಿಗೆ ಈಚೆಗೆ ಎಷ್ಟೋ ಸಮಯದಿಂದ ಕಂಡಿಲ್ಲದ ಒಂದು ಬಗೆಯ ಸುಖದ ಅನುಭವವಾಗುತ್ತಿತ್ತು. ಪ್ರಾಯಶಃ ಜಬರಾ ಸ್ವರ್ಗವೆಂದರೆ ಇದೇಯೇ ಎಂದು ತಿಳಿದುಕೊಂಡಿತ್ತೋ ಏನೋ! ಹಲ್ಕೂವಿನ ಪವಿತ್ರ ಹೃದಯದಲ್ಲಾದರೋ ಆ ನಾಯಿಯ ಬಗ್ಗೆ ಜುಗುಪ್ಸೆಯ ಗಂಧ ಸಹ ಇರಲಿಲ್ಲ. ಅವನು ತನ್ನ ಯಾರಾದರೂ ಆತ್ಮೀಯ ಮಿತ್ರ ಇಲ್ಲವೇ ಅಣ್ಣತಮ್ಮಂದಿರನ್ನು ಮಾತ್ರ ಇಷ್ಟು ತತ್ಪರತೆಯಿಂದ ಅಪ್ಪಿಕೊಳ್ಳುತ್ತಿದ್ದನೇನೋ, ಅವನು ತನ್ನನ್ನು ಇವತ್ತು ಈ ದೆಸೆಗೆ ತಂದಿಳಿಸಿದ ಬಡತನಕ್ಕೆ ಮರುಗುತ್ತಿರಲಿಲ್ಲ. ಇಲ್ಲ. ಈ ವಿಚಿತ್ರ ಸ್ನೇಹ ಅವನ

ಆತ್ಮದ ಎಲ್ಲ ಬಾಗಿಲುಗಳನ್ನೂ ತೆರೆದಂತಿತ್ತು; ಅವನ ಒಂದೊಂದು ಕ್ಷಣವೂ ಪ್ರಕಾಶದಿಂದ ಬೆಳಗುತ್ತಿರುವಂತಿತ್ತು.

ಇದ್ದಕ್ಕಿದ್ದಂತೆ ನಾಯಿಗೆ ಯಾವುದೋ ಪ್ರಾಣಿಯ ಸಪ್ಪಳ ಕೇಳಿಸಿತು. ಹಲ್ಕೂ ತೋರಿಸಿದ ವಿಶೇಷ ಆತ್ಮೀಯತೆಯಿಂದಾಗಿ ಗಾಳಿಯಲ್ಲಿನ ಥಂಡಿಯ ಹೊಡೆತವನ್ನು ಸಹ ತುಚ್ಛವಾಗಿ ಕಾಣುವಂತಹ ಒಂದು ಹೊಸ ಸ್ಫೂರ್ತಿ ನಾಯಿಯಲ್ಲಿ ಉಂಟಾಗಿತ್ತು. ಅದು ಛಂಗನೆ ಹಾರಿ ಜೋಪಡಿಯಿಂದ ಹೊರಬಂದು ಬೊಗಳತೊಡಗಿತು. ಹಲ್ಕೂ ಅದನ್ನು ಅನೇಕ ಸಲ ಮುದ್ದಿನಿಂದ ಕರೆದ. ಆದರೆ ಅದು ಬರಲಿಲ್ಲ. ಕ್ಷಣದಲ್ಲಿ ಅತ್ತಿತಂದಿತ್ತ ಓಡುತ್ತ ಬೊಗಳತೊಡಗಿತು. ಒಂದು ಕ್ಷಣ ಹತ್ತಿರ ಬಂದರೂ ಮತ್ತೆ ಬೇಗನೆ ಓಡಿ ಹೋಗುತ್ತಿತ್ತು. ಅದರ ಎದೆಯಲ್ಲಿ ಕರ್ತವ್ಯ ಬಯಕೆ ಉಕ್ಕುವಂತೆ ಉಕ್ಕುತ್ತಿತ್ತು.

## 3

ಇನ್ನೂ ಒಂದು ಗಂಟೆ ಕಳೆಯಿತು. ರಾತ್ರಿಯ ಗಾಳಿಯಿಂದಾಗಿ ಚಳಿ ಇದ್ದಿದ್ದೂ ತೀವ್ರವಾಗಿತ್ತು. ಹಲ್ಕೂ ಎದ್ದು ಎರಡೂ ಮಂಡಿಗಳನ್ನು ಎದೆಗೊತ್ತಿ ಅವುಗಳ ನಡುವೆ ತಲೆ ಮುಚ್ಚಿಕೊಂಡು ಕುಳಿತ. ಆದರೂ ಚಳಿಯೇನೂ ಕಡಿಮೆಯಾಗಲಿಲ್ಲ; ಮೈಯ ರಕ್ತವೆಲ್ಲವೂ ಹೆಪ್ಪುಗಟ್ಟಿದೆಯೇನೋ, ಧಮನಿಗಳಲ್ಲಿ ರಕ್ತದ ಬದಲು ಹಿಮವೇ ಹರಿಯುತ್ತಿದೆಯೇನೋ ಎಂದೆನಿಸುತ್ತಿತ್ತು. ಹಲ್ಕೂ ಬಗ್ಗಿ ರಾತ್ರಿ ಇನ್ನೂ ಎಷ್ಟು ಉಳಿದಿದೆಯೆಂದು ಆಕಾಶದ ಕಡೆ ನೋಡಿದ. ಸಪ್ತರ್ಷಿ ಮಂಡಲ ಆಕಾಶದಲ್ಲಿ ಅರ್ಧದಷ್ಟೂ ಮೇಲೇರಿರಲಿಲ್ಲ. ಅದು ಮೇಲೇರಿದಾಗ ಯಾವಾಗಲೋ ಬೆಳಕು ಹರಿಯುವುದಲ್ಲವೆ ? ರಾತ್ರಿ ಕಳೆಯಲು ಇನ್ನೂ ಒಂದು ಪ್ರಹರಕ್ಕೂ ಹೆಚ್ಚು ಕಾಲ ಉಳಿದಿತ್ತು.

ಹಲ್ಕುವಿನ ಗದ್ದೆಯಿಂದ ಸುಮಾರು ಚೆಂಡೆಸೆತದ ದೂರದಲ್ಲಿ ಒಂದು ಮಾವಿನ ತೋಪಿತ್ತು. ಎಲೆ ಉದುರಲು ಷುರುವಾಗಿ ತೋಪಿನಲ್ಲಿ ಎಲೆಗಳದೊಂದು ದೊಡ್ಡ ರಾಶಿಯೇ ಕೂಡಿತ್ತು. ತೋಪಿಗೆ ಹೋಗಿ ಎಲೆಗಳನ್ನು ಗುಡ್ಡೆ ಮಾಡಿ ಹೊತ್ತಿಸಿ ಬೆಂಕಿ ಕಾಯಿಸುವುದೆಂದು ಹಲ್ಕೂ ಯೋಚಿಸಿದ. ಆದರೆ ಯಾರಾದರೂ ಈ ಸರಿಹೊತ್ತಿನಲ್ಲಿ ತಾನು ಎಲೆ ಗುಡ್ಡೆ ಮಾಡುತ್ತಿರುವುದನ್ನು ನೋಡಿದರೆ ದೆವ್ವವೆಂದುಕೊಂಡಾರು ! ಎಲೆಯ ರಾಶಿಯಲ್ಲಿ ಯಾವ ದುಷ್ಟ ಪ್ರಾಣಿ ಅಡಗಿ ಕುಳಿತಿರುತ್ತದೆಯೋ ಏನೋ ! ಆದರೆ ಹಲ್ಕುವಿಗೆ ಇನ್ನು ಕುಳಿತಿರುವುದಾಗಲಿಲ್ಲ.

ಹಲ್ಕೂ ಹತ್ತಿರದ ತೊಗರಿಯ ತೋಟಕ್ಕೆ ಹೋಗಿ ಒಂದಿಷ್ಟು ಗಿಡಗಳನ್ನು ಕಿತ್ತು ಕಟ್ಟಿ ಪೊರಕೆ ಮಾಡಿದ; ಕೈಯಲ್ಲಿ ಉರಿಯುತ್ತಿರುವ ಬೆರಣಿ ಹಿಡಿದು ತೋಪಿನ ಕಡೆ ನಡೆದ. ಅವನು ಬರುತ್ತಿರುವುದನ್ನು ನೋಡಿದ ಜಬರಾ ಹತ್ತಿರ ಬಂದು ಬಾಲ ಅಲ್ಲಾಡಿಸಿತು.

ಹಲ್ಕೂ ಹೇಳಿದ – "ಇನ್ನು ತಡೆಯೋಕ್ಕಾಗೋಲ್ಲ, ಜಬರೂ ! ನಡಿ, ತೋಪಿಗೆ

ಹೋಗಿ ಎಲೆ ಗುಡ್ಡ ಮಾಡಿ ಬೆಂಕಿ ಕಾಯಿಸೋಣ. ಮೈ ಬೆಚ್ಚಗಾದ ಮೇಲೆ ಮತ್ತೆ ಬಂದು ಮಲಕ್ಕೊಳ್ಳೋಣಂತೆ. ಇನ್ನೂ ರಾತ್ರಿ ಬಹಳ ಉಳಿದಿದೆ.''

ಜಬರಾ ಕ್ಞೊ ಕ್ಞೊ ಅನ್ನುತ್ತ ಒಪ್ಪಿಗೆ ಕೊಟ್ಟು, ತೋಪಿನ ಕಡೆ ಮುಂದೆ ಮುಂದೆ ಕಾಲುಹಾಕಿತು.

ತೋಪಿನಲ್ಲಿ ಕತ್ತಲೋ ಕತ್ತಲು. ಆ ಕತ್ತಲಿನಲ್ಲಿ ನಿರ್ದಯಿಯಾದ ಗಾಳಿ ಎಲೆಗಳನ್ನು ಹಾರಿಸಿಕೊಂಡು ನಡೆದಿತ್ತು. ಮರಗಳಿಂದ ಇಬ್ಬನಿ ಟಪಟಪನೆ ಕೆಳಗೆ ಬೀಳುತ್ತಿತ್ತು.

ಇದ್ದಕ್ಕಿದ್ದಂತೆ ಮದರಂಗಿ ಹೂವಿನ ಸುಗಂಧದಿಂದ ತುಂಬಿದ ಗಾಳಿಯ ಅಲೆಯೊಂದು ಬೀಸಿ ಬಂದಿತು.

ಹಲ್ಕೂ ಕೇಳಿದ – ''ಎಷ್ಟು ಒಳ್ಳೆಯ ಸುವಾಸನೆ, ಜಬರೂ ? ನಿನ್ನ ಮೂಗಿಗೂ ಬರ್ತಿದೆಯೆ ?''

ನಾಯಿಗೆ ನೆಲದ ಮೇಲೆ ಬಿದ್ದಿದ್ದ ಮೂಳೆಯ ತುಂಡೊಂದು ಸಿಕ್ಕಿತು. ಅದು ಆ ತುಂಡನ್ನು ಚೀಪತೊಡಗಿತು.

ಹಲ್ಕೂ ಬೆರಣಿಯ ಬೆಂಕಿಯನ್ನು ನೆಲದ ಮೇಲಿಟ್ಟು ಎಲೆಗಳನ್ನು ಗೋರತೊಡಗಿದ. ಸ್ವಲ್ಪ ಹೊತ್ತಿನಲ್ಲಿಯೇ ಎಲೆಗಳದ್ದೊಂದು ದೊಡ್ಡ ಗುಡ್ಡೆಯಾಯಿತು. ಚಳಿಗೆ ಕೈ ಕೊರೆಯುತ್ತಿತ್ತು. ಬರಿಗಾಲು ಕರಗಿಹೋಗುತ್ತಿತ್ತು. ಹಲ್ಕೂ ಎಲೆಗಳ ಗುಡ್ಡವನ್ನೇ ನಿರ್ಮಿಸಲು ಹೊರಟಿದ್ದ. ಅದರ ಕಿಚ್ಚಿನಲ್ಲಿ ಚಳಿಯನ್ನೇ ಸುಟ್ಟು ಭಸ್ಮ ಮಾಡುವವನಿದ್ದ.

ಸ್ವಲ್ಪ ಹೊತ್ತಿನಲ್ಲಿ ಬೆಂಕಿ ಹೊತ್ತಿ ಉರಿಯತೊಡಗಿತು. ಅದರ ಜ್ವಾಲೆ ಮೇಲಿದ್ದ ಮರದೆಲೆಗಳನ್ನು ಮುಟ್ಟಿ ಮುಟ್ಟಿ ಮರೆಯಾಗುತ್ತಿತ್ತು. ಆ ಅಸ್ಥಿರವಾದ ಬೆಳಕಿನಲ್ಲಿ ತೋಪಿನ ಹೆಮ್ಮರಗಳು ತಮ್ಮ ತಲೆಯ ಮೇಲೆ ರಾತ್ರಿಯ ಗಾಢಾಂಧಕಾರವನ್ನು ಹೊತ್ತು ನಿಂತಿವೆಯೋ ಎನ್ನುವಂತೆ ತೋರುತ್ತಿತ್ತು. ಕತ್ತಲಿನ ಅನಂತ ಸಾಗರದಲ್ಲಿ ಈ ಬೆಳಕೊಂದು ಹೊಯ್ದಾಡುವ ದೋಣಿಯೋ ಎಂದು ಭಾಸವಾಗುತ್ತಿತ್ತು.

ಹಲ್ಕೂ ಬೆಂಕಿಯ ಮುಂದೆ ಕುಳಿತು ಮೈ ಕೈ ಕಾಯಿಸುತ್ತಿದ್ದ. ಒಂದು ಕ್ಷಣದಲ್ಲಿ ಅವನು ಮೈಮೇಲಿನ ಎರಡು ಪದರದ ಅಂಗಿಯನ್ನು ಕಳಚಿ ಕಂಕುಳಲ್ಲಿ ಸಿಕ್ಕಿಸಿ, ಕಾಲು ಚಾಚಿದ – ''ಏನು ಮಾಡ್ತೀಯೋ ಮಾಡು, ನೋಡೋಣ'' ಎಂದು ಚಳಿಗೆ ಸವಾಲು ಹಾಕುತ್ತಿದ್ದಾನೆಯೋ ಎಂಬಂತೆ. ಚಳಿಯ ಅಸೀಮ ಪೌರುಷದ ಮೇಲೆ ವಿಜಯ ಸ್ಥಾಪಿಸಿದ್ದ ಅವನಿಗೆ ಆ ವಿಜಯದ ಗರ್ವವನ್ನು ಎದೆಯಲ್ಲಿ ಮುಚ್ಚಿಟ್ಟುಕೊಳ್ಳಲಾಗುತ್ತಿರಲಿಲ್ಲ.

ಹಲ್ಕೂ ನಾಯಿಗೆ ಹೇಳಿದ – ''ಏನು ಜಬ್ಬರ್, ಈಗ ಚಳಿ ಆಗ್ತಿಲ್ಲ, ಅಲ್ಲವೆ ?''

''ಈಗೇನು, ಈ ಚಳಿ ಇದ್ದೇ ಇರುತ್ತೆ'' ಎಂದು ಹೇಳುತ್ತಿದೆಯೋ ಎಂಬಂತೆ ಜಬರಾ 'ಕ್ಞೊ' 'ಕ್ಞೊ' ಎಂದಿತು.

''ಮೊದಲೇ ಈ ಉಪಾಯ ಹೊಳೆದಿದ್ದರೆ, ಇಷ್ಟು ಚಳಿ ಅನುಭವಿಸೋದು ತಪ್ಪಿತ್ತು.''

ಜಬರಾ ಬಾಲ ಅಲ್ಲಾಡಿಸಿತು.

"ಒಳ್ಳೇದು, ಬಾ. ಬೆಂಕಿ ಮೇಲೆ ನೆಗೆಯೋಣಂತೆ. ನೋಡೋಣ, ನಮ್ಮಿಬ್ಬರಲ್ಲಿ ಯಾರು ಗೆಲ್ತಾರೆ. ಆದರೆ ಮೈ ಕೈ ಸುಡದ ಹಾಗೆ ನೋಡಿಕೋ. ಸುಟ್ಟರೆ ನಾನಂತೂ ಔಷಧಿ ಹಚ್ಚೋಲ್ಲ."

ಜಬ್ಬರ್ ಆ ಅಗ್ನಿರಾಶಿಯ ಕಡೆ ಅಂಜಿಕೆಯಿಂದ ನೋಡಿತು.

"ನಾಳೆ ಮುನ್ನಿಗೆ ಹೇಳಬೇಡ. ಅವಳಿಗೆ ಗೊತ್ತಾದರೆ ಜಗಳ ಕಾಯ್ತಾಳೆ ಅವಳು" ಎನ್ನುತ್ತ ಹಲ್ಕೂ ಬೆಂಕಿಯ ಗುಡ್ಡೆಯ ಮೇಲೆ ಹಾರಿ ನೆಟ್ಟಗೆ ಆ ಕಡೆಯಿಂದ ಈ ಕಡೆಗೆ ಬಂದ. ಕಾಲಿಗೆ ಕೊಂಚ ಕಾವು ತಟ್ಟಿತು. ಆದರೆ ಅದೇನೂ ದೊಡ್ಡ ಮಾತಾಗಿರಲಿಲ್ಲ.

ಜಬರಾ ಬೆಂಕಿಯ ಗುಡ್ಡೆಯನ್ನು ಬಳಸಿಕೊಂಡು ಅವನ ಹತ್ತಿರ ಬಂದು ನಿಂತುಕೊಂಡಿತು.

ಹಲ್ಕೂ ಹೇಳಿದ – "ನಡಿ, ನಡಿ, ಇದು ಸರಿಯಲ್ಲ. ಮೇಲಿನಿಂದ ಹಾರಿ ಬಾ." ಹಲ್ಕೂ ಮತ್ತೆ ನೆಗೆದು ಗುಡ್ಡೆಯ ಈ ಕಡೆಗೆ ಬಂದ.

## 4

ಎಲೆಯ ಗುಡ್ಡೆ ಉರಿದು ಹೋಗಿತ್ತು. ತೋಪಿನಲ್ಲೆಲ್ಲಾ ಮತ್ತೆ ಕತ್ತಲು ಕವಿದಿತ್ತು. ಬೂದಿಯ ತಳದಲ್ಲಿ ಉಳಿದಿದ್ದ ಒಂದಿಷ್ಟು ಬೆಂಕಿ ಗಾಳಿ ಬೀಸಿದಾಗ ಮತ್ತೆ ಹೊತ್ತಿ ಉರಿದು ಉರಿದು ಒಂದು ಕ್ಷಣದಲ್ಲಿ ಕಣ್ಣು ಮುಚ್ಚಿಕೊಳ್ಳುತ್ತಿತ್ತು. ಹಲ್ಕೂ ಮತ್ತೆ ಹಚ್ಚಡ ಹೊದ್ದು ಬಿಸಿಬೂದಿಯ ಹತ್ತಿರ ಕುಳಿತು ಯಾವುದೋ ಹಾಡನ್ನು ಗುನಗುನಿಸತೊಡಗಿದ. ಅವನ ಮೈಯಲ್ಲಿ ಕಾವು ಮೂಡಿತ್ತು. ಆದರೆ ಚಳಿ ಹೆಚ್ಚುತ್ತ ಹೋದಂತೆಲ್ಲಾ ಆಲಸ್ಯ ಅವನನ್ನು ಆವರಿಸತೊಡಗಿತು.

ಜಬರಾ ಜೋರಾಗಿ ಬೊಗಳುತ್ತ ಗದ್ದೆಯ ಕಡೆ ಓಡಿತು. ಪ್ರಾಣಿಗಳ ಹಿಂಡೊಂದು ಗದ್ದೆಯೊಳಗೆ ನುಗ್ಗಿದೆಯೋನೋ ಎಂದು ಹಲ್ಕೂವಿಗೆ ಅನಿಸಿತು. ಪ್ರಾಯಶಃ ಜಿಂಕೆಗಳ ಹಿಂಡಿರಬೇಕು. ನೆಗೆದಾಟ, ಓಡಾಟದ ಶಬ್ದ ಅವನ ಕಿವಿಗೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಅವು ಗದ್ದೆಯನ್ನು ಮೇಯುತ್ತಿರುವಂತೆ ತೋರಿತು. ಮೇಯುವ ಚರಚರ ಶಬ್ದವೂ ಕೇಳಿಸತೊಡಗಿತ್ತು.

ಹಲ್ಕೂ ತನಗೆ ತಾನೇ ಹೇಳಿಕೊಂಡ – "ಇಲ್ಲ, ಜಬರಾ ಇರುವಾಗ ಯಾವ ಪ್ರಾಣಿಯೂ ಗದ್ದೆಯೊಳಗೆ ಕಾಲಿಡಲಾರದು. ಜಬರಾ ಅವನ್ನು ಹರಿದುಹಾಕುತ್ತೆ. ನನಗೆಲ್ಲೋ ಭ್ರಮೆ! ಎಲ್ಲಿ, ಈಗ ಏನೂ ಕೇಳಿಸೋಲ್ಲವಲ್ಲ? ನಾನು ಸಹ ಹೇಗೆ ಮೋಸ ಹೋದೆ."

ಹಲ್ಕೂ ಜೋರಾಗಿ ಕೂಗುಹಾಕಿದ – "ಜಬರಾ, ಜಬರಾ!"

ಜಬರಾ ಬೊಗಳುತ್ತಿತ್ತು. ಅವನ ಕೂಗಿಗೆ ಅದು ಹತ್ತಿರ ಬರಲಿಲ್ಲ.

ಮತ್ತೆ ಗದ್ದೆಯಲ್ಲಿ ಮೇಯುವ ಶಬ್ದ ಕೇಳಿಸಿತು. ಈ ಸಲ ಅವನು ಮೋಸಹೋಗಲಿಲ್ಲ. ಅವನಿಗೆ ತಾನು ಕುಳಿತಲ್ಲಿಂದ ಸರಿಯುವುದೆಂದರೆ ವಿಷ ಕುಡಿದಂತಾಗುತ್ತಿತ್ತು. ಅವನು ಹಲ್ಲು ಕಚ್ಚಿ ಅಲ್ಲಾಡದೆ ಕುಳಿತಿದ್ದ. ಈ ಕೊರೆಯುವ ಮಂಜಿನಲ್ಲಿ ಗದ್ದೆಗೆ ಹೋಗಿ ಪ್ರಾಣಿಗಳನ್ನು ಅಟ್ಟುವುದು ಅವನಿಗೆ ಅವಿವೇಕವೆನ್ನಿಸಿತು. ಅವನು ಕುಳಿತಲ್ಲಿಂದ ಅಲ್ಲಾಡಲಿಲ್ಲ.

ಅವನೊಮ್ಮೆ ಜೋರಾಗಿ ಕೂಗುಹಾಕಿದ – "ಲಿಹೋ – ಲಿಹೋ! ಲಿಹೋ!"

ಜಬರಾ ಮತ್ತೆ ಬೊಗಳತೊಡಗಿತು. ಪ್ರಾಣಿಗಳು ಗದ್ದೆ ಮೇಯುತ್ತಿದ್ದವು. ಫಸಲು ಬೆಳೆದು ನಿಂತಿದೆ. ಎಷ್ಟು ಒಳ್ಳೆಯ ಬೆಳೆ! ಆದರೆ ಈ ದುಷ್ಟಮೃಗಗಳು ಅದನ್ನು ಸರ್ವನಾಶ ಮಾಡಿ ಹಾಕುತ್ತವೆ.

ಹಲ್ಕೂ ದೃಢ ನಿಶ್ಚಯ ಮಾಡಿ ಎದ್ದ. ನಾಲ್ಕಾರು ಹೆಜ್ಜೆ ಹಾಕಿದ. ಆದರೆ ಇದ್ದಕ್ಕಿದ್ದಂತೆ ಗಾಳಿಯ ಅಲೆಯೊಂದು ಬೀಸಿ ಬಂದಿತು. ತಣ್ಣಗೆ, ಚೇಳಿನ ಕೊಂಡಿಯಂತೆ ಚುಚ್ಚುವ ಗಾಳಿಯ ಬೀಸು ಅದು. ಹಲ್ಕೂ ಮತ್ತೆ ಆರಿಹೋಗುತ್ತಿದ್ದ ಬೆಂಕಿಯ ಬಳಿ ಬಂದು ಕುಳಿತು, ಬೂದಿಯನ್ನು ಕೆದಕುತ್ತ ತನ್ನ ಚಳಿಮೈಯನ್ನು ಕಾಯಿಸಿಕೊಳ್ಳತೊಡಗಿದ.

ಜಬರಾ ಗಂಟಲು ಹರಿದುಕೊಳ್ಳುತ್ತಿತ್ತು. ಜಿಂಕೆಗಳು ಗದ್ದೆಯನ್ನು ಚೊಕ್ಕಟ ಮಾಡುತ್ತಿದ್ದವು. ಹಲ್ಕೂ ಹುಡಿಬೂದಿಯ ಹತ್ತಿರ ಶಾಂತವಾಗಿ ಕುಳಿತಿದ್ದ. ನಿಷ್ಕ್ರಿಯತೆ ಅವನನ್ನು ಹಗ್ಗದಂತೆ ಬಿಗಿಯುತ್ತಿತ್ತು. ಅವನು ಬೂದಿಯ ಬದಿಯಲ್ಲಿ ಬೆಚ್ಚಗಿನ ನೆಲದ ಮೇಲೆ ಹಚ್ಚಡ ಹೊದ್ದು ಮಲಗಿದ.

ಬೆಳಗ್ಗೆ ಅವನಿಗೆ ಎಚ್ಚರವಾದಾಗ ಎಲ್ಲೆಲ್ಲೂ ಬೆಳಕು ಹರಡಿತ್ತು. ಮುನ್ನೀ ಅನ್ನುತ್ತಿದ್ದಳು – "ಏನು, ಇವತ್ತೆಲ್ಲಾ ಮಲಗಿರ್ತೀರಾ? ನೀವು ಇಲ್ಲಿ ಬಂದು ಮಜ ಹೊಡೆದಿರಿ, ಅಲ್ಲಿ ಗದ್ದೆಯೆಲ್ಲಾ ಹಾಳಾಗಿಹೋಯ್ತು."

ಹಲ್ಕೂ ಎದ್ದು ಕೇಳಿದ – "ಏನು, ನೀನು ಗದ್ದೆಗೆ ಹೋಗಿ ಬರ್ತಿದೀಯಾ?"

ಮುನ್ನಿ ಹೇಳಿದಳು – "ಹೌದು, ಗದ್ದೆಯೆಲ್ಲಾ ಸರ್ವನಾಶವಾಗಿ ಹೋಯಿತು. ಮಲಗೋದು ಅಂದರೆ ಹೀಗೇನು? ನೀವು ಇಲ್ಲಿ ಜೋಪಡಿ ಹಾಕಿ ಬಂದ ಪ್ರಯೋಜನವೇನು?"

ಹಲ್ಕೂ ಏನೋ ನೆಪ ಹುಡುಕಿ ಹೇಳಿದ – "ನಿನಗೆ ಗದ್ದೇದೇ ದೊಡ್ಡ ವಿಷಯ. ನಾನು ಇಲ್ಲಿ ಸ್ವಲ್ಪದರಲ್ಲಿ ಸಾಯೋದರಿಂದ ಬಚಾವಾದೆ. ಓಹೋ ಹೊಟ್ಟೇಲಿ ಎಂಥ ನೋವು, ಎಂಥ ನೋವು ಅಂತಿ. ನನಗೇ ಗೊತ್ತು!"

ಇಬ್ಬರೂ ಗದ್ದೆಯ ಅಂಚಿಗೆ ಬಂದರು. ನೋಡಿದರೆ ಗದ್ದೆಗೆ ಗದ್ದೆಯೇ ತುಳಿದು ಹಾಳಾಗಿದೆ. ಜಬರಾ ಮೈಯಲ್ಲಿ ಪ್ರಾಣವೇ ಇಲ್ಲವೇನೋ ಎಂಬಂತೆ ಜೋಪಡಿಯಲ್ಲಿ ಅಂಗಾತನಾಗಿ ಮಲಗಿದೆ.

ಗಂಡ ಹೆಂಡತಿಯರಿಬ್ಬರೂ 'ಗದ್ದೆಗೆ ಇಂಥ ದೆಸೆ ಬಂತೆ!' ಎಂದು ನೋಡುತ್ತ ನಿಂತರು. ಮುನ್ನಿಯ ಮುಖದಲ್ಲಿ ವ್ಯಥೆ ತುಂಬಿತ್ತು. ಆದರೆ ಹಲ್ಕೂ ಮಾತ್ರ ಸಂತೋಷದಿಂದಿದ್ದ.

ಮುನ್ನೀ ಚಿಂತೆಯಿಂದ ಹೇಳಿದಳು – "ಇನ್ನು ಕೂಲಿ ಮಾಡಿ ಕಂದಾಯ ಕಟ್ಟಬೇಕಾಗುತ್ತೆ."

ಹಲ್ಕೂ ಮುಖದಲ್ಲಿ ಸಂತೋಷ ಸೂಸುತ್ತ ಹೇಳಿದ – "ರಾತ್ರಿ ಚಳೀಲಿ ಇಲ್ಲಿ ಮಲಗೋದು ತಪ್ಪಿತೊ!"

# 13. ದೊಡ್ಡ ಮನುಷ್ಯರ ಮನೆಯ ಮಗಳು

ಬೇನೀಮಾಧವಸಿಂಹರು ಗೌರೀಪುರದ ಜಮೀನುದಾರರು ಹಾಗೂ ಪಟೇಲರು. ಒಂದು ಕಾಲದಲ್ಲಿ ಅವರ ತಾತ ಧನಧಾನ್ಯಸಂಪನ್ನರಾಗಿದ್ದರು. ಈಗ ಅವುಗಳ ಪುನರುಜ್ಜೀವನ ಸಹ ಕಷ್ಟವೆನಿಸಿದ್ದ ಊರಿನ ಕೆರೆ ಗುಡಿಗಳು ಅವರ ಕೀರ್ತಿಸ್ತಂಭಗಳಾಗಿ ನಿಂತಿದ್ದವು. ಅವರ ಮನೆಯ ಮುಂದೆ ಆನೆ ಸೊಂಡಿಲಾಡಿಸುತ್ತ ನಿಂತಿರುತ್ತಿತ್ತೆಂದು ಜನ ಹೇಳುತ್ತಾರೆ. ಈಗ ಅದರ ಬದಲಾಗಿ ಮೂಳೆಚಕ್ಕಳಗಳ ವಿನಹ ಬೇರೇನೂ ಉಳಿದಿಲ್ಲದ ಒಂದು ಮುದಿ ಎಮ್ಮೆಯಿದೆ. ಮುದಿಯಾದರೂ ಅದು ಪ್ರಾಯಶಃ ತುಂಬ ಹಾಲು ಕೊಡುತ್ತದೇನೋ; ಯಾಕೆಂದರೆ ಒಬ್ಬರಲ್ಲ ಒಬ್ಬರು ಕೈಯಲ್ಲಿ ಪಾತ್ರೆ ಹಿಡಿದುಕೊಂಡು ಅದನ್ನು ಕಾಡುತ್ತಿರುತ್ತಾರೆ! ಬೇನೀಮಾಧವಸಿಂಹರು ತಮ್ಮ ಅರ್ಧಕ್ಕೂ ಹೆಚ್ಚು ಸಂಪತ್ತನ್ನು ವಕೀಲರಿಗೆ ಕಾಣಿಕೆ ಕೊಟ್ಟಿದ್ದರು. ಅವರ ಈಗಿದ ಆದಾಯ ವರ್ಷಕ್ಕೆ ಸಾವಿರ ರೂಪಾಯಿಗಿಂತ ಹೆಚ್ಚಿರಲಿಲ್ಲ. ಠಾಕೂರ್ ಸಾಹೇಬರಿಗೆ ಇಬ್ಬರು ಮಕ್ಕಳಿದ್ದರು. ದೊಡ್ಡವನ ಹೆಸರು ಶ್ರೀಕಂಠಸಿಂಹ; ಎಷ್ಟೋ ವರ್ಷಗಳ ಶ್ರಮಸಾಹಸಗಳ ಫಲವಾಗಿ ಬಿ.ಎ. ಡಿಗ್ರಿ ಪಡೆದು ಈಗ ಯಾವುದೋ ಕಚೇರಿಯಲ್ಲಿ ಕೆಲಸಕ್ಕೆ ಸೇರಿದ್ದ. ಚಿಕ್ಕ ಮಗ ಲಾಲಾಬಿಹಾರಿಸಿಂಹ ಗಟ್ಟಿಮುಟ್ಟಾದ ಸೊಗಸುಗಾರ, ಯುವಕ. ತುಂಬಿದ ಮುಖ, ಅಗಲವಾದ ಎದೆ. ಬೆಳಗಾಗ ಎದ್ದವನೇ ಎರಡು ಸೇರು ಎಮ್ಮೆಯ ಹಾಲು ಕುಡಿದುಬಿಡುತ್ತಿದ್ದ. ಶ್ರೀಕಂಠಸಿಂಹನ ಸ್ಥಿತಿ ತದ್ವಿರುದ್ಧವಾಗಿತ್ತು. ಅವನು ಈ ಕಣ್ಣುಮೆಚ್ಚಿನ ಗುಣಗಳನ್ನೆಲ್ಲಾ ಬಿ.ಎ. ಎಂಬ ಎರಡು ಅಕ್ಷರಗಳಲ್ಲಿ ನಿವಾಳಿಸಿ ಎಸೆದಿದ್ದ. ಈ ಎರಡು ಅಕ್ಷರಗಳು ಅವನ ಶರೀರವನ್ನು ದುರ್ಬಲವನ್ನಾಗಿ, ಅವನ ಮುಖವನ್ನು ಕಾಂತಿಹೀನವನ್ನಾಗಿ ಮಾಡಿಬಿಟ್ಟಿದ್ದವು. ಈ ಕಾರಣದಿಂದಾಗಿ ಅವನಿಗೆ ವೈದ್ಯ ಗ್ರಂಥಗಳ ಬಗ್ಗೆ ವಿಶೇಷ ಪ್ರೇಮವಿತ್ತು. ಆಯುರ್ವೇದದ ಔಷಧಿಗಳೆಂದರೆ ಅವನಿಗೆ ತುಂಬ ವಿಶ್ವಾಸ. ಬೆಳಗ್ಗೆ ಸಂಜೆ ಅವನ ಕೋಣೆಯಿಂದ ಕಲ್ಲುಪತ್ತಿನ ಇಂಪಾದ ಧ್ವನಿ ಕೇಳಿಬರುತ್ತಿತ್ತು. ಲಾಹೋರ್, ಕಲಕತ್ತೆಗಳ ವೈದ್ಯರೊಡನೆ ಪತ್ರ ವ್ಯವಹಾರ ನಡೆಸುತ್ತಿದ್ದ.

ಶ್ರೀಕಂಠ ಈ ವಿದೇಶೀ ಡಿಗ್ರಿಯ ಅಧಿಪತಿಯಾಗಿದ್ದರೂ ವಿದೇಶೀ ಸಾಮಾಜಿಕ ಕಟ್ಟಲೆಗಳ ಮೇಲೆ ಅವನಿಗೆ ವಿಶೇಷ ಪ್ರೇಮವಿರಲಿಲ್ಲ. ಅಷ್ಟೇ ಅಲ್ಲ, ಸಾಧಾರಣವಾಗಿ

ಅವನು ಅದನ್ನು ಬಹಳ ಜೋರಾಗಿ ನಿಂದಿಸುತ್ತಿದ್ದ. ಈ ಕಾರಣದಿಂದಾಗಿ ಹಳ್ಳಿಯಲ್ಲಿ ಅವನಿಗೆ ತುಂಬ ಮರ್ಯಾದೆಯಿತ್ತು. ದಸರಾ ಹಬ್ಬದಲ್ಲಿ ಅವನು ರಾಮಲೀಲಾ ಉತ್ಸವದಲ್ಲಿ ತುಂಬ ಉತ್ಸಾಹದಿಂದ ಒಂದಾಗುತ್ತಿದ್ದ; ಸ್ವಯಂ ಒಂದಲ್ಲ ಒಂದು ಪಾತ್ರ ವಹಿಸುತ್ತಿದ್ದ. ಗೌರೀಪುರದಲ್ಲಿ ರಾಮಲೀಲಾ ಉತ್ಸವಕ್ಕೆ ಜನ್ಮಪಿತೃವನೇ ಅವನು. ಪ್ರಾಚೀನ ಹಿಂದೂ ನಾಗರಿಕತೆಯ ಗುಣಗಾನ ಅವನ ಧಾರ್ಮಿಕತೆಯ ಒಂದು ಪ್ರಧಾನ ಅಂಗವಾಗಿತ್ತು. ಅವನು ಅವಿಭಾಜ್ಯ ಕುಟುಂಬದ ಏಕಮಾತ್ರ ಉಪಾಸಕನಾಗಿದ್ದ. ಈಗಿನ ಕಾಲದಲ್ಲಿ ಜಂಟಿ ಕುಟುಂಬದಲ್ಲಿ ಒಟ್ಟಾಗಿ ಬಾಳುವುದೆಂದರೆ ಹೆಂಗಸರ ಮನಸ್ಸೊಪ್ಪದು ತಾನೇ. ಈ ಮನೋಭಾವ ದೇಶಕುಲಗಳೆರಡಕ್ಕೂ ಹಾನಿಕರವೆಂದು ಶ್ರೀಕಂಠ ತಿಳಿದಿದ್ದ. ಹಳ್ಳಿಯ ಹೆಣ್ಣುಮಕ್ಕಳು ಅವನನ್ನು ನಿಂದಿಸುವುದಕ್ಕೆ ಇದೇ ಕಾರಣವಾಗಿತ್ತು! ಕೆಲವರಂತೂ ಅವನನ್ನು ತಮ್ಮ ಶತ್ರುವೆಂದು ತಿಳಿಯುವುದಕ್ಕೂ ಹಿಂಜರಿಯುತ್ತಿರಲಿಲ್ಲ. ಈ ವಿಷಯದಲ್ಲಿ ಸ್ವತಃ ಅವನ ಹೆಂಡತಿಯೇ ಅವನನ್ನು ವಿರೋಧಿಸುತ್ತಿದ್ದಳು. ಅವಳಿಗೆ ತನ್ನ ಅತ್ತೆ ಮಾವ, ಭಾವ ಮೈದುನರನ್ನು ಕಂಡರೆ ಆಗುತ್ತಿರಲಿಲ್ಲವೆಂಬುದು ಈ ವಿರೋಧಕ್ಕೆ ಕಾರಣವಲ್ಲ. ಎಷ್ಟೇ ತಾಳ್ಮೆಯಿಂದಿದ್ದರೂ ಕುಟುಂಬದವರೊಂದಿಗೆ ಸರಿಹೋಗಿಸಿಕೊಂಡು ಹೋಗುವುದು ಸ್ವಲ್ಪವೂ ಸಾಧ್ಯವಿಲ್ಲದಿರುವಾಗ, ಮುಂದೆ ಜಗಳವಾಡಿ ಜೀವನವನ್ನು ಹಾಳು ಮಾಡಿಕೊಳ್ಳುವುದಕ್ಕಿಂತ ತಮ್ಮ ಅನ್ನವನ್ನು ತಾವು ಬೇರೆ ಬೇಯಿಸಿಕೊಳ್ಳುವುದೇ ಮೇಲೆಂದು ಅವಳ ವಿಚಾರ.

ಆನಂದಿ ದೊಡ್ಡ ಮನೆತನದ ಹುಡುಗಿ. ಅವಳ ತಂದೆ ಒಂದು ಸಣ್ಣ ರಾಜ್ಯದ ಜಹಗೀರುದಾರರಾಗಿದ್ದರು. ವಿಶಾಲವಾದ ಮನೆ, ಒಂದು ಆನೆ, ಮೂರು ನಾಯಿ, ಡೇಗೆ, ದೋಣಿಯ ಮನೆ, ತೂಗುದೀಪಗಳು, ಗೌರವ ಮ್ಯಾಜಿಸ್ಟ್ರೇಟರ ಕೆಲಸ, ಜೊತೆಗೆ ಸಾಲ – ಒಬ್ಬ ಪ್ರತಿಷ್ಠಿತ ಜಹಗೀರುದಾರನಿಗೆ ಇರಬೇಕಾದ ಭೋಗಭಾಗ್ಯಗಳೆಲ್ಲವೂ ಅವರಿಗಿದ್ದವು. ಹೆಸರು ಭೂಪಸಿಂಹ. ತುಂಬ ಉದಾರ ಮನಸ್ಸಿನ ಮನುಷ್ಯ, ಪ್ರತಿಭಾಶಾಲಿ. ಆದರೆ ದೌರ್ಭಾಗ್ಯದಿಂದ ಅವರಿಗೆ ಒಂದಾದರೂ ಗಂಡು ಸಂತಾನವಿರಲಿಲ್ಲ. ಏಳು ಹೆಣ್ಣುಮಕ್ಕಳಾದವು; ದೈವಯೋಗದಿಂದ ಏಳಕ್ಕೆ ಏಳೂ ಬದುಕಿದವು. ಮೊದಲ ಉತ್ಸಾಹದಲ್ಲಿ ಮೂವರ ಮದುವೆಯನ್ನು ಎದೆಬಿಚ್ಚಿ ಮಾಡಿದರು. ಆದರೆ ಹದಿನೈದು ಇಪ್ಪತ್ತು ಸಾವಿರ ರೂಪಾಯಿಗಳ ಸಾಲ ಮೈಮೇಲೆ ಬಂದಾಗ ಕಣ್ಣು ತೆರೆಯಿತು, ಕೈ ಮುದುಡಿತು. ಆನಂದಿ ನಾಲ್ಕನೆಯವಳು. ಇತರೆಲ್ಲ ಅಕ್ಕತಂಗಿಯರಿಗಿಂತ ಹೆಚ್ಚು ರೂಪವತಿಯೂ ಗುಣವತಿಯೂ ಆಗಿದ್ದಳು. ಇದರಿಂದಾಗಿ ಠಾಕೂರ ಭೂಪಸಿಂಹ ಅವಳನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದರು. ಮಕ್ಕಳು ಲಕ್ಷಣವಾಗಿದ್ದರೆ ಪ್ರಾಯಶಃ ತಂದೆತಾಯಿಯರಿಗೆ ಅವರು ಹೆಚ್ಚು ಅಚ್ಚುಮೆಚ್ಚಾಗುವರೇನೋ! ಆನಂದಿಯ ಮದುವೆಯನ್ನು ಯಾರಿಗೆ ಕೊಟ್ಟು ಮಾಡುವುದೆಂದು ತಿಳಿಯದೆ ಠಾಕೂರ ಸಾಹೇಬರು ಧರ್ಮಸಂಕಟದಲ್ಲಿ ಸಿಕ್ಕಿಬಿದ್ದರು. ಅವರಿಗೆ ಸಾಲದ ಭಾರ ಹೆಚ್ಚಾಗುವುದೂ ಇಷ್ಟವಿರಲಿಲ್ಲ; ತಮ್ಮನ್ನು ತಾವು ಭಾಗ್ಯಹೀನರೆಂದುಕೊಳ್ಳುವುದೂ ಒಪ್ಪಿಗೆಯಿರಲಿಲ್ಲ. ಒಂದು ದಿನ ಶ್ರೀಕಂಠ

ಅವರಲ್ಲಿಗೆ ಯಾವುದೋ ಚಂದಾ ಎತ್ತಲು ಬಂದ. ಪ್ರಾಯಶಃ ದೇವನಾಗರೀ ಪ್ರಚಾರಕ್ಕಿರಬಹುದು. ಭೂಪಸಿಂಹ ಅವನ ಗುಣಕ್ಕೆ ಮೋಹಿತರಾದರು. ಆನಂದಿಯೊಡನೆ ಶ್ರೀಕಂಠಸಿಂಹನ ಮದುವೆ ವಿಜೃಂಭಣೆಯಿಂದ ನಡೆಯಿತು.

ಆನಂದಿ ತನ್ನ ಹೊಸ ಮನೆಗೆ ಬಂದಳು. ಇಲ್ಲಿನ ತರಹವೇ ಬೇರೆಯಾಗಿತ್ತು. ಅವಳಿಗೆ ಬಾಲ್ಯದಿಂದ ಅಭ್ಯಾಸವಾಗಿದ್ದ ಆಡಂಬರ ಇಲ್ಲಿ ಹೆಸರಿಗೆ ಸಹ ಇರಲಿಲ್ಲ. ಆನೆ ಕುದುರೆಗಳ ಮಾತಿರಲಿ, ಸಜ್ಜಾದ ಸುಂದರವಾದ ಒಂದು ಎತ್ತಿನ ಗಾಡಿ ಸಹ ಇರಲಿಲ್ಲ. ರೇಶಿಮೆಯ ಚಪ್ಪಲಿಯನ್ನು ಜೊತೆಯಲ್ಲಿ ತಂದಿದ್ದಳು. ಆದರೆ ಇಲ್ಲಿ ಅದರ ಉಪಯೋಗಕ್ಕೆ ಉದ್ಯಾನವೆಲ್ಲ ಬರಬೇಕು ! ಮನೆಗೆ ಕಿಟಕಿಗಳು ಸಹ ಇರಲಿಲ್ಲ. ನೆಲಕ್ಕೆ ಜಮಖಾನವಿರಲಿಲ್ಲ, ಗೋಡೆಯ ಮೇಲೆ ಚಿತ್ರಪಟಗಳಿರಲಿಲ್ಲ. ಇದು ಸಾಧಾರಣ ಹಳ್ಳಿಯ ಗೃಹಸ್ಥನೊಬ್ಬನ ಮನೆ. ಆದರೆ ಆನಂದಿ ಕೆಲವೇ ದಿನಗಳಲ್ಲಿ ತಾನೆಂದೂ ವಿಲಾಸದ ವಸ್ತುಗಳನ್ನೇ ನೋಡದವಳಂತೆ ಈ ಹೊಸ ಸನ್ನಿವೇಶಕ್ಕೆ ತನ್ನನ್ನು ತಾನು ಹೊಂದಿಸಿಕೊಂಡಳು.

## 2

ಒಂದು ಮಧ್ಯಾಹ್ನ ಲಾಲಾಬಿಹಾರಿಸಿಂಹ ಎರಡು ಹಕ್ಕಿ ಹಿಡಿದುಕೊಂಡು ಬಂದು ಅತ್ತಿಗೆಗೆ ಹೇಳಿದ – "ಇದನ್ನ ಬೇಯಿಸಿ ಬೇಗ ಅಡಿಗೆ ಮಾಡು; ನನಗೆ ಹೊಟ್ಟೆ ಹಸಿವು." ಆನಂದಿಯಾಗಲೇ ಅಡಿಗೆ ಮಾಡಿಟ್ಟು ಅವನ ದಾರಿ ಕಾಯುತ್ತಿದ್ದಳು. ಈಗ ಹೊಸ ವ್ಯಂಜನ ತಯಾರಿಸಲು ಹೊರಟಳು. ತಪ್ಪಲೆಯಲ್ಲಿ ನೋಡಿದರೆ ಪಾವಿಗಿಂತ ಹೆಚ್ಚು ತುಪ್ಪವಿರಲಿಲ್ಲ. ದೊಡ್ಡ ಮನುಷ್ಯರ ಮನೆಯ ಮಗಳು ಮಿತವ್ಯಯವನ್ನೇನು ಬಲ್ಲಳು ? ಅವಳು ಇದ್ದೆಲ್ಲ ತುಪ್ಪವನ್ನೂ ಮಾಂಸಕ್ಕೆ ಹಾಕಿದಳು. ಲಾಲಬಿಹಾರಿ ಊಟಕ್ಕೆ ಕುಳಿತ. ತೊವ್ವೆಯಲ್ಲಿ ತುಪ್ಪವಿರಲಿಲ್ಲ. ಕೇಳಿದ – "ತೊವ್ವೆಗೇಕೆ ತುಪ್ಪ ಹಾಕಿಲ್ಲ."

ಆನಂದಿ ಹೇಳಿದಳು – "ಇದ್ದ ತುಪ್ಪಾನೆಲ್ಲಾ ಮಾಂಸಕ್ಕೆ ಹಾಕಿದೆ." ಲಾಲಬಿಹಾರಿ ಜೋರಾಗಿ ಹೇಳಿದ – "ಇನ್ನೂ ಮೊನ್ನೆ ತಾನೇ ತುಪ್ಪ ತಂದಿತ್ತು. ಎಲ್ಲಾ ಮುಗಿದು ಹೋಯಿತೆ ?"

"ಇವತ್ತು ಪಾವಿನಷ್ಟು ಉಳಿದಿತ್ತು ಅಂತ ಕಾಣುತ್ತೆ. ಅಷ್ಟನ್ನೂ ಮಾಂಸಕ್ಕೆ ಹಾಕಿದೆ."

ಒಣಸೌದೆ ಬೇಗನೆ ಹೊತ್ತಿ ಉರಿಯುವಂತೆ ಹಸಿವಿನಿಂದ ಹುಚ್ಚಾದ ಮನುಷ್ಯ ಸಣ್ಣ ಸಣ್ಣ ಮಾತಿಗೇ ರೇಗುತ್ತಾನೆ. ಲಾಲಬಿಹಾರಿಗೆ ಅತ್ತಿಗೆಯ ಈ ಕೊಂಕು ಬಲು ಕೆಟ್ಟದಾಗಿ ತೋರಿತು. ಅವನು ರೇಗಿ ಹೇಳಿದ – "ಏನು ನಿಮ್ಮ ತವರುಮನೇಲಿ ತುಪ್ಪದ ಹೊಳೆ ಹರಿಯುತ್ತೆಯೇನೋ !"

ಹೆಣ್ಣು ಬೈಗಳ ಸಹಿಸಿಕೊಂಡಾಳು, ಹೊಡೆತವನ್ನೂ ಸಹಿಸಿಕೊಂಡಾಳು, ಆದರೆ

ಅವಳಿಗೆ ತವರಿನ ನಿಂದನೆಯನ್ನು ಸಹಿಸಿಕೊಳ್ಳಲಾಗುವುದಿಲ್ಲ. ಆನಂದಿ ಮುಖ ಸೊಟ್ಟ ಮಾಡಿ ಹೇಳಿದಳು – "ನಮ್ಮಲ್ಲಿ ಆನೆ ಸತ್ತರೂ ಒಂಬತ್ತು ಲಕ್ಷ ರೂಪಾಯಿಗೆ ಮಾರಾಟವಾಗುತ್ತೆ. ಅಲ್ಲಿ ದಿನಕ್ಕೆ ಇಷ್ಟು ತುಪ್ಪಾನ ಮನೆಯ ಹಜಾಮರು, ಮುಸುರೆಯವರು ತಿಂತಾರೆ."

ಲಾಲಬಿಹಾರಿ ಉರಿದುಹೋದ. ತಟ್ಟೆಯನ್ನೆತ್ತಿ ಅವಳತ್ತ ಎಸೆದು ಹೇಳಿದ – "ನಾಲಿಗೆ ಕಿತ್ತುಹಾಕೇನು ನೋಡು."

ಆನಂದಿಗೂ ಕೋಪ ಬಂತು. ಅವಳ ಮುಖ ಕೆಂಪಾಯಿತು. ಅವಳಂದಳು – "ಅವರಿದ್ದಿದ್ದರೆ ಇವತ್ತು ನಿನಗೆ ರುಚಿ ತೋರಿಸ್ತಿದ್ದೆ."

ಲಾಲಬಿಹಾರಿ ಅವಿದ್ಯಾವಂತ. ಅಸಭ್ಯ. ಅವನಿಗೆ ಸುಮ್ಮನಿರಲಾಗಲಿಲ್ಲ. ಅವನ ಹೆಂಡತಿ ಒಬ್ಬ ಸಾಮಾನ್ಯ ಜಮೀನುದಾರನ ಮಗಳು. ಮನಸ್ಸು ಬಂದಾಗ ಅವಳ ಮೇಲೆ ಕೈ ಮಾಡುತ್ತಲೂ ಇದ್ದ. ಅವನು ಕಾಲಿನ ಮರದ ಎಕ್ಕಡ ಎತ್ತಿ ಆನಂದಿಯ ಕಡೆ ಜೋರಾಗಿ ಎಸೆದೇ ಹೇಳಿದ – "ಯಾರ ದೊಡ್ಡಸ್ತಿಕೆಯ ಮೇಲೆ ನೀನು ಕುಣೀತಿದೀಯೋ ಅವರನ್ನೂ ನೋಡಿಕೋತೀನಿ; ನಿನ್ನನ್ನೂ ನೋಡಿಕೋತೀನಿ !"

ಆನಂದಿ ಕೈಯಿಂದ ಎಕ್ಕಡವನ್ನು ತಡೆದಳು. ಇನ್ನೇನು ತಲೆಗೆ ತಾಕಲಿದ್ದುದು ತಪ್ಪಿತು. ಆದರೆ ಬೆರಳ ಮೇಲೆ ದೊಡ್ಡ ಗಾಯವಾಯಿತು. ಗಾಳಿಗೆ ಸಿಕ್ಕಿದ ತರಗೆಲೆಯಂತೆ ಕೋಪದಿಂದ ನಡುಗುತ್ತ ತನ್ನ ಕೋಣೆಗೆ ಬಂದಳು. ಹೆಂಗಸಿನ ಬಲಸಾಹಸ, ಮಾನಮರ್ಯಾದೆ ಉಳಿಯುವುದು ಗಂಡನಿಂದ. ಅವಳಿಗೆ ಗಂಡನ ಬಲಪೌರುಷಗಳೇ ಅಭಿಮಾನ. ಆನಂದಿ ಕೋಪ ನುಂಗಿಕೊಂಡು ಸುಮ್ಮನಿದ್ದಳು.

## 3

ಶ್ರೀಕಂಠಸಿಂಹ ಪ್ರತಿ ಶನಿವಾರ ಮನೆಗೆ ಬರುತ್ತಿದ್ದ. ಈ ಘಟನೆ ನಡೆದದ್ದು ಗುರುವಾರ. ಆನಂದಿ ಕೋಪದ ಭರದಲ್ಲಿ ಎರಡು ದಿನ ಕೋಣೆ ಬಿಟ್ಟು ಹೊರಬರಲಿಲ್ಲ. ಉಣ್ಣದೆ ತಿನ್ನದೆ ಗಂಡನ ದಾರಿ ಕಾಯುತ್ತಿದ್ದಳು. ಕೊನೆಗೆ ಶನಿವಾರ ಸಂಜೆ ಶ್ರೀಕಂಠ ನಿಯಮಾನುಸಾರ ಮನೆಗೆ ಬಂದ. ಹೊರಗೆ ಕುಳಿತು ಅಲ್ಲಿ ಇಲ್ಲಿಯ ಮಾತು, ದೇಶಕಾಲಗಳ ಸಮಾಚಾರ, ಹೊಸ ಕೋರ್ಟುಕಟ್ಟಲೆಗಳ ಚರ್ಚೆ ಇತ್ಯಾದಿಗಳಲ್ಲಿ ತೊಡಗಿದ. ಈ ವಾರ್ತಾಲಾಪ ರಾತ್ರಿ ಹತ್ತು ಗಂಟೆಯವರೆಗೂ ನಡೆಯುತ್ತಿತ್ತು. ಹಳ್ಳಿಯ ಮುಖ್ಯಸ್ಥರಿಗೆ ಈ ಮಾತುಕತೆಯಿಂದ ತುಂಬ ಆನಂದ ಸಿಗುತ್ತಿತ್ತು; ಊಟ ತಿಂಡಿಯ ಯೋಚನೆಯೂ ಇರುತ್ತಿರಲಿಲ್ಲ. ಶ್ರೀಕಂಠನಿಗೆ ಅವರಿಂದ ತಪ್ಪಿಸಿಕೊಳ್ಳುವುದು ಕಷ್ಟವಾಗುತ್ತಿತ್ತು. ಈ ಎರಡು ಮೂರು ಗಂಟೆಗಳನ್ನು ಆನಂದಿ ಬಹಳ ಕಷ್ಟದಿಂದ ಕಳೆದಳು. ಅಂತೂ ಕೊನೆಗೆ ಊಟದ ಹೊತ್ತಾಯಿತು. ಪಂಚಾಯಿತಿ ಮುಗಿಯಿತು. ತಾವು ತಾವೇ ಇದ್ದಾಗ ಲಾಲಬಿಹಾರಿ ಹೇಳಿದ – "ಅಣ್ಣ, ಅತ್ತಿಗೆಗೆ ಸ್ವಲ್ಪ ನೋಡಿಕೊಂಡು ಮಾತಾಡು ಅಂತ ಹೇಳು. ಇಲ್ಲದೇ

ಹೋದರೆ ಯಾವತ್ತಾದರೂ ಒಂದು ದಿನ ಅನರ್ಥವಾದೀತು!''

ಬೇನೀಮಾಧವಸಿಂಹರೂ ಮಗನ ಪರವಾಗಿ ಸಾಕ್ಷಿ ಹೇಳಿದರು – "ಹೌದು, ಗಂಡಸರಿಗೆ ಎದುರು ಮಾತಾಡೋ ಈ ಸ್ವಭಾವ ಸೊಸೇರಿಗೆ ಒಳ್ಳೇದಲ್ಲ.''

ಲಾಲಬಿಹಾರಿ – "ಅವಳು ದೊಡ್ಡ ಮನುಷ್ಯರ ಮಗಳಾದರೆ ನಾವೇನೂ ಅಡ್ಡೆ ಹೊರೋರಲ್ಲ.''

ಶ್ರೀಕಂಠ ಚಿಂತೆಯ ಧ್ವನಿಯಲ್ಲಿ ಕೇಳಿದ – "ಏನಾಯಿತು ?''

ಲಾಲಬಿಹಾರಿ ಹೇಳಿದ – "ಏನೂ ಇಲ್ಲ. ತಾನೇತಾನಾಗಿ ಎಗರಿಬಿದ್ದಳು. ತನ್ನ ತವರಿನ ಮುಂದೆ ಅವಳಿಗೆ ನಾವು ಯಾವ ಲೆಕ್ಕ ?''

ಶ್ರೀಕಂಠ ಊಟ ಮುಗಿಸಿ ಆನಂದಿಯ ಹತ್ತಿರ ಹೋದ. ಅವಳು ಮುನಿಸಿಕೊಂಡು ಕುಳಿತಿದ್ದಳು. ಈ ಭೂಪತಿಯೂ ಕೊಂಚ ತೀಕ್ಷ್ಣ ಸ್ವಭಾವದವನೇ.

ಆನಂದಿ ಕೇಳಿದಳು – "ಮನಸ್ಸು ಪ್ರಸನ್ನವಾಗಿದೆ, ತಾನೆ ?''

"ತುಂಬ ಪ್ರಸನ್ನವಾಗಿದೆ. ಆದರೆ ಈಚೆಗೆ ನೀನು ಮನೇಲಿ ಇದೇನು ರಂಪ ಶುರು ಮಾಡಿದಿ ?''

ಆನಂದಿಯ ಹುಬ್ಬು ಗಂಟಿಕ್ಕಿತು. ದೇಹ ಕೋಪದಿಂದ ಬೆಂಕಿಯಂತೆ ಉರಿಯತೊಡಗಿತು. ಅವಳಂದಳು – "ನಿಮಗೆ ಈ ಕಿಡಿ ಹಚ್ಚಿದವನು ಯಾವನೋ ಅವನು ಸಿಕ್ಕಿದರೆ ಮುಖ ಸುಟ್ಟುಹಾಕ್ತೀನಿ.''

ಶ್ರೀಕಂಠ – "ಇಷ್ಟು ಯಾಕೆ ಕೋಪಿಸಿಕೋತೀ. ಏನು ವಿಷಯ ಹೇಳು.''

ಆನಂದಿ – "ಏನು ಹೇಳಲಿ, ನನ್ನ ಭಾಗ್ಯ ತಿರುಗುಮುರುಗಾಗಿದೆ, ಅಷ್ಟೇ. ಇಲ್ಲದೇ ಹೋದರೆ ಒಬ್ಬ ಹಳ್ಳಿಯ ಮುಕ್ಕ, ಯಾವನಿಗೆ ಒಂದು ಆಳಿನ ಕೆಲಸ ಮಾಡೋ ಅಷ್ಟು ಯೋಗ್ಯತೆಯೂ ಇಲ್ಲವೋ ಅವನು ನನಗೆ ಎಕ್ಕಡದಲ್ಲಿ ಹೊಡೆದು ಹೀಗೆ ದರ್ಪ ತೋರಿಸ್ತಿದ್ದನೆ ?''

ಶ್ರೀಕಂಠ – "ಸರಿಯಾಗಿ ಏನು ವಿಷಯ ಅಂತ ಹೇಳಿದರೆ ತಿಳಕೋಬಹುದು. ನನಗಂತೂ ಒಂದೂ ಗೊತ್ತಿಲ್ಲ.''

ಆನಂದಿ – "ಮೊನ್ನೆ ನಿಮ್ಮ ಮುದ್ದು ತಮ್ಮ ನನಗೆ ಮಾಂಸ ಬೇಯಿಸಿ ಹಾಕು ಅಂದ. ತಪ್ಪಲೇಲಿ ತುಪ್ಪ ಇದ್ದದ್ದು ಪಾವಿನಷ್ಟು. ಅದಷ್ಟನ್ನೂ ಮಾಂಸಕ್ಕೆ ಹಾಕಿದೆ. ಊಟಕ್ಕೆ ಕೂತುಕೊಂಡಾಗ ತೊವ್ವೇಲಿ ತುಪ್ಪ ಇಲ್ಲ ಅಂದ. ಸರಿ, ಅದನ್ನ ನೆಪ ಮಾಡಿಕೊಂಡು ಅಂದೂ ಆಡಿ ಮಾಡಿದ. ನನಗೆ ಸುಮ್ಮನಿರೋಕ್ಕಾಗಲಿಲ್ಲ. ನಮ್ಮ ಮನೇಲಿ ಇಷ್ಟು ತುಪ್ಪಾನ ಆಳುಕಾಳುಗಳು ತಿಂತಾರೆ, ಯಾರಿಗೂ ಅದರ ಪತ್ತೆ ಸಹ ಸಿಗೋಲ್ಲ ಅಂದೆ. ಸರಿ, ಅಷ್ಟಕ್ಕೇ ಆ ದುಷ್ಟ ನನ್ನ ಮೇಲೆ ಎಕ್ಕಡ ಎಸೆದ. ಕೈಯಿಂದ ತಡೀದೇ ಹೋಗಿದ್ದಿದ್ದರೆ ತಲೆ ಒಡೆದುಹೋಗ್ತಿತ್ತು. ಅವನನ್ನೇ ಕೇಳಿ. ನಾನು ಹೇಳಿದಷ್ಟೂ ನಿಜವೋ ಸುಳ್ಳೋ ಅಂತ.''

ಶ್ರೀಕಂಠನ ಕಣ್ಣು ಕೆಂಪಾಯಿತು. ಅವನಂದ – "ಅಲ್ಲೀ ತನಕ ಹೋಯಿತೋ ಈ ಹುಡುಗನ ಸಾಹಸ!''

ಆನಂದಿ ಹೆಂಗಸರ ಸ್ವಭಾವಕ್ಕೆ ಅನುಗುಣವಾಗಿ ಅಳತೊಡಗಿದಳು. ಕಣ್ಣೀರು

ಹೆಂಗಸರ ಕಣ್ಣೀರೆಯು ಮೋಲಿರುತ್ತವೆ. ಶ್ರೀಕಂಠ ಬಲು ಧೈರ್ಯವಂತ, ಆದರೆ ಶಾಂತಿಯ ಮನುಷ್ಯ. ಅವನಿಗೆ ತೀರಾ ಅಪರೂಪವಾಗಿ ಕೋಪ ಬರುತ್ತಿತ್ತು. ಆದರೆ ಹೆಂಗಸರ ಕಣ್ಣೀರು ಗಂಡಸರ ಕ್ರೋಧಾಗ್ನಿಯನ್ನು ಹೊತ್ತಿಸುವುದರಲ್ಲಿ ಎಣ್ಣೆಯಂತೆ ಕೆಲಸ ಮಾಡುತ್ತದೆ. ಶ್ರೀಕಂಠ ಇಡೀ ರಾತ್ರಿ ಹೊರಳಾಡುತ್ತಿದ್ದ. ಮನಸ್ಸು ಕೆರಳಿದ್ದುದರಿಂದ ರೆಪ್ಪೆ ಸಹ ಮುಚ್ಚಲಿಲ್ಲ. ಬೆಳಗ್ಗೆ ಎದ್ದು ತಂದೆಯ ಹತ್ತಿರ ಹೋಗಿ ಹೇಳಿದ – "ಅಪ್ಪ, ಇನ್ನು ಈ ಮನೇಲಿ ನಾನು ಏಗೋಕ್ಕೆ ಸಾಧ್ಯವಿಲ್ಲ."

ಈ ಬಗೆಯ ಬಂಡಾಯದ ಮಾತನ್ನಾಡಿದುದಕ್ಕೆ ಶ್ರೀಕಂಠ ಎಷ್ಟೋ ಸಲ ತನ್ನ ಅನೇಕ ಮಿತ್ರರನ್ನು ತರಾಟೆಗೆ ತೆಗೆದುಕೊಂಡಿದ್ದ. ಆದರೆ ದೌರ್ಭಾಗ್ಯವೆಂದರೆ ಈಗ ಸ್ವಯಂ ಅವನೇ ಅದೇ ಮಾತುಗಳನ್ನಾಡಬೇಕಾಗಿ ಬಂದಿತ್ತು. ಇನ್ನೊಬ್ಬರಿಗೆ ಉಪದೇಶ ಕೊಡುವುದು ಅದೆಷ್ಟು ಸುಲಭ !

ಬೇನೀಮಾಧವಸಿಂಹ ಗಾಬರಿಗೊಂಡು ಕೇಳಿದರು – "ಯಾಕೆ ?"

"ಯಾಕೆ ಅಂದರೆ ನನಗೂ ನನ್ನ ಮಾನಮರ್ಯಾದೆಗಳ ಬಗ್ಗೆ ಒಂದಿಷ್ಟು ಪರಿವೆ ಇದೆ. ನಿಮ್ಮ ಮನೇಲಿ ಈ ದರ್ಪ ಅನ್ಯಾಯಗಳು ಜೋರಾಗಿವೆ. ಹಿರಿಯರನ್ನ ಆದರಿಸಿ ಗೌರವಿಸಬೇಕಾದವರು ಅವರ ಮೇಲೇ ದಬ್ಬಾಳಿಕೆ ನಡಸ್ತಿದಾರೆ. ಹೊರಗೆ ನಾನು ಇನ್ನೊಬ್ಬರ ಆಳಾಗಿದೀನಿ; ಆದರೆ ಮನೇಲೂ ಆಳಾಗಿರಲಾರೆ. ಇಲ್ಲಿ ನಾನಿಲ್ಲದಾಗ ಹೆಂಗಸರ ಮೇಲೆ ಚಪ್ಪಲಿ ಎಕ್ಕಡಗಳ ಸುರಿಮಳೆಯಾಗ್ತಿದೆ. ಮಾತು ಬಿರುಸಾದರೆ ಪರವಾಗಿಲ್ಲ. ಯಾರಾದರೂ ಒಂದಕ್ಕೆರಡು ಮಾತಾಡಿದರೆ ಸಹಿಸಿಕೋಬಹುದು. ಆದರೆ ನನ್ನನ್ನು ಯಾರಾದರೂ ಗುದ್ದಿ ಒದ್ದಾಗ ನಾನು ಸುಮ್ಮನೇ ಇರೋದು ಎಂದಿಗೂ ಸಾಧ್ಯವಿಲ್ಲ."

ಬೇನೀಮಾಧವಸಿಂಹರಿಗೆ ಏನೂ ಉತ್ತರ ಕೊಡಲಾಗಲಿಲ್ಲ. ಶ್ರೀಕಂಠ ಅವರನ್ನು ಯಾವಾಗಲೂ ಗೌರವಿಸುತ್ತಿದ್ದ. ಶ್ರೀಕಂಠನ ಈ ಕೋಪವನ್ನು ನೋಡಿ ಮುದಿ ಠಾಕೂರರು ಅವಾಕ್ಕಾಗಿ ಹೋದರು. ಅವರು ಇಷ್ಟೇ ಹೇಳಿದರು – "ಮಗು, ಬುದ್ಧಿವಂತನಾಗಿ ನೀನು ಹೀಗೆ ಮಾತಾಡೋದೆ ? ಹೆಂಗಸರು ಮನೆ ಹಾಳುಮಾಡೋದೇ ಹೀಗೆ ! ಅವರನ್ನು ಅತಿಯಾಗಿ ತಲೆಮೇಲೆ ಕೂರಿಸಿಕೊಳ್ಳೋದು ಸರಿಯಲ್ಲ."

ಶ್ರೀಕಂಠ – "ಅದು ನನಗೂ ಗೊತ್ತು. ನಿಮ್ಮ ಆಶೀರ್ವಾದದಿಂದಾಗಿ ನಾನು ಅಷ್ಟೇನೂ ಮೂರ್ಖನಲ್ಲ. ನಾನು ಬುದ್ಧಿ ಹೇಳಿ ಸಮಜಾಯಿಷಿ ಮಾಡಿದ್ದರಿಂದ ಇದೇ ಹಳ್ಳೀಲಿ ಅದೆಷ್ಟೋ ಮನೆಗಳು ಉಳಕೊಂಡಿವೆ ಅಂತ ನಿಮಗೇ ಗೊತ್ತಿದೆ. ಆದರೆ ಯಾವ ಹೆಂಗಸಿನ ಮಾನಮರ್ಯಾದೆಗಳ ರಕ್ಷಣೆಗೆ ನಾನು ಜವಾಬ್ದಾರನೋ ಅವಳ ಮೇಲೆ ಇಂಥ ಘೋರ ಅನ್ಯಾಯ, ಇಂಥ ಪಾಶವೀ ವ್ಯವಹಾರ ನಡೆದಾಗ ನಾನು ಸಹಿಸೋಕ್ಕೆ ಆಗೋಲ್ಲ. ನಾನು ಲಾಲಬಿಹಾರೀಗೆ ಬುದ್ಧಿ ಕಲಿಸದೆ ಸುಮ್ಮನಿದೀನಲ್ಲ ಅದೇ ಪುಣ್ಯ ಅಂತ ತಿಳೀರಿ."

ಈಗ ಬೇನೀಮಾಧವಸಿಂಹರಿಗೂ ಕೋಪ ಬಂತು. ಇಂಥ ಮಾತನ್ನು ಅವರಿಗೆ ಕೇಳುವುದಾಗಲಿಲ್ಲ. ಅವರಂದರು – "ಲಾಲಬಿಹಾರಿ ನಿನ್ನ ತಮ್ಮ, ಅವನಿಂದ

ಏನಾದರೂ ತಪ್ಪಾಗಿದ್ದರೆ ಅವನ ಕಿವಿ ಹಿಂಡು. ಆದರೆ....''

ಶ್ರೀಕಂಠ – ''ಲಾಲಬಿಹಾರೀನ ನಾನು ಈಗ ನನ್ನ ತಮ್ಮ ಅಂಥ ಅಂದುಕೊಂಡಿಲ್ಲ.''

ಬೇನೀಮಾಧವಸಿಂಹ – ''ಹೆಂಡತಿಗೋಸ್ಕರ ?''

ಶ್ರೀಕಂಠ – ''ಅಲ್ಲ, ಅವನ ದುಷ್ಟತನ, ಅವಿವೇಕಗಳ ಕಾರಣದಿಂದಾಗಿ.''

ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನಿದ್ದರು. ಠಾಕೂರ ಸಾಹೇಬರು ಮಗನ ಕೋಪವನ್ನು ಶಾಂತಗೊಳಿಸಬಯಸಿದ್ದರು. ಆದರೆ ಲಾಲಬಿಹಾರಿ ಮಾಡಿದ್ದು ಅನುಚಿತವೆಂದು ಒಪ್ಪಲು ತಯಾರಿರಲಿಲ್ಲ. ಈ ನಡುವೆ ಹಳ್ಳಿಯ ಕೆಲವರು ಗಣ್ಯರು ಹುಕ್ಕಾ ಕುಡಿಯುವ ನೆಪದಿಂದ ಅಲ್ಲಿ ಬಂದು ಕುಳಿತುಕೊಂಡರು. ಶ್ರೀಕಂಠ ಹೆಂಡತಿಯ ಕಾರಣದಿಂದಾಗಿ ತಂದೆಯೊಡನೆ ಜಗಳವಾಡಲು ಹೊರಟಿದ್ದಾನೆಂದು ತಿಳಿದಾಗ ಎಷ್ಟೋ ಮಂದಿ ಹೆಂಗಸರಿಗೆ ಹರ್ಷವಾಯಿತು. ಎರಡೂ ಪಕ್ಷಗಳ ಮಧುರವಾಣಿಯನ್ನು ಕೇಳಲು ಅವರ ಜೀವ ತಳಮಳಿಸುತ್ತಿತ್ತು. ಈ ಕುಟುಂಬ ನೀತಿ ಮಾರ್ಗದಲ್ಲಿ ನಡೆಯುತ್ತಿದ್ದುದನ್ನು ಕಂಡು ಒಳಗಿಂದೊಳಗೇ ಉರಿಯುತ್ತಿದ್ದ ಕುಟಿಲಜನರೂ ಹಳ್ಳಿಯಲ್ಲಿ ಕೆಲವರಿದ್ದರು. ಅವರು ಅನ್ನುತ್ತಿದ್ದರು – ''ಶ್ರೀಕಂಠ ಅಂಜುಬುರುಕ; ಅಪ್ಪನ ಬಾಯಿಗೆ ಹೆದರ್ತಾನೆ,'' ''ವಿದ್ಯೆ ಕಲಿತಿದಾನೆ, ಆದ್ದರಿಂದ ಅವನು ಪುಸ್ತಕದ ಕ್ರಿಮಿ.'' ''ಬೇನೀಮಾಧವಸಿಂಹ ಅವನ ಸಲಹೆ ತೊಗೊಳ್ಳದೇ ಏನು ಕೆಲಸಾನೂ ಮಾಡೋಲ್ಲ. ಇದು ಅವರ ಬೆಪ್ಪುತನ.'' ಈ ಮಹಾನುಭಾವರ ಆಸೆ ಇವತ್ತು ಪೂರ್ತಿಯಾಗುವಂತೆ ಕಂಡಿತು. ಕೆಲವರು ಹುಕ್ಕಾ ಕುಡಿಯುವ ನೆಪದಲ್ಲಿ, ಕೆಲವರು ಕಂದಾಯದ ರಸೀತಿ ತೋರಿಸುವ ನೆಪದಲ್ಲಿ ಅಲ್ಲಿ ಬಂದು ಸೇರಿದರು. ಬೇನೀಮಾಧವಸಿಂಹ ಹಿಂದಿನ ಕಾಲದವರು; ಇದನ್ನು ಅರ್ಥ ಮಾಡಿಕೊಂಡರು. ಆದದ್ದಾಗಲಿ, ಈ ದ್ರೋಹಿಗಳಿಗೆ ಚಪ್ಪಾಳೆ ತಟ್ಟಿ ನಗಲು ಅವಕಾಶ ಕೊಡಬಾರದೆಂದು ನಿಶ್ಚಯಿಸಿದರು. ತಕ್ಷಣ ಶ್ರೀಕಂಠನಿಗೆ ಮೃದುವಾಗಿ ಹೇಳಿದರು – ''ಮಗೂ, ನಾನೂ ನೀನೂ ಬೇರೆಯಲ್ಲ. ನಿನಗೆ ಮನಸ್ಸು ಬಂದ ಹಾಗೆ ಮಾಡು. ಹುಡುಗ ತಪ್ಪುಮಾಡಿದಾನೆ, ನಿಜ.''

ಕಿಡಿಕಿಡಿಯಾಗಿದ್ದ ಅಲಹಾಬಾದಿನ ಅನನುಭವಿ ಗ್ರಾಜುಯೇಟಿಗೆ ಈ ಮಾತು ಅರ್ಥವಾಗಲಿಲ್ಲ. ಅವನಿಗೆ ಡಿಬೇಟಿಂಗ್ ಕ್ಲಬ್ಬಿನಲ್ಲಿ ಪಟ್ಟುಹಿಡಿದು ಮಾತಾಡುವ ಅಭ್ಯಾಸವಾಗಿತ್ತು. ಅಪ್ಪನ ಮಾತಿನ ಸೂಕ್ಷ್ಮ ಅವನಿಗೆ ಹೇಗೆ ತಿಳಿಯಬೇಕು ? ಯಾವ ಅರ್ಥವಿಟ್ಟು ಅಪ್ಪ ಮಾತು ತಿರುಗಿಸಿದ್ದರೋ ಅದು ಅವನ ತಲೆಗೆ ಹೋಗಲಿಲ್ಲ. ಅವನು ಹೇಳಿದ – ''ಲಾಲಬಿಹಾರಿ ಜೊತೆ ನಾನು ಈ ಮನೇಲಿ ಇರೋದು ಸಾಧ್ಯವಿಲ್ಲ.''

''ಮಗೂ, ಬುದ್ಧಿವಂತರಾದವರು ಮೂರ್ಖರ ಮಾತಿಗೆ ಗಮನ ಕೊಡೋದಿಲ್ಲ. ಅವನು ಅರಿಯದ ಹುಡುಗ. ಅವನಿಂದ ಆಗಿರೋ ತಪ್ಪನ್ನ ದೊಡ್ಡವನಾದ ನೀನು ಕ್ಷಮಿಸಿ ಬಿಡು.''

''ಈ ದಾಷ್ಟ್ರ್ಯನ ನಾನು ಎಂದೆಂದಿಗೂ ಸಹಿಸಲಾರೆ. ಈ ಮನೇಲಿ

ಅವನಿರಬೇಕು, ಇಲ್ಲವೇ ನಾನಿರಬೇಕು. ಅವನು ನಿಮಗೆ ಹೆಚ್ಚು ಬೇಕಾದವನಾದರೆ ನನಗೆ ಹೋಗು ಅನ್ನಿ. ನನ್ನ ಭಾರಾನ ನಾನು ನಿಭಾಯಿಸಿಕೊಳ್ಳಬಲ್ಲೆ. ನಾನಿರಬೇಕು ಅನ್ನೋದಾದರೆ ಅವನಿಗೆ ಎಲ್ಲಿ ಬೇಕೋ ಅಲ್ಲಿ ಹೋಗು ಅಂತ ಹೇಳಿಬಿಡಿ. ಇದು ನನ್ನ ಕೊನೆಯ ನಿರ್ಧಾರ."

ಲಾಲಬಿಹಾರಿಸಿಂಹ ಬಾಗಿಲ ಚೌಕಟ್ಟಿಗೆ ಒರಗಿಕೊಂಡು ಸದ್ದಿಲ್ಲದೆ ಅಣ್ಣನ ಮಾತನ್ನು ಕೇಳುತ್ತ ನಿಂತಿದ್ದ. ಅವನು ಅಣ್ಣನನ್ನು ತುಂಬ ಗೌರವಿಸುತ್ತಿದ್ದ. ಅವನಿಗೆ ಶ್ರೀಕಂಠನ ಮುಂದೆ ಮಂಚದ ಮೇಲೆ ಕುಳಿತುಕೊಳ್ಳುವ, ಹುಕ್ಕಾ ಕುಡಿಯುವ ಅಥವಾ ಬೀಡ ತಿನ್ನುವ ಸಾಹಸವಿರಲಿಲ್ಲ. ಅವನು ಸ್ವತಃ ಅಪ್ಪನಿಗೂ ಅಷ್ಟು ಮರ್ಯಾದೆ ಕೊಡುತ್ತಿರಲಿಲ್ಲ. ಶ್ರೀಕಂಠನಿಗೂ ಅವನ ಬಗ್ಗೆ ಮಮತೆ ಇತ್ತು. ಎಚ್ಚರದಲ್ಲಿರುವಾಗ ಅವನು ತಮ್ಮನನ್ನು ಅಟ್ಟಿಕೊಳ್ಳುತ್ತಲೂ ಇರಲಿಲ್ಲ. ಅಲಹಾಬಾದಿನಿಂದ ಬರುವಾಗಲೆಲ್ಲಾ ಅವನಿಗೆಂದು ಒಂದಲ್ಲ ಒಂದು ಉಡುಗೊರೆ ತಂದುಕೊಡುತ್ತಿದ್ದ. ತಮ್ಮನಿಗೆಂದು ಗದೆಯ ಜೋಡಿ ಮಾಡಿಸಿಕೊಟ್ಟಿದ್ದವನು ಅವನೇ. ಕಳೆದ ವರ್ಷ ಲಾಲಬಿಹಾರಿ ತನಗಿಂತ ಒಂದೂವರೆ ಪಟ್ಟು ಗಾತ್ರದ ಪೈಲ್ವಾನನನ್ನು ನಾಗರಪಂಚಮಿಯ ದಿನ ಮೋಸದಿಂದ ಅಪ್ಪಳಿಸಿದಾಗ ಶ್ರೀಕಂಠ ಪುಲಕಿತನಾಗಿ, ಅಖಾಡಾಕ್ಕೇ ನುಗ್ಗಿ ಅವನನ್ನು ತಬ್ಬಿಕೊಂಡಿದ್ದ; ಐದು ರೂಪಾಯಿನ ಚಿಲ್ಲರೆಯನ್ನು ತಮ್ಮನ ಮುಖಕ್ಕೆ ನಿವಾಳಿಸಿ ದೃಷ್ಟಿ ತೆಗೆದು ಅಖಾಡಾದಲ್ಲಿ ಎರಚಿದ್ದ. ಅಂತಹ ಅಣ್ಣನ ಬಾಯಿಂದ ಇವತ್ತು ಇಂತಹ ಹೃದಯವಿದ್ರಾವಕವಾದ ಮಾತುಗಳನ್ನು ಕೇಳಿ ಲಾಲಬಿಹಾರಿಗೆ ತುಂಬ ದುಃಖವಾಯಿತು. ಅವನು ಬಿಕ್ಕಿಬಿಕ್ಕಿ ಅಳತೊಡಗಿದ. ತನ್ನ ತಪ್ಪಿಗೆ ಪಶ್ಚಾತ್ತಾಪಪಡುತ್ತಿದ್ದನೆಂಬುದರಲ್ಲಿ ಸಂದೇಹವಿರಲಿಲ್ಲ. ಅಣ್ಣ ಬರುವ ಹಿಂದಿನ ದಿನದಿಂದಲೇ ಅವನು ಏನನ್ನುವನೋ ಎಂಬ ಭಯದಿಂದ ಲಾಲಬಿಹಾರಿಯ ಎದೆ ಡವಗುಟ್ಟುತ್ತಿತ್ತು. ಅವನ ಮುಂದೆ ಹೋಗುವುದು ಹೇಗೆ, ಮಾತಾಡುವುದು ಹೇಗೆ, ಅವನ ಕಡೆ ಕಣ್ಣೆತ್ತಿ ನೋಡುವುದು ಹೇಗೆ ಎಂದೆಲ್ಲ ಯೋಚಿಸುತ್ತಿದ್ದ. ತನ್ನನ್ನು ಕರೆಸಿ ಅಣ್ಣ ಸಮಾಧಾನ ಹೇಳುತ್ತಾನೆಂದು ಅವನಂದುಕೊಂಡಿದ್ದ. ಇವತ್ತು ತನ್ನ ನಿರೀಕ್ಷೆಗೆ ವಿರುದ್ಧವಾಗಿ ಅಣ್ಣ ನಿರ್ದಯತೆಯ ಮೂರ್ತಿಯಾಗಿರುವುದು ಕಂಡಿತು. ಅವನು ಮೂರ್ಖ. ಅಣ್ಣ ತನಗೆ ಅನ್ಯಾಯ ಮಾಡುತ್ತಿದ್ದಾನೆಂದು ಅವನ ಮನಸ್ಸು ಹೇಳುತ್ತಿತ್ತು. ಶ್ರೀಕಂಠನೇನಾದರೂ ಅವನೊಬ್ಬನನ್ನೇ ಒಂಟಿಯಾಗಿ ಕರೆದು ಕಠೋರವಾಗಿ ಒಂದೆರಡು ಮಾತಾಡಿದ್ದರೆ, ಅಷ್ಟೇಕೆ ಕಪಾಳಕ್ಕೆ ಎರಡು ಬಿಗಿದಿದ್ದರೆ ಸಹ ಅವನಿಗೆ ಇಷ್ಟು ದುಃಖವಾಗುತ್ತಿರಲಿಲ್ಲ. ಆದರೆ ಇನ್ನು ತನ್ನ ಮುಖ ನೋಡುವುದಿಲ್ಲವೆಂದು ಅಣ್ಣ ಅಂದದ್ದು ಲಾಲಬಿಹಾರಿಗೆ ಸಹಿಸಲಾಗಲಿಲ್ಲ. ಅವನು ಅಳುತ್ತ ಮನೆಗೆ ಬಂದ. ಕೋಣೆಗೆ ಹೋಗಿ ಬಟ್ಟೆ ತೊಟ್ಟುಕೊಂಡ; ತಾನು ಅಳುತ್ತಿರುವುದು ಯಾರಿಗೂ ಗೊತ್ತಾಗಬಾರದೆಂದು ಕಣ್ಣೊರೆಸಿಕೊಂಡ. ಆಮೇಲೆ ಆನಂದಿಯ ಕೋಣೆಯ ಬಾಗಿಲ ಬಳಿ ಬಂದು ಹೇಳಿದ – "ಅತ್ತಿಗೆ, ಇನ್ನುಮೇಲೆ ನನ್ನ ಜೊತೆ ಈ ಮನೇಲಿರೋಲ್ಲ ಅಂತ ಅಣ್ಣ ನಿರ್ಧಾರ ಮಾಡಿದಾನೆ. ಅವನಿಗೆ ನನ್ನ ಮುಖ ನೋಡೋಕ್ಕೂ ಇಷ್ಟವಿಲ್ಲ. ಆದ್ದರಿಂದ ನಾನೂ

ಹೋಗ್ತೀನಿ. ಅವನಿಗೆ ಮತ್ತೆ ಮುಖ ತೋರಿಸೋಲ್ಲ! ನನ್ನಿಂದಾದ ಅಪರಾಧಾನ ಕ್ಷಮಿಸಿಬಿಡು.'' ಹೀಗೆ ಹೇಳುವಾಗ ಲಾಲಬಿಹಾರಿಯ ಗಂಟಲು ಬಿಗಿದಿತ್ತು.

## 4

ಲಾಲಬಿಹಾರಿಸಿಂಹ ತಲೆತಗ್ಗಿಸಿ ಆನಂದಿಯ ಕೋಣೆಯ ಬಾಗಿಲಲ್ಲಿ ನಿಂತಿರುವಾಗಲೇ ಶ್ರೀಕಂಠಸಿಂಹನೂ ಕಣ್ಣು ಕೆಂಪಗೆ ಮಾಡಿಕೊಂಡು ಹೊರಗಿನಿಂದ ಬಂದ. ತಮ್ಮ ನಿಂತಿರುವುದನ್ನು ನೋಡಿ ತಿರಸ್ಕಾರದಿಂದ ಮುಖ ತಿರುಗಿಸಿಕೊಂಡು ಕಂಡೂ ಕಾಣದಂತೆ ಹೊರಟುಹೋದ; ತಮ್ಮನ ನೆರಳಿನಿಂದಲೂ ದೂರ ಓಡುತ್ತಿದ್ದಾನೆಯೋ ಎಂಬಂತೆ.

ಆನಂದಿ ಲಾಲಬಿಹಾರಿಯ ಮೇಲೆ ದೂರನ್ನೇನೋ ಹೇಳಿದ್ದಳು. ಆದರೆ ಈಗ ಒಳಗಿಂದೊಳಗೇ ಪಶ್ಚಾತ್ತಾಪಪಡುತ್ತಿದ್ದಳು. ಅವಳು ಸ್ವಭಾವದಿಂದ ದಯವಂತೆ. ಮಾತು ಇಷ್ಟೆಲ್ಲ ಬೆಳೆಯುವುದೆಂದು ಅವಳು ಸ್ವಲ್ಪವೂ ಯೋಚಿಸಿರಲಿಲ್ಲ. ಗಂಡ ಇಷ್ಟೇಕೆ ಸಿಟ್ಟಾಗಿದ್ದಾನೆಂದು ಅವನ ಮೇಲೆಯೇ ಚಿಟಿಚಿಟಿಯಾದಳು. ತನ್ನನ್ನು ಇನ್ನು ಅಲಹಾಬಾದಿಗೆ ಹೊರಡೆಂದರೆ ಏನು ಮಾಡುವುದೆಂದು ಅವಳಿಗೆ ಭಯವೂ ಆಗಿತ್ತು. ಈ ಮಧ್ಯೆ ಲಾಲಬಿಹಾರಿ ಬಾಗಿಲಲ್ಲಿ ನಿಂತುಕೊಂಡು "ನಾನು ಹೋಗ್ತೀನಿ. ನನ್ನಿಂದ ಆದ ಅಪರಾಧ ಕ್ಷಮಿಸಿಬಿಡು." ಎಂದದ್ದನ್ನು ಕೇಳಿದಾಗಲಂತೂ ಅವಳಲ್ಲಿ ಉಳಿದಿದ್ದ ಕೋಪವೂ ನೀರಾಗಿ ಹೋಯಿತು. ಅವಳು ಅಳತೊಡಗಿದಳು. ಮನಸ್ಸಿನ ಕೊಳೆ ತೊಳೆಯುವುದಕ್ಕೆ ಕಣ್ಣೀರಿಗಿಂತ ಉಪಯುಕ್ತವಾದ ವಸ್ತು ಇನ್ನೊಂದಿಲ್ಲ.

ಶ್ರೀಕಂಠನ ಕಡೆ ನೋಡಿ ಆನಂದಿ ಹೇಳಿದಳು – "ಲಾಲಾ ಹೊರಗಡೆ ನಿಂತುಕೊಂಡು ತುಂಬ ಅಳ್ತಿದಾನೆ."

ಶ್ರೀಕಂಠ – "ನಾನೇನು ಮಾಡಲಿ?"

ಆನಂದಿ – "ಒಳಕ್ಕೆ ಕರೀರಿ. ನನ್ನ ನಾಲಿಗೆಗೆ ಬೆಂಕಿ ಹಾಕಿತು! ನಾನೆಲ್ಲಿ ಈ ಜಗಳ ಹಚ್ಚಿದೆ."

"ನಾನು ಕರೆಯೋಲ್ಲ."

"ಆಮೇಲೆ ಪಶ್ಚಾತ್ತಾಪಪಡ್ತೀರಿ. ಅವನು ತುಂಬ ನೊಂದಿದಾನೆ. ಇನ್ನು ಎಲ್ಲಾದರೂ ಹೊರಟುಹೋದಾನು."

ಶ್ರೀಕಂಠ ಏಳಲಿಲ್ಲ. ಅಷ್ಟರಲ್ಲಿ ಲಾಲಬಿಹಾರಿ ಮತ್ತೆ ಹೇಳಿದ – "ಅತ್ತಿಗೆ, ಅಣ್ಣನಿಗೆ ನನ್ನ ನಮಸ್ಕಾರ ಹೇಳಿಬಿಡು. ಅವನು ನನ್ನ ಮುಖಾನ ನೋಡೋಲ್ಲವಂತೆ. ಆದ್ದರಿಂದ ನಾನು ಅವನಿಗೆ ಮುಖ ತೋರಿಸೋಲ್ಲ."

ಲಾಲಬಿಹಾರಿ ಇಷ್ಟು ಹೇಳಿ ಬಾಗಿಲು ಕಡೆ ಹೆಜ್ಜೆ ಹಾಕಿದ. ಆನಂದಿ ಕೋಣೆಯಿಂದ ಹೊರಬಂದು ಅವನ ಕೈ ಹಿಡಿದುಕೊಂಡಳು. ಲಾಲಬಿಹಾರಿ ಹಿಂತಿರುಗಿ ನೋಡಿದ. ಅವನ ಕಣ್ಣಲ್ಲಿ ನೀರು ತುಂಬಿತ್ತು. ಅವನಂದ – "ನಾನು ಹೋಗ್ತೀನಿ ಬಿಡು."

ಆನಂದಿ – "ಎಲ್ಲಿಗೆ ಹೋಗ್ತಿ ?"

ಲಾಲಬಿಹಾರಿ – "ಎಲ್ಲಿ ಯಾರೂ ನನ್ನ ಮುಖ ನೋಡೋಲ್ಲವೋ ಅಲ್ಲಿಗೆ."

"ನಾನು ಹೋಗೋಕ್ಕೆ ಬಿಡೋಲ್ಲ."

"ನನಗೆ ನಿಮ್ಮಗಳ ಜೊತೆ ಇರೋಕ್ಕೆ ಯೋಗ್ಯತೆಯಿಲ್ಲ."

"ನೀನು ಇನ್ನೊಂದು ಹೆಜ್ಜೆ ಮುಂದಿಟ್ಟರೂ ನನ್ನ ಆಣೆ."

"ನನ್ನ ವಿಷಯದಲ್ಲಿ ಅಣ್ಣನ ಮನಸ್ಸು ಸರಿಹೋಯಿತು ಅಂತ ಗೊತ್ತಾಗೋವರೆಗೂ ನಾನು ಖಂಡಿತ ಈ ಮನೇಲಿ ಇರೋಲ್ಲ."

"ದೇವರಾಣೆಯಾಗಿ ಹೇಳ್ತೀನಿ. ನಿನ್ನ ಬಗ್ಗೆ ನನ್ನ ಮನಸ್ಸಿನಲ್ಲಿ ಒಂದಿಷ್ಟೂ ಕಲ್ಮಶವಿಲ್ಲ."

ಈಗ ಶ್ರೀಕಂಠನ ಹೃದಯವೂ ಕರಗಿತು. ಹೊರಬಂದು ಅವನು ಲಾಲಬಿಹಾರಿಯನ್ನು ಅಪ್ಪಿಕೊಂಡ. ಅಣ್ಣತಮ್ಮಂದಿರಿಬ್ಬರೂ ಬಿಕ್ಕಿಬಿಕ್ಕಿ ಅತ್ತರು. ಲಾಲಬಿಹಾರಿ ಅಳುತ್ತ ಹೇಳಿದ – "ಅಣ್ಣ, ಇನ್ನು ಮುಂದೆ ಎಂದೆಂದಿಗೂ ಮುಖ ನೋಡೋಲ್ಲ ಅಂತ ಮಾತ್ರ ಅನ್ನಬೇಡ. ಅದೊಂದನ್ನು ಬಿಟ್ಟು ನೀನು ಇನ್ನು ಯಾವ ಶಿಕ್ಷೆ ಕೊಟ್ಟರೂ ತೊಗೋತೀನಿ."

"ಲಲ್ಲೂ, ಈ ಮಾತನ್ನೆಲ್ಲಾ ಖಂಡಿತ ಮರೆತು ಬಿಡು. ಇನ್ನುಮೇಲೆ ಇಂಥ ಸಂದರ್ಭ ಬರೋಲ್ಲ" – ಶ್ರೀಕಂಠನ ಧ್ವನಿ ನಡಗುತ್ತಿತ್ತು.

ಬೇನೀಮಾಧವಸಿಂಹರು ಹೊರಗಿನಿಂದ ಬರುತ್ತಿದ್ದರು. ಸೋದರರಿಬ್ಬರೂ ಅಪ್ಪಿಕೊಂಡಿರುವುದನ್ನು ನೋಡಿ ಆನಂದಪುಲಕಿತರಾದರು. ಅವರಂದರು – "ದೊಡ್ಡ ಮನುಷ್ಯರ ಮನೆಯ ಮಗಳು ಅಂದರೆ ಹೀಗೆಯೇ !"

# 14. ಮುದಿ ಅತ್ತೆ

ಮುಪ್ಪು ಸಾಧಾರಣವಾಗಿ ಬಾಲ್ಯದ ಪುನರಾವರ್ತನೆ. ಮುದಿ ಅತ್ತೆಯಲ್ಲಿ ಬಾಯಿರುಚಿಯು ಹೊರತು ಬೇರೆ ಯಾವ ಚಟುವಟಿಕೆಯೂ ಉಳಿದಿರಲಿಲ್ಲ. ತನ್ನ ದುಃಖಕಷ್ಟಗಳ ಕಡೆಗೆ ಜನರ ಗಮನವನ್ನು ಸೆಳೆಯಲು ಅವಳಿಗೆ ಕಣ್ಣೀರಿನ ಹೊರತು ಬೇರೆ ಯಾವ ಆಸರೆಯೂ ಇರಲಿಲ್ಲ. ಕಣ್ಣು, ಕೈಕಾಲು ಹಾಗೂ ಉಳಿದೆಲ್ಲ ಇಂದ್ರಿಯಗಳೂ ನಿಷ್ಪ್ರಯೋಜಕವಾಗಿದ್ದವು. ಮುದಿ ಅತ್ತೆ ಯಾವಾಗಲೂ ನೆಲದ ಮೇಲೆ ಒರಗಿರುತ್ತಿದ್ದಳು. ಮನೆಯವರು ಅವಳ ಇಚ್ಛೆಗೆ ವಿರುದ್ಧವಾಗಿ ವರ್ತಿಸಿದಾಗ, ಊಟ ಹೊತ್ತು ಮೀರಿದಾಗ ಅಥವಾ ಅದರ ಪರಿಮಾಣ ಪೂರ್ತಿಯಾಗದಿದ್ದಾಗ, ಅಥವಾ ಅಂಗಡಿಯಿಂದ ಏನನ್ನಾದರೂ ತಂದು ಅದು ತನ್ನವರೆಗೆ ಬಾರದೆ ಹೋದಾಗ ಅವಳು ಅಳಲು ಪ್ರಾರಂಭಿಸುತ್ತಿದ್ದಳು. ಅವಳ ಅಳು ಸಾಧಾರಣವಾದ ಅಳುವಾಗಿರಲಿಲ್ಲ; ಗಂಟಲು ಕಿತ್ತುಬರುವಂತೆ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು.

ಅವಳ ಗಂಡ ಸ್ವರ್ಗವಾಸಿಯಾಗಿ ಅದೆಷ್ಟೋ ಕಾಲವಾಗಿತ್ತು. ಮಕ್ಕಳೆಲ್ಲರೂ ಯೌವನದಲ್ಲೇ ಸತ್ತಿದ್ದರು. ಈಗ ಒಬ್ಬ ಸೋದರಳಿಯನ ಹೊರತು ಅವಳಿಗೆ ಬೇರೆ ಯಾರೂ ದಿಕ್ಕಿರಲಿಲ್ಲ. ಅವಳು ತನ್ನ ಸರ್ವಸ್ವವನ್ನೂ ಆ ಸೋದರಳಿಯನ ಹೆಸರಿಗೆ ಬರೆದುಬಿಟ್ಟಿದ್ದಳು. ಆಸ್ತಿ ಬರೆಸಿಕೊಳ್ಳುವ ಹೊತ್ತಿನಲ್ಲಿ ಸೋದರಳಿಯ ಬಾಯಿ ತುಂಬ ಮಾತುಕೊಟ್ಟಿದ್ದ. ಆದರೆ ಆ ವಾಗ್ದಾನಗಳೆಲ್ಲವೂ ದಲ್ಲಾಳಿಗಳು ಗಿರಾಕಿಗಳಿಗೆ ಕೊಡುವ ಪೊಳ್ಳು ಭರವಸೆಗಳಂತಿದ್ದವು. ಆ ಆಸ್ತಿಯಿಂದ ಬರುತ್ತಿದ್ದ ವಾರ್ಷಿಕ ಆದಾಯ ನೂರೈವತ್ತು – ಇನ್ನೂರು ರೂಪಾಯಿಗೇನೂ ಕಡಿಮೆಯಿರಲಿಲ್ಲ. ಆದರೂ ಸಹ ಮುದಿ ಅತ್ತೆಗೆ ಹೊಟ್ಟೆ ತುಂಬ ಅನ್ನ ಸಿಗುವುದೂ ಕಷ್ಟವಾಗಿತ್ತು. ಇದಕ್ಕೆ ಅವಳ ಸೋದರಳಿಯ ಪಂಡಿತ ಬುದ್ಧೀರಾಮ ಕಾರಣನೋ ಅಥವಾ ಅವನ ಅರ್ಧಾಂಗಿಣಿ ಶ್ರೀಮತಿ ರೂಪಳೋ ಎಂದು ನಿಶ್ಚಯಿಸುವುದು ಸುಲಭವಲ್ಲ. ಬುದ್ಧೀರಾಮ ಸ್ವಭಾವದಿಂದ ಒಳ್ಳೆಯವನಾಗಿದ್ದ – ಆದರೆ ಅವನ ಗಂಟು ಭದ್ರವಾಗಿರುವವರೆಗೆ ಮಾತ್ರ. ರೂಪ ಬಿಸಿ ಸ್ವಭಾವದವಳಾದರೂ ದೇವರಿಗೆ ಹೆದರಿ ನಡೆಯುತ್ತಿದ್ದಳು. ಮುದಿ ಅತ್ತೆಗೆ ಬುದ್ಧೀರಾಮನ ಒಳ್ಳೆತನ ಕೆಟ್ಟನಿಸುವಷ್ಟು ರೂಪಳ ಬಿರುಸು ಸ್ವಭಾವ ಕೆಟ್ಟನಿಸುತ್ತಿರಲಿಲ್ಲ.

ಬುದ್ಧೀರಾಮನಿಗೆ ಒಮ್ಮೊಮ್ಮೆ ತನ್ನ ಕೆಟ್ಟ ನಡತೆಯನ್ನು ಕಂಡು

ದುಃಖವಾಗುತ್ತಿತ್ತು. ತಾನು ದೊಡ್ಡ ಮನುಷ್ಯನೆನಿಸಿಕೊಂಡಿರುವುದು ಅತ್ತೆಯ ಆಸ್ತಿಯಿಂದಾಗಿಯೇ ಅಲ್ಲವೇ ಎಂದು ಅವನು ಯೋಚಿಸುತ್ತಿದ್ದ. ಕೇವಲ ಬಾಯಿಮಾತಿನ ಭರವಸೆಯಿಂದಾಗಲೀ, ಒಣ ಸಹಾನುಭೂತಿಯಿಂದಾಗಲೀ ಪರಿಸ್ಥಿತಿ ಸುಧಾರಿಸುವಂತಿದ್ದರೆ ಅವನದೇನೂ ಅಡ್ಡಿಯಿರಲಿಲ್ಲ. ಆದರೆ ಅತಿ ವೆಚ್ಚದ ಭಯ ಅವನ ಸದಿಚ್ಛೆಗಳೆಲ್ಲವನ್ನೂ ಅದುಮಿ ಹಿಡಿದಿತ್ತು. ಮನೆಯಲ್ಲಿ ಯಾರಾದರೂ ಸಜ್ಜನರು ಬಂದು ಕೂತಿರುವಾಗ ಅತ್ತೆ ರಾಗಾಲಾಪನೆಗೆ ಷುರು ಮಾಡಿದರೆ ಅವನು ಕಿಡಿಕಿಡಿಯಾಗುತ್ತಿದ್ದ; ಒಳಗೆ ಬಂದು ಅವಳನ್ನು ಜೋರಾಗಿ ಬೈಯುತ್ತಿದ್ದ. ಹುಡುಗರಿಗೆ ಮುದುಕರನ್ನು ಕಂಡರೆ ದ್ವೇಷ ಹುಟ್ಟುವುದು ಸ್ವಾಭಾವಿಕ. ತಂದೆತಾಯಿಗಳ ಈ ವರ್ತನೆಯನ್ನು ಕಂಡ ಮನೆಯ ಮಕ್ಕಳು ಮುದಿ ಅತ್ತೆಯನ್ನು ಇದ್ದಿದ್ದೂ ಸತಾಯಿಸುತ್ತಿದ್ದರು. ಒಬ್ಬ ಚಿವುಟಿ ಓಡಿಹೋದರೆ ಇನ್ನೊಬ್ಬ ಮೈಮೇಲೆ ಉಗುಳಿ ಓಡಿಹೋಗುತ್ತಿದ್ದ. ಅತ್ತೆ ಬೊಬ್ಬೆಯಿಟ್ಟು ಅಳುತ್ತಿದ್ದಳು. ಆದರೆ ಅತ್ತೆ ಅಳುವುದು ಬರಿಯ 'ಹೊಟ್ಟೆಯ ಕಾರಣಕ್ಕಾಗಿ ಎಂಬುದು ಪ್ರಸಿದ್ಧವಾಗಿತ್ತು. ಆದ ಕಾರಣ ಅವಳ ಆರ್ತನಾದಕ್ಕೆ ಯಾರೂ ಗಮನ ಕೊಡುತ್ತಿರಲಿಲ್ಲ. ಆದರೆ ಅತ್ತೆ ಕೋಪದಿಂದ ಮಕ್ಕಳಿಗೆ 'ಬೈಯತೊಡಗಿದಾಗ ರೂಪ ಖಂಡಿತವಾಗಿಯೂ ಅಲ್ಲಿ ಬರುತ್ತಿದ್ದಳು. ಆ ಭಯದಿಂದಾಗಿ ಅತ್ತೆ ತನ್ನ ನಾಲಿಗೆಯನ್ನು ಅಪರೂಪವಾಗಿ ಉಪಯೋಗಿಸುತ್ತಿದ್ದಳು – ಅದರಲ್ಲೂ ತೊಂದರೆಯ ಪರಿಹಾರಕ್ಕೆ ಬರಿಯ ಅಳುವೇ ಹೆಚ್ಚು ಉಪಯುಕ್ತವಾಗಿದೆಯೆಂದಮೇಲೆ !

ಇಡೀ ಪರಿವಾರದಲ್ಲಿ ಯಾರಾದರೂ ಅತ್ತೆಯನ್ನು ಪ್ರೀತಿಸುತ್ತಿದ್ದುದಾದರೆ ಅದು ಬುದ್ಧಿರಾಮನ ಕಿರಿಯ ಮಗಳು ಲಾಡಲಿ ಮಾತ್ರ. ಲಾಡಲಿ ಅಣ್ಣಂದಿರ ಭಯದಿಂದಾಗಿ ತನ್ನ ಪಾಲಿನ ಕಡಲೆ ಬೆಲ್ಲವನ್ನು ಮುದಿ ಅತ್ತೆಯ ಹತ್ತಿರ ಕುಳಿತುಕೊಂಡು ತಿನ್ನುತ್ತಿದ್ದಳು. ಅದೇ ಅವಳ ರಕ್ಷಣೆಯ ಸ್ಥಳವಾಗಿತ್ತು. ಅತ್ತೆಯ ದುರಾಸೆಯಿಂದಾಗಿ ಲಾಡಲಿಗೆ ನಷ್ಟವಾಗುತ್ತಿತ್ತು ನಿಜ ! ಆದರೂ ಕೂಡ ಆ ನಷ್ಟ ಅಣ್ಣಂದಿರ ಅನ್ಯಾಯದ ಫಲವಾಗಿ ಆಗುತ್ತಿದ್ದುದಕ್ಕಿಂತ ಬಹುಪಾಲು ಕಡಿಮೆಯದು. ಈ ಸ್ವಾರ್ಥಾನುಕೂಲತೆಯೇ ಅತ್ತೆ – ಲಾಡಲಿಯರ ಸಂಬಂಧಕ್ಕೆ ಪ್ರೀತಿಸಹಾನುಭೂತಿಗಳ ರೂಪಕೊಟ್ಟಿತ್ತು.

## 2

ರಾತ್ರಿಯ ಹೊತ್ತು. ಬುದ್ಧಿರಾಮನ ಮನೆಬಾಗಿಲಲ್ಲಿ ಶಹನಾಯಿ ವಾದ್ಯ ನಡೆಯುತ್ತಿತ್ತು. ಹಳ್ಳಿಯ ಹುಡುಗರ ಒಂದು ಹಿಂಡು ವಿಸ್ಮಯದಿಂದ ಮಿಕಮಿಕ ನೋಡುತ್ತ ಸಂಗೀತದ ರಸಾಸ್ವಾದನೆ ಮಾಡುತ್ತ ನಿಂತಿತ್ತು. ಹೊರಗೆ ಮಂಚಗಳ ಮೇಲೆ ಅತಿಥಿಗಳು ವಿಶ್ರಮಿಸುತ್ತ ಆಳುಗಳಿಂದ ಕಾಲೊತ್ತಿಸಿಕೊಳ್ಳುತ್ತಿದ್ದರು. ಬ್ರಾಹ್ಮಣನೊಬ್ಬ ಹತ್ತಿರದಲ್ಲಿ ನಿಂತು ಬುದ್ಧಿರಾಮನ ವಂಶದ ಬಿರುದಾವಳಿಗಳನ್ನು

ಪಠಿಸುತ್ತಿದ್ದ. ಅತಿಥಿಗಳಲ್ಲಿ ಭಾವಜ್ಞರಾದವರು ಯಾರಾದರೂ ಅದನ್ನು ಕೇಳಿ 'ವಾಹ್' ಅಂದರೆ ಆ ಶಭಾಸ್‌ಗಿರಿಗೆ ತಾನೇ ಅಧಿಕಾರಿಯೆಂಬಂತೆ ಸಂತೋಷಪಡುತ್ತಿದ್ದ. ಇಂಗ್ಲಿಷ್ ಕಲಿತ ಒಬ್ಬಿಬ್ಬರು ಈ ಆಚರಣೆಯ ಬಗ್ಗೆ ಉದಾಸೀನದಿಂದಿದ್ದರು. ಈ ಹಳ್ಳಿಯ ಕೂಟದಲ್ಲಿ ಮಾತನಾಡುವುದು ಅಥವಾ ಒಂದಾಗುವುದು ಸಹ ತಮ್ಮ ಗೌರವಕ್ಕೆ ಕುಂದೆಂದೆ ಅವರು ತಿಳಿದಿದ್ದರು.

ಇವತ್ತು ಬುದ್ಧೀರಾಮನ ಹಿರಿಯ ಮಗ ಸುಖರಾಮನ ಮದುವೆಯ ಸಂದರ್ಭದಲ್ಲಿ ಹೆಣ್ಣಿನ ಕಡೆಯಿಂದ 'ತಿಲಕ' ಬಂದಿದೆ. ಈ ಉತ್ಸವ ಆ ಸಂಬಂಧವಾಗಿಯೇ. ಮನೆಯೊಳಗೆ ಹೆಂಗಸರು ಹಾಡುತ್ತಿದ್ದಾರೆ. ರೂಪ ಅತಿಥಿಗಳ ಭೋಜನ ವ್ಯವಸ್ಥೆ ಮಾಡುವುದರಲ್ಲಿ ಮಗ್ನಳಾಗಿದ್ದಾಳೆ. ಒಲೆಗಳ ಮೇಲೆ ಬಾಂಡಲೆಗಳನ್ನು ಏರಿಸಿದ್ದಾರೆ. ಒಂದರಿಂದ ಪೂರಿ – ಕಚೋರಿಗಳು ಹೊರಬರುತ್ತಿದ್ದರೆ ಇನ್ನೊಂದರಲ್ಲಿ ಇತರ ಭಕ್ಷ್ಯಭೋಜ್ಯಗಳು ತಯಾರಾಗುತ್ತಿವೆ. ಒಂದು ದೊಡ್ಡ ಕೊಳದಪ್ಪಲೆಯಲ್ಲಿ ಪಲ್ಯಬೇಯುತ್ತಿದೆ. ಹಸಿವನ್ನು ಚುರುಕುಗೊಳಿಸುವ ತುಪ್ಪ ಮಸಾಲೆಗಳ ಘಮ ಎಲ್ಲೆಲ್ಲೂ ಹರಡಿದೆ.

ಮುದಿ ಅತ್ತೆ ತನ್ನ ಕೊಠಡಿಯಲ್ಲಿ ದುಃಖದಲ್ಲಿ ಮುಳುಗಿದ ವೇದಾಂತಿಯಂತೆ ಕುಳಿತಿದ್ದಳು. ಈ ಸ್ವಾದಮಿಶ್ರಿತವಾದ ಸುಗಂಧ ಅವಳ ಶಾಂತಿಗೆ ಭಂಗತಂದಿತ್ತು. ಅವಳು ಮನಸ್ಸಿನಲ್ಲಿಯೇ ಯೋಚಿಸುತ್ತಿದ್ದಳು – "ಪ್ರಾಯಶಃ ನನಗೆ ಪೂರಿ ಸಿಗೋಲ್ಲವೇನೋ. ಇಷ್ಟು ಹೊತ್ತಾಯಿತು. ಇನ್ನೂ ಯಾರೂ ಊಟ ತೊಗೊಂಡು ಬರಲಿಲ್ಲ. ಎಲ್ಲರೂ ಊಟ ಮುಗಿಸಿದ್ದಾರೆಂದು ಕಾಣುತ್ತೆ. ನನಗೇನೂ ಉಳಿದಿರಲಾರದು." ಹೀಗೆ ಯೋಚಿಸುತ್ತಿದ್ದಂತೆ ಅವಳಿಗೆ ಅಳು ಬಂತು. ಆದರೆ ಅಪಶಕುನವಾಗುವುದೆಂಬ ಭಯದಿಂದ ಅವಳಿಗೆ ಅಳಲಾಗಲಿಲ್ಲ.

"ಆಹಾ, ಎಂತಹ ಕಂಪು. ಈಗ ನನ್ನನ್ನು ಯಾರು ಕೇಳ್ತಾರೆ? ರೊಟ್ಟಿಗೇ ಗತಿಯಿಲ್ಲದಾಗ ಹೊಟ್ಟೆತುಂಬ ಪೂರಿ ಸಿಗೋ ಭಾಗ್ಯ ಎಲ್ಲಿ ಬಂತು?" ಹೀಗೆ ಯೋಚಿಸುವಾಗ ಅವಳಿಗೆ ಅಳು ಒತ್ತಿಬಂತು. ಎದೆಯಲ್ಲಿ ನೋವಿನಂತಹದು ಏನೋ ಕಾಣಿಸಿಕೊಂಡಿತು. ಆದರೆ ರೂಪಳಿಗೆ ಹೆದರಿ ಅವಳು ಮತ್ತೆ ಮೌನಧಾರಣೆ ಮಾಡಿ ಕೂತಳು.

ಮುದಿ ಅತ್ತೆ ಬಹು ಹೊತ್ತಿನವರೆಗೆ ಇದೇ ದುಃಖದ ಯೋಚನೆಯಲ್ಲಿಯೇ ಮುಳುಗಿದ್ದಳು. ತುಪ್ಪ ಮಸಾಲೆಗಳ ಘಮ ಬಿಟ್ಟುಬಿಟ್ಟು ಮನಸ್ಸನ್ನು ಕದಡುತ್ತಿತ್ತು. ಪೂರಿಯ ರುಚಿಯನ್ನು ನೆನೆದಾಗ ಮನಸ್ಸಿಗೆ ಕಚಗುಳಿ ಇಟ್ಟಂತಾಗುತ್ತಿತ್ತು. ಯಾರನ್ನು ಕರೆಯುವುದು. ಇವತ್ತು ಲಾಡಲಿಯೂ ಬರಲಿಲ್ಲ. ಇಬ್ಬರು ಹುಡುಗರೂ ದಿನಾ ಬಂದು ಕಾಡುತ್ತಿದ್ದರು. ಇವತ್ತು ಅವರ ಸುದ್ದಿ ಸಹ ಇಲ್ಲ. ಏನು ನಡೆಯುತ್ತಿದೆಯೆಂದಾದರೂ ಗೊತ್ತಾದರೆ!

ಮುದಿ ಅತ್ತೆಯ ಕಲ್ಪನೆಯಲ್ಲಿ ಪೂರಿಯ ಚಿತ್ರ ಕುಣಿಯತೊಡಗಿತು. ಕೆಂಪಗೆ ಚೆನ್ನಾಗಿ ಉಬ್ಬಿಕೊಂಡು ಮೆತ್ತಗಿರುತ್ತದೇನೋ! ರೂಪ ಹಿಟ್ಟಿಗೆ ತುಂಬ ತುಪ್ಪಹಾಕಿ ಚೆನ್ನಾಗಿ ನಾದಿರಬೇಕು. ಕಚೋರಿಯಲ್ಲಿ ಓಮ ಏಲಕ್ಕಿಗಳ ಘಮ ತುಂಬಿರಬಹುದು.

ಒಂದು ಪೂರಿ ಸಿಕ್ಕಿದ್ದರೆ ಕೈಯಲ್ಲೆತ್ತಿಕೊಂಡು ನೋಡಬಹುದಿತ್ತು. ಎದ್ದು ಹೋಗಿ ಯಾಕೆ ಬಾಂಡಲೆಯ ಮುಂದೆಯೇ ಕೂಡಬಾರದು. ಪೂರಿ ಚೊಂಯ್ ಚೊಂಯ್ ಎನ್ನುತ್ತ ತುಪ್ಪದ ಮೇಲೆ ತೇಲುತ್ತಿರಬೇಕು. ಬಾಣಲೆಯಿಂದ ಬಿಸಿಬಿಸಿಯಾಗಿ ತೆಗೆದು ತಟ್ಟೆಗೆ ಹಾಕುತ್ತಿರಬಹುದು. ಹೂವನ್ನು ನಾವು ಮನೆಯಲ್ಲಿಯೂ ಮೂಸಿ ನೋಡಬಹುದು; ಆದರೆ ತೋಟದಲ್ಲಿದ್ದಾಗ ಅದರ ತರಹವೇ ಬೇರೆ. ಮುದಿ ಅತ್ತೆ ಹೀಗ ನಿರ್ಧಾರಕ್ಕೆ ಬಂದು ಕುಕ್ಕರಗಾಲಮೇಲೆ ಕೂತು, ಕೈಯೂರಿಕೊಂಡು ತೆವಳುತ್ತ ಹೊಸಲು ಬಿಟ್ಟಿಳಿದಳು. ಮೆಲ್ಲಮೆಲ್ಲಗೆ ತೆವಳಿಕೊಂಡು ಬಾಣಲೆಯ ಹತ್ತಿರ ಬಂದು ಕುಳಿತುಕೊಂಡಳು. ಅಲ್ಲಿ ಅವಳಿಗೆ ಹಸಿದ ನಾಯಿಗೆ ಉಣ್ಣುತ್ತಿರುವವರ ಮುಂದೆ ಕುಳಿತುಕೊಂಡಾಗ ಆಗುವಷ್ಟೇ ಸಂತೋಷವಾಯಿತು.

ರೂಪ ಆಗ ಕೆಲಸದ ಒತ್ತಡದಿಂದಾಗಿ ಉದ್ವಿಗ್ನಳಾಗಿದ್ದಳು. ಒಮ್ಮೆ ಈ ಕೋಣೆ, ಒಮ್ಮೆ ಆ ಕೋಣೆ, ಒಮ್ಮೆ ಉಗ್ರಾಣದಲ್ಲಿ, ಒಮ್ಮೆ ಬಾಣಲೆಯ ಹತ್ತಿರ ಹೀಗೆ ಅಲ್ಲಿಂದ ಇಲ್ಲಿಗೆ ಓಡಾಡುತ್ತಿದ್ದಳು. ಯಾರೋ ಹೊರಗಿನಿಂದ ಬಂದು ಹೇಳಿದರು – "ಅಡಿಗೆಯವರಿಗೆ ಪಾನಕ ಮಾಡೋಕ್ಕೆ ಸಾಮಾನು ಬೇಕಂತೆ." ರೂಪ ಅದನ್ನು ಕೊಡುವಷ್ಟರಲ್ಲಿ ಇನ್ಯಾರೋ ಬಂದು ಹೇಳಿದರು – "ಬ್ರಾಹ್ಮಣರು ಬಂದಿದ್ದಾರೆ, ಅವರಿಗೇನಾದರೂ ಕೊಡಿ." ಬ್ರಾಹ್ಮಣರಿಗೆ ಕೊಡಲೆಂದು ಸಾಮಾನು ತೆಗೆಯುವಷ್ಟರಲ್ಲಿ ಯಾರೋ ಮೂರನೆಯವರು ಬಂದು ಕೇಳಿದರು – "ಅಡಿಗೆ ಇನ್ನೂ ಎಷ್ಟು ಹೊತ್ತಾಗುತ್ತೆ? ಕೊಂಚ ಡೋಲು ಮಂಜೀರಾ ತೆಕ್ಕೊಡಿ." ಆ ಬಡಪಾಯಿ ಒಬ್ಬೊಂಟಿ ಹೆಂಗಸು ಓಡಾಡಿ ಓಡಾಡಿ ಬೇಸತ್ತು ಚಿಟಿಚಿಟಿಯಾಗುತ್ತಿದ್ದಳು. ಒಳಗೇ ಉರಿಯುತ್ತಿದ್ದಳು. ಆದರೆ ತನ್ನ ಕೋಪ ತೋರಿಸಲು ಅವಕಾಶ ಸಿಕ್ಕಿರಲಿಲ್ಲ. ಬರಿಯ ಇಷ್ಟಕ್ಕೇ ಸುಸ್ತಾದಳು ಎಂದು ನೆರೆಹೊರೆಯವರು ಯಾರಾದರೂ ಎಲ್ಲಿ ಅಂದುಬಿಡುವರೋ ಎಂದು ಅವಳಿಗೆ ಭಯ. ಬಾಯಾರಿಕೆಯಿಂದ ಸ್ವತಃ ಅವಳ ಗಂಟಲು ಒಣಗುತ್ತಿತ್ತು. ಸೆಕೆಯಿಂದಾಗಿ ಮೈ ಭಸ್ಮವಾಗುತ್ತಿತ್ತು. ಆದರೆ ತೊಟ್ಟು ನೀರು ಕುಡಿಯಲಾಗಲೀ, ಗಾಳಿ ಬೀಸಿಕೊಳ್ಳಲಾಗಲೀ ಪುರಸೊತ್ತೆಲ್ಲಿ? ಕೊಂಚ ಕಣ್ಮರೆಯಾದರೆ ಸಾಮಾನುಗಳ ಕೊಳ್ಳೆಹೋಗುವ ಅಂಜಿಕೆಯೂ ಇತ್ತು. ಈ ಪರಿಸ್ಥಿತಿಯಲ್ಲಿ ಮುದಿ ಅತ್ತೆ ಬಾಣಲೆಯ ಹತ್ತಿರ ಬಂದು ಕುಳಿತಿರುವುದನ್ನು ಕಂಡು ಅವಳು ಉರಿದುಹೋದಳು. ಕೋಪ ತಡೆಯಲಾಗಲಿಲ್ಲ. ನೆರೆಹೊರೆಯವರು ಕುಳಿತಿದ್ದಾರೆ, ಅವರೇನು ಅಂದುಕೊಂಡಾರು; ಗಂಡಸರ ಕಿವಿಗೆ ಬಿದ್ದರೆ ಅವರೇನೆಂದಾರು ಎಂಬ ಯೋಚನೆಯೂ ಇಲ್ಲದೆ ಎರೆಹುಳದ ಮೇಲೆ ಕಪ್ಪೆ ಎಗರುವಂತೆ ಮುದಿ ಅತ್ತೆಯ ಮೇಲೆ ಫಕ್ಕನೆ ಹಾರಿ, ಅವಳನ್ನು ಎರಡೂ ಕೈಯಿಂದ ಬಲವಾಗಿ ಜಾಡಿಸುತ್ತ ಹೇಳಿದಳು – "ಅದೇನು ಹೊಟ್ಟೆಯೋ, ಒಲೆಯೋ? ನಿನ್ನ ಹೊಟ್ಟೆಗೆ ಬೆಂಕಿಬೀಳ. ನಿನ್ನ ಕೊಠಡೀಲಿ ಕೂತಿದ್ದರೆ ಏನು ಉಸಿರು ಕಟ್ಟಿಹೋಗ್ತಿತ್ತೆ? ಇನ್ನೂ ದೇವರಿಗೆ ನೈವೇದ್ಯವಾಗಿಲ್ಲ, ಅತಿಥಿಗಳ ಊಟ ಆಗಿಲ್ಲ. ಅಲ್ಲೀವರೆಗೆ ತಡೆಯೋಕ್ಕಾಗೋಲ್ಲವೆ? ಬಂದು ಎದೆ ಮೇಲೆ ಕೂತುಕೊಂಡುಬಿಟ್ಟೆಯಲ್ಲ? ಹಾಳು ಬಾಯಿ ಸುಟ್ಟು ಹೋಗ! ಹಗಲೂ ರಾತ್ರಿ

ಊಟ ಹಾಕದೆ ಹೋಗಿದ್ದಿದ್ದರೆ ಹೋಗಿ ಯಾರ ತಟ್ಟೇಗೆ ಬಾಯಿ ಹಾಕ್ತಿದ್ದೆಯೊ? ಊರಿನವರು ನೋಡಿದರೆ ಮುದುಕಿಗೆ ಹೊಟ್ಟೆ ತುಂಬ ಅನ್ನ ಹಾಕೋಲ್ಲ ಅಂದುಕೋಬೇಕು. ಅದಕ್ಕೇ ಹೀಗೆ ಬಾಯಿ ತೆಕ್ಕೊಂಡು ಓಡಾಡ್ತಾಳೆ. ಈ ಪಿಶಾಚಿ ಸಾಯೋತನಕ ಗೋಳು ತಪ್ಪಿದ್ದಲ್ಲ. ಮರ್ಯಾದೆ ಕಳೆಯೋಕ್ಕೆ ಹೊರಟಿದಿ. ನಮ್ಮ ಮಾನ ಹೋದರೆ ನಿನಗೆ ಸಂತೋಷ ಅಂತ ಕಾಣುತ್ತೆ. ಇಷ್ಟೊಂದು ತುರಕ್ಕೋತೀಯಲ್ಲ, ಅದೆಲ್ಲಾ ಎಲ್ಲಿ ಭಸ್ಮವಾಗುತ್ತೋ ಕಾಣೆ. ನೋಡು, ಒಳ್ಳೇ ಮಾತಿನಲ್ಲಿ ಹೋಗಿ ನಿನ್ನ ಕೊಠಡೀಲಿ ಕೂತಿರು. ಮನೆಯವರಿಗೆಲ್ಲಾ ಊಟ ಹಾಕೋವಾಗ ನಿನಗೂ ಹಾಕ್ತೀವಿ. ಇನ್ನೊಬ್ಬರು ತೊಟ್ಟು ನೀರು ಕಾಣದೇ ಹೋದರೂ ಪರವಾಗಿಲ್ಲ, ನಿನಗೆ ಮೊದಲು ಪೂಜೆಯಾಗಬೇಕು ಅನ್ನೋಕೆ ನೀನು ಯಾವ ಊರ ದೇವರು?"

ಮುದಿ ಅತ್ತೆ ತಲೆಯೆತ್ತಲಿಲ್ಲ. ಅಳಲೂ ಇಲ್ಲ, ಬಾಯಿ ತೆರೆಯಲೂ ಇಲ್ಲ. ಸದ್ದಿಲ್ಲದೆ ತೆವಳಿಕೊಂಡು ತನ್ನ ಕೊಠಡಿಗೆ ಹೊರಟುಹೋದಳು. ಅವಳಿಗೆ ಎಷ್ಟರ ಮಟ್ಟಿಗೆ ನೋವಾಯಿತೆಂದರೆ ಹೃದಯಬುದ್ಧಿಗಳೆಲ್ಲದರ ಸಂಪೂರ್ಣ ಶಕ್ತಿ, ವಿಚಾರ, ಭಾರಗಳು ಆ ಕಡೆಗೇ ಎಳೆಯತೊಡಗಿದವು. ದಂಡೆಯ ಒಂದು ದೊಡ್ಡ ಭಾಗ ನದಿಯೊಳಗೆ ಕುಸಿದು ಬಿದ್ದು ಸುತ್ತುಮುತ್ತಿನ ನೀರೆಲ್ಲವೂ ಆ ಕೊರಕಲನ್ನು ತುಂಬಲು ನುಗ್ಗಿದಂತಾಗಿತ್ತು.

## 3

ಅಡಿಗೆ ಸಿದ್ಧವಾಯಿತು. ಅಂಗಳದಲ್ಲಿ ಎಲೆ ಹಾಕಿದರು. ಅತಿಥಿಗಳು ಊಟಕ್ಕೆ ಕುಳಿತರು. ಹೆಂಗಸರು ಸಹಭೋಜನದ ಹಾಡು ಹಾಡಲು ಶುರು ಮಾಡಿದರು. ಅತಿಥಿಗಳ ಕಡೆಯ ಆಳುಗಳು ಸಹ ಅದೇ ಗುಂಪಿನೊಡನೆ ಕೊಂಚ ದೂರದಲ್ಲಿ ಊಟಕ್ಕೆ ಕುಳಿತರು. ಆದರೆ ಪದ್ಧತಿಯ ಪ್ರಕಾರ ಎಲ್ಲರೂ ಊಟ ಮುಗಿಸುವವರೆಗೆ ಯಾರೂ ಎಲೆ ಬಿಟ್ಟು ಏಳುವಂತಿರಲಿಲ್ಲ. ಅತಿಥಿಗಳಲ್ಲಿ ಒಬ್ಬಿಬ್ಬರು ವಿದ್ಯಾವಂತರು ಆಳುಗಳ ಊಟ ಇನ್ನೂ ಮುಗಿಯದಿದ್ದುದನ್ನು ನೋಡಿ ಕಿಡಿಕಿಡಿಯಾಗುತ್ತಿದ್ದರು. ಅವರಿಗೆ ಈ ಪಂಕ್ತಿ ಮರ್ಯಾದೆ ವ್ಯರ್ಥವಾಗಿ, ತಲೆ ಬಾಲವಿಲ್ಲದ್ದಾಗಿ ಕಾಣುತ್ತಿತ್ತು.

ಮುದಿ ಅತ್ತೆ ತನ್ನ ಕೊಠಡಿಯಲ್ಲಿ ಕುಳಿತು ಹೇಗಿದ್ದವಳು ಹೇಗಾದೆ ಎಂದು ಪಶ್ಚಾತ್ತಾಪ ಪಡುತ್ತಿದ್ದಳು. ಅವಳಿಗೆ ರೂಪಳ ಮೇಲೆ ಕೋಪವಿರಲಿಲ್ಲ; ತಾನು ಅವಸರಪಟ್ಟುದಕ್ಕಾಗಿ ವ್ಯಥೆಯಾಗುತ್ತಿತ್ತು. ನಿಜ, ಅತಿಥಿಗಳ ಊಟವಾಗದ ಹೊರತು ಮನೆಯವರು ಹೇಗೆ ಉಣ್ಣಲಾದೀತು? ನನಗೆ 'ಇಷ್ಟು ಹೊತ್ತೂ ತಡೆಯುವುದಾಗಲಿಲ್ಲವಲ್ಲ; ಎಲ್ಲರ ಮುಂದೆ ಅವಮಾನವಾಯಿತಲ್ಲ. ಇನ್ನು ಅವರು ಯಾರಾದರೂ ಕರೆಯಲು ಬಾರದವರೆಗೆ ಹೋಗುವುದಿಲ್ಲ ಎಂದುಕೊಂಡಳು.

ಹೀಗೆ ಮನಸ್ಸಿನೊಳಗೆ ಯೋಚಿಸುತ್ತ ಮುದಿ ಅತ್ತೆ ಕರೆಗೆ ಕಾಯುತ್ತ ಕುಳಿತಳು.

ಆದರೆ ರುಚಿ ಕೆರಳಿಸುವ ತುಪ್ಪದ ಘಮ ಸ್ಥೈರ್ಯಪರೀಕ್ಷೆ ಮಾಡುತ್ತಿದೆಯೋ ಎನ್ನುವಂತಿತ್ತು. ಅವಳಿಗೆ ಒಂದೊಂದು ಕ್ಷಣವೂ ಒಂದೊಂದು ಯುಗವಾಗಿ ತೋರತೊಡಗಿತು. ಈಗ ಎಲೆ ಹಾಕಿರಬಹುದು, ಅತಿಥಿಗಳು ಬಂದಿರಬಹುದು! ಕೈಕಾಲು ತೊಳೆಯುತ್ತಿದ್ದಾರೆ. ಆಳು ನೀರು ಬಿಡುತ್ತಿದ್ದಾನೆ. ಜನ ಊಟಕ್ಕೆ ಕೂತಂತೆ ಕಾಣುತ್ತದೆ. ಸಹಭೋಜನದ ಹಾಡು ನಡೆಯುತ್ತಿದೆ – ಹೀಗೆ ಯೋಚಿಸುತ್ತ ಮುದಿ ಅತ್ತೆ ಮನಸ್ಸಿನ ಬೇಸರ ಹೋಗಿಸಲೆಂದು ಹಾಗೆಯೇ ಕಾಲು ಚಾಚಿದಳು. ಮೆಲ್ಲಮೆಲ್ಲಗೆ ಒಂದು ಹಾಡನ್ನು ಗುಣಗುಣಿಸತೊಡಗಿದಳು. ತಾನು ತುಂಬ ಹೊತ್ತು ಹಾಡಿದೆನೆಂದು ಅವಳ ಭಾವನೆ! ಏನು, ಇಷ್ಟು ಹೊತ್ತಿನ ತನಕ ಅತಿಥಿಗಳು ಊಟ ಮಾಡುತ್ತಿದ್ದಾರೆಯೆ? ಯಾರ ಧ್ವನಿಯೂ ಕೇಳಿಸೋಲ್ಲವಲ್ಲ. ಜನ ಊಟ ಮುಗಿಸಿ ಹೊರಟುಹೋಗಿರಬೇಕು. ನನ್ನನ್ನು ಕರೆಯಲು ಯಾರೂ ಬರಲಿಲ್ಲ. ರೂಪಳಿಗೆ ರೇಗಿದೆ. ಯಾಕೆ ಕರೆಯಲು ಬರಲಿಲ್ಲವೋ ಏನೋ. ಹೋಗಿ ಕರೆಯೋಕ್ಕೆ ಇವಳೇನು ಅತಿಥಿಯೇ, ತಾನಾಗಿಯೇ ಬರ್ತಾಳೆ ಅಂದುಕೊಂಡಳೋ ಏನೋ. ಸರಿ, ಮುದಿ ಅತ್ತೆ ಮತ್ತೊಮ್ಮೆ ಹೊರಡಲು ಅನುವಾದಳು. ಇನ್ನೊಂದು ನಿಮಿಷದಲ್ಲಿ ಪೂರಿ, ಮಸಾಲೆ ಹಾಕಿ ಮಾಡಿದ ಬಗೆಬಗೆಯ ಪಲ್ಯ ಕಣ್ಣಮುಂದೆ ಬರುವುದೆಂಬ ವಿಶ್ವಾಸ ಅವಳ ಸ್ವಾದೇಂದ್ರಿಯಗಳಿಗೆ ಕಚಗುಳಿ ಇಡತೊಡಗಿತು. ಅವಳು ಮನಸ್ಸಿನಲ್ಲಿಯೇ ಬಗೆಬಗೆಯ ಕಲ್ಪನೆ ಮಾಡಿಕೊಳ್ಳತೊಡಗಿದಳು – ಮೊದಲು ಪಲ್ಯಕ್ಕೆ ನೆಂಚಿಕೊಂಡು ಪೂರಿ ತಿಂತೀನಿ, ಆಮೇಲೆ ಮೊಸರು ಸಕ್ಕರೆ ಜೊತೆ. ಕಚೋರಿಯನ್ನು ರಾಯಿತಕ್ಕೆ ನೆಂಚಿಕೊಂಡು ತಿಂದರೆ ಮಜವಾಗಿರುತ್ತೆ! ಯಾರು ಏನು ಬೇಕಾದರೂ ಅಂದುಕೊಳ್ಳಲಿ, ನಾನಂತೂ ಮತ್ತೆ ಮತ್ತೆ ಕೇಳಿ ಹಾಕಿಸಿಕೊಳ್ತೀನಿ. ಇವಳಿಗೆ ಬುದ್ಧಿಯಿಲ್ಲ ಅಂತ ಜನ ಅಂದುಕೊಳ್ಳೋಲ್ಲವೆ? ಅಂದರೆ ಅಂದುಕೊಳ್ಳಲಿ, ಎಷ್ಟೋ ದಿನದ ಮೇಲೆ ಪೂರಿ ಸಿಕ್ಕಿರುವಾಗ ಬರಿಯ ರುಚಿನೋಡಿ ಎದ್ದುಬಿಡೋದಕ್ಕೆ ಆಗುತ್ತೆಯೆ?

ಮುದಿ ಅತ್ತೆ ಕುಕ್ಕರಗಾಲಿನಲ್ಲಿ ಕುಳಿತು ಕೈಬಲದಿಂದ ತೆವಳುತ್ತ ಅಂಗಳಕ್ಕೆ ಬಂದಳು. ಆದರೆ, ಅಯ್ಯೋ ದುರ್ಭಾಗ್ಯವೆ, ಆಸೆ ತನ್ನ ಸ್ವಭಾವಕ್ಕೆ ತಕ್ಕಂತೆ ಸಮಯದ ತಪ್ಪು ಕಲ್ಪನೆ ಮಾಡಿತ್ತು! ಅತಿಥಿಗಣ ಇನ್ನೂ ಕುಳಿತೇ ಇತ್ತು. ಕೆಲವರು ಉಂಡು ಬೆರಳು ನೆಕ್ಕುತ್ತಿದ್ದರು. ಇನ್ನು ಕೆಲವರು ಓರೆಗಣ್ಣಿನಿಂದ ಉಳಿದವರು ಇನ್ನೂ ಊಟ ಮಾಡುತ್ತಿದ್ದಾರೆಯೋ ಹೇಗೆ ಎಂದು ನೋಡುತ್ತಿದ್ದರು. ಕೆಲವರು ಎಲೆಯಲ್ಲಿ ಹೇಗೂ ಕೊನೆಗೆ ಪೂರಿ ಉಳಿದೇ ಉಳಿಯುತ್ತದೆ, ಅದನ್ನು ಎತ್ತಿಟ್ಟುಕೊಂಡರೆ ಹೇಗೆ ಎಂಬ ಯೋಚನೆಯಲ್ಲಿದ್ದರು. ಕೆಲವರು ಮೊಸರುಂಡು ನಾಲಿಗೆ ಚಪ್ಪರಿಸುತ್ತ ಇನ್ನೊಂದು ದೊನ್ನೆ ಕೇಳಲು ಸಂಕೋಚಪಡುತ್ತಿದ್ದರು. ಅಷ್ಟರಲ್ಲಿ ಮುದಿ ಅತ್ತೆ ತೆವಳುತ್ತ ಅವರ ನಡುವೆ ಬಂದಳು. ಕೆಲವರು ಬೆಚ್ಚಿ ನಿಂತರು. "ಅರೆ, ಯಾರು ಈ ಮುದುಕಿ? ಎಲ್ಲಿಂದ ಬಂದಳು? ಯಾರನ್ನಾದರೂ ಮುಟ್ಟಿಬಿಟ್ಟಾಳು ನೋಡಿ" ಎಂದು ಕೂಗತೊಡಗಿದರು.

ಪಂಡಿತ ಬುದ್ಧಿರಾಮ ಅತ್ತೆಯ ಮುಖ ಕಂಡೊಡನೆಯೇ ಕೋಪದಿಂದ

ಕಿಡಿಕಿಡಿಯಾದ. ಕೈಯಲ್ಲಿ ಪೂರಿಯ ತಟ್ಟೆಯಿಟ್ಟುಕೊಂಡು ನಿಂತಿದ್ದವನು ಅದನ್ನು ನೆಲದ ಮೇಲೆ ಕುಕ್ಕಿ, ನಿಷ್ಕರುಣೆಯಾದ ಸಾಹುಕಾರ ಕೈಯಿಂದ ಕಳಚಿಹೋಗಲಿದ್ದ ಯಾವನಾದರೂ ಮಾತಿಗೆ ತಪ್ಪಿದ ಸಾಲಗಾರನನ್ನು ಕಂಡಾಗ ಹಾರಿ ಅವನ ಕುತ್ತಿಗೆ ಹಿಡಿದುಕೊಳ್ಳುವಂತೆ ಮುದಿ ಅತ್ತೆಯನ್ನು ಎರಡೂ ಕೈಯಲ್ಲಿ ಹಿಡಿದುಕೊಂಡು ದರದರನೆ ಎಳೆದೊಯ್ದು ಅವಳ ಕತ್ತಲ ಕೋಣೆಯಲ್ಲಿ ಧೊಪ್ಪನೆ ಕೆಡವಿದ. ಚಿಗುರುತ್ತಿದ್ದ ಉದ್ಯಾನ ಬಿಸಿಗಾಳಿಯ ಒಂದೇ ಬೀಸಿಗೆ ಬಾಡಿ ನಷ್ಟವಾಗಿಹೋಯಿತು.

ಅತಿಥಿಗಳ ಊಟ ಮುಗಿಯಿತು. ಮನೆಯವರೂ ಊಟ ಮಾಡಿದರು. ವಾದ್ಯದವರು, ಅಗಸರು, ಚಮ್ಮಾರರು ಎಲ್ಲರೂ ಊಟ ಮಾಡಿದರು. ಆದರೆ ಮುದಿ ಅತ್ತೆಯನ್ನು ಯಾರೂ ವಿಚಾರಿಸಲಿಲ್ಲ. ಬುದ್ಧೀರಾಮ, ರೂಪ ಇಬ್ಬರೂ ಮುದಿ ಅತ್ತೆಯನ್ನು ಅವಳ ನಾಚಿಕೆಗೇಡಿತನಕ್ಕೆ ಶಿಕ್ಷಿಸುವುದೆಂದು ನಿರ್ಧರಿಸಿದ್ದರು. ಅವಳ ಮುಪ್ಪು, ದೈನ್ಯ, ಅರುಳು ಮರುಳುಗಳನ್ನು ಕಂಡು ಯಾರಿಗೂ ಅನುಕಂಪ ಹುಟ್ಟುತ್ತಿರಲಿಲ್ಲ. ಲಾಡಲಿಯೊಬ್ಬಳು ಮಾತ್ರ ಅವಳಿಗಾಗಿ ಮರುಗುತ್ತಿದ್ದಳು.

ಲಾಡಲಿಗೆ ಅತ್ತೆಯ ಬಗ್ಗೆ ತುಂಬ ಪ್ರೀತಿಯಿತ್ತು. ಪಾಪ, ಬಲು ಸರಳಸ್ವಭಾವದ ಹುಡುಗಿ ಅವಳು. ಮಕ್ಕಳಿಗೆ ಸಹಜವಾದ ವಿನೋದ, ಚಂಚಲತೆಗಳ ಗಂಧ ಕೂಡ ಅವಳಿಗಿರಲಿಲ್ಲ. ಎರಡೂ ಸಲ ಅಪ್ಪ ಅಮ್ಮ ಇಬ್ಬರೂ ಅತ್ತೆಯನ್ನು ನಿರ್ದಯವಾಗಿ ಎಳೆದುಕೊಂಡು ಹೋದುದನ್ನು ಕಂಡು ಅವಳ ಎದೆ ಬಿಗಿಯಿತು. ಇವರು ಅತ್ತೆಗೇಕೆ ಒಂದಿಷ್ಟು ಪೂರಿ ಕೊಟ್ಟುಬಿಡಬಾರದೆಂದು ಅವಳು ಕಿಡಿಕಿಡಿಯಾದಳು. ಅತಿಥಿಗಳೇನು ಮಾಡಿದ್ದೆಲ್ಲವನ್ನೂ ತಿನ್ನುತ್ತಾರೇನು ? ಅತ್ತೆಯ ಬಳಿ ಹೋಗಿ ಅವಳಿಗೆ ಸಮಾಧಾನ ಮಾಡಬೇಕೆಂದು ಲಾಡಲಿಗೆ ಆಸೆ. ಆದರೆ ತಾಯಿಯ ಹೆದರಿಕೆಯಿಂದಾಗಿ ಹೋಗಲಿಲ್ಲ. ಅವಳು ತನ್ನ ಪಾಲಿನ ಪೂರಿಯನ್ನು ಚೂರೂ ತಿನ್ನಲೇ ಇಲ್ಲ. ತನ್ನ ಬೊಂಬೆಯ ಡಬ್ಬದಲ್ಲಿ ಭದ್ರವಾಗಿ ಮುಚ್ಚಿಟ್ಟಿದ್ದಳು. ಅದನ್ನು ಅತ್ತೆಗೆ ಕೊಟ್ಟು ಬರುವ ಆಸೆ ಅವಳಿಗೆ. ಆದರೆ ಧೈರ್ಯ ಬರುತ್ತಿರಲಿಲ್ಲ. ಮುದಿ ಅತ್ತೆ ನನ್ನ ಧ್ವನಿ ಕೇಳಿದ ತಕ್ಷಣ ಎದ್ದು ಕುಳಿತುಕೊಳ್ಳುತ್ತಾಳೆ, ಪೂರಿಯನ್ನು ಕಂಡು ಸಂತುಷ್ಟಳಾಗುತ್ತಾಳೆ, ನನ್ನನ್ನು ತುಂಬ ಪ್ರೀತಿಸುತ್ತಾಳೆ ಎಂದೆಲ್ಲ ಯೋಚಿಸುತ್ತಿದ್ದಳು.

## 4

ರಾತ್ರಿ ಹನ್ನೊಂದು ಗಂಟೆಯಾಗಿತ್ತು. ರೂಪ ಅಂಗಳದಲ್ಲಿ ಮಲಗಿ ನಿದ್ರಿಸುತ್ತಿದ್ದಳು. ಲಾಡಲಿಗೆ ನಿದ್ರೆ ಹತ್ತುತ್ತಿರಲಿಲ್ಲ. ಅತ್ತೆಗೆ ಪೂರಿ ತಿನ್ನಿಸಬೇಕೆಂಬ ಉತ್ಸಾಹ ಅವಳನ್ನು ಮಲಗಗೊಡುತ್ತಿರಲಿಲ್ಲ. ಬೊಂಬೆಯ ಪೆಟ್ಟಿಗೆಯನ್ನು ಎದುರಿಗೇ ಇಟ್ಟುಕೊಂಡಿದ್ದಳು. ಅಮ್ಮನಿಗೆ ನಿದ್ರೆ ಹತ್ತಿತೆಂಬುದು ಖಚಿತವಾದ ಮೇಲೆ ಮೆಲ್ಲಗೆ ಎದ್ದು ಹೋಗುವುದೆಂದು ಯೋಚಿಸತೊಡಗಿದಳು. ಎಲ್ಲೆಲ್ಲೂ ಕತ್ತಲು. ಒಲೆಯಲ್ಲಷ್ಟೇ ಕೆಂಡ ಬೆಳಗುತ್ತಿತ್ತು. ಒಲೆಯ ಹತ್ತಿರ ಒಂದು ನಾಯಿ ಮಲಗಿತ್ತು.

ಲಾಡಲಿಯ ದೃಷ್ಟಿ ಬಾಗಿಲ ಮುಂದಿದ್ದ ಬೇವಿನ ಮರದ ಕಡೆಗೆ ಹರಿಯಿತು. ಆ ಮರದ ಮೇಲೆ ಹನುಮಂತ ಕೂತಿರುವಂತೆ, ಅವನ ಬಾಲ ಗದೆ ಎಲ್ಲವೂ ಸ್ಪಷ್ಟವಾಗಿ ಕಾಣುತ್ತಿರುವಂತೆ ಅವಳಿಗೆ ತೋರಿತು. ಹೆದರಿಕೆಯಿಂದ ಅವಳು ಕಣ್ಣು ಮುಚ್ಚಿಕೊಂಡಳು. ಅಷ್ಟರಲ್ಲಿ ನಾಯಿ ಎದ್ದು ಕೂತುಕೊಂಡಿತು. ಲಾಡಲಿಗೆ ಸಮಾಧಾನವಾಯಿತು. ಮಲಗಿದ್ದ ಮನುಷ್ಯರಿಗಿಂತ ಎಚ್ಚತ್ತಿರುವ ನಾಯಿ ಅವಳ ಧೈರ್ಯಕ್ಕೆ ಕಾರಣವಾಯಿತು. ಲಾಡಲಿ ಪೆಟ್ಟಿಗೆ ಎತ್ತಿಕೊಂಡು ಮುದಿ ಅತ್ತೆಯ ಕೊಠಡಿಯ ಕಡೆಗೆ ನಡೆದಳು.

## 5

ಮುದಿ ಅತ್ತೆಗೆ ಯಾರೋ ತನ್ನ ಕೈ ಹಿಡಿದುಕೊಂಡು ದರದರನೆ ಎಳೆದುಕೊಂಡು ಹೋದುದಷ್ಟು ಮಾತ್ರ ನೆನಪಿತ್ತು. ಯಾವುದೋ ಬೆಟ್ಟದ ಮೇಲಕ್ಕೆ ತನ್ನನ್ನು ಎಳೆದುಕೊಂಡು ಹೋಗುತ್ತಿದ್ದಾರೆಯೋ ಎಂಬಂತೆ ಅವಳಿಗೆ ತೋರಿತು. ಅವಳ ಕಾಲು ಮತ್ತೆ ಮತ್ತೆ ಕಲ್ಲಿಗೆ ತಾಕಿ ಎಡವಿತು. ಆಮೇಲೆ ಯಾರೋ ಅವಳನ್ನು ಬೆಟ್ಟದ ಮೇಲಿಂದ ಅಪ್ಪಳಿಸಿದರು. ಅವಳು ಮೂರ್ಛೆ ಹೋದಳು.

ಪ್ರಜ್ಞೆ ಬಂದಾಗ ಅವಳಿಗೆ ಯಾವ ತರಹದ ಸಪ್ಪಳವೂ ಕೇಳುತ್ತಿರಲಿಲ್ಲ. ಎಲ್ಲರೂ ಉಂಡು ತಿಂದು ಮಲಗಿದರೇನೋ, ಅದರೊಡನೆ ತನ್ನ ಭಾಗ್ಯವೂ ಮಲಗಿತೇನೋ ಎಂಬಂತಿತ್ತು. ಇನ್ನು ರಾತ್ರಿ ಕಳೆಯುವುದು ಹೇಗೆ? ಅಯ್ಯೋ ರಾಮ! ಏನು ತಿನ್ನುವುದು? ಹೊಟ್ಟೆಯಲ್ಲಿ ಬೆಂಕಿ ಉರಿಯುತ್ತಿದೆ. ಅಯ್ಯೋ, ಯಾರಿಗೂ ನನ್ನ ಪರಿವೆಯೇ ಇಲ್ಲವಲ್ಲ! ನನ್ನ ಹೊಟ್ಟೆಗೆ ಹಾಕದಿರುವುದರಿಂದಷ್ಟೇ ಇವರ ಗಂಟು ಬೆಳೆಯುತ್ತದೆಯೆ? ಮುದುಕಿ ಯಾವಾಗ ಸಾಯುತ್ತಾಳೋ ಏನೋ ಎಂಬ ಕಾರಣದಿಂದಲಾದರೂ ಇವರಿಗೆ ಕೊಂಚ ಕರುಣೆ ಬೇಡವೆ? ನನ್ನ ಹೊಟ್ಟೆಗೆಷ್ಟು ಬೇಕೋ ಅಷ್ಟೇ ಅನ್ನ ತಿಂತೀನಿ. ಹೆಚ್ಚೇನಲ್ಲವಲ್ಲ? ಅದಕ್ಕೆ ಇಷ್ಟೆಲ್ಲ ಅವಸ್ಥೆಯೇ! ನಾನು ಕುರುಡಿ, ಕೈಕಾಲಿಲ್ಲದವಳು. ಒಂದೂ ಕೇಳಿಸೋದಿಲ್ಲ, ತಿಳಿಯೋದಿಲ್ಲ. ನಾನು ಅಂಗಳಕ್ಕೆ ಹೋದಾಗ ಬುದ್ಧಿರಾಮನಿಗೆ "ಅತ್ತೆ, ಇನ್ನೂ ಅತಿಥಿಗಳು ಊಟ ಮಾಡ್ತಿದಾರೆ. ಆಮೇಲೆ ಬಾ" ಅನ್ನೋಕ್ಕೆ ಆಗ್ತಿರಲಿಲ್ಲವೆ? ನನ್ನನ್ನು ದರದರನೆ ಎಳೆದು ಕುಕ್ಕಿದ. ಅದೇ ಪೂರಿಗಾಗಿ ರೂಪ ಎಲ್ಲರ ಮುಂದೆ ಬೈದಳು. ಅದೇ ಪೂರಿಗಾಗಿ ಇಷ್ಟೆಲ್ಲ ದುರವಸ್ಥೆಪಟ್ಟರೂ ಅವರ ಎದೆ ಕರಗಲಿಲ್ಲ. ಎಲ್ಲರಿಗೂ ಊಟಕ್ಕಿಕ್ಕಿದರು, ನನ್ನನ್ನ ಮಾತು ಸಹ ಆಡಿಸಲಿಲ್ಲ. ಆಗಲೇ ಕೊಡದಿದ್ದವರು ಈಗೇನು ಕೊಟ್ಟಾರು!

ಹೀಗೆ ಆಲೋಚಿಸುತ್ತ ಅತ್ತೆ ನಿರಾಶೆಯಿಂದ ಕೂಡಿದ ಒಂದು ವಿಚಿತ್ರ ಸಂತೋಷದಿಂದ ಮಲಗಿದಳು. ದುಃಖದಿಂದ ಗಂಟಲು ಬಿಗಿದುಬರುತ್ತಿತ್ತು. ಆದರೆ ಅತಿಥಿಗಳ ಭಯದಿಂದಾಗಿ ಅಳುತ್ತಿರಲಿಲ್ಲ.

ಇದ್ದಕ್ಕಿದ್ದಂತೆ "ಅತ್ತೆ, ಏಳು, ನಾನು ಪೂರಿ ತಂದಿದೀನಿ" ಎಂಬ ಮಾತು ಅವಳ ಕಿವಿಗೆ ಕೇಳಿಸಿತು. ಅತ್ತೆ ಲಾಡಲಿಯ ಧ್ವನಿ ಗುರುತಿಸಿದಳು. ಥಟ್ಟನೆ ಎದ್ದು ಕುಳಿತಳು. ಎರಡೂ ಕೈಯಿಂದ ಲಾಡಲಿಗಾಗಿ ತಡವಿದಳು. ಅವಳನ್ನು ತೊಡೆಯ ಮೇಲೆ ಕೂರಿಸಿಕೊಂಡಳು. ಲಾಡಲಿ ಪೂರಿ ತೆಗೆದುಕೊಟ್ಟಳು. ಅತ್ತೆ ಕೇಳಿದಳು – "ಯಾರು, ನಿಮ್ಮಮ್ಮ ಕಳಿಸಿದಳೆ ?"

ಲಾಡಲಿ ಹೇಳಿದಳು – "ಇಲ್ಲ, ಇದು ನನ್ನ ಪಾಲಿಂದು."

ಅತ್ತೆ ಪೂರಿಗೆ ಮುತ್ತಿಗೆ ಹಾಕಿದಳು. ಐದು ನಿಮಿಷದಲ್ಲಿ ಡಬ್ಬ ಖಾಲಿಯಾಯಿತು.

ಲಾಡಲಿ ಕೇಳಿದಳು – "ಅತ್ತೆ, ಹೊಟ್ಟೆ ತುಂಬಿತೆ ?"

ಮಳೆ ಕೊಂಚವೇ ಬಿದ್ದಾಗ ನೆಲ ತಂಪಾಗುವ ಬದಲು ಬೇಗೆ ಇದ್ದಿದ್ದೂ ಹೆಚ್ಚುವಂತೆ ಲಾಡಲಿ ಕೊಟ್ಟ ಪೂರಿ ಅತ್ತೆಯ ಹಸಿವು ಬಯಕೆಗಳನ್ನೂ ಇದ್ದಿದ್ದೂ ಕೆರಳಿಸಿತ್ತು. "ಇಲ್ಲ, ಮಗು. ಹೋಗಿ ಅಮ್ಮನ್ನ ಕೇಳಿ ಇನ್ನೊಂದು ಸ್ವಲ್ಪ ಇಸಕೊಂಡು ಬಾ" ಎಂದಳು.

"ಅಮ್ಮ ಮಲಗಿದಾಳೆ. ಎಬ್ಬಿಸಿದರೆ ಹೊಡೀತಾಳೆ" – ಲಾಡಲಿ ಹೇಳಿದಳು.

"ಅತ್ತೆ ಡಬ್ಬವನ್ನು ಮತ್ತೆ ಕೊಡವಿದಳು. ಅದರಿಂದ ಒಂದಿಷ್ಟು ಚೂರು ಬಿದ್ದಿತು. ಅದನ್ನು ಎತ್ತಿಕೊಂಡು ತಿಂದಳು. ಮತ್ತೆ ಮತ್ತೆ ಬಾಯಿ ಚಪ್ಪರಿಸಿದಳು.

ಇನ್ನೊಂದಿಷ್ಟು ಪೂರಿ ಇದ್ದಿದ್ದರೆ ಚೆನ್ನಾಗಿತ್ತೆಂದು ಎದೆ ಕೊರಗುತ್ತಿತ್ತು. ಆಸೆಯ ಪ್ರವಾಹ ಮಿತಿಮೀರಿದಾಗ ತಾಳ್ಮೆಯ ಸೇತುವೆ ಒಡೆದುಹೋಗುತ್ತದೆ. ಕುಡಿತ ಅಭ್ಯಾಸವಾದವರಿಗೆ ಅದರ ನೆನಪಿನಿಂದಲೇ ಮತ್ತೇರುತ್ತದೆ. ಅತ್ತೆಯ ದುರ್ಬಲ ಮನಸ್ಸು ಬಯಕೆಯ ಪ್ರಬಲ ಪ್ರವಾಹದಲ್ಲಿ ಮುಳುಗಿಹೋಯಿತು, ಉಚಿತ–ಅನುಚಿತಗಳ ಪ್ರಜ್ಞೆ ಹೊರಟುಹೋಯಿತು. ಕೊಂಚ ಹೊತ್ತು ಅವಳು ಆ ಬಯಕೆಯನ್ನು ಒತ್ತಿಟ್ಟುಕೊಂಡಿದ್ದಳು. ಈಗ ಇದ್ದಕ್ಕಿದ್ದಂತೆ ಲಾಡಲಿಗೆ "ನನ್ನ ಕೈ ಹಿಡಿದುಕೊಂಡು ಜನ ಊಟ ಮಾಡ್ತಿದ್ದ ಕಡೆ ಕರಕೊಂಡು ಹೋಗು" ಎಂದಳು.

ಲಾಡಲಿಗೆ ಅತ್ತೆಯ ಉದ್ದೇಶ ತಿಳಿಯಲಿಲ್ಲ. ಅವಳು ಅತ್ತೆಯನ್ನು ಎಂಜಲೆಲೆಗಳಿದ್ದಲ್ಲಿಗೆ ಕರೆದುಕೊಂಡು ಹೋಗಿ ಕೂರಿಸಿದಳು. ಹಸಿವಿನಿಂದ ಕಂಗೆಟ್ಟಿದ್ದ ಆ ಬಡಪಾಯಿ ಅರುಳು ಮರುಳು ಮುದುಕಿ ಎಂಜಲೆಲೆಗಳಿಂದ ಪೂರಿಯ ತುಂಡುಗಳನ್ನು ಆರಿಸಿ ಆರಿಸಿ ತಿನ್ನತೊಡಗಿದಳು. ಓಹ್, ಮೊಸರು ಎಷ್ಟು ರುಚಿಯಾಗಿತ್ತು; ಕಚೋರಿ ಮೃದುವಾಗಿ, ಗರಿಗರಿಯಾಗಿ, ಉಪ್ಪು ಕಾರ ಹೊಂದಿಕೊಂಡು ಅದೆಷ್ಟು ಚೆನ್ನಾಗಿತ್ತು. ಅತ್ತೆ ಬುದ್ಧಿಹೀನಳಾದರೂ ಅವಳಿಗೆ ತಾನು ಇನ್ನೊಬ್ಬರ ಎಂಜಲೆಲೆ ನೆಕ್ಕುತ್ತಿದ್ದೇನೆ, ಇದು ಎಂದೆಂದೂ ಮಾಡಬಾರದಂತಹ ಕೆಲಸ ಎಂದು ಗೊತ್ತಿತ್ತು. ಆದರೆ ಮುಪ್ಪು ಹಸಿವಿನ ರೋಗದ ಕೊನೆಯ ಘಟ್ಟ. ಅಲ್ಲಿ ಬಯಕೆಗಳೆಲ್ಲವೂ ಒಂದೇ ಕೇಂದ್ರದಲ್ಲಿ ಬಂದು ಸೇರಿರುತ್ತವೆ; ಮುದಿ ಅತ್ತೆಯಲ್ಲಿ ಈ ಕೇಂದ್ರ ಅವಳ ಸ್ವಾದೇಂದ್ರಿಯವಾಗಿತ್ತು.

## 6

ಅದೇ ಹೊತ್ತಿಗೆ ಸರಿಯಾಗಿ ರೂಪ ಕಣ್ಣು ತೆರೆದಳು. ಲಾಡಲಿ ತನ್ನ ಪಕ್ಕದಲ್ಲಿಲ್ಲದಿರುವುದು ಅವಳಿಗೆ ಅರಿವಾಯಿತು. ಆವಳು ಗಾಬರಿಯಿಂದ ಲಾಡಲಿ ಎಲ್ಲಾದರೂ ಕೆಳಗೆ ಉರುಳಿಕೊಂಡಳೇನೋ ಎಂದು ಮಂಚದ ಆ ಕಡೆ ಈ ಕಡೆ ನೋಡತೊಡಗಿದಳು. ಅವಳು ಕೆಳಗೆಲ್ಲೂ ಇಲ್ಲದ್ದನ್ನು ಕಂಡು ಎದ್ದು ಕುಳಿತಳು. ನೋಡಿದರೆ ಲಾಡಲಿ ಎಂಜಲೆಲೆಗಳ ಹತ್ತಿರ ಸದ್ದಿಲ್ಲದೆ ನಿಂತಿದ್ದಾಳೆ, ಮುದಿ ಅತ್ತೆ ಎಲೆಗಳಿಂದ ಪೂರಿಯ ತುಣುಕುಗಳನ್ನು ಆಯ್ದು ಆಯ್ದು ತಿನ್ನುತ್ತಿದ್ದಾಳೆ. ರೂಪಳಿಗೆ ಸನ್ನಿ ಬಡಿದಂತಾಯಿತು. ಚೂರಿಯಿಂದ ಯಾವದಾದರೂ ಹಸುವಿನ ಕತ್ತು ಕೊಯ್ಯುದನ್ನು ಕಂಡಾಗ ಆಗುವಂತಹ ಮಾನಸಿಕ ವೇದನೆಯಾಯಿತು. ಒಬ್ಬ ಬ್ರಾಹ್ಮಣ ಹೆಂಗಸು ಇನ್ನೊಬ್ಬರ ಎಂಜಲೆಲೆ ತಡಕಾಡುವುದಕ್ಕಿಂತ ಹೆಚ್ಚು ದಾರುಣವಾದ ದೃಶ್ಯ ಅಸಂಭವ. ಒಂದೆರಡು ಪೂರಿಯ ತುಣುಕಿಗಾಗಿ ಅತ್ತೆ ಅಂತಹ ಕೀಳಾದ, ನಿಕೃಷ್ಟವಾದ ಕೆಲಸ ಮಾಡುತ್ತಿದ್ದಾಳೆ! ನೋಡುವವರ ಎದೆ ನಡುಗಿಸುವಂತಹ ದೃಶ್ಯ ಅದು. ರೂಪಳಿಗೆ ನೆಲವೇ ನಿಂತಂತೆ, ಆಕಾಶವೇ ತಿರುಗಿದಂತೆ ಭಾಸವಾಯಿತು. ಜಗತ್ತಿಗೆ ಯಾವುದೋ ಹೊಸ ವಿಪತ್ತು ಬಡಿಯಲಿದೆಯೇನೋ ಅನ್ನಿಸಿತು. ರೂಪಳಿಗೆ ಕೋಪ ಬರಲಿಲ್ಲ. ದುಃಖದ ಮುಂದೆ ಕೋಪವೆಲ್ಲಿಯದು? ಕರುಣೆಯಿಂದ, ಭಯದಿಂದ ಅವಳ ಕಣ್ಣು ಕೆಕ್ಕರಿಸಿತು. ಈ ಅಧರ್ಮದ ಪಾಪಕ್ಕೆ ಯಾರು ಕಾರಣ? ನಿಚ್ಚಳ ಹೃದಯದಿಂದ ಆಕಾಶದ ಕಡೆ ಕೈಯೆತ್ತಿ ಮುಗಿಯುತ್ತ ಹೇಳಿದಳು – "ದೇವರೇ, ನನ್ನ ಮಕ್ಕಳ ಮೇಲೆ ದಯೆಯಿಡು. ಈ ಪಾಪಕ್ಕೆ ನನಗೆ ಶಿಕ್ಷೆ ಕೊಡಬೇಡ. ಇಲ್ಲವೇ ನಾನು ನಾಶವಾಗಿಹೋಗ್ತೀನಿ."

ರೂಪಳಿಗೆ ತನ್ನ ಸ್ವಾರ್ಥ ಅನ್ಯಾಯಗಳು ಹೀಗೆ ಪ್ರತ್ಯಕ್ಷ ರೂಪದಲ್ಲಿ ಹಿಂದೆಂದೂ ಕಾಣಿಸಿಕೊಂಡಿರಲಿಲ್ಲ. ಅವಳು ಯೋಚಿಸತೊಡಗಿದಳು – "ಅಯ್ಯೋ, ನಾನೆಂತಹ ನಿಷ್ಕರುಣಿ. ಯಾರ ಆಸ್ತಿಯಿಂದ ನನಗೆ ವರ್ಷಕ್ಕೆ ಇನ್ನೂರು ರೂಪಾಯಿ ಆದಾಯವಾಗುತ್ತಿದೆಯೋ ಅವಳಿಗೆ ಈ ದುರ್ಗತಿಯೆ? ನನ್ನಿಂದಾಗಿ! ಓ ದಯಾಮಯಿಯಾದ ದೇವರೇ, ನನ್ನಿಂದ ಭಾರೀ ಅಪರಾಧವಾಗಿದೆ. ನನ್ನನ್ನು ಕ್ಷಮಿಸು. ಇವತ್ತು ನನ್ನ ಮಗನ ಮದುವೆಯ ನಿಶ್ಚಿತಾರ್ಥವಿತ್ತು. ಸಾವಿರಾರು ಜನ ಬಂದು ಉಂಡು ತಿಂದು ಹೋದರು. ಅವರು ಕೇಳಿಕೇಳಿದಷ್ಟು ಬಡಿಸಿದೆ. ನನ್ನ ಹೆಸರು ಮೆರೆಯಲೆಂದು ಸಾವಿರಾರು ರೂಪಾಯಿ ಖರ್ಚು ಮಾಡಿದೆ. ಆದರೆ ಯಾರ ದಯೆಯಿಂದ ಸಾವಿರಾರು ರೂಪಾಯಿ ತಿಂದಿದ್ದೇನೆಯೋ ಅವಳಿಗೆ ಈ ಸಮಾರಂಭದಲ್ಲಿ ಹೊಟ್ಟೆ ತುಂಬ ಊಟ ಕೊಡದೆ ಹೋದೆ. ಆ ಮುದುಕಿ ಅಸಹಾಯಳಾಗಿರುವುದು ಈ ಒಂದು ಕಾರಣದಿಂದಾಗಿ.

ರೂಪ ದೀಪ ಹಚ್ಚಿದಳು. ಉಗ್ರಾಣದ ಬಾಗಿಲು ತೆರೆದಳು. ತಟ್ಟೆಯಲ್ಲಿ ಮಾಡಿದ ಅಡಿಗೆಯೆಲ್ಲವನ್ನೂ ಇಟ್ಟುಕೊಂಡು ಮುದಿ ಅತ್ತೆಯ ಬಳಿ ಹೋದಳು.

ಅರ್ಧ ರಾತ್ರಿಯಾಗಿತ್ತು. ಆಕಾಶದಲ್ಲಿ ನಕ್ಷತ್ರಗಳ ತಟ್ಟೆ ಸಜ್ಜಾಗಿತ್ತು. ಮೇಲೆ ಕುಳಿತ ದೇವಗಣ ಸ್ವರ್ಗಲೋಕದ ವಸ್ತುಗಳಿಂದ ಅದನ್ನು ಅಲಂಕರಿಸಿದ್ದರು. ಆದರೆ ಮುದಿ ಅತ್ತೆಗೆ ತನ್ನ ಮುಂದಿದ್ದ ತಟ್ಟೆಯಿಂದ ಪ್ರಾಪ್ತನಾದ ಪರಮಾತ್ಮ ಆ ದೇವಗಣದಲ್ಲಿ ಯಾರಿಗೂ ಪ್ರಾಪ್ತನಾಗುವಂತಿರಲಿಲ್ಲ. ರೂಪ ಗದ್ಗದ ಸ್ವರದಲ್ಲಿ ಹೇಳಿದಳು – "ಏಳಿ, ಅತ್ತೆ, ಊಟ ಮಾಡಿ, ನನ್ನಿಂದ ಇವತ್ತು ದೊಡ್ಡ ತಪ್ಪಾಯಿತು. ಅದನ್ನು ಮನಸ್ಸಿಗೆ ಹಚ್ಚಿಕೋಬೇಡಿ. ನನ್ನ ಅಪರಾಧಾನ ಕ್ಷಮಿಸು ಅಂತ ದೇವರನ್ನ ಕೇಳಿಕೊಳ್ಳಿ."

ಏನೂ ಅರಿಯದ ಹಸುಳೆ ಮಕ್ಕಳು ಮಿಠಾಯಿ ಸಿಕ್ಕಿದಾಗ ಹೊಡೆದ ಏಟು, ತೋರಿದ ತಿರಸ್ಕಾರಗಳೆಲ್ಲವನ್ನೂ ಮರೆಯುವಂತೆಯೇ ಮುದಿ ಅತ್ತೆ ಎಲ್ಲವನ್ನೂ ಮರೆತು ಊಟ ಮಾಡುತ್ತಿದ್ದಳು. ಅವಳ ರೋಮರೋಮದಿಂದಲೂ ಸದ್ಭಾವನೆ ಹೊರಡುತ್ತಿತ್ತು. ರೂಪ ಬದಿಯಲ್ಲಿ ಕೂತು ಈ ಸ್ವರ್ಗಸಮಾನವಾದ ದೃಶ್ಯವನ್ನು ನೋಡುತ್ತ ಆನಂದವನ್ನು ಸೂರೆ ಮಾಡುವುದರಲ್ಲಿ ಮಗ್ನಳಾಗಿದ್ದಳು.

# 15. ಮರ್ಯಾದೆಯ ಬಲಿಪೀಠ

ಚಿತ್ತೌಡಿನಲ್ಲಿ ಮೃದುಭಾಷಿಣಿ ಮೀರಾ ಪ್ರಿಯಜನರಿಗೆ ಈಶ್ವರಪ್ರೇಮವನ್ನು ಪಾನ ಮಾಡಿಸುತ್ತಿದ್ದ ಕಾಲ ಅದು. ರಣಛೋಡಜಿಯ ಮಂದಿರದಲ್ಲಿ ಅವಳು ಭಕ್ತಿಯಿಂದ ವಿಹ್ವಲಳಾಗಿ ಅಮೃತಭರಿತವಾದ ಗೀತೆಗಳನ್ನು ಹಾಡುವಾಗ ಶ್ರೋತೃಗಣ ಪ್ರೇಮಾನುರಾಗದಿಂದ ಉನ್ಮತ್ತರಾಗುತ್ತಿದ್ದರು. ದಿನವಿಡೀ ನೀರು ಕಾಣದ ಹಸುಗಳು ಯಾವುದಾದರೂ ಕೆರೆಯನ್ನು ಕಂಡಾಗ ಅದರ ಕಡೆ ಓಡುವಂತೆ ಚಿತ್ತೌಡಿನ ಜನ ಪ್ರತಿದಿನವೂ ಈ ಸ್ವರ್ಗಸಮಾನವಾದ ಆನಂದವನ್ನು ಪಡೆಯಲು ಮಂದಿರದ ಕಡೆ ಉತ್ಸುಕರಾಗಿ ಓಡುತ್ತಿದ್ದರು. ಈ ಪ್ರೇಮಸುಧಾಸಾಗರ ಕೇವಲ ಚಿತ್ತೌಡಿನ ಜನರ ತೃಪ್ತಿಗಷ್ಟೇ ಮೀಸಲಾಗಿರಲಿಲ್ಲ; ಅದರಿಂದ ಸಮಸ್ತ ರಾಜಪೂತಾನದ ಮರುಭೂಮಿ ತಂಪಾಗಿತ್ತು.

ಒಂದು ಸಲ ಎಂತಹ ಯೋಗ ಕೂಡಿಬಂತೆಂದರೆ ಝಾಲಾವಾಡಾದ ರಾವ್‌ಸಾಹೇಬ, ಮಂದಾರ ರಾಜ್ಯದ ರಾಜಕುಮಾರರಿಬ್ಬರೂ ತಮ್ಮ ದಂಡುದಾಳಿಯೊಂದಿಗೆ ಚಿತ್ತೌಡಿಗೆ ಬಂದರು. ರಾವ್‌ಸಾಹೇಬನ ಸಂಗಡ ಅವನ ಮಗಳು ರಾಜಕುಮಾರಿ ಪ್ರಭಾ ಸಹ ಇದ್ದಳು. ಅವಳ ಗುಣರೂಪಗಳು ದೂರದೂರದ ರಾಜ್ಯಗಳಲ್ಲೆಲ್ಲಾ ಚರ್ಚೆಯ ವಿಷಯವಾಗಿದ್ದವು. ಇದೇ ರಣಛೋಡಜಿಯ ಮಂದಿರದಲ್ಲಿ ಮಂದಾರದ ರಾಜಕುಮಾರನೂ ರಾಜಕುಮಾರಿ ಪ್ರಭಾಳೂ ಒಬ್ಬರನ್ನೊಬ್ಬರ ಕಂಡರು. ಪ್ರೇಮ ಬಾಣ ಬಿಟ್ಟಿತು.

ರಾಜಕುಮಾರ ಇಡೀ ದಿನ ಖಿನ್ನನಾಗಿ ಪಟ್ಟಣದ ಹಾದಿಬೀದಿಗಳಲ್ಲಿ ಅಲೆದಾಡುತ್ತಿದ್ದ. ರಾಜಕುಮಾರಿ ವಿರಹದ ವ್ಯಥೆಯಿಂದ ತನ್ನ ಮಹಲಿನ ಗವಾಕ್ಷದ ಮೂಲಕ ಸದಾ ಇಣಕಿ ನೋಡುತ್ತಿರುತ್ತಿದ್ದಳು. ಇಬ್ಬರೂ ಸಂಜೆಯ ಹೊತ್ತು ವ್ಯಾಕುಲರಾಗಿ ಮಂದಿರಕ್ಕೆ ಬರುತ್ತಿದ್ದರು. ಅಲ್ಲಿ ಚಂದ್ರನನ್ನು ನೋಡಿ ಕಮಲ ಅರಳುತ್ತಿತ್ತು.

ಪ್ರೇಮಪ್ರವೀಣಳಾದ ಮೀರಾ ಈ ಇಬ್ಬರು ಪ್ರೇಮಿಗಳೂ ಹಸಿದ ಕಣ್ಣುಗಳಿಂದ ಒಬ್ಬರನ್ನೊಬ್ಬರು ನೋಡುವುದನ್ನು ಎಷ್ಟೋ ಸಲ ಕಂಡು ಅವರ ಮನಸ್ಸಿನ ಭಾವನೆಯನ್ನು ಗ್ರಹಿಸಿದ್ದಳು. ಒಂದು ದಿನ ಕೀರ್ತನೆಯ ನಂತರ ಝಾಲಾವಾಡದ ರಾವ್‌ಸಾಹೇಬ ಹೊರಡತೊಡಗಿದಾಗ ಮೀರಾ ಮಂದಾರದ ರಾಜಕುಮಾರನನ್ನು

ಕರೆಸಿ, ಅವನ ಮುಂದೆ ನಿಲ್ಲಿಸಿ ಹೇಳಿದಳು– "ರಾವ್‌ಸಾಹೇಬರೇ, ನಾನು ಪ್ರಭಳಿಗೆ ಈ ವರನನ್ನು ತಂದಿದ್ದೇನೆ. ಸ್ವೀಕರಿಸಬೇಕು."

ಪ್ರಭಾ ನಾಚಿಕೆಯಿಂದ ಕುಸಿದುಹೋದಳು. ರಾಜಕುಮಾರನ ಗುಣಶೀಲಗಳನ್ನು ಕಂಡು ರಾವ್‌ಸಾಹೇಬ ಮೊದಲೇ ಮೋಹಿತನಾಗಿದ್ದ. ಅವನು ತಕ್ಷಣ ರಾಜಕುಮಾರ ಅದೇ ಹೊತ್ತಿಗೆ ಚಿತ್ತೌಡಿನ ರಾಣಾ ಭೋಜರಾಜನೂ ಮಂದಿರಕ್ಕೆ ಬಂದ. ಅವನು ಪ್ರಭಳ ಮುಖಚಂದ್ರವನ್ನು ನೋಡಿದ. ಅವನ ಎದೆಯಲ್ಲಿ ಹಾವು ಹರಿದಾಡತೊಡಗಿತು.

## 2

ಝಾಲಾವಾಡದಲ್ಲಿ ಸಡಗರವೋ ಸಡಗರ. ಅವತ್ತು ರಾಜಕುಮಾರಿ ಪ್ರಭಳ ಮದುವೆ, ಮಂದಾರದಿಂದ ದಿಬ್ಬಣ ಬರುವುದಿತ್ತು. ಅತಿಥಿಗಳ ಸೇವೆಸತ್ಕಾರದ ತಯಾರಿ ನಡೆದಿತ್ತು. ಅಂಗಡಿಗಳೆಲ್ಲವೂ ಅಲಂಕೃತವಾಗಿದ್ದವು. ನೌಬತ್‌ಖಾನೆ ಆಮೋದ ಆಲಾಪಗಳಿಂದ ಝೇಂಕರಿಸುತ್ತಿತ್ತು. ರಸ್ತೆಗಳ ಮೇಲೆ ಸುಗಂಧವನ್ನು ಸಿಂಪಡಿಸಲಾಗುತ್ತಿತ್ತು. ಉಪ್ಪರಿಗೆಗಳು ಹೂಲತೆಗಳಿಂದ ಶೋಭಾಯಮಾನವಾಗಿದ್ದವು. ಆದರೆ ಯಾರಿಗಾಗಿ ಈ ಎಲ್ಲ ಸಿದ್ಧತೆಗಳು ನಡೆದಿದ್ದವೋ ಅವಳು ತನ್ನ ಉದ್ಯಾನದಲ್ಲಿ ಮರದ ಕೆಳಗೆ ಖಿನ್ನಳಾಗಿ ಕುಳಿತು ಅಳುತ್ತಿದ್ದಳು.

ರಾಣೀವಾಸದಲ್ಲಿ ಡೋಮಿನಿಯರು ಆನಂದೋತ್ಸವದಿಂದ ಹಾಡುತ್ತಿದ್ದರು. ಒಂದು ಕಡೆ ಸುಂದರಿಯರ ಹಾವಭಾವ; ಇನ್ನೊಂದು ಕಡೆ ಒಡವೆಗಳ ಫಳಫಳ; ಮತ್ತೊಂದು ಕಡೆ ಹಾಸ್ಯವಿನೋದಗಳ ಸುಗ್ಗಿ. ಹಜಾಮರ ಹೆಂಗಸು ಮಾತುಮಾತಿಗೆ ರೇಗುತ್ತಿದ್ದಳು. ಹೂವಾಡಗಿತ್ತಿ ಜಂಬದಿಂದ ಹೂವನ್ನೇ ಕಟ್ಟುತ್ತಿರಲಿಲ್ಲ; ಅಗಸರವಳು ದುರುಗುಟ್ಟಿ ನೋಡುತ್ತಿದ್ದಳು; ಕುಂಬಾರರವಳು ಗಡಿಗೆ ಮುಖ ಹಾಕಿಕೊಂಡಿದ್ದಳು; ಮಂಟಪದಲ್ಲಿ ಪುರೋಹಿತರು ಮಾತುಮಾತಿಗೆ ಚಿನ್ನದ ನಾಣ್ಯಕ್ಕಾಗಿ ತಿಣುಕುತ್ತಿದ್ದರು. ರಾಣಿ ಹೊಟ್ಟೆಗೂ ತಿನ್ನದೆ ಕೆದರಿದ ತಲೆಯಲ್ಲಿ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದಳು. ತನ್ನ ಭಾಗ್ಯವನ್ನು ಕೊಂಡಾಡಿಕೊಂಡು ಎಲ್ಲರ ಮಾತಿನ ಜಡಿಮಳೆಯನ್ನೂ ಸಹಿಸುತ್ತಿದ್ದಳು. ಕೈಬಿಚ್ಚಿ ರತ್ನವಜ್ರಗಳನ್ನು ಚೆಲ್ಲಾಡುತ್ತಿದ್ದಳು. ಇವತ್ತು ಪ್ರಭಳ ಮದುವೆ; ಇಂಥ ಸುದ್ದಿ ಕೇಳುವುದೇ ಒಂದು ಭಾಗ್ಯವಲ್ಲವೇ. ಎಲ್ಲರೂ ತಮ್ಮ ತಮ್ಮ ಗುಂಗಿನಲ್ಲಿ ಮತ್ತರಾಗಿದ್ದರು. ಮರದ ಕೆಳಗೆ ಒಂಟಿಯಾಗಿ ಕುಳಿತು ಅಳುತ್ತಿದ್ದ ಪ್ರಭಳ ಯೋಚನೆ ಮಾತ್ರ ಯಾರಿಗೂ ಇರಲಿಲ್ಲ.

ಒಬ್ಬ ಹೆಂಗಸು ಬಂದು ಹಜಾಮರವಳಿಗೆ ಹೇಳಿದಳು – "ಸುಮ್ಮನೆ ತಲೆಹರಟೆ ಮಾಡಬೇಡ, ಕೊಂಚ ರಾಜಕುಮಾರಿಯ ಕಡೆ ಗಮನವಿರಲಿ. ನಡಿ, ಅವಳ ಜಡೆ ಹೆಣೆ."

ಹಜಾಮರವಳು ಬಾಯಿ ಮುಚ್ಚಿದಳು. ಇಬ್ಬರೂ ಪ್ರಭಳನ್ನು ಹುಡುಕಿಕೊಂಡು ಉದ್ಯಾನಕ್ಕೆ ಬಂದರು. ಪ್ರಭಾ ಅವರನ್ನು ಕಂಡು ಕಣ್ಣೀರೊರಸಿಕೊಂಡಳು. ಹಜಾಮರ ಹೆಂಗಸು ಅವಳ ಬೈತಲೆಗೆ ಮುತ್ತು ಜೋಡಿಸತೊಡಗಿದಳು; ಪ್ರಭಾ ತಲೆ ತಗ್ಗಿಸಿ ಕಣ್ಣಿನಿಂದ ಮುತ್ತು ಸುರಿಸತೊಡಗಿದಳು.

ಸಖಿಯೂ ಕಣ್ಣು ಒದ್ದೆಮಾಡಿಕೊಂಡು ಹೇಳಿದಳು– "ತಂಗೀ, ಮನಸ್ಸು ಚಿಕ್ಕದು ಮಾಡಿಕೋಬೇಡ. ಕೋರಿದ ಬಯಕೆ ಈಡೇರಿರುವಾಗ ಯಾಕಿಷ್ಟು ವ್ಯಸನ ?"

ಪ್ರಭಾ ಸಖಿಯ ಕಡೆ ನೋಡುತ್ತ ಹೇಳಿದಳು– "ಅದೇಕೋ ಎದೆ ಹೊಡಕೋತಿದೆ ಕಣಕ್ಕಾ !"

ಸಖಿ ಕೆಣಕುತ್ತ ಹೇಳಿದಳು– "ಪ್ರಿಯನ ಮಿಲನಕ್ಕೆ ಕಳವಳಪಡ್ತಿದೆ. ಅದಕ್ಕೇ ?"

ಪ್ರಭಾ ಖಿನ್ನಳಾಗಿ ಹೇಳಿದಳು– "ಯಾರೋ ನನ್ನೆದೆಯಲ್ಲಿ ಕೂತುಕೊಂಡು ಇನ್ನು ಅವರ ಭೇಟಿಯಾಗೋಲ್ಲ ಅಂತ ಹೇಳ್ತಿದಾರೆ !"

ಸಖಿ ಅವಳ ತಲೆ ನೇವರಿಸುತ್ತ ಹೇಳಿದಳು– "ಬೆಳಕು ಹರಿಯೋ ಮುಂಚೆ ಕೊಂಚ ಕತ್ತಲು ಕವಿಯೋ ಹಾಗೆಯೇ ಮಿಲನಕ್ಕೆ ಮುಂಚೆ ಪ್ರೇಮಿಗಳು ಸ್ವಲ್ಪ ಎದೆಗುಂದೋದು ಸಹಜ !"

ಪ್ರಭಾ ಹೇಳಿದಳು– "ಹಾಗಲ್ಲಕ್ಕ, ನನಗೇಕೋ ಶಕುನ ಒಳ್ಳೇದು ಅಂತ ಅನ್ನಿಸೋಲ್ಲ. ಇವತ್ತು ಇಡೀ ದಿನ ಕಣ್ಣು ಅದುರ್ತಿತ್ತು. ರಾತ್ರಿ ಕೆಟ್ಟ ಕನಸು ಬಿದ್ದಿತು. ಇವತ್ತು ಖಂಡಿತ ಏನೋ ವಿಘ್ನವಾಗುತ್ತೆ ಅಂತ ನನಗೆ ಅನುಮಾನ. ನಿನಗೆ ರಾಣಾ ಭೋಜರಾಜನ ವಿಷಯ ಗೊತ್ತಲ್ಲವೆ ?"

ಸಂಜೆಯಾಯಿತು. ಆಕಾಶದಲ್ಲಿ ನಕ್ಷತ್ರದೀಪಗಳು ಹೊತ್ತಿಕೊಂಡವು. ಝಾಲಾವಾಡದಲ್ಲಿ ಹುಡುಗರು ಮುದುಕರೆಲ್ಲರೂ ದಿಬ್ಬಣದ ಸ್ವಾಗತಕ್ಕೆ ಸಿದ್ಧರಾದರು. ಗಂಡಸರು ಪೇಟ ಸರಿಮಾಡಿಕೊಂಡು ಶಸ್ತ್ರಸಜ್ಜಿತರಾದರು. ಯುವತಿಯರು ಸಿಂಗಾರ ಮಾಡಿಕೊಂಡು ಗಾಯನ–ಬಾಜನ ಮಾಡುತ್ತ ರಾಣೀವಾಸದ ಕಡೆ ಹೊರಟರು. ಸಹಸ್ರಾರು ಹೆಂಗಸರು ಮಾಳಿಗೆಗಳ ಮೇಲೆ ನಿಂತು ದಿಬ್ಬಣದ ದಾರಿ ನೋಡತೊಡಗಿದರು.

ಇದ್ದಕ್ಕಿದ್ದಂತೆ ದಿಬ್ಬಣ ಬಂತೆಂದು ಗದ್ದಲವೆದ್ದಿತು. ಜನ ಎದ್ದು ಕುಳಿತರು; ನಗಾರಿಗಳು ಬಡಿಯತೊಡಗಿದವು. ಮದ್ದುಗುಂಡು ಹಾರಿತು. ಯುವಕರು ಕುದುರೆಗಳ ಬೆನ್ನು ಚಪ್ಪರಿಸಿದರು. ಕ್ಷಣಮಾತ್ರದಲ್ಲಿ ಕುದುರೆಸವಾರರ ಒಂದು ಸೇನೆ ರಾಜಭವನದ ಮುಂದೆ ಬಂದು ನಿಂತುಕೊಂಡಿತು. ಜನರಿಗೆ ಆಶ್ಚರ್ಯವಾಯಿತು. ಯಾಕೆಂದರೆ ಅದು ಮಂದಾರದಿಂದ ಬಂದ ದಿಬ್ಬಣವಾಗಿರಲಿಲ್ಲ. ಬದಲು ರಾಣಾ ಭೋಜರಾಜನ ಸೇನೆಯಾಗಿತ್ತು.

ಝಾಲಾವಾಡದವರು ಏನು ಮಾಡಬೇಕೆಂದು ನಿರ್ಧರಿಸಲಾಗದೆ ಇನ್ನೂ ವಿಸ್ಮಿತರಾಗಿಯೇ ನಿಂತಿದ್ದರು. ಅಷ್ಟರಲ್ಲಿ ಚಿತ್ತೌಡದ ಸೇನೆ ರಾಜಭವನವನ್ನು ಮುತ್ತಿತು. ಆಗ ಝಾಲಾವಾಡದವರಿಗೂ ಚೇತನ ಬಂದಿತು. ಕತ್ತಿ ಸೆಳೆದು ಆಕ್ರಮಣಕಾರಿಗಳನ್ನು ಮುತ್ತಿದರು. ರಾಣಾ ರಾಜಮಹಲಿನೊಳಗೆ ನುಗ್ಗಿದ. ರಾಣೀವಾಸದಲ್ಲಿ ಗದ್ದಲವೆದ್ದಿತು.

ಷೋಡಶ ಶೃಂಗಾರಗಳನ್ನೂ ಮುಗಿಸಿ ಸಖಿಯರ ಸಂಗಡ ಕುಳಿತಿದ್ದ ಪ್ರಭಾ ಈ ಕೋಲಾಹಲವನ್ನು ಕಂಡು ಹೆದರಿದಳು. ಅಷ್ಟರಲ್ಲಿ ರಾವ್‌ಸಾಹೇಬ ಏದುಸಿರು ಬಿಡುತ್ತ ಓಡಿಬಂದು ಹೇಳಿದ– "ಮಗು ಪ್ರಭಾ, ರಾಣಾ ಭೋಜರಾಜ ನಮ್ಮ ಮಹಲಿಗೆ ಮುತ್ತಿಗೆ ಹಾಕಿದ್ದಾನೆ. ನೀನು ಬೇಗ ಮಹಡಿ ಹತ್ತಿಹೋಗಿ ಬಾಗಿಲು ಹಾಕಿಕೊಂಡು ಕೂತುಕೊ. ನಾವು ಕ್ಷತ್ರಿಯರಾಗಿರುವುದು ನಿಜವಾದರೆ ಚಿತ್ತೌಡಿನ ಒಂದು ಕುನ್ನಿ ಸಹ ಇಲ್ಲಿಂದ ಬದುಕಿ ಹೋಗಲಾರ."

ರಾವ್‌ಸಾಹೇಬ ಇನ್ನೂ ಮಾತು ಮುಗಿಸಿರಲಿಲ್ಲ. ಅಷ್ಟರಲ್ಲಿ ರಾಣಾ ಕೆಲವು ವೀರರ ಜೊತೆಗೂಡಿ ಅಲ್ಲಿಗೆ ನುಗ್ಗಿಬಂದು ಹೇಳಿದ– "ಚಿತ್ತೌಡಿನವರು ತಲೆ ಕತ್ತರಿಸೋಕೆ ಬಂದಿದ್ದಾರೆ. ಅವರು ರಾಜಪುತ್ರರಾಗಿರುವುದು ನಿಜವಾದರೆ ರಾಜಕುಮಾರಿಯನ್ನು ಕೊಂಡೊಯ್ಯುತ್ತಾರೆ." ವೃದ್ಧ ರಾವ್‌ಸಾಹೇಬನ ಕಣ್ಣಿಂದ ಬೆಂಕಿ ಸುರಿಯತೊಡಗಿತು. ಅವನು ಕತ್ತಿ ಸೆಳೆದು ರಾಣನ ಮೇಲೆ ಬೀಸಿದ. ರಾಣಾ ಅದರ ಏಟಿನಿಂದ ತಪ್ಪಿಸಿಕೊಂಡು ರಾಜಕುಮಾರಿಯ ಕಡೆ ತಿರುಗಿ ಹೇಳಿದ– "ರಾಜಕುಮಾರಿ, ನಮ್ಮ ಜೊತೆ ಬರುತ್ತೀಯಾ ?

ಪ್ರಭಾ ತಲೆ ತಗ್ಗಿಸಿಕೊಂಡು ರಾಣನ ಮುಂದೆ ಬಂದು ಹೇಳಿದಳು– "ಆಗಲಿ, ಬರ್ತೀನಿ."

ರಾಣನ ಕಡೆಯವರು ರಾವ್‌ಸಾಹೇಬನನ್ನು ಹಿಡಿದರು. ಅವನು ತಡವರಿಸುತ್ತ ಹೇಳಿದ– "ಪ್ರಭಾ ನೀನು ರಾಜಪೂತ ಕನ್ಯೆಯೆ ?"

ಪ್ರಭಳ ಕಣ್ಣಿನಲ್ಲಿ ನೀರು ತುಂಬಿತು. ಅವಳಂದಳು– "ರಾಣರು ರಾಜಪುತ್ರರ ಕುಲತಿಲಕರಾಗಿದ್ದಾರೆ."

ರಾವ್‌ಸಾಹೇಬ– "ಛೀ ! ನಾಚಿಕೆಯಿಲ್ಲದವಳೇ ?"

ಕತ್ತಿಯ ಕೆಳಗಿನ ಬಲಿಪಶುವಿನಂತೆ ರಾವ್‌ಸಾಹೇಬನ ಕಡೆ ದೀನದೃಷ್ಟಿಯಿಂದ ನೋಡುತ್ತ ಪ್ರಭಾ ಹೇಳಿದಳು– "ಯಾವ ಝಾಲಾವಾಡದ ಮಡಿಲಲ್ಲಿ ಬೆಳೆದಿದ್ದೇನೆಯೋ ಅದಕ್ಕೆ ರಕ್ತದಿಂದ ಬಣ್ಣ ಬಳಿಯಲೆ ?"

ರಾವ್‌ಸಾಹೇಬ ಕೋಪದಿಂದ ನಡುಗುತ್ತ ಹೇಳಿದ– "ಕ್ಷತ್ರಿಯರಿಗೆ ತಮ್ಮ ರಕ್ತ ಅಷ್ಟು ಪ್ರಿಯವಲ್ಲ. ಮರ್ಯಾದೆಗಾಗಿ ಪ್ರಾಣ ಕೊಡುವುದು ಅದರ ಧರ್ಮ !"

ಪ್ರಭಳ ಕಣ್ಣು ಕೆಂಪಾಯಿತು. ಮುಖ ಉರಿಯತೊಡಗಿತು.

ಅವಳಂದಳು– "ರಾಜಪೂತ ಕನ್ಯೆ ತನ್ನ ಸತೀತ್ವವನ್ನು ತಾನು ರಕ್ಷಿಸಿಕೊಳ್ಳಬಲ್ಲಳು. ಅದಕ್ಕಾಗಿ ರಕ್ತಪ್ರವಾಹವಾಗುವ ಅಗತ್ಯವಿಲ್ಲ ?"

ಕಣ್ಣು ಮುಚ್ಚಿಬಿಡುವುದರೊಳಗೆ ರಾಣಾ ಪ್ರಭಳನ್ನೆತ್ತಿಕೊಂಡು ಮಿಂಚಿನಂತೆ ಹಾರಿ ಹೊರಬಂದ. ಅವಳನ್ನು ಕುದುರೆಯ ಮೇಲೆ ಕೂರಿಸಿ, ತಾನೂ ಕುದುರೆ ಹತ್ತಿ ದೌಡಾಯಿಸಿದ. ಚಿತ್ತೌಡಿನ ಇತರ ಸೈನಿಕರೂ ಲಗಾಮು 'ಸಡಿಲಿಸಿದರು. ಅವರ ಕಡೆಯ ನೂರು ಯೋಧರು ನೆಲದ ಮೇಲೆ ತಲ್ಲಣಿಸುತ್ತ ಬಿದ್ದಿದ್ದರು. ಯಾರೊಬ್ಬರೂ ಕತ್ತಿಯೆತ್ತುವ ಸ್ಥಿತಿಯಲ್ಲಿರಲಿಲ್ಲ.

ರಾತ್ರಿ ಹತ್ತು ಗಂಟೆಗೆ ಮಂದಾರದವರು ಬಂದರು. ಆದರೆ ಈ ಶೋಕಸಮಾಚಾರ

ಕೇಳಿದ ಕೂಡಲೇ ಬಂದ ದಾರಿಯಲ್ಲಿ ಹಿಂದಿರುಗಿದರು. ಮಂದಾರದ ರಾಜಕುಮಾರ ನಿರಾಶೆಯಿಂದ ನಿಶ್ಚೇಷ್ಟನಾದ. ರಾತ್ರಿಯು ವೇಳೆ ನದಿಯು ದಂಡೆ ಶೂನ್ಯವಾಗುವಂತೆ ಝಾಲಾವಾಡ ಶೂನ್ಯವಾಯಿತು.

## 3

ಚಿತ್ತೌಡಿನ ರಂಗಮಹಲಿನಲ್ಲಿ ಪ್ರಭಾ ಖಿನ್ನಳಾಗಿ ಕುಳಿತು ಎದುರಿಗಿದ್ದ ಚೆಲುವಾದ ಮರದ ಎಲೆಗಳನ್ನು ಎಣಿಸುತ್ತಿದ್ದಳು. ಸಂಜೆಯು ಹೊತ್ತು. ಬಣ್ಣಬಣ್ಣದ ಹಕ್ಕಿಗಳು ಮರಗಳ ಮೇಲೆ ಕುಳಿತು ಚಿಲಿಪಿಲಿಗುಟ್ಟುತ್ತಿದ್ದವು. ಅಷ್ಟರಲ್ಲಿ ರಾಣಾ ಕೋಣೆಯೊಳಗೆ ಬಂದ. ಪ್ರಭಾ ಎದ್ದುನಿಂತಳು.

ರಾಣಾ ಹೇಳಿದ– "ಪ್ರಭಾ, ನಾನು ನಿನಗೆ ಅಪರಾಧ ಮಾಡಿದ್ದೀನಿ. ತಂದೆತಾಯಿಗಳ ಮಡಿಲಿನಿಂದ ನಿನ್ನನ್ನು ಬಲವಂತವಾಗಿ ಕಸಿದು ತಂದಿದ್ದೀನಿ. ಇದನ್ನೆಲ್ಲಾ ನಾನು ನಿನ್ನ ಮೇಲಿನ ಪ್ರೇಮದಿಂದ ವಿವಶನಾಗಿ ಮಾಡಿದೆನೆಂದು ಹೇಳಿದರೆ ನೀನು ಮನಸ್ಸಿನಲ್ಲಿಯೇ ನಕ್ಕು ಇದು ಎಂತಹ ವಿಚಿತ್ರ, ವಿಲಕ್ಷಣ ಪ್ರೇಮ ಎನ್ನಬಹುದು. ಆದರೆ ಇದು ವಾಸ್ತವವಾಗಿ ನಿಜ. ರಣಛೋಡಜಿಯ ಮಂದಿರದಲ್ಲಿ ಮೊದಲು ನೋಡಿದಾಗಿನಿಂದ ನಿನ್ನನ್ನು ನೆನಸಿಕೊಂಡು ತಳಮಳಗೊಳ್ಳದೆ ಒಂದು ಕ್ಷಣವನ್ನಾದರೂ ಕಳೆದಿಲ್ಲ. ನಿನ್ನನ್ನು ನನ್ನನ್ನಾಗಿಸಿಕೊಳ್ಳಲು ಬೇರೆ ಏನಾದರೂ ಉಪಾಯವಿದ್ದಿದ್ದರೆ ಈ ಪಾಶವೀ ರೀತಿಯಲ್ಲಿ ಎಂದೆಂದಿಗೂ ವರ್ತಿಸುತ್ತಿರಲಿಲ್ಲ. ನಾನು ರಾವ್‌ಸಾಹೇಬರಿಗೆ ಮತ್ತೆ ಮತ್ತೆ ಸಂದೇಶ ಕಳಿಸಿದೆ; ಆದರೆ ಅವರು ಸದಾ ನನ್ನನ್ನು ಅಲಕ್ಷ್ಯ ಮಾಡಿದರು. ಕೊನೆಗೆ ನಿನ್ನ ಮದುವೆಯು ಹೊತ್ತು ಬಂದಾಗ, ಇನ್ನೊಂದೇ ದಿನದಲ್ಲಿ ನೀನು ಬೇರೊಬ್ಬನ ಪ್ರೇಮಕ್ಕೆ ಪಾತ್ರಳಾಗುವೆ, ಆಮೇಲೆ ನಿನ್ನ ಯೋಚನೆ ಸಹ ಸಲ್ಲದು ಎಂಬುದನ್ನು ನೆನೆದಾಗ ಅಸಹಾಯಕನಾಗಿ ಈ ಅಧರ್ಮಕ್ಕೆ ಕೈಹಾಕಬೇಕಾಯಿತು. ಇದು ಎಲ್ಲ ರೀತಿಯಲ್ಲೂ ನನ್ನ ಸ್ವಾರ್ಥಾಂಧತೆ ಎಂಬುದು ಒಪ್ಪುತ್ತೇನೆ. ನಾನು ನನ್ನ ಪ್ರೇಮದ ಮತ್ತಿನಲ್ಲಿ ನಿನ್ನ ಮನೋಭಾವನೆಯನ್ನು ಅರ್ಥಮಾಡಿಕೊಳ್ಳಲಿಲ್ಲ. ಆದರೆ ಪ್ರೇಮವೆಂಬುದು ಸ್ವತಃ ಒಂದು ಮಹಾನ್ ಸ್ವಾರ್ಥಪರತೆ. ಪ್ರೇಮದಲ್ಲಿ ಮನುಷ್ಯನಿಗೆ ತನ್ನ ಪ್ರಿಯತಮೆಯು ಹೊರತು ಬೇರೇನೂ ತೋಚುವುದಿಲ್ಲ. ನನ್ನ ವಿನಯ ಹಾಗೂ ಪ್ರೇಮಗಳಿಂದ ನಿನ್ನನ್ನು ಒಲಿಸಿಕೊಳ್ಳುವೆನೆಂಬ ವಿಶ್ವಾಸವಿತ್ತು. ಪ್ರಭಾ, ನೀರಡಿಕೆಯಿಂದ ಸಾಯುತ್ತಿರುವ ಮನುಷ್ಯ ಯಾವುದಾದರೂ ಪಾತ್ರೆಗೆ ಬಾಯಿ ಹಾಕಿದರೆ ಅವನು ಶಿಕ್ಷೆಗೆ ಅರ್ಹನಾಗುವುದಿಲ್ಲ. ನಾನು ಪ್ರೇಮದಿಂದ ಬಾಯಾರಿದ್ದೀನಿ. ಮೀರಾ ನನ್ನ ಸಹಧರ್ಮಿಣಿ. ಅವಳ ಹೃದಯ ಪ್ರೇಮದ ಅಗಾಧ ಸಾಗರ. ನನ್ನನ್ನು ಉನ್ಮತ್ತಗೊಳಿಸಲು ಅದರ ಒಂದು ಬೊಗಸೆ ಸಾಕಿತ್ತು. ಆದರೆ ಈಶ್ವರನ ವಾಸಸ್ಥಾನವಾಗಿರುವ ಹೃದಯದಲ್ಲಿ ನನಗೆ ಎಡೆಯೆಲ್ಲಿ? ನಿನ್ನ ಮೇಲೆ ಪ್ರೇಮದ

ಭೂತ ಸವಾರಿ ಮಾಡುತ್ತಿದ್ದರೆ ಇಡೀ ರಾಜಪೂತಾನದಲ್ಲಿ ಬೇರೆ ಯಾರೂ ಹೆಣ್ಣುಗಳಿರಲಿಲ್ಲವೆ ಎಂದು ನೀನು ಕೇಳಬಹುದು. ರಾಜಪೂತಾನದಲ್ಲಿ ನಿಸ್ಸಂದೇಹವಾಗಿಯೂ ಸೌಂದರ್ಯಕ್ಕೆ ಕೊರತೆಯಿಲ್ಲ. ಚಿತ್ತೌಡಾಧಿಪತಿಯ ಕಡೆಯಿಂದ ವಿವಾಹದ ಮಾತುಕತೆ ಬಂದರೆ ಅದನ್ನು ಯಾರೂ ಅನಾದರ ಮಾಡಲಾರರು. ಆದರೆ ಈ ಸ್ಥಿತಿಗೆ ಕಾರಣವೆಂದರೆ ನೀನೆಯೇ. ಇದರ ದೋಷವೆಲ್ಲಾ ನಿನ್ನದೇ. ರಾಜಸ್ಥಾನದಲ್ಲಿ ಇರುವುದು ಒಂದೇ ಚಿತ್ತೌಡ, ಇರುವವನು ಒಬ್ಬನೇ ರಾಣಾ, ಇರುವವಳು ಒಬ್ಬಳೇ ಪ್ರಭಾ! ಪ್ರೇಮಾನಂದವನ್ನು ಸವಿಯುವುದು ನನ್ನ ಭಾಗ್ಯದಲ್ಲಿ ಬರೆದಿಲ್ಲವೇನೋ. ಈಗ ನಾನು ಆ ಭಾಗ್ಯಲೇಖವನ್ನು ಅಳಿಸಲು ಕೊಂಚ ಪ್ರಯತ್ನಪಡುತ್ತಿದ್ದೀನಿ. ಭಾಗ್ಯಕ್ಕೆ ಅಧೀನವಾಗಿ ಕೈಕಟ್ಟಿ ಕುಳಿತಿರುವುದು ಗಂಡಸರ ಕೆಲಸವಲ್ಲ. ಇದರಲ್ಲಿ ನನಗೆ ಸಫಲತೆ ದೊರೆಯುವುದೋ ಇಲ್ಲವೋ ಎಂಬುದರ ತೀರ್ಮಾನ ನಿನ್ನ ಕೈಯಲ್ಲಿದೆ.''

ಪ್ರಭಳ ಕಣ್ಣು ನೆಲ ನೋಡುತ್ತಿತ್ತು. ಮನಸ್ಸು ನಲಿದಾಡುವ ಪಕ್ಷಿಯಂತೆ ಅತ್ತಿಂದಿತ್ತ ಹಾರುತ್ತ, ಸುತ್ತುತ್ತ ಇತ್ತು. ಅವಳು ಝಾಲಾವಾಡವನ್ನು ಹೊಡೆದಾಟದಿಂದ ಉಳಿಸಲೆಂದು ರಾಣನ ಜೊತೆ ಬಂದಿದ್ದಳು. ಆದರೆ ಅವನ ಬಗ್ಗೆ ಅವಳ ಹೃದಯದಲ್ಲಿ ಕ್ರೋಧದ ತರಂಗಗಳು ಏಳುತ್ತಿದ್ದವು. ಅವನು ಎದುರಿಗೆ ಬಂದಾಗ ಅವನನ್ನು ರಾಜಪುತ್ರರ ಕುಲ ಕಳಂಕ, ಅನ್ಯಾಯಿ, ದುರಾಚಾರಿ, ದುರಾತ್ಮ ಹೇಡಿ ಎಂದೆಲ್ಲ ಕರೆದು ಅವನ ಗರ್ವವನ್ನು ಚೂರುಚೂರು ಮಾಡುವೆ, ಅವನಿಂದ ಈ ಅಪಮಾನವನ್ನು ಸಹಿಸಲಾಗುವುದಿಲ್ಲ, ಅವನು ತನ್ನನ್ನು ಬಲಾತ್ಕಾರದಿಂದ ವಶಪಡಿಸಿಕೊಳ್ಳಲು ಪ್ರಯತ್ನಿಸುತ್ತಾನೆ ಎಂದು ಕೊಂಡಿದ್ದಳು. ಈ ಅಂತಿಮ ಗಳಿಗೆಗೆ ಅವಳ ಎದೆ ಚೆನ್ನಾಗಿ ಗಟ್ಟಿಗೊಂಡಿತ್ತು. ಅವಳು ಕಠಾರಿಯನ್ನು ಹರಿತ ಮಾಡಿಟ್ಟುಕೊಂಡಿದ್ದಳು. ಅದರ ಮೊದಲ ಪ್ರಯೋಗ ಅವನ ಮೇಲೆ, ಎರಡನೆಯ ಪ್ರಯೋಗ ತನ್ನ ಎದೆಯ ಮೇಲೆ–ಹೀಗೆ ಈ ಪಾಪಕಾಂಡವನ್ನು ಸಮಾಪ್ತಗೊಳಿಸುವುದೆಂದು ಅವಳು ನಿಶ್ಚಯಿಸಿದ್ದಳು. ಆದರೆ ರಾಣನ ನಮ್ರತೆ, ಅವನ ಕರುಣೆಯಿಂದ ಕೂಡಿದ ವಿವೇಚನೆ, ವಿನಯ ಭಾವಗಳು ಪ್ರಭಳನ್ನು ಶಾಂತಗೊಳಿಸಿದವು. ನೀರಿನಿಂದ ಬೆಂಕಿ ತಣ್ಣಗಾಗುತ್ತದೆ. ರಾಣಾ ಸ್ವಲ್ಪ ಹೊತ್ತು ಅಲ್ಲಿ ಕುಳಿತಿದ್ದು ಆಮೇಲೆ ಅಲ್ಲಿಂದ ಎದ್ದುಹೋದ.

## 4

ಪ್ರಭಾ ಚಿತ್ತೌಡಿಗೆ ಬಂದು ಎರಡು ತಿಂಗಳು ಕಳೆದವು. ರಾಣಾ ಮತ್ತೆ ಅವಳ ಹತ್ತಿರ ಸುಳಿಯಲಿಲ್ಲ. ಈ ನಡುವೆ ಅವನ ವಿಚಾರದಲ್ಲಿ ಕೆಲವು ಮಾರ್ಪಾಡುಗಳಾದವು. ಝಾಲಾವಾಡದ ಮೇಲೆ ಆಕ್ರಮಣವಾಗುವ ಮೊದಲು ಮೀರಾಬಾಯಿಗೆ ಅದರ ಸುಳುವು ಸಿಕ್ಕಿರಲಿಲ್ಲ. ರಾಣಾ ಆ ವಿಷಯವನ್ನು ಗುಪ್ತವಾಗಿಟ್ಟಿದ್ದ. ಆದರೆ ಈ

ಮೀರಾಬಾಯಿ ಆ ದುಷ್ಕೃತ್ಯಕ್ಕಾಗಿ ಅವನನ್ನು ನಾಚಿಸಬಹುದು. ಅಲ್ಲದೇ ಪ್ರಭಾ ತನಗೆ ವಶಳಾಗುವವಳಲ್ಲವೆಂಬುದು ಬರುಬರುತ್ತ ರಾಣನಿಗೆ ಖಚಿತವಾಯಿತು. ಏನೂ ಕೊರತೆಯಾಗದಂತೆ ಅವನು ಅವಳಿಗೆ ಸುಖವಿಲಾಸಗಳ ಸಾಮಗ್ರಿಗಳನ್ನು ಒದಗಿಸಿದ್ದ. ಆದರೆ ಅವುಗಳ ಕಡೆ ಪ್ರಭಾ ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ಅವಳ ಹೆಣ್ಣಾಳುಗಳಿಂದ ರಾಣಾ ದಿನವೂ ಸಮಾಚಾರ ಕೇಳಿ ತಿಳಿಯುತ್ತಿದ್ದ; ಅವನಿಗೆ ದಿನವೂ ಅದೇ ನಿರಾಶಾಪೂರ್ಣ ವೃತ್ತಾಂತವೇ ಕೇಳಸಿಗುತ್ತಿತ್ತು. ಸೊರಗಿ ಬಾಡಿದ ಮೊಗ್ಗು ಏನೇ ಮಾಡಲಿ ಅರಳುವುದಿಲ್ಲ. ಇದರಿಂದಾಗಿ ಅವನಿಗೆ ತನ್ನ ದುಸ್ಸಾಹಸದ ಬಗ್ಗೆ ಪಶ್ಚಾತ್ತಾಪವಾಗುತ್ತಿತ್ತು. ವ್ಯರ್ಥವಾಗಿ ನಾನು ಈ ಅನ್ಯಾಯ ಮಾಡಿದೆ ಎಂದು ಅವನು ವಿಷಾದಿಸುತ್ತಿದ್ದ. ಆದರೆ ಮತ್ತೆ ಪ್ರಭಳ ಅನುಪಮ ಸೌಂದರ್ಯ ಕಣ್ಣಮುಂದೆ ಹಾದುಹೋಗುತ್ತಿತ್ತು. ಸ್ವಾಭಿಮಾನಿಯಾದ ಸುಂದರಿಯೊಬ್ಬಳ ಪ್ರೇಮ ಇಷ್ಟು ಬೇಗ ಪರಿವರ್ತಿತವಾಗದು ಎಂದು ಅವನು ತನಗೆ ತಾನೇ ಸಮಜಾಯಿಷಿ ಹೇಳಿಕೊಳ್ಳುತ್ತಿದ್ದ. ಅವಳ ಮೇಲೆ ತನ್ನ ಮೃದುವರ್ತನೆ ಒಂದಲ್ಲ ಒಂದು ದಿನ ಪ್ರಭಾವ ಬೀರುವುದರಲ್ಲಿ ಸಂಶಯವಿಲ್ಲ ಎಂದುಕೊಳ್ಳುತ್ತಿದ್ದ.

ಪ್ರಭಾ ಇಡೀ ದಿನ ಒಬ್ಬಳೇ ಕುಳಿತು ಬೇಸರ, ದುಃಖ, ಕೋಪಗಳಿಂದ ಚಿಟಿಚಿಟಿಯಾಗುತ್ತಿದ್ದಳು. ಅವಳ ವಿನೋದಕ್ಕಾಗಿ ಎಷ್ಟೋ ಮಂದಿ ಹಾಡುಗಾತಿಯರು ನೇಮಕವಾಗಿದ್ದರು. ಆದರೆ ಸಂಗೀತದಲ್ಲಿ ಅವಳಿಗೆ ಅರುಚಿ ಹುಟ್ಟಿತ್ತು. ಅವಳು ಒಂದೊಂದು ಕ್ಷಣವೂ ಚಿಂತೆಯಲ್ಲಿ ಮುಳುಗಿರುತ್ತಿದ್ದಳು.

ಈಗ ರಾಣನ ನಮ್ರ ಭಾಷಣ ಪ್ರಭಳ ಮನಸ್ಸಿನಿಂದ ಅಳಿಸಿಹೋಗಿತ್ತು. ಅವನ ಅಮಾನುಷ ವೃತ್ತಿ ಮತ್ತೊಮ್ಮೆ ತನ್ನ ಯಥಾರ್ಥರೂಪದಲ್ಲಿ ಕಾಣಿಸಿಕೊಳ್ಳತೊಡಗಿತ್ತು. ವಾಕ್ಚತುರತೆಯಿಂದ ಮನಸ್ಸು ಶಾಂತಗೊಳ್ಳುವುದಿಲ್ಲ; ಅದು ನಮ್ಮನ್ನು ನಿರುತ್ತರಗೊಳಿಸುತ್ತದೆ ! ರಾಣನ ಮುಂದೆ ತಾನು ಅವಾಕ್ಕಾದುದನ್ನು ನೆನೆದಾಗ ಪ್ರಭಳಿಗೆ ಆಶ್ಚರ್ಯವಾಗುತ್ತಿತ್ತು. ಈಗ ಅವನ ಮಾತಿಗೆ ಸರಿಯಾದ ಉತ್ತರ ಹೊಳೆಯತೊಡಗಿದೆ. ಅವನೊಡನೆ ಹೋರಾಡಿ ತನ್ನ ಭಾಗ್ಯವನ್ನು ನಿರ್ಣಯಿಸಿಕೊಳ್ಳಲು ಅವಳು ಒಮ್ಮೊಮ್ಮೆ ತಳಮಳಿಸುತ್ತಾಳೆ. ಆದರೆ ಈಗ ವಾದ–ವಿವಾದದಿಂದ ಏನು ತಾನೇ ಪ್ರಯೋಜನ ? ಪ್ರಭಾ ಯೋಚಿಸುತ್ತಾಳೆ: ನಾನು ರಾವ್‌ಸಾಹೇಬನ ಮಗಳು. ಆದರೆ ಲೋಕದ ದೃಷ್ಟಿಯಲ್ಲಿ ರಾಣನ ರಾಣಿಯಾಗಿದ್ದೇನೆ. ಈಗ ಈ ಸೆರೆಯಿಂದ ಬಿಡಿಸಿಕೊಂಡು ಹೋದರೆ ಸಹ ನನಗೆ ಆಶ್ರಯವೆಲ್ಲಿದೆ ? ನಾನು ಯಾರಿಗೆ ತಾನೆ ಹೇಗೆ ಮುಖ ತೋರಿಸಲಿ ? ಇದರಿಂದ ನನ್ನ ವಂಶವಷ್ಟೇ ಅಲ್ಲ, ಸಮಸ್ತ ರಾಜಪೂತ ಜಾತಿ ಮುಳುಗಿಹೋಗುತ್ತದೆ. ಮಂದಾರದ ರಾಜಕುಮಾರ ನನ್ನ ನಿಜವಾದ ಪ್ರೇಮಿ. ಆದರೇನು, ಅವನು ನನ್ನನ್ನು ಅಂಗೀಕರಿಸುವನೆ ? ಅವನು ಲೋಕನಿಂದೆಯನ್ನು ಗಮನಿಸದೆ ನನ್ನ ಕೈ ಹಿಡಿದರೂ ಅವನ ತಲೆ ಎಂದೆಂದಿಗೂ ತಗ್ಗಿರಬೇಕಾಗುತ್ತದೆ. ಒಂದಲ್ಲ ಒಂದು ದಿನ ಅವನ ಮನಸ್ಸು ಬೇರೆ ಕಡೆ ಹೊರಳುತ್ತದೆ. ಅವನು ನನ್ನನ್ನು ತನ್ನ ಕುಲದ ಕಳಂಕವೆಂದುಕೊಳ್ಳುತ್ತಾನೆ ಅಥವಾ ಇಲ್ಲಿಂದ ಹೇಗಾದರೂ ಓಡಿಹೋಗಲಿ ? ಆದರೆ

ಎಲ್ಲಿಗೆಂದು ಓಡಿಹೋಗುವುದು ? ತಂದೆಯ ಮನೆಗೆ ? ಇನ್ನು ಅಲ್ಲಿ ನನಗೆ ಪ್ರವೇಶವಿಲ್ಲ. ಮಂದಾರಕುಮಾರನಲ್ಲಿಗೆ ? ಅದರಿಂದ ಅವನಿಗೂ ನನಗೂ ಅಪಮಾನವಾಗುತ್ತದೆ. ಹಾಗಾದರೇನು ಭಿಕಾರಿಣಿಯಾಗಲೆ ? ಅದೂ ನಗೆಪಾಟಲೇ. ಅಲ್ಲದೇ ಭವಿಷ್ಯದಲ್ಲಿ ಅದು ನನ್ನನ್ನು ಯಾವ ದಾರಿಯಲ್ಲಿ ಕರೆದೊಯ್ಯುವುದೋ ? ಸೌಂದರ್ಯವೆಂಬುದು ಒಬ್ಬ ಅಬಲೆಗೆ ಯಾವ ಪ್ರಾಣಘಾತಕ ಯಂತ್ರಕ್ಕಿಂತಲೂ ಏನೂ ಕಡಿಮೆಯಿಲ್ಲ. ದೇವರೇ, ನಾನು ಕ್ಷತ್ರಿಯಜಾತಿಗೆ ಕಳಂಕವಾಗದಂತಾಗಲಿ, ಕ್ಷತ್ರಿಯಜಾತಿ ತನ್ನ ಗೌರವಕ್ಕಾಗಿ ರಕ್ತವನ್ನು ನೀರಿನಂತೆ ಹರಿಸಿದೆ. ಸಹಸ್ರಾರು ಕ್ಷತ್ರಿಯ ಮಹಿಳೆಯರು ಪರಪುರುಷರ ಮುಖ ನೋಡಬೇಕಾಗುವುದೆಂಬ ಭಯದಿಂದ ಒಣಮರದಂತೆ ಉರಿದುಹೋಗಿದ್ದಾರೆ. ದೇವರೇ, ನನ್ನಿಂದಾಗಿ ಯಾವ ರಾಜಪೂತನೂ ನಾಚಿಕೆಯಿಂದ ತಲೆತಗ್ಗಿಸುವಂತಹ ಗಳಿಗೆ ಬಾರದಿರಲಿ. ಇಲ್ಲ, ನಾನು ಈ ಸೆರೆಯಲ್ಲಿಯೇ ಇದ್ದು ಸಾಯುತ್ತೇನೆ. ರಾಣನ ಅನ್ಯಾಯವನ್ನು ಸಹಿಸುತ್ತೇನೆ. ಉರಿಯುತ್ತೇನೆ, ಸಾಯುತ್ತೇನೆ–ಆದರೆ ಈ ಮನೆಯಲ್ಲಿಯೇ. ಯಾರೊಡನೆ ಮದುವೆಯಾಗುವುದಿತ್ತೋ ಆದಾಯಿತು. ಹೃದಯದಲ್ಲಿ ಅವನ ಉಪಾಸನೆ ಮಾಡುತ್ತೇನೆ. ಆದರೆ ಬಾಯಿ ತೆರೆದು ಅವನ ಹೆಸರೆತ್ತುವುದಿಲ್ಲ.

ಒಂದು ದಿನ ಪ್ರಭಾ ಸಿಟ್ಟಿನಿಂದ ರಾಣನಿಗೆ ಹೇಳಿಕಳಿಸಿದಳು. ಅವನು ಬಂದ. ಅವನ ಮುಖ ಇಳಿದುಹೋಗಿತ್ತು. ಅವನು ಚಿಂತೆಯಲ್ಲಿದ್ದಂತೆ ಕಂಡಿತು. ಪ್ರಭಾ ಏನನ್ನೋ ಹೇಳಬಯಸಿದ್ದಳು. ಆದರೆ ಅವನ ಮುಖ ನೋಡಿ ದಯೆ ಹುಟ್ಟಿತು. ಅವನು ಅವಳಿಗೆ ಬಾಯಿ ತೆರೆಯುವ ಅವಕಾಶ ಕೊಡದೆ ತಾನೇ ಮಾತನಾಡತೊಡಗಿದ– "ಪ್ರಭಾ, ಇವತ್ತು ನೀನು ನನಗೆ ಹೇಳಿಕಳಿಸಿದೆ. ಇದು ನನ್ನ ಸೌಭಾಗ್ಯ. ನೀನು ನನ್ನನ್ನು ನೆನಸಿಕೊಂಡೆ. ಆದರೆ ನಾನು ಮೃದುಮಾತನ್ನು ಕೇಳುವ ಆಸೆಯಿಟ್ಟುಕೊಂಡು ಬಂದಿದ್ದೇನೆಂದುಕೊಳ್ಳಬೇಡ. ಇಲ್ಲ, ನೀನು ನನ್ನನ್ನು ಯಾಕೆ ಬರಹೇಳಿದೆಯೆಂದು ನನಗೆ ಗೊತ್ತಿದೆ. ನಿನಗೆ ಅಪರಾಧ ಮಾಡಿದವನು ನಿನ್ನ ಮುಂದೆ ನಿಂತಿದ್ದಾನೆ. ಅವನಿಗೆ ಬೇಕಾದ ದಂಡ ವಿಧಿಸು. ನನಗೆ ಇದುವರೆಗೂ ಬರುವ ಧೈರ್ಯವಾಗಲಿಲ್ಲ. ಅದಕ್ಕೆ ಕಾರಣವೆಂದರೆ ನನಗೆ ದಂಡ ಸಿಗುವುದೆಂಬ ಭಯವೇ. ನೀನು ಕ್ಷತ್ರಿಯ ಕನ್ಯೆ. ಕ್ಷತ್ರಿಯ ಸ್ತ್ರೀಯರು ಕ್ಷಮಿಸುವುದನ್ನು ಅರಿಯರು. ಝಾಲಾವಾಡದಲ್ಲಿ ನನ್ನ ಜೊತೆ ಬರಲು ಸ್ವತಃ ನೀನೇ ಸಿದ್ಧಳಾದಾಗ ಆ ಕ್ಷಣ ನಾನು ನಿನ್ನ ಬೆಲೆ ಗೊತ್ತುಮಾಡಿಕೊಂಡೆ. ನಿನ್ನ ಹೃದಯ ಬಲವಿಶ್ವಾಸಗಳಿಂದ ತುಂಬಿದೆ. ಅದನ್ನು ವಶಪಡಿಸಿಕೊಳ್ಳುವುದು ಸ್ವಾಭಾವಿಕವಲ್ಲ. ಇದೊಂದು ತಿಂಗಳನ್ನು ನಾನು ಹೇಗೆ ಕಳೆದಿದ್ದೇನೆಂದು ನೀನು ಕಾಣೆ. ತಳಮಳದಿಂದ ಸಾಯುತ್ತಿದ್ದೇನೆ. ಬೇಟೆಗಾರ ಕೆರಳಿದ ಹೆಣ್ಣು ಸಿಂಹದ ಎದುರು ಹೋಗಲು ಹೇಗೆ ಹೆದರುತ್ತಾನೋ ಹಾಗಿದೆ ನನ್ನ ಅವಸ್ಥೆ. ಎಷ್ಟೋ ಸಲ ಬಂದೆ, ನೀನು ದುಃಖದಿಂದ ಮುಖ ಗಂಟಿಕ್ಕಿಕೊಂಡು ಕೂತಿರುವುದನ್ನು ಕಂಡೆ. ಒಳಗೆ ಕಾಲಿಡಲು ನನಗೆ ಧೈರ್ಯವಾಗಲಿಲ್ಲ. ಆದರೆ ಇವತ್ತು ನಾನು ಕರೆಸಿಕೊಳ್ಳದೇ ಬಂದ ಅತಿಥಿಯಲ್ಲ. ನೀನು ನನ್ನನ್ನು ಬರಮಾಡಿಕೊಂಡಿದ್ದಿ; ನಿನ್ನ ಅತಿಥಿಗೆ ಸ್ವಾಗತ ನೀಡಬೇಕು. ಹಾರ್ದಿಕವಾಗಿ ಅಲ್ಲವಾದರೂ–ಬೆಂಕಿ ಉರಿಯುತ್ತಿರುವಲ್ಲಿ ಚಳಿ ಎಲ್ಲಿ ಬಂತು ? –

ಬಾಯಿಮಾತಿನಿಂದಾರೂ ಸರಿಯೆ. ನಿನ್ನ ಭಾವನೆಗಳನ್ನು ಹತ್ತಿಕ್ಕಿಕೊಂಡಾದರೂ ಸರಿಯೆ. ಅತಿಥಿಯನ್ನು ಸ್ವಾಗತಿಸು. ಪ್ರಪಂಚದಲ್ಲಿ ಮಿತ್ರರಿಗಿಂತ ಹೆಚ್ಚಾಗಿ ಶತ್ರುಗಳನ್ನು ಆದರಿಸಲಾಗುತ್ತದೆ.

"ಪ್ರಭಾ, ಒಂದು ಕ್ಷಣ ಕೋಪವನ್ನು ಶಾಂತಮಾಡಿಕೊಂಡು ನನ್ನ ಅಪರಾಧಗಳನ್ನು ಕುರಿತು ವಿಚಾರಮಾಡು. ತಾಯಿತಂದೆಯರ ಮಡಿಲಿನಿಂದ ನಿನ್ನನ್ನು ಕಸಿದುಕೊಂಡು ಬಂದೆ ಎಂದು ನೀನು ನನ್ನ ಮೇಲೆ ದೋಷಾರೋಪಣೆ ಮಾಡಬಹುದು. ಸ್ವತಃ ಭಗವಾನ್ ಕೃಷ್ಣ ರುಕ್ಮಿಣಿಯನ್ನು ಅಪಹರಿಸಿಕೊಂಡು ಬಂದಿದ್ದನೆಂದು ನೀನು ಬಲ್ಲೆ. ಆದರಿಂದ ಝಾಲಾವಾಡದವರಿಗೆ ಅಪಮಾನವಾಯಿತೆಂದು ನೀನು ಹೇಳಬಹುದು. ಆದರೆ ಹಾಗೆ ಹೇಳುವುದು ಸರ್ವದಾ ಸರಿಯಲ್ಲ. ಝಾಲಾವಾಡದವರು ಪುರುಷಧರ್ಮವೇನಿದೆಯೋ ಅದನ್ನು ಮಾಡಿದರು. ಅವರ ಪೌರುಷವನ್ನು ನೋಡಿ ನಾವು ಚಕಿತರಾಗಿ ಹೋದೆವು. ಅವರು ಕೃತಕೃತ್ಯರಾಗದಿದ್ದುದು ಅವರ ತಪ್ಪಲ್ಲ. ಯಾವಾಗಲೂ ವೀರರಿಗೇ ಜಯವಾಗುವುದಿಲ್ಲ. ನಾವು ಗೆದ್ದುದಕ್ಕೆ ಕಾರಣ ನಮ್ಮ ಸಂಖ್ಯೆ ಹೆಚ್ಚಿತ್ತು. ಆ ಕೆಲಸಕ್ಕಾಗಿಯೇ ನಾವು ಸಿದ್ಧರಾಗಿ ಹೋಗಿದ್ದೆವು. ಅವರಿಗೆ ಹೀಗಾಗಬಹುದೆಂಬ ಊಹೆ ಸಹ ಇರಲಿಲ್ಲ; ಆದರಿಂದಾಗಿ ಅವರ ಸೋಲಾಯಿತು. ನಾವು ಅಲ್ಲಿಂದ ಬೇಗನೆ ಜೀವ ಉಳಿಸಿಕೊಂಡು ಓಡಿ ಬರದೇ ಹೋಗಿದ್ದರೆ ನಮ್ಮ ಗತಿ ರಾವ್‌ಸಾಹೇಬರು ಹೇಳಿದ್ದಂತೆಯೇ ಆಗುತ್ತಿತ್ತು. ಚಿತ್ತೌಡಿನ ಒಬ್ಬನೂ ಬದುಕಿ ಉಳಿಯುತ್ತಿರಲಿಲ್ಲ. ನನ್ನ ಅಪರಾಧದ ತಪ್ಪನ್ನು ಅಳಿಸಿ ಹಾಕಬಯಸುತ್ತಿದ್ದೇನೆಂದು ದೇವರಾಣೆಯಾಗಿಯೂ ತಿಳಿಯಬೇಡ. ನನ್ನಿಂದ ಅಪರಾಧವಾಯಿತು. ಅದಕ್ಕಾಗಿ ನನ್ನ ಹೃದಯದ ಕಣಕಣವೂ ನಾಚುತ್ತಿದೆ. ಈಗ ಆಗಬೇಕಾಗಿದ್ದುದು ಆಗಿಹೋಗಿದೆ. ಇನ್ನು ಈ ಹಾಳು ಆಟವನ್ನು ನಿನಗೆ ಬಿಡುತ್ತೇನೆ. ನಿನ್ನ ಹೃದಯದಲ್ಲಿ ಒಂದಿಷ್ಟು ಸ್ಥಳ ಸಿಕ್ಕಿದರೆ ಅದನ್ನು ಸ್ವರ್ಗವೆಂದುಕೊಳ್ಳುತ್ತೇನೆ. ಮುಳುಗುತ್ತಿರುವವನಿಗೆ ಹುಲ್ಲುಕಡ್ಡಿಯ ಆಸರೆಯೂ ದೊಡ್ಡದೇ. ಏನು, ಅದು ಸಾಧ್ಯವೆ''''

ಪ್ರಭಾ ಹೇಳಿದಳು – "ಇಲ್ಲ".

ರಾಣಾ – "ಝಾಲಾವಾಡಕ್ಕೆ ಹೋಗಬಯಸುತ್ತೀಯಾ ?"

ಪ್ರಭಾ – "ಇಲ್ಲ."

ರಾಣಾ – "ಮಂದಾರ ರಾಜಕುಮಾರನ ಬಳಿ ಕಳಿಸಲೆ ?"

ಪ್ರಭಾ – "ಎಂದಿಗೂ ಕೂಡದು."

ರಾಣಾ – "ಆದರೆ ನೀನು ಹೀಗೆ ಒಳಗೊಳಗೇ ಕುದಿಯುವುದನ್ನು ನನ್ನಿಂದ ನೋಡಲಾಗುವುದಿಲ್ಲ."

ಪ್ರಭಾ – "ಈ ಕಷ್ಟದಿಂದ ನೀವು ಬೇಗನೆ ಮುಕ್ತರಾಗುವಿರಿ." ರಾಣಾ ಭಯಭೀತ ದೃಷ್ಟಿಯಿಂದ ನೋಡುತ್ತ "ನಿನ್ನ ಇಷ್ಟವಿದ್ದಂತಾಗಲಿ" ಎಂದವನೇ ಅಲ್ಲಿಂದ ಎದ್ದುಹೋದ.

## 5

ರಾತ್ರಿಯ ಹತ್ತು ಗಂಟೆ. ರಣಛೋಡಜಿಯ ಮಂದಿರಲ್ಲಿ ಕೀರ್ತನೆ ಮುಗಿದಿತ್ತು. ವೈಷ್ಣವ ಸಾಧುಗಳು ಪ್ರಸಾದ ಪಡೆಯುತ್ತಿದ್ದರು. ಮೀರಾ ಸ್ವತಃ ತಾನೇ ತಟ್ಟೆ ತಂದು ತಂದು ಅವರ ಮುಂದೆ ಇಡುತ್ತಿದ್ದಳು. ಸಾಧುಸಂತರಿಗೆ ಆದರ ಸತ್ಕಾರ ಮಾಡುವುದರಿಂದ ಅವಳ ಆತ್ಮಕ್ಕೆ ಆನಂದ ದೊರೆಯುತ್ತಿತ್ತು. ಸಾಧುಗಣ ಭೋಜನ ಮಾಡುತ್ತಿದ್ದ ರೀತಿಯನ್ನು ನೋಡಿದರೆ ರುಚಿಕರವಾದ ವಸ್ತುವಿನಲ್ಲಿ ಭಕ್ತಿಭಜನೆಗಳಿಗಿಂತ ಹೆಚ್ಚಿನ ಸುಖವಿದೆಯೇನೋ ಎಂದು ಅನುಮಾನ ಬರುತ್ತಿತ್ತು. ದೇವರು ಕೊಟ್ಟ ವಸ್ತುಗಳನ್ನು ಸದುಪಯೋಗ ಮಾಡುವುದೇ ಅವನ ಉಪಾಸನೆಯ ಮುಖ್ಯ ಮಾರ್ಗವೆಂದು ಸಿದ್ಧವಾಗಿತ್ತು. ಆದಕಾರಣ ಮಹಾತ್ಮರಾದ ಜನ ಉಪಾಸನೆಗೆ ಸಿಕ್ಕಿರುವ ಅವಕಾಶವನ್ನು ಯಾಕೆ ತಾನೆ ಕಳೆದುಕೊಂಡಾರು? ಅವರು ಒಮ್ಮೆ ಹೊಟ್ಟೆಯ ಮೇಲೆ ಕೈಯಾಡಿಸುತ್ತಿದ್ದರು; ಇನ್ನೊಮ್ಮೆ ಆಸನ ಬದಲಾಯಿಸುತ್ತಿದ್ದರು. ಬಾಯಿಬಿಟ್ಟು 'ಬೇಡ' ಎನ್ನುವುದು ಘೋರ ಪಾಪವೆಂದು ತಿಳಿಯುತ್ತಿದ್ದರು. ನಾವು ಯಾವ ವಸ್ತುವನ್ನು ಸೇವಿಸುತ್ತೇವೆಯೋ ಅದಕ್ಕೆ ತಕ್ಕಂತೆಯೇ ನಮ್ಮ ಆತ್ಮಗುಣವೂ ರೂಢಿಸುತ್ತದೆಂಬುದು ಒಪ್ಪುವ ಮಾತೇ. ಆದ್ದರಿಂದ ಅಲ್ಲಿ ಸೇರಿದ್ದ ಮಹಾತ್ಮರು ತುಪ್ಪ, ಹಾಲುಖೋವಗಳಿಂದ ಹೊಟ್ಟೆ ತುಂಬಿಕೊಳ್ಳುತ್ತಿದ್ದರು.

ಅವರಲ್ಲಿ ಒಬ್ಬಾತ ಮಾತ್ರ ಕಣ್ಣು ಮುಚ್ಚಿ ಧ್ಯಾನಮಗ್ನನಾಗಿದ್ದ. ತಟ್ಟೆಯ ಕಡೆ ನೋಡುತ್ತಲೂ ಇರಲಿಲ್ಲ. ಅವನ ಹೆಸರು ಪ್ರೇಮಾನಂದ. ಅವನು ಅವತ್ತು ತಾನೇ ಬಂದಿದ್ದ. ಅವನ ಮುಖ ಕಾಂತಿಯಿಂದ ಹೊಳೆಯುತ್ತಿತ್ತು. ಉಳಿದ ಸಾಧುಗಳ ಉಂಡೆದ್ದರು. ಆದರೆ ಅವನು ಮಾತ್ರ ತಟ್ಟೆಯನ್ನು ಮುಟ್ಟಿಯೂ ಇರಲಿಲ್ಲ.

ಮೀರಾ ಕೈ ಮುಗಿದು ಹೇಳಿದಳು– "ಮಹಾಸ್ವಾಮಿ, ನೀವು ಪ್ರಸಾದವನ್ನು ಮುಟ್ಟಿಯೂ ಇಲ್ಲವಲ್ಲ. ಈ ದಾಸಿಯಿಂದ ಏನೂ ಅಪರಾಧವಾಗಿಲ್ಲ, ತಾನೇ?"

ಸಾಧು – "ನನಗೆ ಮನಸ್ಸಿಲ್ಲ."

ಮೀರಾ – "ಇಲ್ಲ, ನೀವು ನನ್ನ ಅರಿಕೆಯನ್ನು ಒಪ್ಪಲೇಬೇಕು."

ಸಾಧು – "ನೀನು ನನ್ನೊಂದು ಮಾತಿಗೆ ಒಪ್ಪುವುದಾದರೆ ನಾನು ನಿನ್ನ ಆಜ್ಞೆಯನ್ನು ಪಾಲಿಸುತ್ತೇನೆ."

ಮೀರಾ – "ಹೇಳಿ, ಏನಪ್ಪಣೆ?"

ಸಾಧು – "ಒಪ್ಪುವುದಾದರೆ ಮಾತ್ರ."

ಮೀರಾ – "ಆಗಲಿ, ಒಪ್ಪುತ್ತೇನೆ."

ಸಾಧು – "ಹಾಗೆಂದು ಮಾತುಕೊಡುತ್ತೀಯಾ""

ಮೀರಾ – "ಮಾತು ಕೊಡುತ್ತೇನೆ. ನೀವು ಪ್ರಸಾದ ಸ್ವೀಕರಿಸಿ."

ಸಾಧು ಮಂದಿರ ಕಟ್ಟಿಸಿಕೊಡೆಂದೋ ಯಜ್ಞಪೂರ್ತಿಗೆ ಅನುಕೂಲ

ಮಾಡಿಕೊಡೆಂದೋ ಯಾಚಿಸುವನೆಂದು ಮೀರಾ ಅಂದುಕೊಂಡಿದ್ದಳು. ಅಂತಹುದು ದಿನವೂ ನಡೆಯುತ್ತಲೇ ಇತ್ತು; ಮೀರಳ ಸರ್ವಸ್ವವೂ ಸಾಧುಸೇವೆಗೆ ಅರ್ಪಿತವಾಗಿತ್ತು. ಆದರೆ ಈ ಸಾಧು ಅಂತಹದೇನನ್ನೂ ಯಾಚಿಸಲಿಲ್ಲ. ಅವನು ಮೀರಳ ಕಿವಿಯಲ್ಲಿ ಉಸುರಿದ – "ಇವತ್ತು ರಾತ್ರಿ ಎರಡು ಗಂಟೆಯ ಮೇಲೆ ರಾಜಭವನದ ಕಳ್ಳಬಾಗಿಲನ್ನು ತೆಗೆಯಬೇಕು."

ಮೀರಾ ವಿಸ್ಮಿತಳಾಗಿ ಕೇಳಿದಳು – "ನೀನು ಯಾರು ?"

ಸಾಧು – "ಮಂದಾರದ ರಾಜಕುಮಾರ.

ಮೀರಾ ರಾಜಕುಮಾರನನ್ನು ತಲೆಯಿಂದ ಕಾಲಿನವರೆಗೂ ನೋಡಿದಳು. ಅವಳ ನೋಟದಲ್ಲಿ ಆದರದ ಬದಲು ತಿರಸ್ಕಾರವಿತ್ತು. ಹೇಳಿದಳು – "ರಾಜಪೂತರು ಹೀಗೆ ವಂಚನೆ ಮಾಡುವುದಿಲ್ಲ."

ರಾಜಕುಮಾರ – "ಎರಡೂ ಪಕ್ಷಗಳ ಶಕ್ತಿ ಸಮಾನವಿದ್ದಾಗ ಮಾತ್ರ ಆ ನಿಯಮ."

ಮೀರಾ– "ನೀನು ಹೇಳುವುದು ಸಾಧ್ಯವಿಲ್ಲ."

ರಾಜಕುಮಾರ– "ನೀನು ಮಾತು ಕೊಟ್ಟಿದ್ದಿ. ಅದನ್ನು ನಡೆಸಬೇಕಾಗುತ್ತದೆ."

ಮೀರಾ– "ಮಹಾರಾಜರ ಆಜ್ಞೆಯ ಮುಂದೆ ನಾನು ಕೊಟ್ಟ ಮಾತಿಗೆ ಮಹತ್ವವಿಲ್ಲ."

ರಾಜಕುಮಾರ– "ಅದೊಂದೂ ನನಗೆ ಗೊತ್ತಿಲ್ಲ. ನೀನು ಕೊಟ್ಟ ಮಾತಿನಲ್ಲಿ ನಿನಗೆ ಕೊಂಚವಾದರೂ ಗೌರವವಿದ್ದರೆ ಅದನ್ನು ಪೂರ್ಣಮಾಡು."

ಮೀರಾ ಯೋಚಿಸಿ ಹೇಳಿದಳು– "ಮಹಲಿನಲ್ಲಿ ಹೋಗಿ ಏನು ಮಾಡುತ್ತಿ ?"

ರಾಜಕುಮಾರ– "ಹೊಸ ರಾಣಿಯೊಡನೆ ಒಂದೆರಡು ಮಾತಾಡುವುದಿದೆ."

ಮೀರಾ ಚಿಂತೆಯಲ್ಲಿ ಕರಗಿಹೋದಳು. ಒಂದು ಕಡೆ ರಾಣನ ಕಟ್ಟಾಜ್ಞೆ; ಇನ್ನೊಂದು ಕಡೆ ತಾನು ಕೊಟ್ಟ ಮಾತು; ಅದನ್ನು ನಡಸುವುದರಿಂದಾಗುವ ಪರಿಣಾಮ. ಅದೆಷ್ಟೋ ಪೌರಾಣಿಕ ಘಟನೆಗಳು ಅವಳ ಕಣ್ಣ ಮುಂದೆ ಹಾದುಹೋದವು: "ದಶರಥ ವಚನ ಪಾಲಿಸಲು ತನ್ನ ಪ್ರೀತಿಯ ಮಗನನ್ನು ಡಿಗೆ ಅಟ್ಟಿದ. ನಾನು ವಚನ ಕೊಟ್ಟಿದ್ದೇನೆ. ಅದನ್ನು ಪೂರ್ಣಗೊಳಿಸುವುದು ನನ್ನ ಪರಮಧರ್ಮ. ಆದರೆ ಗಂಡನ ಮಾತನ್ನು ಹೇಗೆ ಮುರಿಯಲಿ ? ಅವನ ಆಜ್ಞೆಗೆ ವಿರುದ್ಧವಾಗಿ ನಡೆದರೆ ಈ ಲೋಕ ಪರಲೋಕಗಳೆರಡರಲ್ಲೂ ಕೆಟ್ಟದಾಗುತ್ತದೆ. ಗಂಡನಿಗೆ ಯಾಕೆ ಸ್ಪಷ್ಟವಾಗಿ ಹೇಳಿಬಿಡಬಾರದು ? ಅವರು ನನ್ನ ಪ್ರಾರ್ಥನೆಯನ್ನು ನಡೆಸಿಕೊಡಲಾರರೆ ? ಇವತ್ತಿನವರೆಗೆ ನಾನು ಅವರಿಂದ ಏನನ್ನೂ ಕೇಳಿಲ್ಲ. ಇವತ್ತು ಈ ದಾನ ಕೇಳುವೆ. ಅವರು ನನ್ನ ಮಾತಿನ ಮರ್ಯಾದೆಯನ್ನು ಉಳಿಸಲಾರರೇನು ? ಅವರ ಹೃದಯ ಎಷ್ಟು ವಿಶಾಲವಾದುದು ! ಅವರು ಖಂಡಿತವಾಗಿಯೂ ನನಗೆ ವಚನಭಂಗದ ದೋಷ ಬಡಿಯುವಂತೆ ಮಾಡಲಾರರು.

ಮನಸ್ಸಿನಲ್ಲಿ ಹೀಗೆ ನಿಶ್ಚಯಿಸಿ ಮೀರಾ ಕೇಳಿದಳು– "ಯಾವಾಗ ಬಾಗಿಲು ತೆಗೆಯಬೇಕು ?"

ರಾಜಕುಮಾರ ಉತ್ಸಾಹದಿಂದ ಹೇಳಿದ- "ನಡುರಾತ್ರಿಗೆ."

ಮೀರಾ- "ನಾನು ಖುದ್ದಾಗಿ ನಿನ್ನ ಜೊತೆ ಬರಬೇಕಾಗುತ್ತದೆ."

ರಾಜಕುಮಾರ- "ಯಾಕೆ ?"

ಮೀರಾ- "ನೀನು ನನಗೆ ವಂಚನೆ ಮಾಡಿದ್ದಿ. ನಿನ್ನ ಮೇಲೆ ನನಗೆ ವಿಶ್ವಾಸವಿಲ್ಲ."

ರಾಜಕುಮಾರ ನಾಚಿಕೆಯಿಂದ ಹೇಳಿದ- "ಒಳ್ಳೆಯದು, ನೀನು ಬಾಗಿಲ ಹತ್ತಿರ ನಿಂತಿರುವಿಯಂತೆ."

ಮೀರಾ- "ಮತ್ತೆ ಮೋಸ ಮಾಡಿದ್ದಾದರೆ ಪ್ರಾಣಕ್ಕೆ ತಿಲಾಂಜಲಿ ಕೊಡಬೇಕಾಗುತ್ತದೆ."

ರಾಜಕುಮಾರ- "ನಾನು ಏನನ್ನು ಬೇಕಾದರೂ ಸಹಿಸಲು ಸಿದ್ಧನಾಗಿದ್ದೇನೆ."

## 6

ಮೀರಾ ಅಲ್ಲಿಂದ ರಾಣನಲ್ಲಿಗೆ ಬಂದಳು. ರಾಣಾ ಅವಳನ್ನು ಬಹಳ ಆದರದಿಂದ ಕಾಣುತ್ತಿದ್ದ. ಅವಳು ಬಂದೊಡನೆಯೇ ಅವನು ಎದ್ದುನಿಂತ. ಆ ಹೊತ್ತಿನಲ್ಲಿ ಮೀರಾ ಅಲ್ಲಿಗೆ ಬರುವುದೆಂದರೆ ಅಸಾಧಾರಣವಾದ ವಿಷಯವೇ ಸರಿ. ಅವನು ಕೇಳಿದ- "ಏನಪ್ಪಣೆ, ಬಾಯೀಜಿ ?"

ಮೀರಾ- "ನಿಮ್ಮಲ್ಲಿ ಭಿಕ್ಷೆಗೆ ಬಂದಿದ್ದೇನೆ. ನನ್ನನ್ನು ನಿರಾಶೆಗೊಳಿಸಬೇಡಿ. ನಾನು ಇದುವರೆಗೆ ನಿಮ್ಮಲ್ಲಿ ಏನನ್ನೂ ಕೇಳಿದವಳಲ್ಲ. ಆದರೆ ಇವತ್ತೊಂದು ಬ್ರಹ್ಮಪಾಶದಲ್ಲಿ ಸಿಕ್ಕಿಬಿದ್ದಿದ್ದೇನೆ. ನೀವೊಬ್ಬರು ಮಾತ್ರ ಅದರಿಂದ ಬಿಡಿಸಬಲ್ಲಿರಿ. ಮಂದಾರ ರಾಜಕುಮಾರನನ್ನು ನೀವು ಬಲ್ಲಿರಾ ?"

ರಾಣಾ- "ಹೌದು, ಚೆನ್ನಾಗಿ."

ಮೀರಾ- "ಇವತ್ತು ಅವನು ನನಗೆ ದೊಡ್ಡ ಮೋಸ ಮಾಡಿದ. ವೈಷ್ಣವಭಕ್ತನ ವೇಷಧರಿಸಿ ರಣಛೋಡಜೆಯ ಮಂದಿರಕ್ಕೆ ಬಂದ. ಮೋಸದಿಂದ ನಾನು ಮಾತು ಕೊಡುವಂತೆ ಒತ್ತಾಯ ಮಾಡಿದ. ಅವನ ಕಪಟ ವಿನಯವನ್ನು ನಿಮಗೆ ವರ್ಣಿಸಿ ಹೇಳಲು ಸಾಹಸಬಾರದು."

ರಾಣಾ- "ಪ್ರಭಳನ್ನು ಭೇಟಿ ಮಾಡಿಸೆಂದು ಕೇಳಲಿಲ್ಲ ತಾನೆ ?"

ಮೀರಾ- "ಹೌದು, ಅದೇ ಅವನ ನಾಟಕ. ನಡುರಾತ್ರಿ ರಾಜಮಹಲಿನ ಗುಪ್ತದ್ವಾರವನ್ನು ನಾನು ತೆಗೆಯಬಹುದೆ ಎಂಬುದು ಪ್ರಶ್ನೆ. ನಾನು ಅವನಿಗೆ ಬಹಳ ಹೇಳಿದೆ, ಬೆದರಿಕೆ ಹಾಕಿದೆ. ಆದರೆ ಅವನು ಯಾವ ಬಗೆಯಲ್ಲೂ ಒಪ್ಪಲಿಲ್ಲ. ಕೊನೆಗೆ ನಾನು 'ಹ್ಞೂ' ಅಂದಮೇಲೆಯೇ ಅವನು ಪ್ರಸಾದ ಸ್ವೀಕರಿಸಿದ. ಈಗ ನನ್ನ ಮಾತಿನ ಮರ್ಯಾದೆ ನಿಮ್ಮ ಕೈಯಲ್ಲಿದೆ. ಬೇಕೆನಿಸಿದರೆ ಅದನು ನಡಸಿಕೊಟ್ಟು ನನ್ನ ಮಾನ ಉಳಿಸಿರಿ; ಬೇಡವಾದರೆ ಮಾತು ಮುರಿದು ಮಾನ ತೆಗಿಯಿರಿ. ನೀವು ನನ್ನ ಮೇಲಿಟ್ಟಿರುವ ಕೃಪಾದೃಷ್ಟಿಯ ಭರವಸೆಯ ಮೇಲೆ ನಾನು ಮಾತು ಕೊಟ್ಟೆ. ಈಗ

ನನ್ನನ್ನು ಈ ಬಲೆಯಿಂದ ಬಿಡಿಸುವುದು ನಿಮ್ಮ ಕರ್ತವ್ಯ."

ರಾಣಾ ಕೊಂಚ ಯೋಚಿಸಿ ಹೇಳಿದ– "ನೀನು ಮಾತು ಕೊಟ್ಟಿದ್ದಿ; ಅದನ್ನು ಉಳಿಸುವುದು ನನ್ನ ಕರ್ತವ್ಯ. ನೀನು ದೇವಿ; ನಿನ್ನ ಮಾತನ್ನು ಉಲ್ಲಂಘಿಸಲಾಗುವುದಿಲ್ಲ. ಬಾಗಿಲನ್ನೇನೋ ತೆಗಿ. ಆದರೆ ಅವನು ಒಂಟಿಯಾಗಿ ಪ್ರಭಳನ್ನು ನೋಡುವುದು ಸರಿಯಲ್ಲ. ನೀನು ಖುದ್ದಾಗಿ ಅವನ ಜೊತೆ ಹೋಗು. ನನಗಾಗಿ ಅಷ್ಟು ತೊಂದರೆ ತೊಗೊ. ಅವನು ಅವಳ ಪ್ರಾಣ ತೆಗೆಯುವ ಯೋಚನೆಯಿಂದ ಬರುವನೋ ಏನೋ ಎಂದು ನನಗೆ ಭಯ. ಅಸೂಯೆಯಲ್ಲಿ ಮನುಷ್ಯ ಕುರುಡನಾಗುತ್ತಾನೆ. ಬಾಯೀಜಿ, ನನ್ನ ಹೃದಯದಲ್ಲಿರುವುದನ್ನು ನಿನಗೆ ಹೇಳುತ್ತಿದ್ದೇನೆ. ಪ್ರಭಳನ್ನು ಅಪಹರಿಸಿ ತಂದುದರಿಂದ ನನಗೆ ತುಂಬ ದುಃಖವಾಗಿದೆ. ಅವಳು ಇಲ್ಲಿದ್ದು ಇಲ್ಲಿಗೆ ಹೊಂದಿಕೊಳ್ಳುತ್ತಾಳೆಂದು ಯೋಚಿಸಿದ್ದೆ. ಆದರೆ ನನ್ನ ಊಹೆ ತಪ್ಪಾಯಿತು. ಇನ್ನೂ ಸ್ವಲ್ಪ ದಿನ ಇಲ್ಲಿರಬೇಕಾಗಿ ಬಂದರೆ ಅವಳು ಬದುಕಿ ಉಳಿಯುವುದಿಲ್ಲವೆಂದು ನನ್ನ ಭಯ. ಅಬಲೆಯೊಬ್ಬಳನ್ನು ಹತ್ಯೆ ಮಾಡಿದ ಅಪರಾಧ ನನ್ನ ಮೇಲೆ ಬರುತ್ತದೆ. ಝಾಲಾವಾಡಕ್ಕೆ ಹಿಂದಿರುಗಿ ಹೋಗೆಂದು ಅವಳಿಗೆ ಹೇಳಿದೆ. ಅವಳು ಒಪ್ಪಲಿಲ್ಲ. ಇವತ್ತು ನೀನು ಅವರಿಬ್ಬರ ಮಾತುಕತೆಯನ್ನು ಕೇಳು. ಅವಳು ಮಂದಾರಕುಮಾರನೊಡನೆ ಹೋಗಲು ಒಪ್ಪುವುದಾದರೆ ಸಂತೋಷದಿಂದ ಅನುಮತಿ ಕೊಡುತ್ತೇನೆ. ಅವಳು ತನ್ನೊಳಗೇ ಕುದಿಯುವುದನ್ನು ನಾನು ನೋಡಲಾರೆ. ದೇವರು ಆ ಚೆಲುವೆಯ ಮನಸ್ಸನ್ನು ನನ್ನ ಕಡೆ ತಿರುಗಿಸಿದ್ದಿದ್ದರೆ ನನ್ನ ಬದುಕು ಸಾರ್ಥಕವಾಗುತ್ತಿತ್ತು. ಆದರೆ ಆ ಸುಖ ಹಣೆಯಲ್ಲಿ ಬರೆಯದೆ ಇರುವಾಗ ಏನು ತಾನೇ ಮಾಡುವುದು ? ನಿನ್ನೊಡನೆ ಈ ಮಾತನ್ನಾಡಬೇಕಾಗಿ ಬಂದುದಕ್ಕೆ ಕ್ಷಮೆಯಿರಲಿ. ನಿನ್ನ ಪವಿತ್ರ ಹೃದಯದಲ್ಲಿ ಇಂತಹ ವಿಷಯಗಳಿಗೆ ಸ್ಥಳವೆಲ್ಲಿ ?"

ಮೀರಾ ಸಂಕೋಚದಿಂದ ಆಕಾಶದ ಕಡೆ ನೋಡುತ್ತ ಹೇಳಿದಳು– "ಕಳ್ಳ ಬಾಗಿಲನ್ನು ತೆಗೆಯಲು ನನಗೆ ಅಪ್ಪಣೆಯಿದೆಯೆ ?"

ರಾಣಾ– "ನೀನು ಈ ಮನೆಯ ಯಜಮಾನಿ. ನನ್ನನ್ನು ಕೇಳುವ ಅಗತ್ಯವೇನಿದೆ ?"

ಮೀರಾ ರಾಣನಿಗೆ ವಂದಿಸಿ ಹೊರಟು ಹೋದಳು.

## 7

ಅರ್ಧರಾತ್ರಿ ಕಳೆದುಹೋಗಿತ್ತು. ಪ್ರಭಾ ಮೌನವಾಗಿ ದೀಪದ ಕಡೆ ನೋಡುತ್ತ ಕುಳಿತು ಯೋಚಿಸುತ್ತಿದ್ದಳು. ಈ ದೀಪ ತಾನು ಉರಿಯುವುದರಿಂದಲೇ ಬೆಳಕಾಗುತ್ತದೆ; ಇದು ಉರಿಯುವುದರಿಂದ ಇನ್ನೊಬ್ಬರಿಗೆ ಪ್ರಯೋಜನವಿದೆ; ನಾನು ಉರಿದುರಿದು ಯಾರಿಗೇನು ಪ್ರಯೋಜನ ? ಯಾತಕ್ಕಾಗಿ ನಾನು ಉರಿಯಬೇಕು ? ನಾನು ಬದುಕಿರುವ ಅವಶ್ಯಕತೆಯೇನಿದೆ ?

ಅವಳು ಮತ್ತೆ ಕಿಟಕಿಯ ಹೊರಗೆ ತಲೆಹಾಕಿ ಆಕಾಶದ ಕಡೆಗೆ ನೋಡಿದಳು. ಕರಿಯ ತೆರೆಯ ಮೇಲೆ ನಕ್ಷತ್ರಗಳು ಉಜ್ವಲವಾಗಿ ಹೊಳೆಯುತ್ತಿದ್ದವು. ಪ್ರಭಾ ಯೋಚಿಸಿದಳು, ಅಂಧಕಾರಮಯವಾದ ನನ್ನ ಭಾಗ್ಯದಲ್ಲಿ ಇಂತಹ ದೀಪ್ತಿಮಾನವಾದ ತಾರೆಗಳು ಎಲ್ಲಿವೆ ? ನನಗೆ ಬದುಕಿನ ಸುಖವೆಲ್ಲಿ ಬಂತು ? ಏನು, ನಾನು ಅಳುವುದಕ್ಕಾಗಿಯೇ ಬದುಕಬೇಕೆ ? ಹಾಗೆ ಬದುಕಿರುವುದರಿಂದ ಏನು ಲಾಭ ? ಬರಿಯ ನಗೆಪಾಟಲು ಅಷ್ಟೇ. ನನ್ನ ಮನಸ್ಸಿನ ಸ್ಥಿತಿಯನ್ನು ಯಾರು ಬಲ್ಲರು ? ಲೋಕ ನನ್ನನ್ನು ನಿಂದಿಸುತ್ತಿರಬಹುದು. ಝನಾಲಾವಾಡದ ಹೆಂಗಸರು ನನ್ನ ಸಾವಿನ ಶುಭ ಸಮಾಚಾರವನ್ನು ಕೇಳುವ ನಿರೀಕ್ಷೆಯಲ್ಲಿರಬಹುದೇನೋ. ನನ್ನ ಪ್ರೀತಿಯ ತಾಯಿ ನಾಚಿಕೆಯಿಂದ ತಲೆಯೆತ್ತದೇ ಇರಬಹುದು ಆದರೆ ನನ್ನ ಸಾವಿನ ಸುದ್ದಿ ಕೇಳಿದಾಕ್ಷಣ ಅವಳು ಹೆಮ್ಮೆಯಿಂದ ತಲೆಯೆತ್ತುತ್ತಾಳೆ. ಇದು ನಾಚಿಕೆ ಗೆಟ್ಟ ಬದುಕು. ಹೀಗೆ ಬದುಕಿರುವುದಕ್ಕಿಂತ ಸಾಯುವುದು ಮೇಲು !

ಪ್ರಭಾ ದಿಂಬಿನ ಕೆಳಗಿನಿಂದ ಫಳಫಳನೆ ಮಿರುಗುವ ಕಠಾರಿಯೆತ್ತಿಕೊಂಡಳು. ಅವಳ ಕೈ ನಡುಗುತ್ತಿತ್ತು. ಒಮ್ಮೆ ಕಠಾರಿಯ ಕಡೆ ದೃಷ್ಟಿಸಿ ನೋಡಿದಳು. ಅವನು ಬರಮಾಡಿಕೊಳ್ಳಲು ತಕ್ಕಂತೆ ಎದೆಯನ್ನು ಗಟ್ಟಿಮಾಡಿಕೊಂಡಳು. ಕೈಯೆತ್ತಲು ಪ್ರಯತ್ನಿಸಿದಳು, ಆದರೆ ಕೈ ಮೇಲೇಳಲಿಲ್ಲ. ಆತ್ಮ ದೃಢವಾಗಿರಲಿಲ್ಲ. ಕಣ್ಣು ಮುಚ್ಚಿದವು. ತಲೆ ಸುತ್ತು ಬಂತು. ಕಠಾರಿ ಕೈಯಿಂದ ಜಾರಿ ಕೆಳಬಿತ್ತು.

ಪ್ರಭಾ ತುಚ್ಛವಾಗಿ ಯೋಚಿಸಲಾರಂಭಿಸಿದಳು– "ಏನು, ನಾನು ನಿಜವಾಗಿಯೂ ಲಜ್ಜೆಯಿಲ್ಲದವಳೆ ? ರಾಜಪೂತ ವಂಶದವಳಾಗಿ ಸಾಯಲು ಹೆದರುತ್ತೇನೆಯೆ ? ಮಾನ ಮರ್ಯಾದೆ ಕಳೆದುಕೊಂಡು ಬದುಕುವವರು ನಾಚಿಕೆಯಿಲ್ಲದ ಜನ. ಅದಾವ ಆಕಾಂಕ್ಷೆ ನನ್ನ ಆತ್ಮವನ್ನು ಇಷ್ಟು ನಿಃಶಕ್ತವನ್ನಾಗಿ ಮಾಡಿಬಿಟ್ಟಿದೆ ? ರಾಣನ ಸಿಹಿಸಿಹಿಯಾದ ಮಾತೆ ? ರಾಣಾ ನನ್ನ ಶತ್ರು. ಬೇಟೆಯಾಡಿದ ಮೇಲೆ ಪಂಜರದಲ್ಲಿಟ್ಟು ಓಡಾಡಿಸುವ ಪಶು ನಾನು ಎಂದು ಅವನೆಂದುಕೊಂಡಿದ್ದಾನೆ. ನನ್ನ ಮನಸ್ಸನ್ನು ತನ್ನ ವಾಕ್‌ಮಾಧುರ್ಯದ ಕ್ರೀಡಾರಂಗವೆಂದು ತಿಳಿದಿದ್ದಾನೆ. ತಿರುಗಿಸಿ ತಿರುಗಿಸಿ ಮಾತಾಡುತ್ತಾನೆ. ನನ್ನ ಪರವಾಗಿ ತಾನೇ ಉಪಾಯವಾಗಿ ಉತ್ತರ ಕೊಟ್ಟುಕೊಂಡು ನನ್ನ ಬಾಯಿ ಮುಚ್ಚಿಸುತ್ತಾನೆ. ಅಯ್ಯೋ, ಆ ನಿರ್ದಯಿ ನನ್ನ ಬದುಕನ್ನು ಹಾಳುಮಾಡಿದ್ದಲ್ಲದೆ ನನ್ನನ್ನು ಹೇಗೆ ಆಟವಾಡಿಸುತ್ತಿದ್ದಾನೆ. ಅವನ ಕಪಟದ ಆಟಿಕೆಯಾಗಿರಲೆಂದು ನಾನು ಬದುಕಬೇಕೆ ?

ಪ್ರಭಾ ಮತ್ತೆ ಕಠಾರಿಯೆತ್ತಿದಳು. ಇಚ್ಛೆ ದೃಢವಾಗಿತ್ತು. ಕಠಾರಿ ಇನ್ನೇನು ಅವಳ ಹೃದಯಲ್ಲಿ ನಾಟಬೇಕು, ಆ ಹೊತ್ತಿಗೆ ಯಾರದೋ ಹೆಜ್ಜೆಯ ಸಪ್ಪಳ ಕೇಳಿಸಿತು. ಅವಳು ಬೆಚ್ಚಿ ಭಯಭೀತಳಾಗಿ ನೋಡತೊಡಗಿದಳು. ಮಂದಾರಕುಮಾರ ಮೆಲ್ಲಮೆಲ್ಲನೆ ಹೆಜ್ಜೆ ಹಾಕುತ್ತ ಕೋಣೆಯೊಳಗೆ ಬಂದ.

# 8

ಪ್ರಭಾ ಮಂದಾರಕುಮಾರನನ್ನು ನೋಡಿ ಹೌಹಾರಿದಳು. ಕಠಾರಿಯನ್ನು ಬಚ್ಚಿಟ್ಟಳು. ರಾಜಕುಮಾರನನ್ನು ನೋಡಿ ಆನಂದವಾಗುವ ಬದಲು ಒಂದು ಬಗೆಯ ರೋಮಾಂಚಕಾರಿಯಾದ ಭಯ ಉತ್ಪನ್ನವಾಯಿತು. ಯಾರಿಗಾದರೂ ಕೊಂಚ ಸಂದೇಹ ಬಂದರೂ ಇವನ ಪ್ರಾಣ ಉಳಿಯುವುದು ಕಷ್ಟ. ಇವನನ್ನು ತಕ್ಷಣ ಇಲ್ಲಿಂದ ಕಳಿಸಬೇಕು. ಇವನಿಗೆ ಮಾತನಾಡಲು ಅವಕಾಶ ಕೊಟ್ಟರೆ ವಿಳಂಬವಾಗುತ್ತದೆ; ಇವನು ಖಂಡಿತವಾಗಿಯೂ ಸಿಕ್ಕಿಬೀಳುತ್ತಾನೆ. ರಾಣಾ ಎಂದಿಗೂ ಇವನನ್ನು ಜೀವಸಹಿತ ಬಿಡುವುದಿಲ್ಲ. ಈ ಯೋಚನೆ ವಾಯುಮಿಂಚುಗಳ ವೇಗದಿಂದ ಅವಳ ತಲೆಯಲ್ಲಿ ಹರಿಯಿತು. "ಒಳಗೆ ಬರಬೇಡ"– ಅವಳು ಬಿರುಸಾಗಿ ಹೇಳಿದಳು.

ರಾಜಕುಮಾರ ಕೇಳಿದ– "ನನ್ನ ಗುರುತು ಹತ್ತಲಿಲ್ಲವೆ ?"

ಪ್ರಭಾ– "ಗುರುತು ಹತ್ತದೇ ಏನು ? ಆದರೆ ಮಾತನಾಡಲು ಇದು ಹೊತ್ತಲ್ಲ. ರಾಣಾ ನಿನ್ನನ್ನು ಬಲಿತೆಗೆದುಕೊಳ್ಳಲು ಹೊಂಚುಹಾಕುತ್ತಿದ್ದಾನೆ. ಈಗಲೇ ಇಲ್ಲಿಂದ ಹೊರಟುಬಿಡು."

ರಾಜಕುಮಾರ ಇನ್ನೊಂದು ಹೆಜ್ಜೆ ಮುಂದಿಟ್ಟು ನಿರ್ಭಯನಾಗಿ ಹೇಳಿದ– "ಪ್ರಭಾ, ನೀನು ನನ್ನ ಬಗ್ಗೆ ನಿಷ್ಠುರಳಾಗಿದ್ದಿ."

ಪ್ರಭಾ ಬೆದರಿಕೆ ಹಾಕುತ್ತ ಹೇಳಿದಳು– "ನೀನು ಇಲ್ಲಿಂದ ಹೋಗದಿದ್ದರೆ ಕೂಗಿಕೊಳ್ಳುತ್ತೇನೆ."

ರಾಜಕುಮಾರ ಉದ್ದಂಡನಾಗಿ ಹೇಳಿದ– "ನನಗೆ ಅದರ ಭಯವಿಲ್ಲ. ಪ್ರಾಣವನ್ನು ಅಂಗೈಯಲ್ಲಿಟ್ಟುಕೊಂಡು ನಾನು ಬಂದಿದ್ದೀನಿ. ಇವತ್ತು ಇಬ್ಬರಲ್ಲೊಬ್ಬರ ಕೊನೆಯಾಗುತ್ತದೆ. ರಾಣಾ ಉಳಿಯುತ್ತಾನೆ. ಇಲ್ಲವೇ ನಾನು ಉಳಿಯುತ್ತೀನಿ, ನೀನು ನನ್ನ ಸಂಗಡ ಬರುತ್ತೀಯೆ."

ಪ್ರಭಾ ದೃಢವಾಗಿ ಉತ್ತರ ಕೊಟ್ಟಳು– "ಇಲ್ಲ."

ರಾಜಕುಮಾರ ವ್ಯಂಗ್ಯವಾಗಿ ಹೇಳಿದ– "ಯಾಕೆ, ಚಿತ್ತೌಡಿನ ಗಾಳಿನೀರು ಚೆನ್ನಾಗಿ ಹಿಡಿಸಿತೆ ?"

ಪ್ರಭಾ ರಾಜಕುಮಾರನ ಕಡೆ ತಿರಸ್ಕಾರದಿಂದ ನೋಡುತ್ತ ಹೇಳಿದಳು– "ಜಗತ್ತಿನಲ್ಲಿ ನಮ್ಮ ಆಸೆಗಳೆಲ್ಲವೂ ಪೂರ್ಣವಾಗುವುದಿಲ್ಲ. ನಾನು ಇಲ್ಲಿ ಹೇಗೆ ಬಾಳು ಕಳೆಯುತ್ತಿದ್ದೇನೆಂದು ನಾನೇ ಬಲ್ಲೆ. ಆದರೆ ಲೋಕನಿಂದನೆಗೆ ಹೆದರುವವರು ಯಾರು ! ಜಗತ್ತಿನ ದೃಷ್ಟಿಯಲ್ಲಿ ನಾನು ಚಿತ್ತೌಡಿನ ರಾಣಿಯಾಗಿದ್ದೇನೆ. ಈಗ ರಾಣಾ ನನ್ನನ್ನು ಹೇಗೆ ಇಟ್ಟುಕೊಂಡರೆ ಹಾಗಿರುತ್ತೇನೆ. ಕೊನೆಯ ಗಳಿಗೆಯವರೆಗೂ ಅವನನ್ನು ಕಂಡು ಅಸಹ್ಯ ಪಡುತ್ತೇನೆ, ಉರಿಯುತ್ತೇನೆ, ಕುದಿಯುತ್ತೇನೆ. ಇನ್ನು

ತಡೆಯಲಾಗುವುದಿಲ್ಲ ಎಂದಾಗ ವಿಷ ಕುಡಿದೋ, ಎದೆಗೆ ಕಠಾರಿ ಚುಚ್ಚಿಕೊಂಡೋ ಸಾಯುತ್ತೇನೆ–ಆದರೆ ಇದೇ ಮನೆಯಲ್ಲಿ. ಈ ಮನೆ ಬಿಟ್ಟು ಎಂದಿಗೂ ಕಾಲಿಡುವುದಿಲ್ಲ.''

ಪ್ರಭಳ ಮೇಲೆ ರಾಣನ ವಶೀಕರಣಮಂತ್ರ ಕೆಲಸ ಮಾಡಿರಬಹುದೇ ಎಂದು ಮಂದಾರಕುಮಾರನ ಮನಸ್ಸಿನಲ್ಲಿ ಸಂದೇಹ ಹುಟ್ಟಿತು. ಅವಳು ತನಗೆ ಮೋಸ ಮಾಡುತ್ತಿದ್ದಾಳೆ ಅನಿಸಿತು. ಪ್ರೇಮದ ಸ್ಥಳದಲ್ಲಿ ಅಸೂಯೆ ಹುಟ್ಟಿತು. ಅವನು ಅದೇ ಭಾವನೆಯಿಂದ ಹೇಳಿದ– ''ನಿನ್ನನ್ನು ಇಲ್ಲಿಂದ ಎತ್ತಿಕೊಂಡುಹೋದರೆ ಏನು ಮಾಡುವೆ ?'' ಪ್ರಭಳ ಭಾವ ಬದಲಾಯಿತು. ಅವಳಂದಳು– ''ಅಂಥ ಸ್ಥಿತಿಯಲ್ಲಿ ಕ್ಷತ್ರಿಯ ಸ್ತ್ರೀಯರು ಮಾಡುವುದನ್ನೇ ನಾನೂ ಮಾಡುತ್ತೇನೆ. ನನ್ನ ಕೊರಳನ್ನು ಚೂರಿಯಿಂದ ಇರಿದುಕೊಳ್ಳುತ್ತೇನೆ, ಇಲ್ಲವೇ ನಿನ್ನ ಕೊರಳನ್ನು......''

ರಾಜಕುಮಾರ ಒಂದು ಹೆಜ್ಜೆ ಮುಂದೆ ಬಂದು ಕಟುವಾಗಿ ಹೇಳಿದ– ''ರಾಣನ ಜೊತೆ ಸಂತೋಷದಿಂದ ಹೊರಟುಬಂದಾಗ ಈ ಚೂರಿ ಎಲ್ಲಿ ಹೋಗಿತ್ತೊ?''

ಈ ಮಾತು ಪ್ರಭಳಿಗೆ ಬಾಣದಂತೆ ನಾಟಿತು. ಅವಳು ಸಿಡಿದೆದ್ದಳು– ''ಆಗ ಈ ಚೂರಿಯ ಇನ್ನೊಂದು ಅಲಗಿನಿಂದ ರಕ್ತದ ಹೊಳೆ ಹರಿಯಲು ಷುರುವಾಗುತ್ತಿತ್ತು. ನನ್ನ ಕಾರಣದಿಂದಾಗಿ ನನ್ನ ಅಣ್ಣತಮ್ಮಂದಿರ ಪ್ರಾಣ ಹೋಗುವುದು ನನಗೆ ಇಷ್ಟವಿರಲಿಲ್ಲ. ಅಲ್ಲದೆ ನಾನು ಆಗ ಕುಮಾರಿಯಾಗಿದ್ದೆ; ನನ್ನ ಮಾನಭಂಗವಾಗುವುದೆಂಬ ಭಯವಿರಲಿಲ್ಲ. ನಾನು ಪಾತಿವ್ರತ್ಯವನ್ನು ಕೈಗೊಂಡಿರಲಿಲ್ಲ. ಕೊನೆಯ ಪಕ್ಷ ಜಗತ್ತು ಹಾಗೆ ತಿಳಿಯುತ್ತಿತ್ತು. ನಾನು ನನ್ನ ದೃಷ್ಟಿಯಲ್ಲಿ ಈಗಲೂ ಹಾಗೆಯೇ ಇದ್ದೀನಿ. ಆದರೆ ಜಗತ್ತಿನ ದೃಷ್ಟಿಯಲ್ಲಿ ಬೇರೇನೋ ಆಗಿದ್ದೀನಿ. ಜಗತ್ತಿನ ನಡವಳಿಕೆಯ ಪ್ರಕಾರ ನಾನು ರಾಣನ ಆಜ್ಞೆಯಂತೆ ನಡೆಯುವವಳು. ನನ್ನ ಕಾಲಿಗೆ ಪಾತಿವ್ರತ್ಯದ ಬೇಡಿಯನ್ನು ಬಲವಂತವಾಗಿ ತೊಡಗಿಸಲಾಗಿದೆ. ಅದನ್ನು ರಕ್ಷಿಸುವುದು ನನ್ನ ಧರ್ಮ. ಅದರ ಹೊರತು ಬೇರೇನನ್ನು ಮಾಡುವುದೂ ಕ್ಷತ್ರಿಯ ಕನ್ಯೆಯ ಹೆಸರಿಗೆ ಕಳಂಕ ತರುತ್ತದೆ. ಸುಮ್ಮನೇ ನನ್ನ ಗಾಯದ ಮೇಲೆ ಯಾಕೆ ಉಪ್ಪು ಹಚ್ಚುತ್ತಿ ? ಇದು ಎಲ್ಲಿಯ ಸೌಜನ್ಯ ? ನನ್ನ ಭಾಗ್ಯದಲ್ಲಿ ಬರೆದಿರುವುದನ್ನು ನಾನು ಅನುಭವಿಸುತ್ತೀನಿ, ನನಗೆ ಅನುಭವಿಸಲು ಬಿಡು. ಬೇಗನೆ ಇಲ್ಲಿಂದ ಹೊರಟುಹೋಗು ಎಂದು ಬಿನ್ನವಿಸಿಕೊಳ್ಳುತ್ತೇನೆ.''

ರಾಜಕುಮಾರ ಇನ್ನೂ ಒಂದು ಹೆಜ್ಜೆ ಮುಂದಿಟ್ಟು ಕ್ರೂರವಾಗಿ ಹೇಳಿದ– ''ಪ್ರಭಾ, ಇಲ್ಲಿ ಬಂದಮೇಲೆ ನೀನು ಸ್ತ್ರೀಚಾರಿತ್ರ್ಯದ ವಿಷಯದಲ್ಲಿ ನಿಪುಣಳಾದೆ. ನನಗೆ ನಂಬಿಕೆ ದ್ರೋಹ ಮಾಡಿ ಈಗ ಧರ್ಮದ ಮುಸುಕಿನಲ್ಲಿ ಅವಿತುಕೊಳ್ಳುತ್ತಿದ್ದೀಯೆ. ನನ್ನ ಪ್ರೇಮವನ್ನು ಕಾಲ ಕೆಳಗೆ ತುಳಿದು ಈಗ ಮರ್ಯಾದೆಯ ನೆಪ ಹುಡುಕುತ್ತಿದ್ದೀಯೆ. ನಿನ್ನ ಸೌಂದರ್ಯಪುಷ್ಪಕ್ಕೆ ರಾಣಾ ಭ್ರಮರನಾಗಿರುವುದನ್ನು ನಾನು ಕಣ್ಣಾರೆ ನೋಡಲಾರೆ. ನನ್ನ ಆಸೆ ಮಣ್ಣಾದರೂ ಸರಿಯೆ, ನಿನ್ನನ್ನು ಎತ್ತಿಕೊಂಡು ಹೋಗುತ್ತೇನೆ. ನನ್ನ ಬದುಕು ನಷ್ಟವಾಗುವುದಾದರೆ ಅದಕ್ಕೆ ಮೊದಲು ನಿನ್ನ ಬಾಳೂ ಕೊನೆಗೊಳ್ಳುತ್ತದೆ. ನಿನ್ನ ವಿಶ್ವಾಸ ಘಾತಕತನಕ್ಕೆ

ಅದೇ ಶಿಕ್ಷೆ. ನಿನ್ನ ನಿರ್ಧಾರವೇನೆಂದು ಹೇಳು. ಈಗ ನನ್ನ ಜೊತೆ ಬರುವಿಯೋ ಹೇಗೆ? ಕೋಟೆಯ ಹೊರಗೆ ನನ್ನ ಜನ ನಿಂತಿದ್ದಾರೆ."

ಪ್ರಭಾ ನಿರ್ಭಯಳಾಗಿ ಹೇಳಿದಳು– "ಇಲ್ಲ."

ರಾಜಕುಮಾರ– "ಯೋಚಿಸು, ಇಲ್ಲವಾದರೆ ಪಶ್ಚಾತ್ತಾಪಪಡಬೇಕಾಗುತ್ತದೆ."

ಪ್ರಭಾ– "ಚೆನ್ನಾಗಿ ಯೋಚಿಸಿದ್ದೀನಿ."

ರಾಜಕುಮಾರ ಕತ್ತಿಯೆಳೆದು ಪ್ರಭಳ ಕಡೆ ಬೀಸಿದ. ಪ್ರಭಾ ಹೆದರಿಕೆಯಿಂದ ಕಣ್ಣು ಮುಚ್ಚಿ ಒಂದು ಹೆಜ್ಜೆ ಹಿಂದೆ ಸರಿದಳು. ಅವಳಿಗೆ ಮೂರ್ಛೆ ಬಂದಂತಾಯಿತು.

ಆಕಸ್ಮಾತ್ತಾಗಿ ರಾಣಾ ಕತ್ತಿ ಹಿಡಿದುಕೊಂಡು ವೇಗವಾಗಿ ಕೋಣೆಯೊಳಗೆ ಬಂದ. ರಾಜಕುಮಾರ ಸಾವರಿಸಿಕೊಂಡು ನಿಂತ.

ರಾಣಾ ಸಿಂಹದಂತೆ ಗರ್ಜಿಸುತ್ತ ಹೇಳಿದ– "ನಡಿ, ದೂರ. ಕ್ಷತ್ರಿಯ ಕನ್ಯೆಯ ಮೇಲೆ ಕೈಮಾಡಬಾರದು."

ರಾಜಕುಮಾರ ಹೇಳಿದ– "ಮರ್ಯಾದೆಯಿಲ್ಲದ ಹೆಂಗಸರಿಗೆ ಇದೇ ಶಿಕ್ಷೆ."

ರಾಣಾ ಹೇಳಿದ– "ನಿನ್ನ ವೈರಿಯೆಂದರೆ ನಾನು. ನನ್ನ ಮುಂದೆ ಬರಲು ಏಕೆ ನಾಚುತ್ತಿದ್ದೆ. ನಾನೂ ನಿನ್ನ ಕತ್ತಿಯ ಹೊಡೆತವನ್ನು ನೋಡಬಹುದಿತ್ತು."

ರಾಜಕುಮಾರ ಥಟ್ಟನೆ ತಿರುಗಿ ರಾಣನ ಮೇಲೆ ಕತ್ತಿ ಬೀಸಿದ. ಶಸ್ತ್ರವಿದ್ಯೆಯಲ್ಲಿ ರಾಣಾ ತುಂಬ ಕುಶಲ. ಆ ಹೊಡೆತದಿಂದ ತಪ್ಪಿಸಿಕೊಂಡು ರಾಜಕುಮಾರನ ಮೇಲೆ ನುಗ್ಗಿದ್ದ. ಅಷ್ಟರಲ್ಲಿ ಮೂರ್ಛಿತಳಾಗಿ ಗೋಡೆಗೆ ಒರಗಿಬಿದ್ದಿದ್ದ ಪ್ರಭಾ ಎಚ್ಚರಗೊಂಡು ಮಿಂಚಿನಂತೆ ಪ್ರಜ್ವಲಿಸುತ್ತ ರಾಜಕುಮಾರನಿಗೆ ಅಡ್ಡವಾಗಿ ಬಂದು ನಿಂತುಕೊಂಡಳು. ರಾಣಾ ಕತ್ತಿ ಬೀಸಿದ್ದ. ಕತ್ತಿಯ ಏಟು ಪೂರ್ಣವಾಗಿ ಅಳ ಭುಜದ ಮೇಲೆ ತಾಗಿತು. ರಕ್ತದ ಚಿಲುಮೆ ಉಕ್ಕ ತೊಡಗಿತ್ತು ರಾಣಾ ಒಂದು ನಿಟ್ಟುಸಿರುಬಿಟ್ಟು ಕತ್ತಿಯನ್ನು ಬದಿಗೆಸೆದು ಕುಸಿಯುತ್ತಿದ್ದ ಪ್ರಭಳನ್ನು ಹಿಡಿದುಕೊಂಡ.

ಕ್ಷಣಮಾತ್ರದಲ್ಲಿ ಪ್ರಭಳ ಮುಖ ವರ್ಣಹೀನವಾಯಿತು. ಕಣ್ಣು ಮುಚ್ಚಿದುವು, ದೀಪ ಆರಿತು. ಮಂದಾರಕುಮಾರನೂ ಕತ್ತಿಯನ್ನು ಬಿಸಾಡಿ ಕಣ್ಣಿನಲ್ಲಿ ನೀರು ತುಂಬಿ ಪ್ರಭಳ ಮುಂದೆ ಮಂಡಿಯೂರಿ ಕುಳಿತುಕೊಂಡ. ಇಬ್ಬರು ಪ್ರೇಮಿಗಳ ಕಣ್ಣಿನಲ್ಲೂ ನೀರು ಹರಿಯುತ್ತಿತ್ತು. ಆರಿ ಹೋದ ದೀಪದ ಮುಂದೆ ದೀಪದ ಹುಳುಗಳು ಪ್ರಾಣ ತೊರೆಯುತ್ತಿದ್ದವು.

ಪ್ರೇಮದ ರಹಸ್ಯ ವಿಚಿತ್ರವಾದುದು. ಒಂದೇ ಕ್ಷಣದ ಹಿಂದೆ ರಾಜಕುಮಾರ ಪ್ರಭಳ ಮೇಲೆ ಕತ್ತಿ ಬೀಸಿದ್ದ. ಏನೇ ಆಗಲಿ, ಪ್ರಭ ಅವನ ಸಂಗಡ ಹೋಗಲು ಸಿದ್ಧಳಾಗಿರಲಿಲ್ಲ. ಅವಮಾನದ ಭಯ, ಧರ್ಮದ ಬಂಧನ, ಕರ್ತವ್ಯದ ಅಡ್ಡಗೋಡೆ ದಾರಿ ತಡೆದಿದ್ದವು. ಆದರೆ ರಾಜಕುಮಾರ ಕತ್ತಿಗೆ ಬಲಿಯಾಗಲಿದ್ದಾಗ ಅವಳು ಅವನಿಗಾಗಿ ಪ್ರಾಣಾರ್ಪಣ ಮಾಡಿದ್ದಳು. ಪ್ರೇಮದ ಕಟ್ಟಳೆಯನ್ನು ನಿರ್ವಹಿಸಿದ್ದಳು. ಆದರೆ ವಚನಕೊಟ್ಟಂತೆ ತಾನಿದ್ದ ಮನೆಯಲ್ಲಿಯೇ!

ಹೌದು, ಪ್ರೇಮದ ರಹಸ್ಯ ವಿಚಿತ್ರವಾದುದು. ಒಂದೇ ಕ್ಷಣದ ಹಿಂದೆ ರಾಜಕುಮಾರ ಪ್ರಭಳ ಮೇಲೆ ಕತ್ತಿ ಬೀಸಿದ್ದ. ಅವನಿಗೆ ರಕ್ತದ ತೃಷೆಯಾಗಿತ್ತು.

ಅಸೂಯೆಯ ಬೆಂಕಿ ಅವನ ಎದೆಯಲ್ಲಿ ಉರಿಯುತ್ತಿತ್ತು. ಈಗ ಅದು ರಕ್ತದ ಧಾರೆಗೆ ಶಾಂತವಾಗಿತ್ತು. ಅವನು ಸ್ವಲ್ಪ ಹೊತ್ತು ನಿಶ್ಚೇಷ್ಟನಾಗಿ ಕುಳಿತು ಅಳುತ್ತಿದ್ದ. ಮತ್ತೆ ಎದ್ದು ಕತ್ತಿಯೆತ್ತಿ ಜೋರಾಗಿ ತನ್ನದೆಗೆ ಚುಚ್ಚಿಕೊಂಡ. ಮತ್ತೆ ರಕ್ತದ ಚಿಲುಮೆ ಹರಿಯಿತು. ಎರಡೂ ಧಾರೆಗಳು ಒಂದಾದವು. ಅವುಗಳಲ್ಲಿ ಯಾವ ಭೇದವೂ ಇರಲಿಲ್ಲ.

ಪ್ರಭಾ ಅವನೊಡನೆ ಹೋಗಲು ಒಪ್ಪುತ್ತಿರಲಿಲ್ಲ. ಆದರೆ ಅವಳಿಗೆ ಪ್ರೇಮದ ಬಂಧನವನ್ನು ಒಡೆಯಲಾಗಲಿಲ್ಲ. ಇಬ್ಬರೂ ಒಮ್ಮೆಲೇ ಆ ಮನೆಯಿಂದಷ್ಟೇ ಅಲ್ಲ, ಜಗತ್ತಿನಿಂದಲೇ ಹೊರಹೊರಟರು.

# 16. ಇದು ನನ್ನ ಮಾತೃಭೂಮಿ

ಇವತ್ತು ಪೂರಾ ಅರವತ್ತು ವರ್ಷಗಳ ನಂತರ ನನಗೆ ನನ್ನ ಮಾತೃಭೂಮಿಯ ಪ್ರಿಯ ಮಾತೃಭೂಮಿಯ, ದರ್ಶನ ಪ್ರಾಪ್ತವಾಗಿದೆ. ನಾನು ನನ್ನ ಪ್ರಿಯ ದೇಶಕ್ಕೆ ವಿದಾಯ ಹೇಳಿ ಹೋದಾಗ, ಭಾಗ್ಯ ನನ್ನನ್ನು ಪಶ್ಚಿಮದ ಕಡೆಗೆ ಕರೆದೊಯ್ದಾಗ ನನಗೆ ತುಂಬು ಯೌವನ. ನನ್ನ ಧಮನಿಗಳಲ್ಲಿ ಹೊಸ ರಕ್ತ ಸಂಚರಿಸುತ್ತಿತ್ತು. ಹೃದಯ ಉತ್ಸಾಹದಿಂದ, ದೊಡ್ಡ ದೊಡ್ಡ ಆಸೆಗಳಿಂದ ತುಂಬಿತ್ತು. ನನ್ನನ್ನು ನನ್ನ ಪ್ರಿಯ ಭಾರತವರ್ಷದಿಂದ ಬೇರ್ಪಡಿಸಿದುದು ಯಾವುದೇ ಅತ್ಯಾಚಾರಿಯ ದೌರ್ಜನ್ಯವಾಗಲೀ ನ್ಯಾಯದ ಬಲಿಷ್ಠ ಕೈಗಳಾಗಲೀ ಅಲ್ಲ. ಅತ್ಯಾಚಾರಿಯ ದೌರ್ಜನ್ಯ, ಕಾನೂನಿನ ಕಠೋರತೆಗಳು ನನಗೆ ಬೇಕಾದ್ದನ್ನು ಮಾಡಬಹುದು; ಆದರೆ ನನ್ನನ್ನು ನನ್ನ ಪ್ರಿಯ ಮಾತೃಭೂಮಿಯಿಂದ ಬೇರ್ಪಡಿಸಲಾರವು. ನನ್ನನ್ನು ದೇಶದಿಂದ ಹೊರಹೋಗುವಂತೆ ಮಾಡಿದುದು ನನ್ನ ಉಚ್ಚ ಅಭಿಲಾಷೆಗಳು ಹಾಗೂ ಉನ್ನತ ವಿಚಾರಗಳು.

ನಾನು ಅಮೇರಿಕಾಕ್ಕೆ ಹೋಗಿ ಅಲ್ಲಿ ಚೆನ್ನಾಗಿ ವ್ಯಾಪಾರ ಮಾಡಿದೆ. ಇಚ್ಛೆ ಆನಂದವನ್ನೂ ಪಡೆದೆ. ಸೌಭಾಗ್ಯವಶಾತ್ ಸೌಂದರ್ಯದಲ್ಲಿ ತನಗೆ ತಾನೊಬ್ಬಳಷ್ಟೇ ಸಮಾನಳಾದ ಹೆಂಡತಿಯೂ ಸಿಕ್ಕಿದಳು. ಅವಳ ಲಾವಣ್ಯ, ಸೌಂದರ್ಯಗಳ ಖ್ಯಾತಿ ಇಡೀ ಅಮೇರಿಕಾದಲ್ಲಿ ಹರಡಿತ್ತು. ನನಗೆ ಸಂಬಂಧಪಡದ ಇಲ್ಲವೇ ಗಾಢವಾದ ಆಸಕ್ತಿಯಿಲ್ಲದ ಯಾವುದೇ ವಿಷಯಕ್ಕೇ ಆಗಲಿ ಅವಳ ಎದೆಯಲ್ಲಿ ಕೊಂಚವಾದರೂ ಸ್ಥಳವಿರುತ್ತಿರಲಿಲ್ಲ. ನನಗೆ ಐವರು ಮಕ್ಕಳಿದ್ದರು. ಅವರೆಲ್ಲರೂ ನೋಡಲು ಚೆಲುವಾಗಿಯೂ ಹೃಷ್ಟಪುಷ್ಟವಾಗಿಯೂ ಇದ್ದರು. ಪ್ರಾಮಾಣಿಕರೂ ಆಗಿದ್ದರು. ಅವರು ವ್ಯಾಪಾರವನ್ನು ಇದ್ದಿದ್ದೂ ಬೆಳಗಿದರು. ನಾನು ಮಾತೃಭೂಮಿಯ ಅಂತಿಮ ದರ್ಶನಕ್ಕೆ ಹೊರಟಾಗ ನನ್ನ ತೊಡೆಯ ಮೇಲೆ ಪುಟ್ಟ ಪುಟ್ಟ ಮುದ್ದು ಮೊಮ್ಮಕ್ಕಳು ಆಡುತ್ತಿದ್ದವು. ಅಪಾರ ಧನ, ಪ್ರಿಯತಮಳಾದ ಪತ್ನಿ, ಸತ್ಪುತ್ರರಾದ ಮಕ್ಕಳು, ನನ್ನ ಕರುಳಿನ ತುಂಡಿನಂತಿದ್ದ ಪುಟ್ಟ ಪುಟ್ಟ ಮುದ್ದು ಮೊಮ್ಮಕ್ಕಳು–ಈ ಅಮೂಲ್ಯ ಸಂಬಂಧಗಳನ್ನು ನಾನು ತೊರೆದದ್ದು ನನ್ನ ಪ್ರಿಯ ಭಾರತಮಾತೆಯ ಅಂತಿಮ ದರ್ಶನ ಮಾಡಲೆಂದು. ನಾನು ತುಂಬ ಮುದುಕನಾಗಿದ್ದೇನೆ. ಇನ್ನು ಹತ್ತು ವರ್ಷಗಳಲ್ಲಿ ನನಗೆ ನೂರು ವರ್ಷ ತುಂಬುತ್ತದೆ. ಈಗ ನನ್ನ ಹೃದಯದಲ್ಲಿ

ಉಳಿದಿರುವ ಏಕೈಕ ಅಭಿಲಾಷೆಯೆಂದರೆ ನಾನು ನನ್ನ ಮಾತೃಭೂಮಿಯ ಧೂಳಿನ ಕಣವಾಗಬೇಕು.

ಈ ಅಭಿಲಾಷೆ ಇವತ್ತಷ್ಟೇ ನನ್ನ ಮನಸ್ಸಿನಲ್ಲಿ ಹುಟ್ಟಿದುದಲ್ಲ; ನನ್ನ ಪ್ರಿಯ ಪತ್ನಿ ತನ್ನ ಮಧುರ ಮಾತುಗಳಿಂದ, ಕೋಮಲ ಕಟಾಕ್ಷದಿಂದ ನನ್ನ ಹೃದಯವನ್ನು ಹಿಗ್ಗಿಸುತ್ತಿದ್ದ ಕಾಲದಲ್ಲಿ ಸಹ, ತಾರುಣ್ಯದಲ್ಲಿದ್ದ ನನ್ನ ಮಗ ಬೆಳಗಿನಲ್ಲಿ ಎದ್ದು ಬಂದು ತನ್ನ ವೃದ್ಧ ತಂದೆಗೆ ಭಕ್ತಿಯಿಂದ ಪ್ರಣಾಮ ಮಾಡುತ್ತಿದ್ದ ಕಾಲದಲ್ಲಿ ಸಹ ನಾನು ನನ್ನ ಮಾತೃಭೂಮಿಯಿಂದ ಬೇರಾಗಿದ್ದೇನೆಂಬುದು ನನ್ನ ಎದೆಯಲ್ಲಿ ಮುಳ್ಳಿನಂತೆ ಚುಚ್ಚುತ್ತಿತ್ತು. ಈ ದೇಶ ನನ್ನದಲ್ಲ; ನಾನು ಈ ದೇಶದವನಲ್ಲ.

ನನಗೆ ಹಣವಿತ್ತು, ಹೆಂಡತಿಯಿದ್ದಳು, ಮಕ್ಕಳಿದ್ದರು, ಆಸ್ತಿಯಿತ್ತು. ಆದರೆ ಏಕೋ ಏನೋ ಗೊತ್ತಿಲ್ಲ. ಮಾತೃಭೂಮಿಯ ಮುರುಕು ಜೋಪಡಿ, ಪಿತ್ರಾರ್ಜಿತವಾದ ನಾಲ್ಕಾರು ಬೀಘಾ ಜಮೀನು ಹಾಗೂ ಬಾಲ್ಯದ ಲಂಗೋಟಿ ಸ್ನೇಹಿತರ ನೆನಪು ನನ್ನನ್ನು ಆಗಾಗ್ಗೆ ಬಹುವಾಗಿ ಕಾಡುತ್ತಿತ್ತು. ಸಾಮಾನ್ಯವಾಗಿ ಅಪಾರ ಸಂತೋಷದ ಹಾಗೂ ಆನಂದೋತ್ಸವಗಳ ಸಂದರ್ಭಗಳಲ್ಲಿ ಸಹ 'ಅಯ್ಯೋ, ನಾನು ನನ್ನ ದೇಶದಲ್ಲಿ ಇದ್ದಿದ್ದರೆ......' ಎಂಬ ಆಸೆ ಎದೆಯನ್ನು ಕೆಣಕುತ್ತಿತ್ತು.

## 2

ಬೊಂಬಾಯಿಯಲ್ಲಿ ಹಡಗಿನಿಂದ ಇಳಿದಾಗ ಮೊದಲು ಕಣ್ಣಿಗೆ ಬಿದ್ದವರೆಂದರೆ ಕಪ್ಪು ಕೋಟು ಷರಾಯಿ ತೊಟ್ಟು, ಹರಕುಮುರುಕು ಇಂಗ್ಲಿಷ್ ಮಾತನಾಡುತ್ತಿದ್ದ ನಾವಿಕರು. ಆಮೇಲೆ ಅಂಗ್ರೇಜೀ ಅಂಗಡಿಗಳು, ಟ್ರಾಮುಮೋಟಾರುಗಳು ಕಾಣಸಿಕೊಂಡವು. ಅದಾದ ಮೇಲೆ ಬಾಯಿಯಲ್ಲಿ ಚಿರೂಟ್ ಸಿಕ್ಕಿಸಿಕೊಂಡು ರಬ್ಬರ್ ಟೈರಿನ ಗಾಡಿಗಳಲ್ಲಿ ಓಡಾಡುವ ಜನ ಎದುರಾದರು. ಮತ್ತೆ ವಿಕ್ಟೋರಿಯಾ ಟರ್ಮಿನಸ್ ರೈಲು ನಿಲ್ದಾಣ ನೋಡಿದೆ. ಆಮೇಲೆ ರೈಲು ಹತ್ತಿ ಹಸಿರು ಬೆಟ್ಟಗುಡ್ಡಗಳ ನಡುವೆ ಇದ್ದ ನನ್ನ ಹಳ್ಳಿಗೆ ಹೊರಟೆ. ಆಗ ನನಗೆ ಕಣ್ಣಿನಲ್ಲಿ ನೀರು ತುಂಬಿಬಂದಿತ್ತು; ನಾನು ಚೆನ್ನಾಗಿ ಅತ್ತೆ– ಏಕೆಂದರೆ ಇದು ನನ್ನ ದೇಶವಾಗಿರಲಿಲ್ಲ. ಯಾವುದನ್ನು ದರ್ಶನ ಮಾಡಬೇಕೆಂಬ ಇಚ್ಛೆ ನನ್ನ ಹೃದಯದಲ್ಲಿ ಸದಾ ಅಲೆಯಾಡುತ್ತಿತ್ತೋ ಅದು ಈ ದೇಶವಾಗಿರಲಿಲ್ಲ. ಇದು ಬೇರೆ ಯಾವುದೋ ದೇಶವಾಗಿತ್ತು. ಇದು ಅಮೇರಿಕವೋ ಇಂಗ್ಲೆಂಡೋ ಆಗಿತ್ತು. ಪ್ರಿಯ ಭಾರತವಾಗಿರಲಿಲ್ಲ. ರೈಲು ಕಾಡು, ಬೆಟ್ಟ, ನದಿ, ಬಯಲುಗಳನ್ನು ದಾಟಿ, ಹಿಂದೊಮ್ಮೆ ಎಲೆ ಹೂವು ಹಣ್ಣುಗಳಿಂದ ಕಿಕ್ಕಿರಿದು ನದಿನಾಲೆಗಳಿಂದ ತುಂಬಿ ಸ್ವರ್ಗಕ್ಕೆ ಸವಾಲು ಹಾಕುತ್ತಿದ್ದ ನನ್ನ ಪ್ರೀತಿಯ ಹಳ್ಳಿಯ ಬಳಿಗೆ ಕರೆತಂದಿತು. ನಾನು ಗಾಡಿಯಿಂದ ಇಳಿದಾಗ ಈಗ ನಾನು ನನ್ನ ಮೆಚ್ಚಿನ ಮನೆಯನ್ನು ನೋಡುತ್ತೇನೆ, ಬಾಲ್ಯದ ಸ್ನೇಹಿತರನ್ನು ಕಾಣುತ್ತೇನೆ ಎಂದೆಲ್ಲ ಯೋಚಿಸಿ ನನ್ನ ಎದೆ ಸಂತೋಷದಿಂದ ಕುಣಿಯುತ್ತಿತ್ತು. ನಾನು ಈಗ ತೊಂಬತ್ತು

ವರ್ಷದ ಮುದುಕನೆಂಬುದು ಮರೆತೇಹೋಗಿತ್ತು. ಹಳ್ಳಿ ಹತ್ತಿರವಾದಂತೆಲ್ಲಾ ನನ್ನ ಕಾಲಿಗೆ ನಡಿಗೆ ಜೋರಾಯಿತು; ಎದೆಯಲ್ಲಿ ಹೇಳಲಾರದ ಆನಂದ ಸ್ರೋತ ಉಕ್ಕಿ ಹರಿದಿತ್ತು. ಒಂದೊಂದು ವಸ್ತುವನ್ನೂ ಕಣ್ಣರಳಿಸಿ ನೋಡುತ್ತಿದ್ದೆ. ಆಹಾ! ನಾವು ದಿನವೂ ಕುದುರೆ ತೊಳೆದು, ನಾವೂ ಮುಳುಗುಹಾಕುತ್ತಿದ್ದ ನಾಲೆ ಇದೇ. ಆದರೆ ಈಗ ಅದರ ಎರಡೂ ದಂಡೆಗೆ ಮುಳ್ಳಿಗೆ ತಂತಿ ಬಿಗಿದಿತ್ತು. ಅದರ ಮುಂದುಗಡೆ ಒಂದು ಬಂಗಲೆಯಿತ್ತು. ಬಂದೂಕ ಹಿಡಿದ ಇಬ್ಬರು ಪರಂಗಿಯರು ಅತ್ತಿಂದಿತ್ತ ಗಸ್ತು ಹೊಡೆಯುತ್ತಿದ್ದರು. ನಾಲೆಯಲ್ಲಿ ಸ್ನಾನ ಮಾಡುವುದಕ್ಕೆ ನಿಷೇಧ ಹಾಕಿದ್ದರು.

ಹಳ್ಳಿಗೆ ಹೋದೆ. ಕಣ್ಣು ಬಾಲ್ಯದ ಸ್ನೇಹಿತರನ್ನು ಹುಡುಕತೊಡಗಿತ್ತು. ಆದರೆ ಎಂಥ ವಿಷಾದ! ಅವರೆಲ್ಲರೂ ಸಾವಿಗೆ ತುತ್ತಾಗಿದ್ದರು. ನನ್ನ ಮನೆ–ಹರಕು ಜೋಪಾಡಿ–ಯಾವುದರ ಮಡಿಲಿನಲ್ಲಿ ವರ್ಷಗಟ್ಟಲೆ ಆಡಿದ್ದೆನೋ, ಎಲ್ಲಿ ನಿಶ್ಚಿಂತೆಯಿಂದ ಕೂಡಿದ ಆನಂದವನ್ನು ಸೂರೆ ಮಾಡಿದ್ದೆನೋ, ಯಾವುದರ ಚಿತ್ರವನ್ನೂ ನನ್ನ ಕಣ್ಣಂಚಿನಲ್ಲಿ ಸುಳಿದಾಡುತ್ತಿತ್ತೋ ಆ ಪ್ರೀತಿಯ ಮನೆ ಮಣ್ಣಿನ ಗುಡ್ಡೆಯಾಗಿತ್ತು.

ಈ ಸ್ಥಳದಲ್ಲಿ ಜನವಸತಿಯಿಲ್ಲದೇ ಇರಲಿಲ್ಲ. ಸಾವಿರಾರು ಜನ ಓಡಾಡುತ್ತಿರುವುದು ದೃಷ್ಟಿಗೆ ಬೀಳುತ್ತಿತ್ತು. ಅವರು ಕೋರ್ಟು ಕಚೇರಿ, ಪೋಲೀಸುಠಾಣೆಗಳ ಮಾತಾಡುತ್ತಿದ್ದರು. ಅವರ ಮುಖದಲ್ಲಿ ದುಃಖ, ಚಿಂತೆ, ಹಣದ ಕಳೆ ಎದ್ದು ಕಾಣುತ್ತಿತ್ತು. ಅವರೆಲ್ಲರೂ ಪ್ರಾಪಂಚಿಕ ಚಿಂತೆಯಿಂದ ಪೀಡಿತರಾದವರಂತೆ ತೋರುತ್ತಿದ್ದರು. ನನ್ನ ಸ್ನೇಹಿತರಂತಹ ಹೃಷ್ಟಪುಷ್ಟರು, ಬಲಿಷ್ಠರು, ಕೆಂಪುಗೆನ್ನೆಯ ನವಯುವಕರು ಎಲ್ಲೂ ಕಾಣಸುತ್ತಿರಲಿಲ್ಲ. ನಾನೇ ಸ್ವತಃ ಕಟ್ಟಿ ಬೆಳಸಿದ್ದ ಅಖಾಡವಿದ್ದೆಡೆಯಲ್ಲಿ ಈಗೊಂದು ಮುರುಕು ಶಾಲೆಯಿತ್ತು. ಅಲ್ಲಿ ದುರ್ಬಲರಾದ, ರೋಗಿಗಳಂತೆ ಕಾಂತಿಹೀನ ಮುಖವುಳ್ಳ ಹುಡುಗರು ಹರಕುಬಟ್ಟೆ ತೊಟ್ಟು ತೂಕಡಿಸುತ್ತಿದ್ದರು. ಅವರ ಮುಖ ನೋಡಿ ಇದ್ದಕ್ಕಿದ್ದಂತೆಯೇ ನನ್ನ ಬಾಯಿಂದ "ಇಲ್ಲ, ಇಲ್ಲ. ಇದು ನನ್ನ ಪ್ರೀತಿಯ ಬಾರತವರ್ಷವಲ್ಲ" ಎಂದು ಹೊರಟಿತು.

ಆಲದ ಮರದ ಕಡೆಗೆ ನಡೆದೆ. ಬಾಲ್ಯದಲ್ಲಿ ನಾನು ಅದರ ತಣ್ಣೆರಳಿನಲ್ಲಿ ಆನಂದಪಟ್ಟಿದ್ದೆ. ಎಳೆತನದಲ್ಲಿ ಅದು ನಮ್ಮ ಆಟದ ಸ್ಥಳವಾಗಿತ್ತು; ಯೌವನದಲ್ಲಿ ಸುಖದ ತಾಣವಾಗಿತ್ತು. ಅಯ್ಯೋ! ಆ ಮೆಚ್ಚಿನ ಆಲದ ಮರವನ್ನು ನೋಡುವಾಗ ಹೃದಯಕ್ಕೆ ಆಘಾತ ಬಡಿದಂತಾಗಿ ತುಂಬ ದುಃಖವಾಯಿತು. ಅದನ್ನು ನೋಡಿ ಎಂತೆಂತಹ ದುಃಖದಾಯಕ ಹಾಗೂ ಹೃದಯವಿದ್ರಾವಕವಾದ ನೆನಪುಗಳು ಮರುಕಳಿಸಿದವೆಂದರೆ ಗಂಟೆಗಟ್ಟಲೆ ನೆಲದ ಮೇಲೆ ಕೂತು ಕೂತೇ ಕಣ್ಣೀರು ಸುರಿಸಿದೆ. ಕೊಂಬೆಯ ಮೇಲೆ ಹತ್ತಿ ತುದಿಯ ಚಿಗುರಿನ ತನಕ ಏರುತ್ತಿದ್ದುದು ಈ ಆಲದ ಮರದಲ್ಲಿಯೇ. ಇದರ ಬಿಳಿಲು ನಮಗೆ ಉಯ್ಯಾಲೆಯಾಗಿತ್ತು; ಇದರ ಹಣ್ಣು ಪ್ರಪಂಚದ ಎಲ್ಲ ಮಿಠಾಯಿಗಿಂತ ಹೆಚ್ಚು ರುಚಿಯೆನಿಸುತ್ತಿತ್ತು. ಕೊರಳಿಗೆ ತೋಳು ಬಳಸಿ ಆಡುತ್ತಿದ್ದ ಆ ನನ್ನ ಲಂಗೋಟಿ ಸ್ನೇಹಿತರು, ಒಮ್ಮೆ

ಕೋಪಿಸಿಕೊಂಡು ಒಮ್ಮೆ ಒಲಿದು ಬರುತ್ತಿದ್ದವರು, ಎಲ್ಲಿ ಹೋದರು ? ಅಯ್ಯೋ, ಈಗ ನಾನು ಮನೆಮಠವಿಲ್ಲದ ಏಕಾಕಿ ಯಾತ್ರಿಕನಾದೆನೆ ? ನನಗೆ ಯಾರೂ ಜೊತೆಗಾರರಿಲ್ಲವೆ ? ಆಲದ ಮರದ ಹತ್ತಿರ ಈಗ ಪೋಲೀಸ್ ಠಾಣೆಯಿತ್ತು; ಅದರ ಕೆಳಗೆ ಯಾವನೋ ಕೆಂಪು ರುಮಾಲು ಸುತ್ತಿಕೊಂಡು ಕುಳಿತಿದ್ದ, ಅವನ ಸುತ್ತಮುತ್ತ ಹತ್ತಿಪ್ಪತ್ತು ಜನ ಕೆಂಪು ಪೇಟದವರು ಕೈಕಟ್ಟಿಕೊಂಡು ನಿಂತಿದ್ದರು ! ಅಲ್ಲಿ ಹಳೆಯ ಹರಕಲು ಬಟ್ಟೆ ತೊಟ್ಟ ಹೊಟ್ಟೆಗಿಲ್ಲದ ಜನ ಬಿಕ್ಕಿ ಬಿಕ್ಕಿ ಅಳುತ್ತ ನಿಂತಿದ್ದರು. ಅವರ ಮೈಮೇಲೆ ಆಗ ತಾನೇ ಛಡಿಯೇಟಿನ ಜಡಿಮಳೆಯಾಗಿತ್ತು. ಇದು ನನ್ನ ಪ್ರೀತಿಯ ದೇಶವಲ್ಲ, ಬೇರೆ ಯಾವುದೋ ದೇಶ ಎಂಬುದು ನನಗೆ ನೆನಪಾಯಿತು. ಇದು ಯುರೋಪಿರಬಹುದು; ಇದು ಅಮೇರಿಕಾ ಇರಬಹುದು. ಆದರೆ ನನ್ನ ಪ್ರೀತಿಯ ಮಾತೃಭೂಮಿಯಲ್ಲ–ಖಂಡಿತವಾಗಿಯೂ ಅಲ್ಲ !

## 3

ಅಲ್ಲಿಂದ ನಿರಾಶನಾಗಿ ನಾನು ಊರ ಚಾವಡಿಯ ಕಡೆ ನಡೆದೆ. ನಮ್ಮ ತಂದೆ ಸಂಜೆಯ ಹೊತ್ತು ಊರಿನ ಇತರ ಹಿರಿಯರೊಡನೆ ಹುಕ್ಕಾ ಸೇದುತ್ತ ವಿನೋದದಿಂದ ಹರಟೆ ಹೊಡೆಯುತ್ತ ಕುಳಿತಿರುತ್ತಿದ್ದುದು ಅಲ್ಲಿಯೇ. ನಾವೂ ಆ ಕಟ್ಟೆಗೆ ಹಾಸಿದ ಗೋಣಿಯ ತಾಟಿನ ಮೇಲೆಯೇ ಲಾಗ ಹಾಕುತ್ತಿದ್ದೆವು. ಒಮ್ಮೊಮ್ಮೆ ಅಲ್ಲಿ ಊರ ಪಂಚಾಯಿತಿಯೂ ನಡೆಯುತ್ತಿತ್ತು; ಅದರ ಮುಖಂಡರು ಯಾವಾಗಲೂ ನಮ್ಮ ತಂದೆಯೇ. ಆ ಕಟ್ಟೆಯ ಹತ್ತಿರ ಒಂದು ದೊಡ್ಡಿಯಿತ್ತು. ಅಲ್ಲಿ ಊರಿನ ಹಸುಗಳನ್ನು ಕಟ್ಟುತ್ತಿದ್ದರು. ನಾವು ಅಲ್ಲೇ ಕರುಗಳ ಸಂಗಡ ಆಟವಾಡುತ್ತಿದ್ದೆವು. ಅಯ್ಯೋ ! ಈಗ ಆ ಕಟ್ಟೆಯ ಹೆಸರೂ ಇಲ್ಲವಾಗಿದೆಯಲ್ಲ; ಬದಲು ಅಲ್ಲಿ ಹಳ್ಳಿಯ ಅಂಚೆಯ ಕಚೇರಿಯಿದೆ; ಅದು ಸಿಡುಬು ಹಾಕುವ ಸ್ಥಳವೂ ಆಗಿದೆ.

ಆ ಕಾಲದಲ್ಲಿ ಕಟ್ಟೆಗೆ ಹತ್ತಿಕೊಂಡಂತೆ ಒಂದು ಕಬ್ಬಿನ ಗಾಣವಿತ್ತು; ಅಲ್ಲಿ ಚಳಿಗಾಲದಲ್ಲಿ ಕಬ್ಬು ಹಿಂಡುತ್ತಿದ್ದರು. ಬೆಲ್ಲದ ಘಮು ತಲೆಗೆ ಅಡರುತ್ತಿತ್ತು. ನಾನೂ ನನ್ನ ಜೊತೆಗಾರರೂ ಅಲ್ಲಿ ಕಬ್ಬಿನ ತುಂಡಿಗೆ ಕಾಯುತ್ತ ಕುಳಿತಿರುತ್ತಿದ್ದೆವು. ಕಬ್ಬನ್ನು ತುಂಡು ಮಾಡುತ್ತಿದ್ದ ಕೂಲಿಗಳ ಕೈಚಳಕವನ್ನು ಕಂಡು ಆಶ್ಚರ್ಯಪಡುತ್ತಿದ್ದೆವು. ಅಲ್ಲಿ ನಾನು ಸಾವಿರಾರು ಸಲ ಬಿಸಿ ಹಾಲಿಗೆ ಕಬ್ಬಿನ ರಸವನ್ನು ಬೆರಸಿಕೊಂಡು ಕುಡಿದಿದ್ದೇನೆ. ಅಕ್ಕಪಕ್ಕದ ಮನೆಯ ಹೆಂಗಸರೂ ಮಕ್ಕಳೂ ಗಡಿಗೆ ಹೊತ್ತುಕೊಂಡು ಅಲ್ಲಿಗೆ ಬರುತ್ತಿದ್ದರು; ರಸ ತುಂಬಿಕೊಂಡು ಹೋಗುತ್ತಿದ್ದರು. ದುಃಖದ ಸಂಗತಿಯೆಂದರೆ ಕಬ್ಬಿನ ಗಾಣವೇನೋ ಹಿಂದೆ ಹೇಗಿತ್ತೋ ಹಾಗೆಯೇ ಇದೆ; ಆದರೆ ಆ ಸ್ಥಳದಲ್ಲಿ ಸೆಣಬು ಸುತ್ತುವ ಯಂತ್ರ ಬಂದಿದೆ. ಎದುರುಗಡೆ ಬೀಡಾ ಸಿಗರೇಟಿನ ಅಂಗಡಿಯಿದೆ. ಈ ಹೃದಯವಿದ್ರಾವಕ ದೃಶ್ಯಗಳನ್ನು ನೋಡಿ ನೊಂದು, ನೋಡಲು ಸಭ್ಯನಂತೆ ಕಾಣುತ್ತಿದ್ದ ಒಬ್ಬ ಮನುಷ್ಯನನ್ನು ಕೇಳಿದೆ– "ಅಯ್ಯಾ, ನಾನೊಬ್ಬ

ಪರದೇಶಿ ಯಾತ್ರಿಕ. ರಾತ್ರಿ ಮಲಗಲು ಸ್ಥಳ ಸಿಗುತ್ತದೆಯೆ?'' ಅವನು ನನ್ನನ್ನು ತಲೆಯಿಂದ ಕಾಲಿನವರೆಗೂ ದುರುಗುಟ್ಟಿನೋಡಿ ಹೇಳಿದ- ''ಮುಂದೆ ಹೋಗು, ಇಲ್ಲಿ ಜಾಗವಿಲ್ಲ.'' ನಾನು ಮುಂದೆ ಹೋದೆ, ಅಲ್ಲೂ ಅದೇ 'ಮುಂದೆ ಹೋಗು' ಎಂಬ ಉತ್ತರವೇ ದೊರೆಯಿತು. ಐದನೆಯ ಬಾರಿ ಒಬ್ಬ ಸಜ್ಜನನನ್ನು ಮಲಗಲು ಸ್ಥಳ ಕೇಳಿದ್ದಕ್ಕೆ ಅವನು ನನ್ನ ಕೈಯಲ್ಲಿ ಒಂದು ಹಿಡಿ ಕಡಲೆ ಹಾಕಿದ. ಕಡಲೆ ನನ್ನ ಕೈಯಿಂದ ಜಾರಿ ಕೆಳಬಿತ್ತು; ಕಣ್ಣಿನಿಂದ ಎಡೆಬಿಡದೆ ನೀರು ಹರಿಯತೊಡಗಿತು. ಇದ್ದಕ್ಕಿದ್ದಂತೆಯೇ ಬಾಯಿಂದ ''ಅಯ್ಯೋ! ಇದು ನನ್ನ ದೇಶವಲ್ಲ. ಇದು ಇನ್ನ್ಯಾವದೋ ದೇಶ. ಅತಿಥಿಸತ್ಕಾರಕ್ಕೆ ಹೆಸರಾದ ನಮ್ಮ ಪ್ರೀತಿಯ ಭಾರತವರ್ಷವಲ್ಲ-ಖಂಡಿತವಾಗಿಯೂ ಅಲ್ಲ'' ಎಂದು ಹೊರಟಿತು.

ನಾನೊಂದು ಡಬ್ಬಿ ಸಿಗರೇಟು ಕೊಂಡುಕೊಂಡು, ನಿರ್ಜನವಾದ ಒಂದು ಸ್ಥಳ ಹುಡುಕಿ ಕುಳಿತು, ಸಿಗರೇಟು ಎಳೆಯುತ್ತ ಹಿಂದಿನ ಕಾಲವನ್ನು ನೆನೆಯತೊಡಗಿದೆ. ಇದ್ದಕ್ಕಿದ್ದಂತೆ ನಾನು ವಿದೇಶಕ್ಕೆ ಹೋಗುವ ಹೊತ್ತಿನಲ್ಲಿ ಕಟ್ಟಲಾಗುತ್ತಿದ್ದ ಧರ್ಮಶಾಲೆಯ ನೆನಪಾಯಿತು. ಹೇಗಾದರೂ ಅಲ್ಲಿ . ರಾತ್ರಿಯನ್ನು ಕಳೆಯುವುದೆಂದುಕೊಂಡು ಆ ಕಡೆಗೆ ಧಾವಿಸಿದೆ. ವಿಷಾದ! ಮಹಾ ವಿಷಾದ! ಧರ್ಮಶಾಲೆ ಇದ್ದಂತೆಯೇ ಇತ್ತು. ಆದರೆ ಅಲ್ಲಿ ಬಡಯಾತ್ರಿಕರಿಗೆ ತಂಗಲು ಸ್ಥಳವಿರಲಿಲ್ಲ. ಅದು ಈಗ ಕುಡಿತ, ದುರಾಚಾರ, ಜೂಜುಗಳಿಗೆ ಆಶ್ರಯವಾಗಿತ್ತು. ಈ ದುರ್ದಶೆಯನ್ನು ಕಂಡು ವಿವಶನಾದೆ; ನನ್ನೆದೆಯಿಂದ ಒಂದು ತಣ್ಣನೆಯ ನಿಟ್ಟುಸಿರು ಹೊರಬಿತ್ತು. ನಾನು ಜೋರಾಗಿ ಕಿರಚಿಕೊಂಡೆ- ''ಇಲ್ಲ, ಇಲ್ಲ, ಇದು ನನ್ನ ಪ್ರೀತಿಯ ಭಾರತವಲ್ಲ; ಇದು ಇನ್ನ್ಯಾವದೋ ದೇಶ. ಇದು ಯುರೋಪು, ಇದು ಅಮೇರಿಕಾ; ಭಾರತವಂತೂ ಖಂಡಿತ ಅಲ್ಲ.''

## 4

ಕತ್ತಲ ರಾತ್ರಿ. ನಾಯಿನರಿಗಳು ಕರ್ಕಶವಾಗಿ ಅರಚುತ್ತಿದ್ದವು. ನಾನು ನೊಂದೆದೆ ಹೊತ್ತು ಊರ ನಾಲೆಯ ಹತ್ತಿರ ಹೋಗಿ ಕುಳಿತುಕೊಂಡು ಯೋಚಿಸತೊಡಗಿದೆ-ಈಗ ಏನು ಮಾಡಲಿ? ಮತ್ತೆ ಮಕ್ಕಳ ಬಳಿ ಹಿಂದಿರುಗಿಹೋಗಿ, ಈ ನನ್ನ ಶರೀರವನ್ನು ಅಮೇರಿಕದ ಮಣ್ಣಿನಲ್ಲಿ ಒಂದುಗೂಡಿಸಲೇ? ಇದುವರೆಗೆ ನನಗೆ ಮಾತೃಭೂಮಿಯಿತ್ತು. ನಾನು ವಿದೇಶದಲ್ಲೇನೋ ಇದ್ದೆ. ಆದರೆ ನನ್ನ ಪ್ರೀತಿಯ ಸ್ವದೇಶದ ನೆನಪಾಗುತ್ತಿತ್ತು. ಆದರೆ ನಾನೀಗ ದೇಶವಿಹೀನನಾಗಿದ್ದೇನೆ. ನನ್ನದಾದ ಯಾವ ದೇಶವೂ ಇಲ್ಲ. ಈ ಚಿಂತೆಯಲ್ಲಿ ಬಹು ಹೊತ್ತಿನ ತನಕ ತಲೆಯ ಮೇಲೆ ಕೈ ಹೊತ್ತುಕೊಂಡು ಮೌನವಾಗಿ ಕುಳಿತಿದ್ದೆ. ಇಡೀ ರಾತ್ರಿಯನ್ನು ಕಣ್ಣು ತೆರೆದೇ ಕಳೆದೆ. ಗಂಟೆ ಮೂರು ಹೊಡೆಯಿತು. ಯಾರೋ ಹಾಡುವ ಶಬ್ದ ಕಿವಿಗೆ ಬಿತ್ತು. ಇದು ನನ್ನ ದೇಶದ್ದೇ ರಾಗ; ನನ್ನ

ಮಾತೃಭೂಮಿಯದೇ ಸ್ವರ. ಹೃದಯ ಗದ್ಗದವಾಯಿತು. ನಾನು ತಕ್ಷಣ ಎದ್ದುನಿಂತೆ. ಬಿಳಿಯ ಸೀರೆ ಉಟ್ಟ ಹದಿನೈದು ಇಪ್ಪತ್ತು ಮುದಿ ಹೆಂಗಸರು ಕೈಯಲ್ಲಿ ತಂಬಿಗೆ ಹಿಡಿದು ಸ್ನಾನಕ್ಕೆ ಹೊರಟಿದ್ದುದ್ದು ಕಾಣಿಸಿತು. ಅವರು ಹಾಡು ಹೇಳಿಕೊಂಡು ಹೊರಟಿದ್ದರು:

ನಮ್ಮವಗುಣಗಳ ಮನ್ನಿಸೊ, ಪ್ರಭುವೆ.....

ಹಾಡನ್ನು ಕೇಳಿ ನಾನು ತನ್ಮಯನಾಗುವುದರಲ್ಲಿದ್ದಾಗ ಜನರ ಧ್ವನಿ ಕೇಳಿಸಿತು. ಅವರಲ್ಲಿ ಕೆಲವರು ಕೈಯಲ್ಲಿ ಹಿತ್ತಾಳೆಯ ಕಮಂಡಲ ಹಿಡಿದು ಶಿವ ಶಿವ, ಹರ ಹರ, ಗಂಗೆ ಗಂಗೆ, ನಾರಾಯಣ ನಾರಾಯಣ ಎನ್ನುತ್ತ ಹೋಗುತ್ತಿದ್ದರು. ಆನಂದದಾಯಿಯಾದ ಆ ರಾಗದಿಂದ ಮನಸ್ಸಿನ ಮೇಲೆ ಎಂತಹ ಪ್ರಭಾವವಾಯಿತೆಂದು ವರ್ಣಿಸಿ ಹೇಳುವುದು ಕಷ್ಟ.

ನಾನು ಅಮೇರಿಕದ ಅತ್ಯಂತ ಚಂಚಲ ಹಾಗೂ ಪ್ರಸನ್ನಚಿತ್ತರಾದ ಲಾವಣ್ಯವತಿಯರ ಧ್ವನಿ ಕೇಳಿದ್ದೆ. ಅವರ ಬಾಯಿಂದ ಸಾವಿರಾರು ಸಲ ಪ್ರೇಮಾಲಾಪವನ್ನು ಕೇಳಿದ್ದೆ. ಆದರೆ ಈ ರಾಗದಿಂದ ದೊರೆತಂತಹ ಸುಖ, ಸಂತೋಷ, ಆನಂದಗಳು ಬದುಕಿನಲ್ಲಿಯೇ ಎಂದೂ ಪ್ರಾಪ್ತವಾಗಿರಲಿಲ್ಲ. ಸ್ವತಃ ನಾನೂ ಗುಣಗುಣಿಸಿದೆ:

ನಮ್ಮವಗುಣಗಳ ಮನ್ನಿಸೊ, ಪ್ರಭುವೆ.....

ಈ ಮಾತು ನನ್ನ ಪ್ರೀತಿಯ ದೇಶದ್ದೇಯೇ ಎಂದು ಮತ್ತೆ ನನ್ನೆದೆಯಲ್ಲಿ ಉತ್ಸಾಹ ಮೂಡಿತು. ಈ ಜನರೊಡನೆ ಕೂಡಿಕೊಂಡು ಆರು ಮೈಲಿ ದೂರ ಬೆಟ್ಟದ ದಾರಿಯಲ್ಲಿ ನಡೆದು ಪತಿತಪಾವನಿಯೆಂದು ಹೆಸರಾದ ಆ ನದಿಯ ದಂಡೆ ತಲುಪಿದೆ. ಅದರಲ್ಲಿ ಮುಳುಗುವುದೂ ಅದರ ಮಡಿಲಲ್ಲಿ ಸಾಯುವುದೂ ಪರಮ ಸೌಭಾಗ್ಯವೆಂದು ಪ್ರತಿಯೊಬ್ಬ ಹಿಂದುವೂ ತಿಳಿದಿರುವ ನದಿ ಅದು. ಪತಿತಪಾವನಿ, ಭಾಗೀರಥಿ ಗಂಗೆ ನನ್ನ ಪ್ರೀತಿಯ ಹಳ್ಳಿಯಿಂದ ಆರು ಮೈಲಿ ದೂರದಲ್ಲಿ ಹರಿಯುತ್ತಾಳೆ. ಒಂದು ಕಾಲದಲ್ಲಿ ಕುದುರೆ ಹತ್ತಿ ಹೋಗಿ ಗಂಗಾಮಾತೆಯ ದರ್ಶನಮಾಡಿ ಬರಬೇಕೆಂಬ ಆಸೆ ನನ್ನ ಹೃದಯದಲ್ಲಿ ಸದಾ ಇರುತ್ತಿತ್ತು. ಸಹಸ್ರಾರು ಜನ ನದಿಯ ತಣ್ಣನೆಯ ನೀರಿನಲ್ಲಿ ಮುಳುಗುಹಾಕುತ್ತಿರುವುದನ್ನು ನೋಡಿದೆ. ಕೆಲವರು ಮರಳಿನ ಮೇಲೆ ಕುಳಿತು ಗಾಯತ್ರಿಯನ್ನು ಜಪಿಸುತ್ತಿದ್ದರು. ಕೆಲವರು ಹವನಮಾಡುವ ಹವಣಿಕೆಯಲ್ಲಿದ್ದರು. ಕೆಲವರು ಹಣೆಗೆ ತಿಲಕವಿಟ್ಟುಕೊಳ್ಳುತ್ತಿದ್ದರು. ಇನ್ನು ಕೆಲವರು ಸ್ವರಬದ್ಧವಾಗಿ ವೇದಮಂತ್ರ ಹೇಳುತ್ತಿದ್ದರು. ನನ್ನೆದೆಯಲ್ಲಿ ಮತ್ತೆ ಉತ್ಸಾಹ ಉಕ್ಕಿತು. ನಾನು ಜೋರಾಗಿ ಅರಚಿದೆ– "ಹೌದು, ಇದೇ ನನ್ನ ಪ್ರೀತಿಯ ದೇಶ. ಪವಿತ್ರವಾದ ನನ್ನ ಮಾತೃಭೂಮಿ; ಸರ್ವಶ್ರೇಷ್ಠವಾದ ನನ್ನ ಭಾರತ. ಇದರ ದರ್ಶನ ಮಾಡಬೇಕೆಂದೇ ಉತ್ಕಟ ಇಚ್ಛೆಯಿದ್ದುದು. ಈಗ ಇದರ ಪವಿತ್ರವಾದ ಧೂಳಿನ ಕಣವಾಗಬೇಕು."

ನಾನು ಮಹದಾನಂದದಲ್ಲಿ ಮುಳುಗಿದ್ದೆ. ಹಳೆಯ ಕೋಟು ಷರಾಯಿಗಳನ್ನು ಕಿತ್ತೆಸೆದು ಹೋಗಿ ಗಂಗಾಮಾತೆಯ ಮಡಿಲಲ್ಲಿ ಬಿದ್ದೆ–ಮುಗ್ಧಬಾಲಕನೊಬ್ಬ ಇಡೀ ದಿನ ನಿರ್ದಯಿಗಳ ಜೊತೆಯಿದ್ದು ಸಂಜೆಗೆ ತನ್ನ ಮುದ್ದುತಾಯಿಯ ಮಡಿಲಿಗೆ ಓಡಿ ಬಂದು ಅವಳ ಎದೆಗೆ ಅಪ್ಪಿಬಿದ್ದಂತೆ! ಹೌದು, ಈಗ ನಾನು ನನ್ನ ದೇಶದಲ್ಲಿದ್ದೇನೆ. ಇದು ನನ್ನ ಪ್ರೀತಿಯ ಮಾತೃಭೂಮಿ. ಈ ಜನ ನನ್ನ ಅಣ್ಣತಮ್ಮಂದಿರು. ಗಂಗೆ ನನ್ನ ತಾಯಿ.

ಗಂಗೆಯ ದಡಕ್ಕೆ ಹತ್ತಿಕೊಂಡಂತೆ ಒಂದು ಸಣ್ಣ ಜೋಪಡಿ ಕಟ್ಟಿಸಿದೆ. ಈಗ ನನಗೆ ರಾಮನಾಮವನ್ನು ಜಪಿಸುವುದರ ವಿನಹ ಬೇರೆ ಕೆಲಸವಿಲ್ಲ. ನಾನು ದಿನವೂ ಬೆಳಗ್ಗೆ ಸಂಜೆ ಗಂಗಾಸ್ನಾನ ಮಾಡುತ್ತೇನೆ. ಈ ಸ್ಥಳದಲ್ಲೇ ಪ್ರಾಣ ಬಿಡಬೇಕು, ನನ್ನ ಬೂದಿ ಗಂಗಾಮಾತೆಯ ಅಲೆಗಳಿಗೆ ಕಾಣಿಕೆಯಾಗಬೇಕೆಂಬುದು ನನ್ನ ಪ್ರಬಲವಾದ ಇಚ್ಛೆ.

ನನ್ನ ಹೆಂಡತಿ ಮಕ್ಕಳು ಮತ್ತೆ ಮತ್ತೆ ಕರೆಯುತ್ತಾರೆ. ಆದರೆ ನಾನೀಗ ಗಂಗಾಮಾತೆಯ ಮಡಿಲಿನಿಂದ ದೂರವಾಗಲಾರೆ, ನನ್ನ ಪ್ರೀತಿಯ ದೇಶವನ್ನು ಬಿಟ್ಟು ಹಿಂದಿರುಗಲಾರೆ. ನಾನು ಈ ನನ್ನ ಮಣ್ಣನ್ನು ಗಂಗಾಮಾತೆಗೇ ತಲುಪಿಸುತ್ತೇನೆ. ಇನ್ನು ಯಾವ ಪ್ರಾಪಂಚಿಕ ಆಶೆಗಳೂ ನನ್ನನ್ನು ಈ ಸ್ಥಳದಿಂದ ಕದಲಿಸಲಾರವು. ಯಾಕೆಂದರೆ ಇದು ನನ್ನ ಪ್ರೀತಿಯ ದೇಶ, ಪ್ರೀತಿಯ ಮಾತೃಭೂಮಿ. ಈ ಮಾತೃಭೂಮಿಯಲ್ಲಿ ಪ್ರಾಣ ತೊರೆಯಬೇಕೆಂಬುದೊಂದೇ ಈಗ ನನಗಿರುವ ಉತ್ಕಟವಾದ ಇಚ್ಛೆ.

# 17. ರಾಣಿ ಸಾರಂಧಾ

ಕಗ್ಗತ್ತಲ ರಾತ್ರಿಯ ನೀರವತೆಯಲ್ಲಿ ಕಲ್ಲುಬಂಡೆಗೆ ಬಡಿಬಡಿದು ಹರಿಯುವ ಧಸಾನ್ ನದಿಯ ಶಬ್ದ ಬೀಸುವ ಕಲ್ಲಿನ ಘುಮುರ್ ಘುಮುರ್ ಶಬ್ದದಂತೆ ಮನೋಹರವಾಗಿ ಕೇಳಿಸುತ್ತಿದೆ. ನದಿಯ ಬಲದಂಡೆಯ ಮೇಲೆ ಒಂದು ಸಣ್ಣ ದಿಬ್ಬವಿದೆ. ಆ ದಿಬ್ಬದ ಮೇಲೆ ಕಾಡುಮರಗಳಿಂದ ಮುತ್ತಿದ ಒಂದು ಹಳೆಯ ಕಾಲದ ದುರ್ಗವಿದೆ. ದಿಬ್ಬದ ಪೂರ್ವಕ್ಕೆ ಒಂದು ಸಣ್ಣ ಹಳ್ಳಿ. ಈ ದುರ್ಗ ಹಾಗೂ ಹಳ್ಳಿಗಳು ಬುಂದೇಲದ ಒಬ್ಬ ಸರದಾರನ ಕೀರ್ತಿ ಚಿಹ್ನೆಗಳಾಗಿ ನಿಂತಿವೆ. ಶತಶತಮಾನಗಳು ಉರುಳಿಹೋಗಿವೆ. ಬುಂದೇಲ ಖಂಡದಲ್ಲಿ ಅದೆಷ್ಟು ರಾಜ್ಯಗಳು ಹುಟ್ಟಿದವು, ಅಳಿದವು. ಮುಸಲಮಾನರು ಬಂದರು, ಹೋದರು. ಬುಂದೇಲದ ರಾಜರು ಮೇಲೆದ್ದರು, ಕೆಳಬಿದ್ದರು–ಈ ದುರವಸ್ಥೆಗೆ ಸಿಕ್ಕಿ ನರಳದ ಯಾವ ಒಂದು ಹಳ್ಳಿಯಾಗಲೀ ಪ್ರದೇಶವಾಗಲೀ ಬುಂದೇಲಖಂಡದಲ್ಲಿರಲಿಲ್ಲ. ಆದರೆ ಈ ದುರ್ಗದ ಮೇಲೆ ಯಾವ ಶತ್ರುರಾಜನ ವಿಜಯ ಪತಾಕೆಯೂ ಹಾರಲಿಲ್ಲ; ಈ ಹಳ್ಳಿಯಲ್ಲಿ ಯಾವ ವಿದ್ರೋಹವೂ ತಲೆಯೆತ್ತಲಿಲ್ಲ. ಇದು ಅದರ ಸೌಭಾಗ್ಯ!

ಅನಿರುದ್ಧಸಿಂಹ ವೀರ ರಾಜಪೂತ. ಮನುಷ್ಯಮಾತ್ರದವನಿಗೆ ತನ್ನ ಬಾಹುಬಲ ಪರಾಕ್ರಮಗಳ ಹೊರತು ಬೇರೆ ಭರವಸೆಯೇ ಇಲ್ಲದಿದ್ದ ಕಾಲ. ಅದು ಒಂದು ಕಡೆ ಮುಸಲಮಾನ ಸೇನೆ ಕಾಲೂರಿ ನಿಂತಿರುತ್ತಿತ್ತು; ಇನ್ನೊಂದು ಕಡೆ ಶಕ್ತಿಶಾಲಿಗಳಾದ ರಾಜರು ತಮ್ಮ ದುರ್ಬಲ ಬಂಧುಗಳ ಕತ್ತು ಹಿಸುಕುವುದರಲ್ಲಿ ತತ್ಪರರಾಗಿರುತ್ತಿದ್ದರು. ಅನಿರುದ್ಧಸಿಂಹನ ಬಳಿ ಸವಾರ ಹಾಗೂ ಕಾಲಾಳುಗಳು ಸಣ್ಣದಾದರೂ ಜೀವಂತವಾಗಿದ್ದ ದಳವೊಂದಿತ್ತು. ಅವನು ಅದರಿಂದ ತನ್ನ ಕುಲ ಹಾಗೂ ಮರ್ಯಾದೆಗಳನ್ನು ಕಾಪಾಡಿಕೊಳ್ಳುತ್ತಿದ್ದ. ಎಂದೂ ಶಾಂತಿಯಿಂದ ಕುಳಿತಿರುವುದು ಅವನ ಅದೃಷ್ಟದಲ್ಲಿ ಬರೆದಿರಲಿಲ್ಲ. ಮೂರು ವರ್ಷಗಳ ಹಿಂದೆ ಶೀತಲಾದೇವಿಯೊಂದಿಗೆ ಅವನ ಮದುವೆಯಾಗಿತ್ತು. ಆದರೆ ಅನಿರುದ್ಧ ವಿಹಾರದ ದಿನಗಳನ್ನೂ ವಿಲಾಸದ ರಾತ್ರಿಗಳನ್ನೂ ಬೆಟ್ಟಗುಡ್ಡಗಳಲ್ಲಿ ಕಳೆಯುತ್ತಿದ್ದ. ಶೀತಲಾ ಅವನ ಕ್ಷೇಮಚಿಂತನೆ ಮಾಡುತ್ತ ಕುಳಿತಿರುತ್ತಿದ್ದಳು. "ನೀವು ನನ್ನ ಕಣ್ಣಿಂದ ದೂರವಿರಬೇಡಿ; ನನ್ನನ್ನು ನಿಮ್ಮೊಡನೆ ಕರೆದುಕೊಂಡು ಹೋಗಿ, ನಿಮ್ಮೊಡನಿದ್ದರೆ ವನವಾಸವೂ ಚೆನ್ನ, ಇನ್ನು ಈ ವಿಯೋಗವನ್ನು ಸಹಿಸಲಾಗುವುದಿಲ್ಲ" ಎಂದು

ಅವಳು ಅದೆಷ್ಟು ಬಾರಿ ಗಂಡನಿಗೆ ಒತ್ತಾಯ ಮಾಡಿದ್ದಳು; ಅದೆಷ್ಟು ಬಾರಿ ಅವನ ಕಾಲಮೇಲೆ ಬಿದ್ದು ಅತ್ತಿದ್ದಳು. ಪ್ರೀತಿಯಿಂದ ಹೇಳಿದ್ದಳು, ಹಟದಿಂದ ಹೇಳಿದ್ದಳು, ಗೋಗರೆದುಕೊಂಡಿದ್ದಳು. ಆದರೆ ಅನಿರುದ್ಧನದು ಬುಂದೇಲದ ಹುಟ್ಟು; ಶೀತಲಳಿಗೆ ಅವನನ್ನು ಯಾವ ಅಸ್ತ್ರದಿಂದಲೂ ಸೋಲಿಸಲಾಗಿರಲಿಲ್ಲ.

## 2

ಕತ್ತಲ ರಾತ್ರಿ. ಇಡೀ ಜಗತ್ತು ಮಲಗಿತ್ತು. ಆಕಾಶದಲ್ಲಿ ನಕ್ಷತ್ರಗಳಷ್ಟೇ ಎಚ್ಚರವಾಗಿದ್ದವು. ಶೀತಲಾದೇವಿ ಮಂಚದ ಮೇಲೆ ಹೊರಳಾಡುತ್ತಿದ್ದಳು. ಅವಳ ನಾದಿನಿ ಸಾರಂಧಾ ಕೆಳಗೆ ನೆಲದ ಮೇಲೆ ಕುಳಿತು ಮಧುರಸ್ವರದಲ್ಲಿ ಹಾಡುತ್ತಿದ್ದಳು:

**ರಘುವೀರನಿಲ್ಲದೆಯ ಕಳೆಯದೀ ರಾತ್ರಿ**

ಶೀತಲಾ ಹೇಳಿದಳು– "ನನ್ನ ಎದೆ ಉರಿಸಬೇಡ. ಯಾಕೆ ನಿನಗೆ ನಿದ್ರೆ ಹತ್ತುತ್ತಿಲ್ಲವೇನು ?"

ಸಾರಂಧಾ– "ನಿನ್ನನ್ನು ಮಲಗಿಸೋಕ್ಕೆ ಅಂತ ಲಾಲಿ ಹಾಡ್ತಿದೀನಿ !"

ಶೀತಲಾ– "ನನ್ನ ಕಣ್ಣಿಂದ ನಿದ್ರೆ ಹಾರಿಹೋಗಿದೆ."

ಸಾರಂಧಾ– "ಯಾರನ್ನೋ ಹುಡುಕೋಕ್ಕೆ ಹೋಗಿರಬೇಕು !"

ಅಷ್ಟರಲ್ಲಿ ಬಾಗಿಲು ತೆರೆಯಿತು. ಬಲವಾದ ಮೈಕಟ್ಟಿನ ಸುಂದರ ಪುರುಷನೊಬ್ಬ ಒಳಬಂದ. ಅವನೇ ಅನಿರುದ್ಧ. ಅವನ ಬಟ್ಟೆ ಒದ್ದೆಯಾಗಿತ್ತು. ಮೈಮೇಲೆ ಆಯುಧವಾವುದೂ ಇರಲಿಲ್ಲ. ಶೀತಲಾ ಮಂಚದಿಂದೆದ್ದು ನೆಲದ ಮೇಲೆ ಕುಳಿತುಕೊಂಡಳು.

ಸಾರಂಧಾ ಕೇಳಿದಳು– "ಅಣ್ಣಾ, ಬಟ್ಟೆ ಏಕೆ ಒದ್ದೆಯಾಗಿದೆ ?"

ಅನಿರುದ್ಧ– "ಈಜಿ ನದಿ ದಾಟಿ ಬಂದೆ."

ಸಾರಂಧಾ– "ಆಯುಧವೆಲ್ಲಿ ?"

ಅನಿರುದ್ಧ– "ಕಸಿದುಕೊಂಡರು."

ಸಾರಂಧಾ– "ಜೊತೆಯವರು ?"

ಅನಿರುದ್ಧ– "ಎಲ್ಲರೂ ವೀರಗತಿ ಪಡೆದರು."

ಶೀತಲಾ ಮೆಲುದನಿಯಲ್ಲಿ 'ದೇವರೇ ಕಾಪಾಡಿದ' ಎಂದಳು. ಆದರೆ ಸಾರಂಧಳ ಹುಬ್ಬು ಗಂಟಿಕ್ಕಿತು; ಮುಖ ಗರ್ವದಿಂದ ಮಿಂಚತೊಡಗಿತು. ಅವಳಂದಳು– "ಅಣ್ಣಾ, ನಿನ್ನಿಂದ ಕುಲದ ಮರ್ಯಾದೆ ಹೋಯಿತು. ಹೀಗೆಂದೂ ಆಗಿರಲಿಲ್ಲ."

ಸಾರಂಧಳಿಗೆ ಅಣ್ಣನೆಂದರೆ ಅಗಾಧ ಪ್ರೀತಿ. ಅವಳ ಬಾಯಿಂದ ಈ ಧಿಕ್ಕಾರದ ಮಾತನ್ನು ಕೇಳಿ ಅನಿರುದ್ಧ ವ್ಯಥೆ ಹಾಗೂ ನಾಚಿಕೆಗಳಿಂದ ವಿಕಲನಾದ. ಕ್ಷಣಕಾಲ ಪ್ರೀತಿಯ ಮುಸುಕಿನಲ್ಲಿ ಅದುಮಿಹೋಗಿದ್ದ ಅವನ ವೀರಾಗ್ನಿ ಮತ್ತೆ ಜ್ವಲಿಸತೊಡಗಿತು. ನಿಂತ ಕಾಲಿನಲ್ಲಿ ಅವನು ಹಿಂದಿರುಗಿದ. ಹೋಗುವ ಮುನ್ನ

ತಂಗಿಗೆ ಹೇಳಿದ– "ಸಾರಂಧಾ, ನೀನು ನನ್ನಲ್ಲಿ ಸದಾಕಾಲಕ್ಕಾಗಿ ಜೀವ ತುಂಬಿದೆ. ಇದನ್ನು ನಾನು ಎಂದಿಗೂ ಮರೆಯುವುದಿಲ್ಲ."

ಕತ್ತಲ ರಾತ್ರಿ. ಆಕಾಶಮಂಡಳದಲ್ಲಿ ನಕ್ಷತ್ರಗಳ ಪ್ರಕಾಶ ಮಂಕಾಗಿತ್ತು. ಅನಿರುದ್ಧ ಕೋಟೆಯ ಹೊರಗಡೆ ಬಂದ. ಕ್ಷಣದಲ್ಲಿ ನದಿ ದಾಟಿ ಎದುರು ದಂಡೆ ತಲುಪಿದ. ಮತ್ತೆ ಕತ್ತಲಿನಲ್ಲಿ ಮರೆಯಾಗಿಹೋದ. ಶೀತಲಾ ಅವನ ಹಿಂದೆಹಿಂದೆಯೇ ಕೋಟೆಯ ಗೋಡೆಯವರೆಗೂ ಬಂದಳು. ಅವನು ಗೋಡೆ ಹಾರಿ ಹೊರನೆಗೆದಾಗ ಆ ವಿರಹಿಣಿ ಒಂದು ಬಂಡೆಯ ಮೇಲೆ ಕುಳಿತು ಅಳತೊಡಗಿದಳು.

ಅಷ್ಟರಲ್ಲಿ ಸಾರಂಧಳೂ ಅಲ್ಲಿ ಬಂದಳು. ಶೀತಲಾ ಹೆಣ್ಣುನಾಗರದಂತೆ ಸೆಟೆದು ಹೇಳಿದಳು– "ಏನು, ಮರ್ಯಾದೆ ಅನ್ನೋದು ನಿನಗೆ ಅಷ್ಟು ಪ್ರಿಯವೆ ?"

ಸಾರಂಧಾ– "ಹೌದು."

ಶೀತಲಾ– "ನಿನ್ನ ಗಂಡನಾಗಿದ್ದಿದ್ದರೆ ಎದೇಲಿ ಬಚ್ಚಿಟ್ಟುಕೊಳ್ಳುತ್ತಿದ್ದೆ."

ಸಾರಂಧಾ– "ಇಲ್ಲ, ಎದೆಗೆ ಚೂರಿ ಚುಚ್ಚುತ್ತಿದ್ದೆ."

ಶೀತಲಾ ಸಿಡಿದು ಹೇಳಿದಳು– "ರವಿಕೆಯೊಳಗೆ ಮುಚ್ಚಿಟ್ಟುಕೊಂಡು ಓಡಾಡ್ತಿ, ನೋಡ್ತಿರು. ನನ್ನ ಮಾತನ್ನ ಗಂಟುಕಟ್ಟಿಟ್ಟುಕೊ."

ಸಾರಂಧಾ– "ಅಂಥ ದಿನ ಬಂದರೆ ನಾನೂ ನನ್ನ ಮಾತನ್ನ ನಡಸಿ ತೋರಿಸ್ತೀನಿ."

ಈ ಘಟನೆ ನಡೆದ ಮೂರು ತಿಂಗಳ ಮೇಲೆ ಅನಿರುದ್ಧ ಮಹದೌನಿಯನ್ನು ಗೆದ್ದು ಹಿಂದಿರುಗಿದ. ವರ್ಷದೊಳಗೆ ಓರ್ಛೆಯ ಚಂಪತರಾಯನಿಗೆ ಕೊಟ್ಟು ಸಾರಂಧಳ ಮದುವೆಯಾಯಿತು. ಆದರೆ ಅವತ್ತಿನ ಮಾತು ಮಾತ್ರ ಇಬ್ಬರು ಹೆಂಗಸರ ಎದೆಯಲ್ಲಿಯೂ ಮುಳ್ಳಿನಂತೆ ಚುಚ್ಚುತ್ತಿತ್ತು.

## 3

ರಾಜಾ ಚಂಪತರಾಯ್ ಪ್ರತಿಭಾವಂತ ವ್ಯಕ್ತಿ. ಇಡೀ ಬುಂದೇಲಕುಲ ಅವನ ಪ್ರಭುತ್ವವನ್ನು ಒಪ್ಪಿಕೊಂಡು, ಅವನಿಗಾಗಿ ಪ್ರಾಣಕೊಡಲು ಸಿದ್ಧವಾಗಿತ್ತು. ಪಟ್ಟಕ್ಕೆ ಬಂದೊಡನೆಯೇ ಅವನು ಮೊಗಲ ಬಾದಶಹನಿಗೆ ಕರ ಕೊಡುವುದನ್ನು ನಿಲ್ಲಿಸಿದ. ತನ್ನ ಬಾಹುಬಲದಿಂದ ರಾಜ್ಯವನ್ನು ವಿಸ್ತರಿಸತೊಡಗಿದ. ಮುಸಲಮಾನರ ಸೇನೆ ಮತ್ತೆ ಮತ್ತೆ ಅವನ ಮೇಲೆ ದಾಳಿ ಮಾಡುತ್ತಿತ್ತು; ಆದರೆ ಪ್ರತಿ ಸಲವೂ ಸೋತು ಹಿಂದಿರುಗುತ್ತಿತ್ತು.

ಅನಿರುದ್ಧ ಸಾರಂಧಳನ್ನು ಚಂಪತರಾಯನಿಗೆ ಕೊಟ್ಟು ಮದುವೆ ಮಾಡಿದುದು ಇದೇ ಸಮಯದಲ್ಲಿ. ಸಾರಂಧಳ ಬಯಕೆ ಈಡೇರಿತ್ತು. ತನ್ನ ಗಂಡ ಬುಂದೇಲರ ಕುಲತಿಲಕನಾಗಿರಬೇಕೆಂಬ ಅವಳ ಅಭಿಲಾಷೆ ಪೂರೈಸಿತ್ತು. ಚಂಪತರಾಯನ ರಾಣೀವಾಸದಲ್ಲಿ ಐವರು ರಾಣಿಯರಿದ್ದರೂ ತನ್ನನ್ನು ಮನಸಾರೆ ಪೂಜಿಸುವವಳು

ಸಾರಂಧಳೊಬ್ಬಳೇ ಎಂಬುದು ಅವನಿಗೂ ಬೇಗನೆ ಮನವರಿಕೆಯಾಯಿತು.

ಚಂಪತರಾಯ ಮೊಗಲ ಬಾದಶಹನಿಗೆ ಆಶ್ರಿತನಾಗಿರಬೇಕಾಗಿ ಬಂದ ಕೆಲವು ಘಟನೆಗಳು ನಡೆದವು. ಅವನು ರಾಜ್ಯವನ್ನು ತಮ್ಮ ಪಹಾಡಸಿಂಹನ ವಶಕ್ಕೆ ಒಪ್ಪಿಸಿ ದೆಹಲಿಗೆ ಹೊರಟುಹೋದ. ಆಗ ಶಾಹಜಹಾನನ ಆಡಳಿತದ ಕೊನೆಗಾಲ. ಯುವರಾಜ ದಾರಾ ಶಿಕೋ ರಾಜ್ಯದ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ. ಯುವರಾಜನ ಕಣ್ಣಿನಲ್ಲಿ ಶೀಲ, ಚಿತ್ತದಲ್ಲಿ ಔದಾರ್ಯ ತುಂಬಿದ್ದವು. ಅವನು ಚಂಪತರಾಯನ ಸಾಹಸದ ಕಥೆಗಳನ್ನು ಕೇಳಿದ್ದ; ಆದಕ್ಕಾಗಿ ಅವನಿಗೆ ಆದರ ಸನ್ಮಾನ ಮಾಡುತ್ತಿದ್ದ. ಒಂಬತ್ತು ಲಕ್ಷ ರೂಪಾಯಿಯ ಆದಾಯವಿದ್ದ ಕಾಲಪಿಯ ಅಮೂಲ್ಯ ಜಹಗೀರನ್ನು ಅವನಿಗೆ ಬಳುವಳಿಯಾಗಿ ಕೊಟ್ಟಿದ್ದ. ದಿನನಿತ್ಯದ ಜಗಳ ಕದನಗಳಿಂದ ವಿಶ್ರಾಂತಿ ದೊರೆತು ಜೊತೆಗೇ ಭೋಗವಿಲಾಸಗಳು ಹೆಚ್ಚಿದುದು ಚಂಪತರಾಯನ ಜೀವನದಲ್ಲಿ ಇದೇ ಮೊದಲು. ಹಗಲೂರಾತ್ರಿ ಸುಖಸಂತೋಷಗಳದ್ದೇ ಮಾತು ನಡೆಯುತ್ತಿತ್ತು. ರಾಜ ವಿಲಾಸದಲ್ಲಿ ಮುಳುಗಿದ್ದ; ರಾಣಿಯರು ರತ್ನಖಚಿತವಾದ ಒಡವೆಗಳಿಂದ ಮುಗ್ಧರಾಗಿದ್ದರು. ಆದರೆ ಸಾರಂಧಾ ಮಾತ್ರ ದುಃಖದಿಂದ ಮುದುಡಿಕೊಂಡಿರುತ್ತಿದ್ದಳು. ಅವಳು ಈ ಎಲ್ಲದರಿಂದಲೂ ದೂರವಿರುತ್ತಿದ್ದಳು. ಅವಳಿಗೆ ಈ ನೃತ್ಯಗಾನ ಸಮಾರಂಭಗಳು ಶೂನ್ಯವಾಗಿ ಕಾಣಿಸುತ್ತಿದ್ದವು.

ಒಂದು ದಿನ ಚಂಪತರಾಯ ಸಾರಂಧಳಿಗೆ ಹೇಳಿದ– "ಸಾರನ್, ನೀನು ಯಾಕಿಷ್ಟು ಖಿನ್ನಳಾಗಿದ್ದಿ? ನೀನು ನಕ್ಕಿದ್ದನ್ನೇ ನಾನು ಕಂಡಿಲ್ಲ. ಯಾಕೆ ನನ್ನ ಮೇಲೆ ಕೋಪವೆ?"

ಸಾರಂಧಳ ಕಣ್ಣಿನಲ್ಲಿ ನೀರು ತುಂಬಿತು. ಅವಳೆಂದಳು– "ಸ್ವಾಮಿ, ನೀವು ಹಾಗೇಕೆ ಯೋಚಿಸ್ತೀರಿ. ನೀವು ನಗುನಗುತ್ತಿರುವಲ್ಲಿ ನನಗೂ ಸಂತೋಷವೆ!"

ಚಂಪತರಾಯ– "ನಾನಿಲ್ಲಿಗೆ ಬಂದಾಗಿನಿಂದ ನಿನ್ನ ಮುಖದ ಮೇಲೆ ಮನಸ್ಸಿಗೆ ಸಂತೋಷ ಕೊಡುವಂಥ ನಗೆಯನ್ನೇ ನೋಡಿಲ್ಲ. ನೀನೆಂದೂ ನಿನ್ನ ಕೈಯಿಂದ ನನಗೆ ವೀಳಯ ತಿನ್ನಿಸಿಲ್ಲ, ನನ್ನ ಪೇಟವನ್ನ ನೇವರಿಸಿಲ್ಲ, ನನ್ನ ಮೈಗೆ ಆಯುಧ ತೊಡಿಸಿಲ್ಲ. ಪ್ರೇಮಲತೆಯೇನೂ ಬಾಡತೊಡಗಿಲ್ಲ ತಾನೆ?"

ಸಾರಂಧಾ– "ನನ್ನಲ್ಲಿ ಉತ್ತರವಿಲ್ಲದಿರೋ ಅಂಥ ಪ್ರಶ್ನೆ ಕೇಳ್ತಿದೀರಿ. ಈಚೀಚೆಗೆ ನನ್ನ ಮನಸ್ಸು ವಾಸ್ತವವಾಗಿ ಖಿನ್ನವಾಗಿರುತ್ತದೆ. ಸಂತೋಷದಿಂದ ಇರಬೇಕು ಅಂತ ಬಹಳವಾಗಿ ಆಶಿಸ್ತೀನಿ. ಆದರೆ ಎದೆಯ ಮೇಲೆ ಯಾವದೋ ಭಾರ ಹೊರಿಸಿದಂತಿರುತ್ತೆ."

ಸ್ವತಃ ಚಂಪತರಾಯ ಆನಂದದಲ್ಲಿ ಮಗ್ನನಾಗಿದ್ದ ಕಾರಣ ಸಾರಂಧಳ ಅಸಂತುಷ್ಟಿಗೆ ಯಾವ ಕಾರಣವೂ ಇಲ್ಲವೆಂದು ಅವನ ಆಲೋಚನೆ. ಅವನು ಹುಬ್ಬುಗಂಟಿಕ್ಕಿ ಹೇಳಿದ– "ನೀನು ಖಿನ್ನಳಾಗಿರೋದಕ್ಕೆ ಏನಾದರೂ ವಿಶೇಷ ಕಾರಣ ಇರಬಹುದು ಅಂತ ನನಗೆ ಅನ್ನಿಸ್ತಿಲ್ಲ. ಇಲ್ಲಿಲ್ಲದ ಯಾವ ಸುಖ ಓರ್ಛೆಯಲ್ಲಿತ್ತು ಹೇಳು."

ಸಾರಂಧಳ ಮುಖ ಕೆಂಪಾಯಿತು– "ನಾನು ಏನಾದರೂ ಹೇಳಿದರೆ ನೀವು ಕೋಪಿಸಿಕೊಳ್ಳೋಲ್ಲ ತಾನೆ?"

ಚಂಪತರಾಯ– "ಇಲ್ಲ, ಸಂತೋಷದಿಂದ ಹೇಳು."

ಸಾರಂಧಾ– "ಓರ್ಛೆಯಲ್ಲಿ ನಾನು ಒಬ್ಬ ರಾಜನ ರಾಣಿಯಾಗಿದ್ದೆ. ಇಲ್ಲಿ ಒಬ್ಬ ಜಹಗೀರದಾರನ ದಾಸಿಯಾಗಿದೀನಿ. ಓರ್ಛೆಯಲ್ಲಿ ನಾನು ಅವಧದಲ್ಲಿ ಕೌಶಲ್ಯೆ ಹೇಗೋ ಹಾಗಿದ್ದೆ. ಇಲ್ಲಿ ಬಾದಶಹರ ಆಳೊಬ್ಬನ ಹೆಂಡತಿಯಾಗಿದೀನಿ. ಯಾವ ಬಾದಶಹನ ಮುಂದೆ ಇವತ್ತು ನೀವು ಮರ್ಯಾದೆಯಿಂದ ತಲೆ ತಗ್ಗಿಸ್ತೀರೋ ಅವನು ನಿನ್ನೆಯವರೆಗೆ ನಿಮ್ಮ ಹೆಸರು ಕೇಳಿದರೆ ನಡುಗುತ್ತಿದ್ದ. ರಾಣಿಯಾಗಿದ್ದವಳು ದಾಸಿಯಾಗಿಯೂ ಪ್ರಸನ್ನ ಚಿತ್ತಳಾಗಿರೋದು ನನ್ನ ಶಕ್ತಿಗೆ ಮೀರಿದ್ದು. ನೀವು ಈ ಪದವಿ ವಿಲಾಸಗಳನ್ನು ತುಂಬ ದುಬಾರಿ ಬೆಲೆ ತೆತ್ತು ಕೊಂಡಿದ್ದೀರಿ."

ಚಂಪತರಾಯನ ಕಣ್ಣಿಗೆ ಕಟ್ಟಿದ್ದ ಮುಸುಕು ಹರಿಯಿತು. ಅವನು ಇದುವರೆಗೆ ಸಾರಂಧಳ ಆತ್ಮದ ಹಿರಿಮೆಯನ್ನು ಅರಿತಿರಲಿಲ್ಲ. ತಬ್ಬಲಿ ಬಾಲಕನೊಬ್ಬ ತಾಯಿಯ ವಿಷಯ ಕೇಳಿ ಕಣ್ಣೀರಿಡುವಂತೆ ಚಂಪತರಾಯ ಓರ್ಛೆಯನ್ನು ನೆನೆದು ಕಣ್ಣೀರಿಟ್ಟ. ಆದರ ತುಂಬಿದ ಪ್ರೀತಿಯಿಂದ ಅವನು ಸಾರಂಧಳನ್ನು ಅಪ್ಪಿಕೊಂಡ.

ಕೀರ್ತಿಧನಗಳ ಅಭಿಲಾಷೆ ಅವನನ್ನು ಯಾವ ಪಾಳೂರಿನಿಂದ ಎಳೆದು ತಂದಿತ್ತೋ ಮತ್ತೆ ಅದೇ ಪಾಳೂರಿನ ಚಿಂತೆ ಅವನನ್ನು ಅವತ್ತಿನಿಂದ ಕಾಡತೊಡಗಿತು.

## 4

ಚಂಪತರಾಯ ಹಿಂದಿರುಗಿ ಬಂದದ್ದರಿಂದ ಬುಂದೇಲಖಂಡ ಕಳೆದುಹೋದ ಮಗನನ್ನು ಪಡೆದ ತಾಯಿಯಂತೆ ಪರಮ ಸಂತುಷ್ಟವಾಯಿತು. ಓರ್ಛೆಯ ಭಾಗ್ಯ ಅರಳಿತು. ನಗಾರಿ ಬಾರಿತೊಡಗಿತು. ಸಾರಂಧಳ ಕಣ್ಣಿನಲ್ಲಿ ಮತ್ತೊಮ್ಮೆ ಕುಲದ ಅಭಿಮಾನ ಬಿಂಬಿಸ ತೊಡಗಿತು !

ಓರ್ಛೆಗೆ ಬಂದು ತಿಂಗಳುಗಳು ಕಳೆದವು. ಈ ನಡುವೆ ಶಾಹಜಹಾನ್ ಕಾಹಿಲೆಬಿದ್ದ. ಮೊದಲೇ ಅಸೂಯೆಯ ಬೆಂಕಿ ಉರಿಯುತ್ತಿತ್ತು. ಈ ಸುದ್ದಿ ಕೇಳಿ ಆ ಜ್ವಾಲೆ ಪ್ರಪಂಚವಾಯಿತು. ಯುದ್ಧದ ತಯಾರಿ ನಡೆಯಿತು. ಯುವರಾಜ ಮುರಾದ ಮತ್ತು ಮುಹಿಯುದ್ದೀನರು ತಮ್ಮ ತಮ್ಮ ಸೈನ್ಯ ಸಜ್ಜು ಮಾಡಿಕೊಂಡು ದಖನ್ನಿನಿಂದ ಹೊರಟರು. ಮಳೆಗಾಲ. ಫಲವತಿಯಾದ ಭೂಮಿ ಬಣ್ಣಬಣ್ಣದ ರೂಪ ತಾಳಿ ತನ್ನ ಸೌಂದರ್ಯವನ್ನು ಮೆರೆಯತೊಡಗಿದಳು.

ಮುರಾದ ಮತ್ತು ಮುಹಿಯುದ್ದೀನರು ಉತ್ಸಾಹದಿಂದ ಹೆಜ್ಜೆಹಾಕುತ್ತ ಹೊರಟು ಬಂದಿದ್ದರು. ಧೌಲಪುರದ ಹತ್ತಿರ ಚಂಬಲದ ದಡವನ್ನು ಮುಟ್ಟುವಾಗ ಅಲ್ಲಿ ಅವರಿಗೆ ಬಾದಶಹನ ಸೈನ್ಯ ಸಜ್ಜಾಗಿ ತಮ್ಮ ಬರವನ್ನೇ ಎದುರು ನೋಡುತ್ತಿರುವುದು ಕಂಡಿತು.

ಯುವರಾಜರಿಬ್ಬರಿಗೂ ಈಗ ಯೋಚನೆಗಿಟ್ಟುಕೊಂಡಿತು. ಅವರ ಮುಂದೆ ಪ್ರವಾಹ ಉಕ್ಕಿಬಂದು ದಾಟಲು ಅಸಾಧ್ಯವಾದ ನದಿಯಿತ್ತು. ಅಸಹಾಯಕರಾಗಿ ಅವರು ಮುಳುಗುತ್ತಿರುವ ತಮ್ಮ ನಾವೆಯನ್ನು ಆಚೆ ದಡ ಮುಟ್ಟಿಸೆಂದು

ಚಂಪತರಾಯನಿಗೆ ಸಂದೇಶ ಕಳಿಸಿದರು.

ರಾಜಾ ಮಹಲಿಗೆ ಹೋಗಿ "ಇದಕ್ಕೇನು ಉತ್ತರ ಕೊಡಲಿ" ಎಂದು ಸಾರಂಧಳನ್ನು ಕೇಳಿದ.

"ನೀವು ಸಹಾಯ ಮಾಡಲೇಬೇಕಾಗುತ್ತೆ" ಎಂದಳು ಸಾರಂಧಾ.

ಚಂಪತರಾಯ– "ಇವರಿಗೆ ಸಹಾಯ ಮಾಡೋದೆಂದರೆ ದಾರಾಶಿಕೋನ ಜೊತೆ ವೈರ ಕಟ್ಟಿಕೊಂಡಂತೆಯೇ ಸರಿ."

ಸಾರಂಧಾ– "ಅದೇನೋ ನಿಜ! ಆದರೆ ಕೈಯೊಡ್ಡಿದವರಿಗೆ ನೆರವು ನೀಡುವ ಧರ್ಮವೂ ಒಂದಿದೆಯಲ್ಲ!"

ಚಂಪತರಾಯ– "ನೀನು ಸರಿಯಾಗಿ ಯೋಚಿಸಿ ಉತ್ತರ ಕೊಡಲಿಲ್ಲ. ಪ್ರಿಯೆ"

ಸಾರಂಧಾ– "ಇದು ಕಠಿಣವಾದ ಮಾರ್ಗವೆಂದು ನನಗೆ ಚೆನ್ನಾಗಿ ಗೊತ್ತಿದೆ. ಈಗ ನಾವು ನಮ್ಮ ಯೋಧರ ರಕ್ತವನ್ನು ನೀರಿನಂತೆ ಹರಿಸಬೇಕಾಗುತ್ತದೆ. ರಕ್ತ ಹರಿಸೋಣ, ಅದರಿಂದ ಚಂಬಲನದಿಯ ಅಲೆಗಳನ್ನು ಕೆಂಪಾಗಿಸೋಣ. ನದಿಯ ಧಾರೆ ಹರಿಯುತ್ತಿರುವವರೆಗೂ ಅದು ನಮ್ಮ ವೀರರ ಕೀರ್ತಿಗಾನ ಮಾಡುತ್ತಿರುವುದು ಖಂಡಿತ. ಬುಂದೇಲವನ್ನು ನೆನಸಿಕೊಳ್ಳುವ ಒಬ್ಬನಾದರೂ ವ್ಯಕ್ತಿ ಉಳಿದಿರುವವರೆಗೂ ಆ ರಕ್ತ ಬಿಂದು ಅವನ ಹಣೆಯ ಮೇಲೆ ಕೇಸರೀತಿಲಕವಾಗಿ ಹೊಳೆಯುತ್ತಿರುತ್ತೆ."

ವಾಯುಮಂಡಲದಲ್ಲಿ ಮೇಘರಾಜನ ಸೇನೆ ಮುತ್ತುತ್ತಿತ್ತು. ಓರ್ಛೆಯ ದುರ್ಗದಿಂದ ಬುಂದೇಲರ ಒಂದು ಕಾರ್ವಾಡ ಎದ್ದು ಚಂಬಲದ ಕಡೆ ವೇಗವಾಗಿ ಹೋರಟಿತು. ಒಬ್ಬೊಬ್ಬ ಸಿಪಾಯಿಯೂ ವೀರರಸ ತುಂಬಿ ಬೀಗುತ್ತಿದ್ದ. ಸಾರಂಧಾ ರಾಜಕುಮಾರರಿಬ್ಬರನ್ನೂ ಅಪ್ಪಿಕೊಂಡಳು; ರಾಜನಿಗೆ ವೀಳಯ ಕೊಟ್ಟು ಹೇಳಿದಳು- "ಬುಂದೇಲರ ಮರ್ಯಾದೆ ಈಗ ನಿಮ್ಮ ಕೈಯಲ್ಲಿದೆ."

ಇವತ್ತು ಸಾರಂಧಳ ಅಂಗಾಂಗವೂ ನಗುತ್ತಿದೆ; ಹೃದಯ ಉಲ್ಲಸಿತವಾಗಿದೆ. ಬುಂದೇಲರ ಸೈನ್ಯವನ್ನು ಕಂಡು ಯುವರಾಜ ಮುರಾದ ಮುಹಿಯುದ್ದೀನರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಚಂಪತರಾಯನಿಗೆ ಅಲ್ಲಿನ ಒಂದೊಂದು ಅಂಗುಲ ನೆಲವೂ ಪರಿಚಿತವಾಗಿತ್ತು. ಅವನು ಬುಂದೇಲರನ್ನು ಮರೆಯಲ್ಲಿರಿಸಿ ತಾನು ಯುವರಾಜರ ಸೇನೆಯಲ್ಲಿ ಸಜ್ಜುಗೊಳಿಸಿ ನದಿಯ ದಂಡೆಯಲ್ಲಿಯೇ ಪಶ್ಚಿಮದ ಕಡೆ ನಡೆದ. ಶತ್ರುಗಳು ಬೇರೆ ಘಾಟಿನಿಂದ ನದಿಗಿಳಿಯುವರೆಂದು ದಾರಾಶಿಕೋಗೆ ಭ್ರಮೆಯಾಯಿತು. ಅವನು ಆ ಘಾಟಿನಿಂದ ತನ್ನ ಸೇನೆಯನ್ನು ವಾಪಸು ಕರೆದುಕೊಂಡ. ಘಾಟಿನಲ್ಲಿ ಅಡಗಿ ಕುಳಿತಿದ್ದ ಬುಂದೇಲರು ಇದಕ್ಕೇ ಕಾಯುತ್ತಿದ್ದರು. ಅವರು ತಕ್ಷಣ ಹೊರಬಂದು ಕುದುರೆಗಳನ್ನು ನದಿಗಿಳಿಸಿದರು. ಚಂಪತರಾಯ ದಾರಾಶಿಕೋನ ಕಣ್ಣಿನ ಮಣ್ಣೆರಚಿ ತನ್ನ ಸೇನೆಯನ್ನು ತಿರುಗಿಸಿದ; ಬುಂದೇಲರ ಹಿಂದೆ ಹಿಂದೆ ಬಂದು ಅವರನ್ನು ನದಿ ದಾಟಿಸಿದ. ಈ ಕಠಿಣವಾದ ನಡೆಯಿಂದಾಗಿ ಏಳು ಗಂಟೆಗಳ ವಿಳಂಬವಾಯಿತು. ಆದರೆ ಹೋಗಿ ನೋಡುವಾಗ ಏಳುನೂರು ಜನ ಬುಂದೇಲರ ಹೆಣ ಉರುಳಿತ್ತು.

ತಮ್ಮ ರಾಜನನ್ನು ನೋಡಿದಾಕ್ಷಣ ಬುಂದೇಲರ ಧೈರ್ಯ ಉಕ್ಕಿಬಂತು. ಯುವರಾಜರ ಸೇನೆಯೂ 'ಅಲ್ಲಾ ಹೋ ಅಕ್ಬರ್' ಎನ್ನುತ್ತ ಮುತ್ತಿಗೆ ಹಾಕಿತು. ಬಾದಶಹನ ಸೈನ್ಯದಲ್ಲಿ ಗಡಿಬಿಡಿಯುಂಟಾಗಿ ಅದು ಭಿನ್ನಭಿನ್ನವಾಯಿತು. ಜೊತೆಗೆ ಕೈಕಾಳಗ ಮೊದಲಾಗಿ ಸಂಜೆಯವರೆಗೂ ನಡೆಯಿತು. ರಣಭೂಮಿ ರಕ್ತದಿಂದ ಕೆಂಪಾಯಿತು; ಆಕಾಶ ಕತ್ತಲೆಯಿಂದ ಕಪ್ಪಾಯಿತು. ಭಯಂಕರ ಹೋರಾಟ ನಡೆದಿತ್ತು. ಬಾದಶಹನ ಸೇನೆ ಯುವರಾಜರ ಸೇನೆಯನ್ನು ಸೋಲಿಸತೊಡಗಿತ್ತು. ಇದ್ದಕ್ಕಿದ್ದಂತೆ ಪಶ್ಚಿಮದಿಂದ ಬುಂದೇಲರ ಇನ್ನೊಂದು ತುಕಡಿ ಹೊರಟು ಬಂದು ಬಾದಶಹನ ಸೈನ್ಯವನ್ನು ಹಿಂದಿನಿಂದ ಮುತ್ತಿತು. ಆ ಮುತ್ತಿಗೆ ಏಟಿಗೆ ಬಾದಶಹನ ಸೈನ್ಯ ತತ್ತರಿಸಿತು; ಗೆಲುವು ಕೈಬಿಟ್ಟುಹೋಯಿತು. ಈ ದೈವೀಸಹಾಯ ಎಲ್ಲಿಂದ ಒದಗಿತೆಂದು ಜನರಿಗೆ ಕುತೂಹಲ. ವಿಜಯದೇವತೆಯೋ ಯುವರಾಜರ ನೆರವಿಗೆ ಬಂದಳೆಂದು ಸರಳಸ್ವಭಾವದ ಜನ ನಂಬಿಕೊಂಡರು. ಆದರೆ ರಾಜಾ ಚಂಪತರಾಯ ಹತ್ತಿರ ಹೋದಾಗ ರಾಣಿ ಸಾರಂಧಾ ಕುದುರೆಯಿಂದಿಳಿದು ಅವನ ಕಾಲುಮುಟ್ಟಿ ನಮಸ್ಕಾರ ಮಾಡಿದಳು. ರಾಜನಿಗೆ ಅತ್ಯಂತ ಆನಂದವಾಯಿತು. ಸಾರಂಧಳೆಂದರೆ ಇವಳು !

ಆಗ ರಣಭೂಮಿಯ ದೃಶ್ಯ ಅತ್ಯಂತ ದುಃಖಮಯವಾಗಿತ್ತು. ಕೇವಲ ಕೊಂಚ ಹೊತ್ತಿಗೆ ಮುಂಚೆ ಸಜ್ಜಾದ ವೀರರ ದಳವಿದ್ದಲ್ಲಿ ಈಗ ಹೆಣಗಳು ಉರುಳಿದ್ದವು. ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಅನಾದಿಕಾಲದಿಂದಲೂ ಅಣ್ಣತಮ್ಮಂದಿರ ಹತ್ಯೆ ಮಾಡುತ್ತ ಬಂದಿದ್ದಾನೆ !

ಜಯಶಾಲಿಯಾದ ಸೈನ್ಯ ಈಗ ಲೂಟಿಗೆ ನುಗ್ಗಿತು. ಮೊದಲು ಯುದ್ಧವಲ್ಲಾವಲೋ ಗಂಡಸು ಗಂಡಸರು ಹೋರಾಡುತ್ತಿದ್ದರು; ಅದು ವೀರ ಪರಾಕ್ರಮಗಳ ಚಿತ್ರವಾಗಿತ್ತು. ಈಗ ಯುದ್ಧಾನಂತರ ಇದು ನೀಚತೆ ದುರ್ಬಲತೆಗಳ ದುಃಖಮಯವಾದ ಇನ್ನೊಂದು ಚಿತ್ರ. ಆಗ ಮನುಷ್ಯ ಪಶುವಾಗಿದ್ದ; ಈಗ ಅವನು ಪಶುವನ್ನೂ ಮೀರಿಸಿದ್ದ.

ಹೀಗೆ ಲೂಟಿಸುಲಿಗೆಗಳು ನಡೆದಿದ್ದಾಗ ಜನರಿಗೆ ಬಾದಶಹನ ಸೇನಾಪತಿ ವಲೀ ಬಹಾದ್ದೂರ್‌ಖಾನ್ ಗಾಯಗೊಂಡು ಬಿದ್ದಿರುವುದು ಕಂಡಿತು. ಹತ್ತಿರದಲ್ಲೇ ಅವನ ಕುದುರೆ ಬಾಲದಿಂದ ನೊಣ ಓಡಿಸುತ್ತ ನಿಂತಿತ್ತು. ಚಂಪತರಾಯನಿಗೆ ಕುದುರೆಯ ಷೋಕಿ ಬಹಳ. ಅದನ್ನು ನೋಡಿದೊಡನೆಯೋ ಅವನ ಮನಸೆಳೆಯಿತು. ಅದು ಸುಂದರವಾದ ಇರಾಕಿ ಜಾತಿಯ ಕುದುರೆ. ಅದರ ಒಂದೊಂದು ಅಂಗವನ್ನೂ ಎರಕಹೊಯ್ದು ಮಾಡಿದಂತಿತ್ತು: ಸಿಂಹದ ಎದೆ, ಚಿರತೆಯ ಸೊಂಟ. ಅದರ ಪ್ರೀತಿ ಸ್ವಾಮಿಭಕ್ತಿಗಳನ್ನು ಕಂಡು ಜನರಲ್ಲಿ ತುಂಬ ಕುತೂಹಲವುಂಟಾಯಿತು. ರಾಜ ಅಪ್ಪಣೆ ಮಾಡಿದ- "ಇದರ ಮೇಲೆ ಯಾರಾದರೂ ಶಸ್ತ್ರ ಚಲಾಯಿಸಿದರೆ ಹುಷಾರ್ ! ಇದನ್ನು ಜೀವಂತವಾಗಿ ಹಿಡಿದು ತನ್ನಿ; ಇದರಿಂದ ನಮ್ಮ ಅಶ್ವಬಲ ಶೋಭೆ ಹೆಚ್ಚುತ್ತದೆ. ಇದನ್ನು ಹಿಡಿದು ತಂದುಕೊಟ್ಟವರಿಗೆ ಸಾಕುಸಾಕೆನ್ನುವಷ್ಟು ಹಣ ಕೊಡುತ್ತೇನೆ."

ಯೋಧಗಣ ನಾಲ್ಕೂ ಕಡೆಯಿಂದ ನುಗ್ಗಿತು. ಆದರೆ ಯಾರಿಗೂ ಕುದುರೆಯ

ಹತ್ತಿರ ಹೋಗುವ ಸಾಹಸವಾಗಿಲ್ಲ. ಒಬ್ಬರು ಅದನ್ನು ಮುದ್ದಿನಿಂದ ಕರೆದರೆ ಇನ್ನೊಬ್ಬರು ಬಲೆಯೊಡ್ಡಿ ಸಿಕ್ಕಿಸುವ ಯೋಚನೆಯಲ್ಲಿದ್ದರು. ಆದರೆ ಯಾವ ಉಪಾಯವೂ ಫಲಿಸಲಿಲ್ಲ. ಅಲ್ಲಿ ಸಿಪಾಯಿಗಳ ಜಾತ್ರೆಯೇ ಸೇರಿತ್ತು.

ಆಗ ಸಾರಂಧಾ ತನ್ನ ಶಿಬಿರದಿಂದ ಹೊರಬಿದ್ದು ಕುದುರೆಯ ಕಡೆ ನಿರ್ಭಯವಾಗಿ ನಡೆದಳು. ಅವಳ ಕಣ್ಣಿನಲ್ಲಿ ಕಪಟವಿರಲಿಲ್ಲ; ಪ್ರೇಮದ ಹೊಳಪಿತ್ತು. ಕುದುರೆ ತಲೆ ತಗ್ಗಿಸಿತು. ರಾಣಿ ಅದರ ಕುತ್ತಿಗೆಯ ಮೇಲೆ ಕೈಯಿಟ್ಟು ಬೆನ್ನು ನೇವರಿಸತೊಡಗಿದಳು. ಕುದುರೆ ಅವಳ ಸೀರೆಯ ಸೆರಗಿನಲ್ಲಿ ಮುಖ ಮುಚ್ಚಿಕೊಂಡಿತು. ರಾಣಿ ಅದರ ಲಾಗಮು ಹಿಡಿದುಕೊಂಡು ಶಿಬಿರದ ಕಡೆ ನಡೆದಳು. ಕುದುರೆ ಎಂದಿನಿಂದಲು ಅವಳ ಸೇವೆಯಲ್ಲಿದೆಯೋ ಎಂಬಂತೆ ಮೌನವಾಗಿ ಅವಳನ್ನು ಹಿಂಬಾಲಿಸಿತು.

## 5

ಈ ಪ್ರಪಂಚವೊಂದು ರಣರಂಗ. ಇಲ್ಲಿ ಸದವಕಾಶವನ್ನು ಗುರುತಿಸುವ ಶಕ್ತಿಯುಳ್ಳ ಸೇನಾಪತಿಗೇ ವಿಜಯ ಲಭಿಸುತ್ತದೆ. ಅವನು ಸದವಕಾಶ ಸಿಕ್ಕಿದಾಗ ಎಷ್ಟು ಉತ್ಸಾಹದಿಂದ ಮುಂದುವರಿಯುತ್ತಾನೋ ವಿಪತ್ತಿನ ಸಮಯದಲ್ಲಿ ಅಷ್ಟೇ ಉತ್ಸಾಹದಿಂದ ಹಿಂದೆ ಸರಿಯುತ್ತಾನೆ. ಆ ವೀರಪುರುಷ ರಾಷ್ಟ್ರನಿರ್ಮಾಪಕನಾಗುತ್ತಾನೆ; ಇತಿಹಾಸ ಅವನ ಹೆಸರಿನ ಮೇಲೆ ಯಶಸ್ಸಿನ ಹೂಮಳೆಗರೆಯುತ್ತದೆ.

ಅವಕಾಶ ಸಿಕ್ಕಿದಾಗ ಮುಂದುವರೆದು ಸಂಕಟ ಸಮಯದಲ್ಲಿ ಹಿಂದೆ ಸರಿಯುವುದನ್ನು ಅರಿಯದ ಸಿಪಾಯಿಗಳೂ ಒಮ್ಮೊಮ್ಮೆ ಈ ರಂಗಕ್ಕೆ ಬರುತ್ತಾರೆ. ಈ ರಣವೀರರು ವಿಜಯವನ್ನು ನೀತಿಗೆ ಪದತಳದಲ್ಲಿ ಕಾಣಿಕೆಯಾಗಿ ಅರ್ಪಿಸುತ್ತಾರೆ. ತಮ್ಮ ಸೈನ್ಯದ ಹೆಸರು ಅಳಿದರೂ ಸರಿಯೇ ಅವರು ಒಮ್ಮೆ ಒಂದು ಕಡೆ ತಲುಪಿದ ಮೇಲೆ ಅಲ್ಲಿಂದ ಹೆಜ್ಜೆ ಸರಿಸುವುದಿಲ್ಲ. ಅವರಲ್ಲಿ ಎಲ್ಲೋ ಒಬ್ಬೊಬ್ಬರು ಮಾತ್ರ ಪ್ರಪಂಚದಲ್ಲಿ ವಿಜಯ ಸಂಪಾದಿಸುತ್ತಾರೆ. ಆದರೆ ಸಾಧಾರಣವಾಗಿ ಅವರ ಸೋಲು ವಿಜಕ್ಕಿಂತಲೂ ಹೆಚ್ಚು ಗೌರವಪ್ರದವಾಗಿರುತ್ತದೆ. ಅನುಭವಿಯಾದ ಸೇನಾಪತಿ ರಾಷ್ಟ್ರಕ್ಕೆ ತಳಪಾಯ ಹಾಕಿದರೆ ಸಂಕಟಸಮಯದಲ್ಲಿ ಮುಖ ತಿರುಗಿಸದೇ ಪ್ರಾಣ ತೆರುವ ಸಿಪಾಯಿ ರಾಷ್ಟ್ರದ ಭಾವನೆಯನ್ನು ಮೇಲೇರಿಸುತ್ತಾನೆ. ಅವನಿಗೆ ಈ ಕಾರ್ಯಕ್ಷೇತ್ರದಲ್ಲಿ ಸಫಲತೆ ಸಿಗದಿದ್ದರೇನಂತೆ, ಯಾವದಾದರೂ ಸಭೆಯಲ್ಲಿ ಮಾತಿನ ನಡುವೆ ಅವನ ಹೆಸರು ಬಂದಾಗ ಶ್ರೋತೃಗಳು ಒಕ್ಕೊರಲಿನಿಂದ ಅವನ ಕೀರ್ತಿಗೌರವಗಳನ್ನು ಪ್ರತಿಧ್ವನಿಸುತ್ತಾರೆ. ಸಾರಂಧಾ ಹಾಗೆ ಸಮಯದಲ್ಲಿ ಪ್ರಾಣ ಕೊಡುವವರಲ್ಲಿ ಒಬ್ಬಳಾಗಿದ್ದಳು.

ಯುವರಾಜ ಮುಹಿಯುದ್ದೀನ್ ಚಂಬಲದ ದಂಡೆಯಿಂದ ಆಗ್ರಾದ ಕಡೆ ಹೊರಟಾಗ ಭಾಗ್ಯ ಅವನಿಗೆ ಚಾಮರ ಬೀಸುತ್ತಿತ್ತು. ಆಗ್ರಾ ತಲುಪಿದಾಗ

ವಿಜಯದೇವತೆ ಅವನಿಗಾಗಿ ಸಿಂಹಾಸನ ಸಜ್ಜುಮಾಡಿದ್ದಳು.

ಔರಂಗಜೇಬ ಗುಣಕ್ಕೆ ಬೆಲೆ ಕೊಡುವವನು. ಅವನು ತನ್ನ ಸರದಾರರ ತಪ್ಪನ್ನು ಕ್ಷಮಿಸಿದ; ಅವರ ಪದವಿಗಳನ್ನು ಹಿಂದಿರುಗಿಸಿದ. ರಾಜಾ ಚಂಪತರಾಯನಿಗೆ ಅವನ ಅಮೂಲ್ಯವಾದ ಕಾರ್ಯಗಳಿಗಾಗಿಯೆಂದು ಹನ್ನೆರಡು ಸಾವಿರದ ಜಹಗೀರು ಕೊಟ್ಟ. ಆ ಜಹಗೀರು ಓರ್ಛೆಯಿಂದ ಬನಾರಸ್ಸಿನವರೆಗೆ, ಬನಾರಸ್ಸಿನಿಂದ ಜಮುನಾದವರೆಗೆಂದು ಗೊತ್ತು ಮಾಡಲಾಯಿತು. ಬುಂದೇಲದ ರಾಜ ಮತ್ತೆ ಬಾದಶಹನ ಸೇವಕನಾದ; ಮತ್ತೆ ಸುಖ ವಿಲಾಸಗಳಲ್ಲಿ ಮುಳುಗಿದ; ರಾಣಿ ಸಾರಂಧಾ ಮತ್ತೆ ಪರಾಧೀನತೆಯ ದುಃಖದಲ್ಲಿ ಕೈತೊಳೆಯತೊಡಗಿದಳು.

ವಲೀ ಬಹಾದ್ದೂರ್‌ಖಾನ್ ಮಹಾ ವಾಕ್‌ಚತುರ. ಅವನು ತನ್ನ ಮೃದುತ್ವದಿಂದಾಗಿ ಬಹುಬೇಗನೆ ಬಾದಶಹ ಆಲಂಗೀರನ ವಿಶ್ವಾಸಕ್ಕೆ ಪಾತ್ರನಾದ. ರಾಜಸಭೆಯಲ್ಲಿ ಸನ್ಮಾನ್ಯರ ದೃಷ್ಟಿ ಆತನ ಮೇಲೆ ಬೀಳತೊಡಗಿತು.

ಖಾನ್‌ಸಾಹೇಬನ ಮನಸ್ಸಿನಲ್ಲಿ ತನ್ನ ಕುದುರೆ ಕಳೆದುಹೋದ ದುಃಖ ತೀವ್ರವಾಗಿತ್ತು. ಒಂದು ದಿನ ಚಂಪತರಾಯನ ಮಗ ರಾಜಕುಮಾರ ಛತ್ರಸಾಲ ಅದೇ ಕುದುರೆಯ ಮೇಲೆ ಕುಳಿತು ಸವಾರಿಗೆ ಹೋಗಿದ್ದ. ಅವನು ಖಾನ್‌ಸಾಹೇಬನ ಮಹಲಿನ ಕಡೆ ನಡೆದ. ವಾಲೀ ಬಹಾದ್ದೂರ್ ಇಂಥದೇ ಅವಕಾಶಕ್ಕೆ ಕಾಯುತ್ತಿದ್ದ. ಅವನು ತಕ್ಷಣ ತನ್ನ ಸೇವಕರಿಗೆ ಸಂಜ್ಞೆ ಮಾಡಿದ. ಪಾಪ, ರಾಜಕುಮಾರ ಒಂಟಿಯಾಗಿ ಏನು ಮಾಡಿಯಾನು? ಕಾಲುನಡಿಗೆಯಲ್ಲಿಯೇ ಮನೆಗೆ ಹಿಂದಿರುಗಿದ. ಸಾರಂಧಳಿಗೆ ನಡೆದುದನ್ನು ವಿವರಿಸಿದ. ರಾಣಿಯ ಮುಖ ಕೆಂಪಾಯಿತು. ಅವಳಂದಳು- "ಕುದುರೆ ಹೋಯಿತೆಂದು ನನಗೆ ದುಃಖವಿಲ್ಲ. ಅದನ್ನು ಕಳೆದುಕೊಂಡು ನೀನು ಬದುಕಿ ಬಂದೆಯಲ್ಲ ಎಂದು ದುಃಖ! ಯಾಕೆ, ನಿನ್ನ ಮೈಯಲ್ಲಿ ಬುಂದೇಲರ ರಕ್ತ ಹರಿಯುತ್ತಿಲ್ಲವೆ? ಕುದುರೆ ಹೋದರೆ ಹೋಗಲಿ, ಒಬ್ಬ ಬುಂದೇಲರ ಹುಡುಗನಿಂದ ಅವನ ಕುದುರೆ ಕಿತ್ತುಕೊಳ್ಳೋದು ಹುಡುಗಾಟದ ಮಾತಲ್ಲ ಅಂತ ನೀನು ತೋರಿಸಬೇಕಾಗಿತ್ತು."

ಹೀಗಂದು ಅವಳು ತನ್ನ ಐವತ್ತು ಸಿಪಾಯಿಗಳಿಗೆ ಸಿದ್ಧವಾಗಿರೆಂದು ಅಪ್ಪಣೆ ಮಾಡಿದಳು. ತಾನೂ ಆಯುಧ ತೊಟ್ಟು ಸಿಪಾಯಿಗಳ ಸಂಗಡ ವಲೀ ಬಹಾದ್ದೂರ್‌ಖಾನನ ನಿವಾಸಸ್ಥಾನ ತಲುಪಿದಳು. ಖಾನ್‌ಸಾಹೇಬ ಅದೇ ಕುದುರೆ ಹತ್ತಿ ದರಬಾರಿಗೆ ಹೊರಟು ಹೋಗಿದ್ದ. ಸಾರಂಧಳೂ ದರಬಾರಿನ ಕಡೆ ನಡೆದಳು. ಯಾವದೇ ವೇಗವಾಹಿನಿಯಾದ ನದಿಯಂತೆ ಒಂದು ಕ್ಷಣದಲ್ಲಿ ಬಾದಶಹನ ದರಬಾರಿನ ಮುಂದೆ ಬಂದು ನಿಂತಳು. ಈ ಸುದ್ದಿ ಕೇಳಿ ದರಬಾರಿನಲ್ಲಿ ಗಡಿಬಿಡಿ ಉಂಟಾಯಿತು. ಅಧಿಕಾರಿಗಳು ಅಲ್ಲಿಂದ ಇಲ್ಲಿಂದೆಲ್ಲ ಬಂದು ಗುಂಪುಗೂಡಿದರು. ಆಲಂಗೀರನೂ ಅಂಗಳಕ್ಕೆ ಬಂದ. ಜನ ತಮ್ಮ ತಮ್ಮ ಕತ್ತಿಗಳನ್ನು ಸಿದ್ಧಮಾಡಿಕೊಂಡರು. ಎಲ್ಲೆಲ್ಲೂ ಗದ್ದಲವೆದ್ದಿತು. ಇದೇ ದರಬಾರಿನಲ್ಲಿ ಅವೆಷ್ಟು ಕಣ್ಣುಗಳು ಅಮರಸಿಂಹನ ಕತ್ತಿಯ ಹೊಳಪನ್ನು ಕಂಡಿದ್ದವೋ! ಅವರಿಗೆ ಮತ್ತೆ ಅದೇ ಘಟನೆಯ ನೆನಪಾಯಿತು.

ಸಾರಂಧಾ ಧ್ವನಿ ಎತ್ತರಿಸಿ ಹೇಳಿದಳು- "ಖಾನ್‌ಸಾಹೇಬ, ಇದು ಬಲು ನಾಚಿಕೆಗೇಡಿನ ಸಂಗತಿ. ಚಂಬಲದ ದಂಡೆಯ ಮೇಲೆ ನೀನು ಯಾವ ಶೌರ್ಯವನ್ನು ತೋರಿಸಬಯಸಿದ್ದೆಯೋ ಅದನ್ನು ಇವತ್ತು ಅರಿಯದ ಹುಡುಗನೊಬ್ಬನ ಮುಂದೆ ತೋರಿಸಿದ್ದಿ. ಅವನಿಂದ ಕುದುರೆ ಕಿತ್ತುಕೊಂಡದ್ದು ಸರಿಯೆ ?"

ವಲೀ ಬಹಾದ್ದೂರ್‌ಖಾನನ ಕಣ್ಣು ಅಗ್ನಿಜ್ವಾಲೆ ಉಗುಳುತ್ತಿತ್ತು. ಅವನು ಕಟುವಾಗಿ ಹೇಳಿದ- "ನನ್ನ ವಸ್ತೂನ ಉಪಯೋಗಿಸೋಕ್ಕೆ ಬೇರೆ ಯಾರಿಗೆ ತಾನೇ ಸಾಮರ್ಥ್ಯವಿದೆ ?"

ರಾಣಿ- "ಅದು ನಿನ್ನದಲ್ಲ, ನನ್ನದು. ಅದನ್ನ ನಾನು ರಣರಂಗದಲ್ಲಿ ಸಂಪಾದಿಸಿದೆ. ಅದರ ಮೇಲೆ ಅಧಿಕಾರ ಇರೋದು ನನಗೆ. ರಣಧರ್ಮದ ಇಂಥ ಸಾಧಾರಣ ವಿಷಯವೂ ನಿನಗೆ ತಿಳೀದೆ ?"

ಖಾನ್‌ಸಾಹೇಬ- "ಆ ಕುದುರೆಯನ್ನ ಕೊಡೋಕ್ಕೆ ಆಗೋಲ್ಲ. ಅದರ ಬದಲು ಇಡೀ ಅಶ್ವದಳವನ್ನೇ ಕೊಟ್ಟೇನು."

ರಾಣಿ- "ನನ್ನ ಕುದುರೇನ ನಾನು ತೊಗೊಂಡೇ ತೊಗೋತೀನಿ."

ಖಾನ್‌ಸಾಹೇಬ- "ನಾನು ಅದರ ಬೆಲೆಯಷ್ಟು ಮುತ್ತು ರತ್ನ ಕೊಡಬಲ್ಲೆ. ಆದರೆ ಕುದುರೇನ ಕೊಡೋಕ್ಕಾಗೋಲ್ಲ."

ರಾಣಿ- "ಹಾಗಾದರೆ ಇದರ ಇತ್ಯರ್ಥ ಖಡ್ಗದಿಂದಾಗಬೇಕಾಗುತ್ತೆ."

ಬುಂದೇಲದ ಯೋಧರು ಕತ್ತಿ ಸೆಳೆದರು. ದರಬಾರಿನ ನೆಲ ಇನ್ನೇನು ರಕ್ತದಿಂದ ತೊಯ್ದುಹೋಗುವುದರಲ್ಲಿತ್ತು. ಅಷ್ಟರಲ್ಲಿ ಬಾದಶಹ ಆಲಂಗೀರ್ ನಡುವೆ ಬಂದು ಹೇಳಿದ- "ರಾಣೀಸಾಹೇಬಾ, ನಿಮ್ಮ ಸಿಪಾಯಿಗಳನ್ನು ತಡೆಯಿರಿ. ನಿಮಗೆ ಕುದುರೆ ಕೊಡಿಸ್ತೀವಿ. ಆದರೆ ಅದಕ್ಕೆ ನೀವು ತುಂಬಾ ಬೆಲೆ ತೆರಬೇಕಾಗುತ್ತೆ."

ರಾಣಿ- "ಅದಕ್ಕಾಗಿ ನನ್ನ ಸರ್ವಸ್ವವನ್ನೇ ಕೊಡಲು ಸಿದ್ಧಳಾಗಿದ್ದೀನಿ."

ಬಾದಶಹ- "ಪದವಿ ಜಹಗೀರುಗಳನ್ನೂ ?"

ರಾಣಿ- "ಪದವಿ ಜಹಗೀರುಗಳೂ ಒಂದು ವಸ್ತುವೆ ?"

ಬಾದಶಹ- "ನಿಮ್ಮ ರಾಜ್ಯವನ್ನೂ ?"

ರಾಣಿ- "ಹೌದು, ರಾಜ್ಯವನ್ನೂವೆ."

ಬಾದಶಹ- "ಒಂದು ಕುದುರೆಗಾಗಿ ?"

ರಾಣಿ- "ಅಲ್ಲ, ಪ್ರಪಂಚದಲ್ಲಿ ಎಲ್ಲಕ್ಕಿಂತ ಹೆಚ್ಚು ಬೆಲೆಬಾಳುವ ಆ ಒಂದು ಪದಾರ್ಥಕ್ಕಾಗಿ."

ಬಾದಶಹ- "ಯಾವುದು ಆ ಪದಾರ್ಥ ?"

ರಾಣಿ- "ಮರ್ಯಾದೆ !"

ಹೀಗೆ ರಾಣಿ ಕುದುರೆಯನ್ನು ಹಿಂದಿರುಗಿ ಪಡೆದಳು. ಅದಕ್ಕಾಗಿ ತನ್ನ ವಿಸ್ತಾರವಾದಿ ಜಹಗೀರು ರಾಜ್ಯ, ರಾಜಸನ್ಮಾನಗಳನ್ನು ಕಳೆದುಕೊಂಡಳು. ಇಷ್ಟೇ ಅಲ್ಲ, ಭವಿಷ್ಯದಲ್ಲಿ ಕೇಡನ್ನೂ ಅನುಭವಿಸಿದಳು. ಆ ಗಳಿಗೆಯಿಂದ ಹಿಡಿದು ಕೊನೆಯವರೆಗೂ ಚಂಪತರಾಯನಿಗೆ ಶಾಂತಿಯೆಂಬುದಿರಲಿಲ್ಲ.

## 6

ರಾಜಾ ಚಂಪತರಾಯ ಮತ್ತೆ ಓರ್ಛೆಯ ದುರ್ಗದಲ್ಲಿ ಬಂದು ನೆಲಸಿದ. ಜಹಗೀರು ಪದವಿಗಳು ಕೈಬಿಟ್ಟುಹೋದುದರಿಂದ ಅವನಿಗೆ ತುಂಬ ದುಃಖವಾಗಿತ್ತು. ಅವನು ಬಾಯಿಬಿಟ್ಟು ಆರೋಪಣೆಯ ಒಂದು ಮಾತನ್ನು ಆಡಲಿಲ್ಲ. ಅವನಿಗೆ ಸಾರಂಧಳ ಸ್ವಭಾವ ಚೆನ್ನಾಗಿ ತಿಳಿದಿತ್ತು. ಈ ಹೊತ್ತು ಹಾಗೆ ಆರೋಪಣೆ ಮಾಡಿದ್ದಿದ್ದರೆ ಅವಳ ಆತ್ಮಗೌರವಕ್ಕೆ ಕುಠಾರಪ್ರಾಯವಾಗುತ್ತಿತ್ತು.

ಓರ್ಛೆಯಲ್ಲಿ ಸ್ವಲ್ಪ ದಿನ ಶಾಂತಿಯಿಂದ ಕಳೆಯಿತು. ಆದರೆ ಸಾರಂಧಳ ಕಠೋರವಾದ ಮಾತುಗಳನ್ನು ಬಾದಶಹ ಮರೆತಿರಲಿಲ್ಲ; ಅವನಿಗೆ ಕ್ಷಮೆಯೆಂದರೆ ಏನೆಂಬುದೇ ತಿಳಿಯದು. ತಮ್ಮಂದಿರಿಂದ ಕೊಂಚ ನಿಶ್ಚಿಂತನಾದೊಡನೆಯೇ ಅವನು ಚಂಪತರಾಯನ ಗರ್ವ ಮುರಿಯಲು ಒಂದು ದೊಡ್ಡ ಸೇನೆಯನ್ನೇ ಕಳಿಸಿದ. ಈ ಆಕ್ರಮಣಕ್ಕೆ ಅನುಭವಿಗಳಾದ ಇಪ್ಪತ್ತೆರಡು ಮಂದಿ ಸರದಾರರನ್ನು ನೇಮಿಸಿದ. ಬುಂದೇಲರ ಶುಭಕರಣ ಬಾದಶಹನ ಸುಬೇದಾರ. ಅವನು ಚಂಪತರಾಯನ ಬಾಲ್ಯದ ಸ್ನೇಹಿತ ಹಾಗೂ ಸಹಪಾಠಿ. ಚಂಪತರಾಯನನ್ನು ಸೋಲಿಸುವುದಾಗಿ ಅವನು ಪಣತೊಟ್ಟ. ಇತರ ಎಷ್ಟೋ ಬುಂದೇಲ ಸರದಾರರು ಚಂಪತರಾಯನಿಂದ ಬೇರೆಯಾಗಿ ಬಾದಶಹನ ಸುಬೇದಾರನನ್ನು ಕಂಡರು. ಘೋರ ಸಂಗ್ರಾಮವಾಯಿತು. ಅಣ್ಣತಮ್ಮಂದಿರ ಕತ್ತಿಗಳು ರಕ್ತದಿಂದ ಕೆಂಪಾದವು. ಚಂಪತರಾಯನಿಗೆ ಈ ಬಾರಿ ವಿಜಯ ದೊರೆತರೂ ಅವನ ಬಲ ಸದಾಕಾಲಕ್ಕಾಗಿ ಕ್ಷೀಣವಾಯಿತು. ಚಂಪತರಾಯನಿಗೆ ಬಾಹುಬಲವಾಗಿದ್ದ ಹತ್ತಿರದ ಬುಂದೇಲದ ರಾಜರು ಬಾದಶಹನ ಕೃಪೆಗೆ ಕೈಯೊಡ್ಡಿ ಕುಳಿತುಕೊಂಡರು. ಅವನ ಜೊತೆಗಾರರಲ್ಲಿ ಕೆಲವರು ಕೆಲಸಕ್ಕೆ ಒದಗಿದರು; ಹಲವರು ಕೈಕೊಟ್ಟರು. ಸ್ವಂತ ಸಂಬಂಧಿಗಳೇ ತಲೆಮರೆಸಿಕೊಂಡು ಕುಳಿತರು. ಆದರೆ ಈ ಎಲ್ಲ ಕಷ್ಟನಷ್ಟನಿಷ್ಠುರಗಳಲ್ಲಿಯೂ ಚಂಪತರಾಯ ಧೈರ್ಯಗುಂದಲಿಲ್ಲ; ಸಾಹಸ ಬಿಡಲಿಲ್ಲ. ಓರ್ಛೆ ಬಿಟ್ಟುಹೋಗಿ ಮೂರು ವರ್ಷಗಳವರೆಗೆ ಅವನು ಬುಂದೇಲಖಂಡದ ದಟ್ಟವಾದ ಪರ್ವತಗಳಲ್ಲಿ ಅಡಗಿಕೊಂಡು ಓಡಾಡುತ್ತಿದ್ದ. ಬಾದಶಹನ ಸೇನೆ ಬೇಟೆಯ ಮೃಗದಂತೆ ಇಡೀ ದೇಶದಲ್ಲಿ ಸುಳಿದಾಡುತ್ತಿತ್ತು.. ಚಂಪತರಾಯನಿಗೆ ದಿನನಿತ್ಯ ಶತ್ರುಪಕ್ಷದ ಯಾರಾದರೊಬ್ಬರು ಎದುರಾಗುತ್ತಿದ್ದರು. ಸಾರಂಧಾ ಸದಾ ಅವನ ಜೊತೆಗಿರುತ್ತಿದ್ದಳು, ಸಾಹಸ ತುಂಬುತ್ತಿದ್ದಳು. ಧೈರ್ಯ ಕಳೆದು ಹೋಗಿ, ಆಶೆ ಕೈಬಿಟ್ಟುಹೋಗುವ ದೊಡ್ಡ ದೊಡ್ಡ ವಿಪತ್ತಿನ ಸಮಯದಲ್ಲಿ ಸಹ ಆತ್ಮರಕ್ಷಣೆಯ ಧರ್ಮ ಅವನನ್ನು ಕಾಪಾಡುತ್ತಿತ್ತು. ಮೂರು ವರ್ಷಗಳ ಕೊನೆಯಲ್ಲಿ ಬಾದಶಹನ ಸುಬೇದಾರರು ಆಲಂಗೀರನಿಗೆ ನಿಮ್ಮ ಹೊರತು ಬೇರೆ ಯಾರಿಂದಲೂ ಈ ಹುಲಿಯನ್ನು ಹಿಡಿಯಲಾಗುವುದಿಲ್ಲವೆಂದು ಸೂಚನೆ ಕೊಟ್ಟರು. ಸೇನೆಯನ್ನು

ವಾಪಸು ಕರೆದು, ಮುತ್ತಿಗೆ ತೆಗೆದುಬಿಡಿ ಎಂದು ಉತ್ತರ ಬಂತು. ಚಂಪತರಾಯ ಸಂಕಟದಿಂದ ಪಾರಾದೆನೆಂದುಕೊಂಡ; ಆದರೆ ಬಹುಬೇಗನೆ ಅದು ಭ್ರಮೆಯೆಂದು ಸಿದ್ಧವಾಯಿತು.

## 7

ಮೂರು ವಾರಗಳಿಂದ ಬಾದಶಹನ ಸೈನ್ಯ ಓರ್ಛೆಗೆ ಮುತ್ತಿಗೆ ಹಾಕಿದೆ. ಕಠೋರವಾದ ಮಾತು ಹೃದಯುವನ್ನು ಭೇದಿಸುವಂತೆ ತೋಪಿನ ಗೋಲಿಗಳು ಕೋಟೆಯ ಗೋಡೆಯನ್ನು ಸೀಳಿವೆ. ದುರ್ಗದಲ್ಲಿ ಇಪ್ಪತ್ತು ಸಾವಿರ ಮಂದಿ ಮುತ್ತಿಗೆಯಾಗಿದ್ದಾರೆ. ಅವರಲ್ಲಿ ಅರ್ಧಕ್ಕಿಂತ ಹೆಚ್ಚು ಮಂದಿ ಹೆಂಗಸರೂ, ಹೆಂಗಸರಿಗಿಂತ ಕೊಂಚ ಕಡಿಮೆಯಾಗುತ್ತ ಹೋಗುತ್ತಿದೆ. ದುರ್ಗಕ್ಕೆ ಹೋಗಿಬರುವ ನಾಲ್ಕೂ ಕಡೆಯ ದಾರಿಗಳು ಮುಚ್ಚಿವೆ. ಗಾಳಿಯೂ ಸುಳಿದಾಡುವಂತಿಲ್ಲ. ಆಹಾರಸಾಮಗ್ರಿಗಳು ಕೊಂಚಮಾತ್ರ ಉಳಿದಿವೆ. ಗಂಡಸರು ಮಕ್ಕಳು ಜೀವಂತವಾಗಿರಲೆಂದು ಹೆಂಗಸರು ಉಪವಾಸ ಮಾಡುತ್ತಿದ್ದಾರೆ. ಜನ ಹತಾಶರಾಗಿದ್ದಾರೆ. ಹೆಂಗಸರು ಸೂರ್ಯನಾರಾಯಣನ ಕಡೆ ಕೈಯೆತ್ತಿ ಮುಗಿಯುತ್ತ ಶತ್ರುವಿಗೆ ಶಾಪಹಾಕುತ್ತಾರೆ, ಹುಡುಗರು ಕೋಪ ತಡೆಯಲಾರದೆ ಗೋಡೆಯ ಮರೆಯಿಂದ ಅವರ ಮೇಲೆ ಕಲ್ಲೆಸೆಯುತ್ತಾರೆ. ಹೆಚ್ಚೆಂದರೆ ಕಲ್ಲು ಗೋಡೆಯ ಆಚೆಬದಿ ಹೋಗಿ ಬೀಳುತ್ತದೆ. ಸ್ವತಃ ರಾಜ ಚಂಪತರಾಯ ಜ್ವರದಿಂದ ನರಳುತ್ತಿದ್ದಾನೆ. ಅವನು ಮಂಚ ಬಿಟ್ಟೆದ್ದು ಎಷ್ಟೋ ದಿನವಾಯಿತು. ಅವನನ್ನು ಕಂಡರೆ ಸಾಕು, ಜನರಿಗೆ ಧೈರ್ಯವುಂಟಾಗುತ್ತಿತ್ತು. ಆದರೆ ಅವನ ಅನಾರೋಗ್ಯದಿಂದ ಇಡೀ ದುರ್ಗದಲ್ಲಿ ನಿರಾಶೆ ತುಂಬಿಕೊಂಡಿದೆ.

ರಾಜ ಸಾರಂಧಳಿಗೆ ಹೇಳಿದ- "ಇವತ್ತು ಶತ್ರುಗಳು ದುರ್ಗವನ್ನು ನುಗ್ಗುವುದು ಖಂಡಿತ."

ಸಾರಂಧಾ- "ಈ ಕಣ್ಣುಗಳಿಂದ ಅದನ್ನು ನೋಡುವ ದಿನ ಬರದಂತೆ ದೇವರು ಮಾಡಿಸಲಿ."

ರಾಜ- "ನನಗೆ ಈ ಅನಾಥ ಹೆಂಗಸರು ಮಕ್ಕಳದೇ ಚಿಂತೆ. ಕಾಳಿನ ಜೊತೆಗೆ ಈ ಕುಟ್ಟೇಹುಳಗಳೂ ನುರಿದುಹೋಗುತ್ತವೆ."

ಸಾರಂಧಾ- "ನಾವು ಈಗ ಇಲ್ಲಿಂದ ಹೊರಟುಹೋದರೆ ಹೇಗೆ ?"

ರಾಜ- "ಈ ಅನಾಥರನ್ನು ಬಿಟ್ಟುಹೋಗುವುದೆ ?"

ಸಾರಂಧಾ- "ಈಗ ಇವರನ್ನು ಬಿಟ್ಟುಹೋಗುವುದೇ ಲೇಸು. ನಾವಿಲ್ಲದೇ ಹೋದರೆ ಶತ್ರುಗಳು ಇವರಿಗೆ ಕೊಂಚ ದಯೆ ತೋರಿಸಿಯಾರು !"

ರಾಜ- "ಇಲ್ಲ, ನಾನು ಈ ಜನರನ್ನು ಬಿಟ್ಟುಹೋಗುವುದಿಲ್ಲ. ಯಾವ ಗಂಡಸರು ನನ್ನ ಸೇವೆಯಲ್ಲಿ ಪ್ರಾಣಾರ್ಪಣೆ ಮಾಡಿದ್ದಾರೋ ಅವರ ಹೆಂಗಸರು ಮಕ್ಕಳನ್ನು ನಾನು ಎಂದೆಂದಿಗೂ ಕೈಬಿಡುವುದಿಲ್ಲ."

ಸಾರಂಧಾ- “ಆದರೆ ನಾವಿಲ್ಲಿದ್ದುಕೊಂಡು ಅವರಿಗೆ ಏನೂ ಸಹಾಯ ಮಾಡಲಾರೆವಲ್ಲ.”

ರಾಜ- “ಅವರ ಜೊತೆಗೆ ಪ್ರಾಣ ಕೊಡಬಲ್ಲೆವು. ಅವರ ರಕ್ಷಣೆಗಾಗಿ ನಾನು ಪ್ರಾಣವನ್ನು ಪಣವಾಗಿ ಒಡ್ಡುತ್ತೀನಿ. ಅವರಿಗಾಗಿ ಬಾದಶಹನ ಸೇನೆಯ ಖುಶಾಮತ್ತು ಮಾಡುತ್ತೀನಿ. ಸೆರೆಮನೆಯ ಕಷ್ಟಗಳನ್ನು ಅನುಭವಿಸುತ್ತೀನಿ. ಆದರೆ ಈ ಸಂಕಟದಲ್ಲಿ ಮಾತ್ರ ಅವರ ಕೈಬಿಡಲಾರೆ.”

ಸಾರಂಧಾ ನಾಚಿಕೆಯಿಂದ ತಲೆ ತಗ್ಗಿಸಿ ಯೋಚಿಸತೊಡಗಿದಳು. ಪ್ರಿಯರಾದ ಈ ಜೊತೆಗಾರರನ್ನು ಬೆಂಕಿಯ ಮಡಿಲಿಗೊಡ್ಡಿ ನಮ್ಮ ಪ್ರಾಣ ಉಳಿಸಿಕೊಳ್ಳುವುದು ಘೋರ ನೀಚತೆಯೆಂಬುದು ನಿಸ್ಸಂದೇಹ! ನಾನೇಕೆ ಹೀಗೆ ಸ್ವಾರ್ಥದಿಂದ ಕುರುಡಳಾಗಿದ್ದೀನಿ. ಇದಕ್ಕಿದ್ದಂತೆ ಸಾರಂಧಳಿಗೆ ಒಂದು ಯೋಚನೆ ಹೊಳೆಯಿತು. ಅವಳು ಹೇಳಿದಳು- “ಈ ಜನರಿಗೆ ಯಾವ ಅನ್ಯಾಯವೂ ಆಗುವುದಿಲ್ಲವೆಂದು ವಿಶ್ವಾಸ ಹುಟ್ಟಿದರೆ ನೀವು ಇಲ್ಲಿಂದ ಹೊರಡಲು ಯಾವ ಅಡ್ಡಿಯೂ ಇಲ್ಲ ಅಲ್ಲವೆ !”

ರಾಜ ಯೋಚಿಸಿ ಹೇಳಿದ- “ಹಾಗೆ ವಿಶ್ವಾಸ ಕೊಡುವವರು ಯಾರು ?”

ಸಾರಂಧಾ- “ಬಾದಶಹನ ಸೇನಾಪತಿಯಿಂದ ಒಂದು ಪ್ರತಿಜ್ಞೆಯ ಪತ್ರ.”

ರಾಜ- “ಹೌದು, ಆಗ ಸಂತೋಷದಿಂದ ಹೊರಡುತ್ತೀನಿ.”

ಸಾರಂಧಾ ವಿಚಾರ ಸಾಗರದಲ್ಲಿ ಮುಳುಗಿದಳು. ಬಾದಶಹನ ಸೇನಾಪತಿಯಿಂದ ಹಾಗೆ ಪ್ರತಿಜ್ಞೆ ಮಾಡಿಸುವುದು ಹೇಗೆ? ಈ ಪ್ರಸ್ತಾಪವನ್ನು ಅವನಲ್ಲಿಗೆ ಒಯ್ಯುವವರು ಯಾರು ? ಆ ನಿರ್ದಯಿ ಯಾಕೆ ತಾನೆ ಆ ಪ್ರತಿಜ್ಞೆ ಮಾಡುತ್ತಾನೆ ? ತನಗೆ ಜಯವಾಗುವುದೆಂದು ಅವನಿಗೆ ಪೂರ್ತಿ ಭರವಸೆಯಿದೆ. ಈ ದುಸ್ತರವಾದ ಕಾರ್ಯವನ್ನು ಸಾಧಿಸಿಕೊಡಬಲ್ಲಂತಹ ಚತುರ ನೀತಿಕುಶಲ ವಾಕ್ಪಟು ನಮ್ಮಲ್ಲಿ ಯಾರಿದ್ದಾರೆ ? ಮನಸ್ಸು ಮಾಡಿದರೆ ಛತ್ರಸಾಲ ಮಾಡಬಲ್ಲ. ಅವನಲ್ಲಿ ಈ ಎಲ್ಲ ಗುಣಗಳೂ ಇವೆ.

ಹೀಗೆ ಮನಸ್ಸಿನಲ್ಲಿ ನಿರ್ಧರಿಸಿ ರಾಣಿ ಛತ್ರಸಾಲನಿಗೆ ಕರೆಕಳಿಸಿದಳು. ಅವಳ ನಾಲ್ಕೂ ಮಕ್ಕಳಲ್ಲಿ ಅವನು ಉಳಿದವರಿಗಿಂತ ಹೆಚ್ಚು ಬುದ್ಧಿಶಾಲಿ ಹಾಗೂ ಸಾಹಸಿಯಾಗಿದ್ದ. ರಾಣಿ ಅವನನ್ನು ಇತರರಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಛತ್ರಸಾಲ ಬಂದು ತಾಯಿಗೆ ನಮಸ್ಕರಿಸಿದಾಗ ಅವಳ ಕಣ್ಣು ತೇವವಾಯಿತು. ಎದೆಯಿಂದ ದೀರ್ಘವಾದ ನಿಟ್ಟುಸಿರೊಂದು ಹೊರಬಂತು.

ಛತ್ರಸಾಲ- “ಅಮ್ಮಾ ನನಗೆ ಏನಪ್ಪಣೆ ?”

ರಾಣಿ- “ಇವತ್ತು ಕದನದ ಸ್ಥಿತಿ ಹೇಗಿದೆ ?”

ಛತ್ರಸಾಲ- “ನಮ್ಮ ಐವತ್ತು ಯೋಧರು ಇಲ್ಲಿಯವರೆಗೆ ವೀರಗತಿ ಪಡೆದಿದ್ದಾರೆ.”

ರಾಣಿ- “ಬುಂದೇಲರ ಮರ್ಯಾದೆ ಈಗ ಈಶ್ವರನ ಕೈಯಲ್ಲಿದೆ.”

ಛತ್ರಸಾಲ- “ನಾವು ಇವತ್ತು ರಾತ್ರಿ ಕಳ್ಳಮುತ್ತಿಗೆ ಹಾಕಲಿದ್ದೇವೆ.”

ರಾಣಿ ತನ್ನ ಪ್ರಸ್ತಾಪವನ್ನು ಸಂಕ್ಷೇಪವಾಗಿ ಛತ್ರಸಾಲನ ಮುಂದಿಟ್ಟು ಕೇಳಿದಳು- "ಈ ಕೆಲಸವನ್ನು ಯಾರಿಗೆ ಒಪ್ಪಿಸೋಣ ?"

ಛತ್ರಸಾಲ- "ನನಗೆ !"

ರಾಣಿ- "ನೀನು ಇದನ್ನು ಪೂರ್ತಿಮಾಡಿ ತೋರಿಸಬಲ್ಲೆಯಾ ?"

ಛತ್ರಸಾಲ- "ಓಹೋ ! ನನಗೆ ಪೂರ್ಣ ವಿಶ್ವಾಸವಿದೆ."

ರಾಣಿ- "ಒಳ್ಳೇದು, ಹೋಗು. ಪರಮಾತ್ಮ ನಿನ್ನ ಮನೋರಥವನ್ನ ಈಡೇರಿಸಲಿ."

ಛತ್ರಸಾಲ ಹೊರಡುತ್ತಿದ್ದಾಗ ರಾಣಿ ಅವನನ್ನು ಎದೆಗಪ್ಪಿಕೊಂಡಳು. ಆಕಾಶದ ಕಡೆ ಕೈಯೆತ್ತಿ ಹೇಳಿದಳು- "ದಯಾನಿಧಿ, ಬೆಳೆಯುತ್ತಿರುವ ತರುಣ ಮಗನನ್ನು ಬುಂದೇಲರ ಮರ್ಯಾದೆಗೆ ಕಾಣಿಕೆಯಾಗಿ ಅರ್ಪಿಸಿದ್ದೀನಿ. ಆ ಮರ್ಯಾದೆಯನ್ನು ಕಾಪಾಡುವುದು ನಿನ್ನ ಭಾರ. ಅತ್ಯಂತ ಅಮೂಲ್ಯವಾದ ವಸ್ತುವನ್ನು ಅರ್ಪಿಸುತ್ತಿದ್ದೀನಿ, ಸ್ವೀಕರಿಸು."

## 8

ಮಾರನೆಯ ದಿನ ಬೆಳಗ್ಗೆ ಸಾರಂಧಾ ಸ್ನಾನಮಾಡಿ ತಟ್ಟೆಯಲ್ಲಿ ಪೂಜಾಸಾಮಗ್ರಿಗಳನ್ನಿಟ್ಟುಕೊಂಡು ದೇವರ ಗುಡಿಗೆ ಹೊರಟಳು. ಅವಳ ಮುಖ ಬಿಳಚಿಹೋಗಿತ್ತು; ಕಣ್ಣ ಸುತ್ತಲೂ ಕಪ್ಪು ಮೂಡುತ್ತಿತ್ತು. ಗುಡಿಯ ಬಾಗಿಲು ತಲುಪುವಾಗ ಹೊರಗಿನಿಂದ ಒಂದು ಬಾಣ ಬಂದು ಅವಳ ತಟ್ಟೆಯಲ್ಲಿ ಬಿದ್ದಿತು. ಬಾಣದ ಮೊನೆಗೆ ಒಂದು ಕಾಗದದ ತುಂಡು ಸುತ್ತಿತ್ತು. ಸಾರಂಧಾ ತಟ್ಟೆಯನ್ನು ಗುಡಿಯ ಕಟ್ಟೆಯ ಮೇಲಿಟ್ಟು ಕಾಗದದ ತುಂಡನ್ನು ಬಿಚ್ಚಿ ನೋಡುವಾಗ ಅವಳ ಮುಖ ಆನಂದದಿಂದ ಅರಳಿತು. ಆದರೆ ಆ ಆನಂದ ಕ್ಷಣಮಾತ್ರದ್ದು. ಅಯ್ಯೋ, ಈ ಕಾಗದದ ತುಂಡಿಗಾಗಿ ನನ್ನ ಪ್ರೀತಿಯ ಮಗನನ್ನು ಕಳೆದುಕೊಂಡೆನಲ್ಲ. ಇಷ್ಟು ದುಬಾರಿ ಬೆಲೆ ತೆತ್ತು ಯಾರು ತಾನೇ ಒಂದು ಕಾಗದದ ತುಂಡನ್ನು ಕೊಂಡಿದ್ದಾರು !

ಗುಡಿಯಿಂದ ಹಿಂದಿರುಗಿ ಬಂದು ಸಾರಂಧಾ ರಾಜಾ ಚಂಪತರಾಯನ ಬಳಿಗೆ ಹೋಗಿ ಹೇಳಿದಳು- "ಪ್ರಾಣನಾಥ, ನೀವು ಕೊಟ್ಟ ಮಾತನ್ನು ನಡಸಿಕೊಡಿ."

ರಾಜಾ ಹೌಹಾರಿ ಕೇಳಿದ- "ಏನು, ನಿನ್ನ ವಾಗ್ದಾನವನ್ನು ಪೂರ್ತಿ ಮಾಡಿದ್ದೀಯಾ ?"

ರಾಣಿ ಪ್ರತಿಜ್ಞಾಪತ್ರವನ್ನು ಚಂಪತರಾಯನಿಗೆ ಕೊಟ್ಟಳು. ಚಂಪತರಾಯ ಅದನ್ನು ಲಕ್ಷ್ಯವಿಟ್ಟು ಓದಿ ಮುಗಿಸಿ ಹೇಳಿದ- "ಈಗ ನಾನು ಹೊರಟೆ. ದೇವರು ಮಾಡಿಸಿದರೆ ಶತ್ರುವನ್ನು ಮತ್ತೆ ಯಾವಾಗಲಾದರೂ ವಿಚಾರಿಸಿಕೊಳ್ಳುತ್ತೀನಿ. ಆದರೆ, ಸಾರನ್, ನಿಜ ಹೇಳು. ಈ ಪತ್ರಕ್ಕಾಗಿ ನೀನು ಏನು ತೆರಬೇಕಾಯಿತು ?"

ರಾಣಿ ಕುಂಠಿತ ಸ್ವರದಲ್ಲಿ ಹೇಳಿದಳು- "ಬಹಳಷ್ಟು ?"

ರಾಜ- "ಅದೇನೆಂದು ಕೇಳಬಹುದೆ ?"

ರಾಣಿ- "ಒಬ್ಬ ಹರೆಯದ ಮಗನನ್ನು."

ರಾಜನ ಎದೆಯಲ್ಲಿ ಬಾಣ ನೆಟ್ಟಂತಾಯಿತು. ಅವನು ಕೇಳಿದ- "ಯಾರು ಅಂಗದ ರಾಯನನ್ನೆ?"

ರಾಣಿ- "ಅಲ್ಲ."

ರಾಜ- "ರತನಸಾಹ."

ರಾಣಿ- "ಅಲ್ಲ."

ರಾಜ- "ಛತ್ರಸಾಲ"

ರಾಣಿ- "ಹೌದು."

ಹಕ್ಕಿಗೆ ಗುಂಡಿನೇಟು ತಗಲಿದಾಗ ಅದು ರೆಕ್ಕೆ ಬಡಿಯುತ್ತ ನಿಷ್ಪ್ರಾಣವಾಗಿ ಬೀಳುವಂತೆ ಚಂಪತರಾಯ ಮಂಚದಿಂದ ಹಾರಿ, ಮತ್ತೆ ಪ್ರಜ್ಞೆತಪ್ಪಿ ಕೆಳಕ್ಕೆ ಉರುಳಿದ. ಛತ್ರಸಾಲ ಅವನ ಪರಮಪ್ರಿಯ ಪುತ್ರ. ಅವನ ಭವಿಷ್ಯದ ಎಲ್ಲ ಆಸೆಗಳೂ ಛತ್ರಸಾಲನನ್ನು ಅವಲಂಬಿಸಿದ್ದವು. ಮರಳು ಪ್ರಜ್ಞೆ ಬಂದಮೇಲೆ ಚಂಪತರಾಯ ಹೇಳಿದ- "ಸಾರನ್, ನೀನು ತಪ್ಪು ಮಾಡಿದೆ!"

ಕತ್ತಲ ರಾತ್ರಿ. ರಾಣಿ ಸಾರಂಧಾ ಚಂಪತರಾಯನನ್ನೂ ಕೂರಿಸಿಕೊಂಡು ಕುದುರೆ ಸವಾರಿ ಮಾಡುತ್ತ ಗುಪ್ತಮಾರ್ಗದ ಮೂಲಕ ದುರ್ಗ ಬಿಟ್ಟು ಹೊರಟಿದ್ದಳು. ಇವತ್ತಿಗೆ ಎಷ್ಟೋ ಹಿಂದೆ ಒಂದು ದಿನ ರಾತ್ರಿ ಇದೇ ರೀತಿ ಕತ್ತಲಾಗಿತ್ತು; ದುಃಖಮಯವಾಗಿತ್ತು. ಅವತ್ತು ಸಾರಂಧಾ ಶೀತಲಾದೇವಿಗೆ ಕಠೋರವಾಗಿ ನುಡಿದಿದ್ದಳು. ಶೀತಲಾದೇವಿ ಅವತ್ತು ಆಡಿದ್ದ ಭವಿಷ್ಯವಾಣಿ ಇವತ್ತು ಪೂರ್ತಿಯಾಗಿತ್ತು. ಹಾಗೆಯೇ ಸಾರಂಧಾ ಅವಳಿಗೆ ಕೊಟ್ಟಿದ್ದ ಉತ್ತರವೂ ಪೂರ್ತಿಯಾಗುವುದೆ?

## 9

ಮಧ್ಯಾಹ್ನ ಸೂರ್ಯ ನೆತ್ತಿಯ ಮೇಲೆ ಬಂದು ಅಗ್ನಿಯ ಮಳೆ ಸುರಿಸುತ್ತಿದ್ದ. ದೇಹವನ್ನು ಸುಟ್ಟು ಕರಕಾಗಿಸುವಂತಹ ಪ್ರಖರವಾದ ಪ್ರಚಂಡ ಗಾಳಿ ಗುಡ್ಡಗಾಡುಗಳಿಗೆ ಬೆಂಕಿ ಹೊತ್ತಿಸುತ್ತ ಅಲೆಯುತ್ತಿತ್ತು. ಅಗ್ನಿದೇವನ ಸಮಸ್ತ ಸೇನೆಯೂ ಗರ್ಜಿಸುತ್ತ ಬರುತ್ತಿದೆಯೋನೋ ಎಂದು ತೋರುತ್ತಿತ್ತು. ಅದರ ಭಯಕ್ಕೆ ಗಗನಮಂಡಳ ನಡುಗುತ್ತಿತ್ತು. ರಾಣಿ ಸಾರಂಧಾ ಚಂಪತರಾಯನನ್ನೂ ಕೂರಿಸಿಕೊಂಡು ಕುದುರೆಸವಾರಿ ಮಾಡುತ್ತ ಪಶ್ಚಿಮದ ಕಡೆಗೆ ಹೋಗುತ್ತಿದ್ದಳು. ಓರ್ಛೆ ಹತ್ತು ಕೋಸು ದೂರ ಹಿಂದೆ ಬಿದ್ದಿತ್ತು. ಪ್ರತಿ ಕ್ಷಣವೂ ಇನ್ನು ನಾವು ಭಯದ ಸೀಮೆಯಿಂದ ಹೊರಬಂದಿದ್ದೇವೆ ಎಂಬ ವಿಶ್ವಾಸ ದೃಢವಾಗುತ್ತಿತ್ತು. ರಾಜ ಪಲ್ಲಕ್ಕಿಯಲ್ಲಿ ಮೂರ್ಛಿತನಾಗಿ ಬಿದ್ದಿದ್ದ; ಪಲ್ಲಕ್ಕಿ ಹೊತ್ತಿದ ಕಹಾರರು ಬೆವರಿನಿಂದ ಒದ್ದೆಮುದ್ದೆಯಾಗಿದ್ದರು. ಪಲ್ಲಕ್ಕಿಯ ಹಿಂದೆ ಐವರು ಸವಾರರು ಕುದುರೆ

ಓಡಿಸಿಕೊಂಡು ಬರುತ್ತಿದ್ದರು. ಬಾಯಾರಿಕೆಯಿಂದಾಗಿ ಎಲ್ಲರಿಗೂ ದುರವಸ್ಥೆಯಾಗಿತ್ತು. ಗಂಟಲು ಒಣಗಿಹೋಗಿತ್ತು. ಕಣ್ಣು ಮರದ ನೆರಳನ್ನೂ ನೀರಿನ ಬಾವಿಯನ್ನೂ ಅರಸುತ್ತ ಸುತ್ತಲೂ ಅಲೆದಾಡುತ್ತಿತ್ತು.

ಇದ್ದಕ್ಕಿದ್ದಂತೆ ಸಾರಂಧಾ ಹಿಂದಿರುಗಿ ನೋಡಿದಳು. ಕುದುರೆಸವಾರರ ಒಂದು ದಳ ಬರುತ್ತಿರುವುದು ಕಾಣಿಸಿತು. ಇನ್ನು ಉಳಿಗಾಲವಿಲ್ಲವೆಂದು ಅನುಮಾನ ಬಂದು ಅವಳಿಗೆ ಭಯವಾಯಿತು. ಆ ಜನ ಖಂಡಿತವಾಗಿ ನಮ್ಮ ಶತ್ರುಗಳು. ಪ್ರಾಯಶಃ ರಾಜಕುರಮಾರನೇನಾದರೂ ತನ್ನ ಜನರೊಡನೆ ನಮ್ಮ ಸಹಾಯಕ್ಕಾಗಿ ಬರುತ್ತಿರಬಹುದೆ ಎಂದೂ ವಿಚಾರ ಬಂತು. ನಿರಾಸೆಯಲ್ಲಿಯೂ ಆಸೆ ಕೈಬಿಡುವುದಿಲ್ಲ. ಕೆಲವು ಕ್ಷಣದವರೆಗೆ ಸಾರಂಧಾ ಇದೇ ಆಸೆ ಭಯಗಳ ನಡುವೆ ಹೊಯ್ದಾಡುತ್ತಿದ್ದಳು. ಅಷ್ಟರಲ್ಲಿ ಆ ದಳ ಹತ್ತಿರ ಬಂತು, ಅವರು ತೊಟ್ಟ ಬಟ್ಟೆ ಸ್ಪಷ್ಟವಾಗಿ ಕಾಣಿಸತೊಡಗಿತು. ರಾಣಿ ಒಂದು ನಿಟ್ಟುಸಿರುಬಿಟ್ಟಳು. ಅವಳ ದೇಹ ಹುಲ್ಲಿನಂತೆ ನಡುಗತೊಡಗಿತು. ಅವರು ಬಾದಶಹನ ಸೈನ್ಯದವರಾಗಿದ್ದರು.

ಸಾರಂಧಾ ಕಹಾರರಿಗೆ ಡೋಲಿ ನಿಲ್ಲಿಸಲು ಹೇಳಿದಳು. ಬುಂದೇಲರ ಸಿಪಾಯಿಗಳೂ ಕತ್ತಿಯನ್ನು ಹೊರಸೆಳೆದರು. ರಾಜನ ಅವಸ್ಥೆ ಬಹಳ ಶೋಚನೀಯವಾಗಿತ್ತು. ಆದರೆ ಆರಿಹೋಗುತ್ತಿರುವ ಕೆಂಡ ಸಹ ಗಾಳಿ ಬೀಸಿದಾಗ ಉರಿಯತೊಡಗುವಂತೆ ಸಂಕಟದ ಅರಿವಾದೊಡನೆಯೇ ಚಂಪತರಾಯನ ಶರೀರದಲ್ಲಿ ಸಾಹಸ ಕೆರಳಿತು. ಅವನು ಪಲ್ಲಕ್ಕಿಯ ಪರದೆ ಸರಿಸಿ ಹೊರಬಂದ. ಧನುರ್ಬಾಣವನ್ನು ಕೈಗೆತ್ತಿಕೊಂಡ. ಆದರೆ ಅವನ ಕೈಯಲ್ಲಿ ಇಂದ್ರವಜ್ರವಾಗುತ್ತಿದ್ದ ಆ ಧನುಸ್ಸು ಕೊಂಚವಾದರೂ ಜಗ್ಗಲಿಲ್ಲ. ತಲೆಸುತ್ತು ಬಂತು, ಕಾಲು ನಡುಗಿತು. ಅವನು ತತ್ತರಿಸಿ ನೆಲಕ್ಕೆ ಬಿದ್ದ. ಅದು ಮುಂಬರುವ ಅಮಂಗಳದ ಸೂಚನೆಯಾಗಿತ್ತು. ತನ್ನೆಡೆಗೆ ಬರುತ್ತಿರುವ ಹಾವನ್ನು ಕಂಡು ಮೇಲೆ ಹಾರಹೋಗಿ ಮತ್ತೆ ಕೆಳಬೀಳುವ ಹಕ್ಕಿಯಂತೆ ಚಂಪತರಾಯ ಸವರಿಸಿಕೊಂಡು ಎದ್ದು ಮತ್ತೆ ಕೆಳಬಿದ್ದ. ಸಾರಂಧಾ ಅವನನ್ನು ಹಿಡಿದೆತ್ತಿ ಕೂರಿಸಿದಳು; ಅಳುತ್ತ ಮಾತನಾಡಲು ಪ್ರಯತ್ನಿಸಿದಳು. ಆದರೆ ಬಾಯಿಂದ 'ಪ್ರಾಣನಾಥ' ಎಂದಷ್ಟೇ ಹೊರಟಿತು. ಮುಂದೆ ಒಂದು ಮಾತೂ ಹೊರಡದಾಯಿತು. ಮರ್ಯಾದೆಗೆ ಪ್ರಾಣ ತೆರುತ್ತಿದ್ದ ಸಾರಂಧಾ ಈಗ ಸಾಧಾರಣ ಹೆಂಗಸಿನಂತೆ ಶಕ್ತಿಹೀನಳಾದಳು. ಕೊಂಚಮಟ್ಟಿಗೆ ಈ ದುರ್ಬಲತೆ ಸ್ತ್ರೀಜಾತಿಗೆ ಶೋಭೆ ಕೊಡುತ್ತದೆ.

ಚಂಪತರಾಯ ಹೇಳಿದ- "ನೋಡು, ಸಾರನ್. ನಮ್ಮ ಇನ್ನೊಬ್ಬ ವೀರ ನೆಲಕ್ಕೆ ಬಿದ್ದ. ಅನ್ಯಾಯ! ಯಾವ ವಿಪತ್ತಿಗೆ ಯಾವಜ್ಜೀವವೂ ಹೆದರಿದ್ದೆನೋ ಅದು ಈ ಅಂತಿಮ ಕ್ಷಣದಲ್ಲಿ ನನ್ನನ್ನು ಮುತ್ತುತ್ತಿದೆ. ನನ್ನ ಕಣ್ಣಮುಂದೆಯೇ ಶತ್ರುಗಳು ನಿನ್ನ ಕೋಮಲ ಶರೀರವನ್ನು ಮುಟ್ಟುತ್ತಾರೆ: ನಾನು ಇಲ್ಲಿಂದ ಅಲ್ಲಾಡಲೂ ಸಾಧ್ಯವಾಗದೆ ಇರುತ್ತೇನೆ. ಅಯ್ಯೋ ಸಾವೇ, ನೀನು ಯಾವಾಗ ಬರುವೆ?" ಹೀಗೆ ಹೇಳುತ್ತಿರುವಂತೆ ಅವನ ಮನಸ್ಸಿನಲ್ಲಿ ಒಂದು ಯೋಚನೆ ಬಂದಿತು. ಕತ್ತಿಯ ಕಡೆ ಕೈಹಾಕಿದ. ಆದರೆ ತೋಳುಗಳಲ್ಲಿ ಬಲವಿರಲಿಲ್ಲ. ಆಗ ಸಾರಂಧಳಿಗೆ ಹೇಳಿದ-

"ಪ್ರಿಯೆ, ನೀನು ಎಷ್ಟೊಂದು ಸಂದರ್ಭಗಳಲ್ಲಿ ನನ್ನ ಮರ್ಯಾದೆ ಉಳಿಸಿದ್ದೀಯೆ !"

ಇದನ್ನು ಕೇಳುತ್ತಲೇ ಸಾರಂಧಳ ಬಾಡಿದ ಮುಖದಲ್ಲಿ ಕೆಂಪು ಮೂಡಿತು. ಕಣ್ಣೀರು ಒಣಗಿತು. ತಾನು ಗಂಡನಿಗೆ ಪ್ರಯೋಜನವಾಗಬಲ್ಲೆನೆಂಬ ಆಸೆಯಿಂದ ಅವಳ ಎದೆಯಲ್ಲಿ ಶಕ್ತಿಯ ಸಂಚಾರವಾಯಿತು. ಗಂಡನ ಕಡೆ ಭರವಸೆ ಕೊಡುವವಳಂತೆ ನೋಡುತ್ತ ಅವಳು ಹೇಳಿದಳು- "ದೇವರು ಇಚ್ಛಿಸಿದರೆ ಕೊನೆಯ ಉಸಿರಿರುವವರೆಗೂ ಮರ್ಯಾದೆ ಉಳಿಸಬಲ್ಲೆ."

ರಾಜ ತನಗೆ ಪ್ರಾಣಾರ್ಪಣೆ ಮಾಡಿಕೊಳ್ಳಲು ಸೂಚನೆ ಕೊಡುತ್ತಿದ್ದಾನೆಂದು ರಾಣಿ ತಿಳಿದಳು.

ಚಂಪತರಾಯ- "ನನ್ನ ಮಾತನ್ನ ನೀನೆಂದೂ ತಳ್ಳಿಹಾಕಿಲ್ಲ."

ಸಾರಂಧಾ- "ಸಾಯುವವರೆಗೂ ತಳ್ಳಿಹಾಕುವುದಿಲ್ಲ."

ರಾಜ- "ಇದು ನನ್ನ ಕೊನೆಯ ಯಾಚನೆ. ಇದನ್ನು ಸ್ವೀಕರಿಸದಿರಬೇಡ."

ಸಾರಂಧಾ ಕತ್ತಿ ಸೆಳೆದು ಎದೆಯ ಮೇಲಿಟ್ಟುಕೊಂಡು ಹೇಳಿದಳು- "ಇದು ನಿಮ್ಮ ಆಜ್ಞೆಯಲ್ಲ, ನನ್ನ ಹೃದಯದ ಅಭಿಲಾಷೆ. ಸಾಯುವಾಗ ಈ ತಲೆ ನಿಮ್ಮ ಪಾದಕಮಲದ ಮೇಲಿರಲೆಂಬುದು ಹೃದಯದ ಅಭಿಲಾಷೆ !"

ಚಂಪತರಾಯ- "ನಿನಗೆ ನನ್ನ ಮಾತಿನ ಅರ್ಥ ತಿಳಿಯಲಿಲ್ಲ. ನಾನು ಕೈಬೇಡಿ ತೊಟ್ಟು ದೆಹಲಿಯ ಗಲ್ಲಿಗಳಲ್ಲಿ ನಿಂದೆಗೆ ಗುರಿಯಾಗಲೆಂದು ನನ್ನನ್ನು ಶತ್ರುಗಳ ಕೈಯಲ್ಲಿ ಹಾಕಿ ಹೋಗುವೆಯಾ ?"

ರಾಣಿ ಕುತೂಹಲದಿಂದ ರಾಜನ ಕಡೆ ನೋಡಿದಳು. ಅವಳಿಗೆ ಅವನ ಅಭಿಪ್ರಾಯ ತಿಳಿಯಲಿಲ್ಲ.

ರಾಜ- "ನಿನ್ನಿಂದ ನನಗೊಂದು ವರ ಬೇಕಾಗಿದೆ."

ರಾಣಿ- "ಸಂತೋಷದಿಂದ ಕೇಳಿ."

ರಾಜ- "ಇದು ನನ್ನ ಕೊನೆಯ ಪ್ರಾರ್ಥನೆ. ನಾನು ಹೇಳಿದ್ದನ್ನು ಮಾಡುವೆಯಾ ?"

ರಾಣಿ- "ತಲೆ ತಗ್ಗಿಸಿ ಮಾಡುತ್ತೇನೆ."

ರಾಜ- "ನೋಡು, ಮಾತು ಕೊಟ್ಟಿದ್ದೀಯಾ. ಇಲ್ಲವೆನ್ನಬಾರದು."

ರಾಣಿ ನಡುಗುತ್ತ "ನೀವು ಹೇಳುವುದೇ ತಡ" ಎಂದಳು.

ರಾಜ- "ನಿನ್ನ ಕತ್ತಿಯನ್ನು ನನ್ನೆದೆಗೆ ಊರು."

ರಾಣಿಗೆ ವಜ್ರಾಘಾತವಾದಂತಾಯಿತು. "ಪ್ರಾಣನಾಥ" ಎಂದಳು. ಮುಂದೆ ಅವಳೇನನ್ನೂ ಆಡಲಾರದಾದಳು. ಕಣ್ಣೀನಲ್ಲಿ ನೈರಾಶ್ಯ ತುಂಬಿಕೊಂಡಿತು.

ರಾಜ- "ನಾನು ಬೇಡಿ ತೊಡಲು ಬದುಕಿರಲಾರೆ."

ರಾಣಿ- "ನನ್ನಿಂದ ಹೇಗೆ ಸಾಧ್ಯ ?"

ಬುಂದೇಲರ ಐದನೆಯ ಸಿಪಾಯಿ ಕೆಳಗುರುಳಿದ. ಅವನೇ ಕೊನೆಯವನು. ರಾಜ ದುಃಖಕೋಪಗಳಿಂದ ಸಿಡುಗುಟ್ಟುತ್ತ ಹೇಳಿದ- "ಈ ಸಾಹಸಕ್ಕೆ ಮರ್ಯಾದೆ ಉಳಿಸಿಕೊಳ್ಳುವ ಗರ್ವವೆ ?"

ಬಾದಶಹನ ಸಿಪಾಯಿಗಳು ರಾಜನ ಕಡೆ ನುಗ್ಗಿದರು. ರಾಜ ನಿರಾಶೆಯಿಂದ ರಾಣಿಯ ಕಡೆ ನೋಡಿದ. ರಾಣಿ ಒಂದು ಕ್ಷಣ ಅನಿಶ್ಚಿತಳಾಗಿ ನಿಂತಿದ್ದಳು. ಆದರೆ ಸಂಕಟ ಸಮಯದಲ್ಲಿ ನಮ್ಮ ನಿರ್ಧಾರಶಕ್ತಿ ಬಲಗೊಳ್ಳುತ್ತದೆ. ಇನ್ನೇನು ಸಿಪಾಯಿಗಳು ರಾಜನನ್ನು ಹಿಡಿಯಬೇಕು, ಅಷ್ಟರಲ್ಲಿ ಸಾರಂಧ ಮಿಂಚಿನಂತೆ ಹಾರಿ ರಾಜನ ಎದೆಗೆ ತನ್ನ ಕತ್ತಿಯನ್ನು ಚುಚ್ಚಿದಳು.

ಪ್ರೇಮಿಯ ನಾವೆ ಪ್ರೇಮಸಾಗರದಲ್ಲಿ ಮುಳುಗಿತು. ರಾಜನ ಎದೆಯಿಂದ ರಕ್ತಧಾರೆ ಹರಿಯಿತು; ಆದರೆ ಮುಖದಲ್ಲಿ ಶಾಂತಿ ಕವಿದಿತ್ತು.

ಎಂಥ ಹೃದಯ ! ಗಂಡನಿಗಾಗಿ ಪ್ರಾಣ ಕೊಡುತ್ತಿದ್ದ ಹೆಂಡತಿ ಈಗ ಅವನ ಪ್ರಾಣ ತೆಗೆದುಕೊಂಡಿದ್ದಳು. ಯಾವ ಎದೆಯನ್ನಪ್ಪಿ ಅವಳು ಯೌವನದ ಸುಖವನ್ನು ಸೂರೆಗೊಂಡಿದ್ದಳೋ, ಯಾವ ಎದೆ ಅವಳ ಆಸೆ ಅಭಿಲಾಷೆಗಳ ಕೇಂದ್ರವಾಗಿತ್ತೋ, ಅವಳ ಅಭಿಮಾನವನ್ನು ಪೋಷಿಸಿತ್ತೋ ಅದನ್ನೇ ಸಾರಂಧಳ ಕತ್ತಿ ಭೇದಿಸಿತ್ತು. ಯಾವಳಾದರೂ ಹೆಂಗಸಿನ ಕತ್ತಿ ಈ ಕೆಲಸ ಮಾಡಿದೆಯೆ ?

ಅಯ್ಯೋ ! ಆತ್ಮಾಭಿಮಾನಕ್ಕೆ ಎಂತಹ ವಿಷಾದಕರವಾದ ಅಂತ್ಯ ! ಉದಯಪುರ, ಮಾಳವಾಡಗಳ ಇತಿಹಾಸದಲ್ಲಿ ಸಹ ಇಂಥ ಆತ್ಮಗೌರವದ ಘಟನೆಗಳು ಸಿಗುವುದಿಲ್ಲ.

ಬಾದಶಹನ ಸಿಪಾಯಿಗಳು ಸಾರಂಧಳ ಈ ಧೈರ್ಯಸಾಹಸಗಳನ್ನು ಕಂಡು ದಂಗಾದರು.

ಬಾದಶಹನ ಸರದಾರ ಮುಂದೆ ಬಂದು ಹೇಳಿದ- "ರಾಣೀಸಾಹೇಬ, ದೇವರೇ ಸಾಕ್ಷಿ. ನಾವೆಲ್ಲರೂ ನಿಮ್ಮ ಗುಲಾಮರು. ನಿಮ್ಮ ಆಜ್ಞೆಯನ್ನು ತನುಮನದಿಂದ ಪಾಲಿಸುತ್ತೇವೆ."

ಸಾರಂಧಾ ಹೇಳಿದಳು- "ನಮ್ಮ ಮಕ್ಕಳಲ್ಲಿ ಯಾರಾದರೂ ಬದುಕಿದ್ದರೆ ಈ ಎರಡು ಹೆಣಗಳನ್ನೂ ಅವರಿಗೆ ತಲುಪಿಸಿಬಿಡಿ."

ಹೀಗೆಂದು ಅವಳು ಆ ಕತ್ತಿಯನ್ನೇ ತನ್ನ ಎದೆಗೂ ಚುಚ್ಚಿಕೊಂಡಳು. ಪ್ರಜ್ಞೆತಪ್ಪಿ ಕೆಳಗುರುಳಿದಾಗ ಅವಳ ತಲೆ ರಾಜಾ ಚಂಪತರಾಯನ ಎದೆಯ ಮೇಲಿತ್ತು.

# 18. ಪೈಪೋಟಿ

ಚೋಖು ಭಗತ್ ಮತ್ತು ಬೇಚನ್ ಚೌಧರಿ ಅವರ ಮನೆತನಗಳ ನಡುವೆ ಮೂರು ತಲೆಮಾರುಗಳಿಂದ ಹಗೆತನ ಬೆಳೆದುಬಂದಿತ್ತು. ಯಾವದೋ ಜಮೀನಿನ ಎಲ್ಲೆಕಟ್ಟಿಗೆ ಸಂಬಂಧಿಸಿದ ಜಗಳ ಅದು. ಅವರ ಮುತ್ತಾತಂದಿರ ನಡುವೆ ಹೊಡೆದಾಟ ಬಡಿದಾಟವಾಗಿ ರಕ್ತಪಾತವಾಗಿತ್ತು. ಅಪ್ಪಂದಿರ ಕಾಲಕ್ಕೆ ವ್ಯಾಜ್ಯ-ಖಟ್ಲೆಗೆ ಮೊದಲಾಯಿತು; ಎಷ್ಟೋ ಸಲ ಹೈಕೋರ್ಟಿನವರೆಗೂ ಹೋಯಿತು. ಮಕ್ಕಳ ಕಾಲಕ್ಕೆ ಹೋರಾಟ ಇದ್ದಿದ್ದೂ ಘೋರವಾಗಿ, ಇನ್ನು ಹೋರಾಡಲು ಇಬ್ಬರಿಗೂ ಶಕ್ತಿ ಸಾಲದು ಎನ್ನುವಷ್ಟರ ಮಟ್ಟಿಗೆ ಬೆಳೆಯಿತು. ಮೊದಲು ಇದೇ ಹಳ್ಳಿ ಇಬ್ಬರಿಗೂ ಅರ್ಧ ಅರ್ಧ ಹಿಸ್ಸೆಯಾಗಿತ್ತು. ಈಗ ಅವರ ಹತ್ತಿರ ಆ ವ್ಯಾಜ್ಯದ ಜಮೀನನ್ನು ಬಿಟ್ಟು ಬೇರೆ ಒಂದು ಅಂಗುಲದಷ್ಟು ಭೂಮಿಯೂ ಉಳಿದಿರಲಿಲ್ಲ. ಭೂಮಿ ಹೋಯಿತು, ಹಣ ಹೋಯಿತು, ಮಾನಮರ್ಯಾದೆ ಹೋಯಿತು. ಆದರೆ ವ್ಯಾಜ್ಯ ಮಾತ್ರ ಹೇಗಿತ್ತೋ ಹಾಗೆಯೇ ಉಳಿಯಿತು. ಹೈಕೋರ್ಟಿನ ನ್ಯಾಯದುರಂಧರರಿಗೆ ಈ ಮಾಮೂಲೀ ಜಗಳವನ್ನು ಬಗೆಹರಿಸಲಾಗಲಿಲ್ಲ.

ಈ ಇಬ್ಬರು ಸಜ್ಜನರು ಇಡೀ ಹಳ್ಳಿಯನ್ನು ಎರಡು ವಿರೋಧೀ ಬಣಗಳನ್ನಾಗಿ ಭಾಗ ಮಾಡಿದ್ದರು. ಒಂದು ಗುಂಪಿನವರು ಚೌಧರಿಯ ಮನೆಬಾಗಿಲಲ್ಲಿ ಭಂಗಿಯ ಸೊಪ್ಪನ್ನು ಅರೆದರೆ ಇನ್ನೊಂದು ಗುಂಪಿನವರು ಭಗತನ ಜಗಲಿಯ ಮೇಲೆ ಗಾಂಜಾ-ಚರಸ್ಸುಗಳನ್ನು ಎಳೆಯುತ್ತಿದ್ದರು. ಹೆಂಗಸರು ಮಕ್ಕಳಲ್ಲಿ ಸಹ ಎರಡು ಗುಂಪುಗಳಾಗಿದ್ದವು. ಇದು ಇಬ್ಬರು ಸಜ್ಜನರ ಸಾಮಾಜಿಕ, ಧಾರ್ಮಿಕ ವಿಚಾರಗಳನ್ನು ಸಹ ಎರಡು ಮಾಡುವಷ್ಟರ ಮಟ್ಟಿಗೆ ಹೋಗಿತ್ತು. ಚೌಧರಿ ಉಟ್ಟ ಬಟ್ಟೆಯಲ್ಲಿಯೇ ತಂಬಿಟ್ಟು ಹೊಡೆಯುತ್ತಿದ್ದ; ಭಗತನನ್ನು ಆಷಾಢಭೂತಿಯೆನ್ನುತ್ತಿದ್ದ. ಭಗತ ಬಟ್ಟೆ ಕಳಚದೆ ನೀರನ್ನು ಸಹ ಕುಡಿಯುತ್ತಿರಲಿಲ್ಲ; ಚೌಧರಿಯನ್ನು ಭ್ರಷ್ಟನೆನ್ನುತ್ತಿದ್ದ. ಭಗತ ಸನಾತನಧರ್ಮ ಆಚರಿಸಿದರೆ ಚೌಧರಿ ಆರ್ಯಸಮಾಜದ ಆಶ್ರಯ ಪಡೆದಿದ್ದ. ಚೌಧರಿ ಸಾಮಾನು ಕೊಳ್ಳುತ್ತಿದ್ದ ಬಟ್ಟೆ ಅಂಗಡಿ, ಚಿಲ್ಲರೆ ಅಂಗಡಿ, ತರಕಾರಿ ಅಂಗಡಿಗಳ ಕಡೆ ತಲೆಹಾಕುವುದು ಸಹ ಪಾಪವೆಂದು ಭಗತ ತಿಳಿಯುತ್ತಿದ್ದ. ಭಗತನ ಮಿಠಾಯಿ ಅಂಗಡಿಯ ಸಿಹಿತಿಂಡಿ, ಅವನ ಗೌಳಿಗನ ಹಾಲು, ಗಾಣಿಗನ ಎಣ್ಣೆ ಚೌಧರಿಗೆ ವರ್ಜ್ಯವಾಗಿತ್ತು. ಆರೋಗ್ಯದ ಸಿದ್ಧಾಂತಗಳು ಸಹ ಬೇರೆ

ಬೇರೆಯಾಗುವಷ್ಟರಮಟ್ಟಿಗೆ ಅವರ ಒಡಕು ಹೋಗಿತ್ತು. ಭಗತ ವೈದ್ಯರ ದಾಸನಾಗಿದ್ದ; ಚೌಧರಿ ಯುನಾನಿ ಪದ್ಧತಿಯನ್ನು ಒಪ್ಪಿಕೊಂಡಿದ್ದ. ಕಾಹಿಲೆಯಿಂದ ಸತ್ತರೂ ಸರಿ, ಇಬ್ಬರೂ ತಮ್ಮ ತಮ್ಮ ಸಿದ್ಧಾಂತಗಳನ್ನು ಮುರಿಯಲು ಸಿದ್ಧರಿರಲಿಲ್ಲ.

## 2

ದೇಶದಲ್ಲಿ ರಾಜಕೀಯ ಆಂದೋಳನ ಷುರುವಾದಾಗ ಅದರದ್ದೊಂದು ಕಿರಿ ಸದ್ದು ಆ ಹಳ್ಳಿಗೂ ಬಂದು ಮುಟ್ಟಿತು. ಚೌಧರಿ ಆಂದೋಲನದ ಪಕ್ಷ ಹಿಡಿದ; ಭಗತ ಅದರ ಪ್ರತಿಪಕ್ಷಿಯಾದ. ಯಾವನೋ ಒಬ್ಬ ಮಹಾಶಯ ಬಂದು ಹಳ್ಳಿಯಲ್ಲಿ ರೈತರ ಸಭೆ ಆರಂಭಿಸಿದ. ಚೌಧರಿ ಅದರಲ್ಲಿ ಸೇರಿದ; ಭಗತ ದೂರ ನಿಂತ. ಜನಜಾಗ್ರತಿ ಇದ್ದಿದ್ದೂ ಹೆಚ್ಚಿತ್ತ; ಸ್ವರಾಜ್ಯದ ಚರ್ಚೆಯಾಗತೊಡಗಿತು. ಚೌಧರಿ ಸ್ವರಾಜ್ಯವಾದಿಯಾದ; ಭಗತ ರಾಜಭಕ್ತಿಯ ಪಕ್ಷ ವಹಿಸಿದ. ಚೌಧರಿಯ ಮನೆ ಸ್ವರಾಜ್ಯವಾದಿಗಳಿಗೆ ಕಟ್ಟೆಯಾಯಿತು. ಭಗತನ ಮನೆ ರಾಜಭಕ್ತರ ಕ್ಲಬ್ ಆಯಿತು.

ಚೌಧರಿ ಜನತೆಯಲ್ಲಿ ಸ್ವರಾಜ್ಯವಾದದ ಪ್ರಚಾರ ಮಾಡಲಾರಂಭಿಸಿದ- "ಮಿತ್ರರೇ, ಸ್ವರಾಜ್ಯವೆಂದರೆ ನಮ್ಮದೇ ರಾಜ್ಯಭಾರವೆಂದರ್ಥ. ನಮ್ಮ ದೇಶದಲ್ಲಿ ನಾವು ರಾಜ್ಯಭಾರ ಮಾಡುವುದು ಒಳ್ಳೆಯದೋ, ಬೇರೆಯವರು ರಾಜ್ಯಭಾರ ಮಾಡುವುದು ಒಳ್ಳೆಯದೋ ?"

ಜನ ಹೇಳಿದರು- "ನಮ್ಮದೇ ರಾಜ್ಯಭಾರ ಸರಿ, ಅದೇ ಒಳ್ಳೆಯದು."

ಚೌಧರಿ- "ಹಾಗಾದರೆ ಆ ಸ್ವರಾಜ್ಯ ಹೇಗೆ ಸಿಗುತ್ತೆ? ಆತ್ಮಬಲದಿಂದ, ಪುರುಷಾರ್ಥದಿಂದ, ಒಗ್ಗಟ್ಟಿನಿಂದ. ಆದ್ದರಿಂದ ನೀವು ಪರಸ್ಪರ ದ್ವೇಷಿಸೋದನ್ನ ಬಿಡಬೇಕು. ನಿಮ್ಮ ಜಗಳಗಳನ್ನ ನೀವು ನೀವೇ ಕೂಡಿಕೊಂಡು ಬಗೆಹರಿಸಿಕೊಳ್ಳಬೇಕು."

ಜನರಲ್ಲಿ ಯಾವನೋ ಒಬ್ಬ ಸಂದೇಹವೆತ್ತಿದ- "ನೀವು ಮಾತ್ರ ದಿನಾ ಕೋರ್ಟಿನ ಬಾಗಿಲು ಕಾಯ್ತೀರಿ."

ಚೌಧರಿ- "ಹೌದು, ಆದರೆ ಇವತ್ತಿನಿಂದ ಕೋರ್ಟಿನಲ್ಲಿ ಕಾಲಿಟ್ಟರೆ ನನಗೆ ಗೋಹತ್ಯೆಯ ಪಾಪ ತಟ್ಟಲಿ. ನೀವು ಬೆವರು ಸುರಿಸಿ ಸಂಪಾದಿಸಿದ ಹಣಾನ ಮಕ್ಕಳುಮರಿಗೆ ತಿನ್ನಿಸಿ. ಉಳಿದರೆ ಪರೋಪಕಾರಕ್ಕೆ ಖರ್ಚುಮಾಡಿ. ವಕೀಲರ ಜೇಬನ್ನೇಕೆ ತುಂಬ್ತೀರಿ. ಪೋಲೀಸರಿಗೆ ಯಾಕೆ ಲಂಚ ಕೊಡ್ತೀರಿ; ಸಣ್ಣಪುಟ್ಟ ಜನಗಳ ಕಾಲಿಗೇಕೆ ಬೀಳ್ತೀರಿ ? ಹಿಂದೆ ನಮ್ಮ ಮಕ್ಕಳು ನಮ್ಮ ಧರ್ಮಾನ ಕಲೀತಿದ್ದರು. ಅವರು ಸದಾಚಾರಿಗಳೂ, ತ್ಯಾಗಿಗಳೂ ಧರ್ಮಿಷ್ಠರೂ ಆಗ್ತಿದ್ದರು. ಈಗ ಅವರು ವಿದೇಶೀ ಶಾಲೆಗಳಲ್ಲಿ ಓದಿ ಚಾಕರಿ ಮಾಡ್ತಾರೆ, ಲಂಚ ತಿಂತಾರೆ, ಷೋಕಿ ಮಾಡ್ತಾರೆ. ತಮ್ಮ ದೇವರನ್ನ, ಹಿರಿಯರನ್ನ ಹೀಗಳೀತಾರೆ. ಸಿಗರೇಟು ಸೇದುತಾರೆ, ಕ್ರಾಪ್ ಬಿಡ್ತಾರೆ, ಅಧಿಕಾರಿಗಳ ಬಾಗಿಲು ಕಾಯ್ತಾರೆ. ನಮ್ಮ ಮಕ್ಕಳಿಗೆ ನಮ್ಮ ಧರ್ಮಾನುಸಾರ

ಶಿಕ್ಷಣ ಕೊಡೋದು ನಮ್ಮ ಕರ್ತವ್ಯವಲ್ಲವೆ ?"

ಜನತೆ- "ಚಂದಾ ಎತ್ತಿ ಪಾಠಶಾಲೆ ತೆಗೀಬೇಕು."

ಚೌಧರಿ- "ಹಿಂದೆ ನಾವು ಕುಡಿಯೋದು ಪಾಪ ಅಂದುಕೊಂಡಿದ್ದೆವು. ಈಗ ಹಳ್ಳಿ ಹಳ್ಳೀಲಿ, ಗಲ್ಲಿಗಲ್ಲೀಲಿ ಹೆಂಡದಂಗಡಿಗಳಿವೆ. ನಾವು ಬೆವರುಸುರಿಸಿ ಸಂಪಾದಿಸಿದ ಕೋಟ್ಯಾಂತರ ರೂಪಾಯಿಗಳನ್ನ ಭಂಗಿಸಾರಾಯಿಗಳ ಮೇಲೆ ಹಾಳುಮಾಡ್ತೀವಿ."

ಜನತೆ- "ಯಾರು ಭಂಗಿಸಾರಾಯಿ ಕುಡೀತಾರೋ ಅವರಿಗೆ ದಂಡ ವಿಧಿಸಬೇಕು !"

ಚೌಧರಿ- "ನಮ್ಮ ಅಜ್ಜಅಪ್ಪಂದಿರೆಲ್ಲಾ ದೊಡ್ಡವರಾಗಲೀ ಚಿಕ್ಕವರಾಗಲೀ ಗಂಜಿ ಹಾಕಿದ ಕೈಮಗ್ಗದ ಬಟ್ಟೆ ಉಡ್ತಿದ್ದರು. ನಮ್ಮ ಅಜ್ಜಿಯರು ಚರಕದಿಂದ ನೂಲು ತೆಗೀತಿದ್ದರು. ಹಣವೆಲ್ಲಾ ದೇಶದಲ್ಲೇ ಇರ್ತಿತ್ತು. ನಮ್ಮ ನೇಕಾರಬಂಧುಗಳು ಆನಂದದಿಂದ ಬದುಕಿದ್ದರು. ಈಗ ನಾವು ವಿದೇಶದಲ್ಲಿ ಮಾಡಿದ ನಾಜೂಕಾದ ಬಟ್ಟೆ ತೊಡ್ತೀವಿ. ಹೀಗೆ ಹೊರದೇಶದ ಜನ ನಮ್ಮ ಹಣಾನೆಲ್ಲಾ ಲೂಟಿಹೊಡೀತಿದಾರೆ. ಬಡ ನೇಕಾರರು ಕಂಗಾಲಾಗಿದಾರೆ. ನಮ್ಮ ಬಂಧುಗಳ ಅನ್ನಾನ ಕಿತ್ತುಕೊಂಡು ಇನ್ನೊಬ್ಬರಿಗೆ ಕೊಡೋದು ಯಾವ ಧರ್ಮ ?"

ಜನತೆ- "ಕೈಮಗ್ಗದ ಬಟ್ಟೆ ಈಗ ಎಲ್ಲೂ ಸಿಗೋದೇ ಇಲ್ಲ."

ಚೌಧರಿ- "ಮನೇಲಿ ನೇಯ್ದ ಬಟ್ಟೆ ತೊಡಿ, ಕೋರ್ಟುಕಚೇರಿ ತ್ಯಜಿಸಿ, ಕುಡಿತ ಬಿಡಿ, ಮಕ್ಕಳಿಗೆ ಧರ್ಮಕರ್ಮ ಹೇಳಿಕೊಡಿ, ಒಗ್ಗಟ್ಟಿನಿಂದ ಇರಿ-ಸಾಕು, ಇದೇ ಸ್ವರಾಜ್ಯ. ಸ್ವರಾಜ್ಯಕ್ಕೋಸ್ಕರ ರಕ್ತದ ಹೊಳೆ ಹರಿಸಿ ಅಂತ ಯಾರು ಹೇಳ್ತಾರೋ ಅವರು ಹುಚ್ಚರು. ಅವರ ಮಾತು ಕೇಳಬೇಡಿ."

ಜನ ಚೌಧರಿಯ ಮಾತುಗಳನ್ನು ಬಹಳ ಉತ್ಸಾಹದಿಂದ ಕೇಳುತ್ತಿದ್ದರು. ದಿನದಿನಕ್ಕೆ ಶ್ರೋತೃಗಳ ಸಂಖ್ಯೆ ಹೆಚ್ಚುತ್ತಹೋಯಿತು. ಎಲ್ಲರೂ ಚೌಧರಿಯ ಭಕ್ತರಾದರು.

## 3

ಭಗತನೂ ರಾಜಭಕ್ತಿ ಉಪದೇಶ ಮಾಡತೊಡಗಿದ-

"ಬಂಧುಗಳೇ, ರಾಜನ ಕೆಲಸ ರಾಜ್ಯವಾಳೋದು, ಪ್ರಜೆಗಳ ಕೆಲಸ ಅವನ ಆಜ್ಞೆಯನ್ನ ಪಾಲಿಸೋದು. ಇದನ್ನೇ ರಾಜಭಕ್ತಿ ಅಂತಾರೆ. ನಮ್ಮ ಧರ್ಮಗ್ರಂಥಗಳಲ್ಲಿ ಇರೋ ರಾಜಭಕ್ತಿಯ ಪಾಠ ಅಂದರೆ ಇದೇಯೇ. ರಾಜ ದೇವರ ಪ್ರತಿನಿಧಿ; ಅವನ ಆಜ್ಞೆಗೆ ವಿರುದ್ಧವಾಗಿ ನಡೆಯೋದು ಮಹಾಪಾತಕ. ರಾಜವಿರೋಧಿಯಾದ ಪ್ರಾಣಿ ನರಕಕ್ಕೆ ಹೋಗ್ತಾನೆ."

ಒಂದು ಸಂದೇಹ- "ರಾಜ ಸಹ ತನ್ನ ಧರ್ಮಾನ ಪಾಲಿಸಬೇಕು, ಅಲ್ಲವೆ ?"

ಇನ್ನೊಂದು ಸಂದೇಹ- "ನಮ್ಮ ರಾಜರು ನಾಮ್-ಕಾ-ವಾಸ್ತೆ ರಾಜರು. ನಿಜವಾದ

ರಾಜರು ಅಂದರೆ ವಿಲಾಯಿತಿಯ ವ್ಯಾಪಾರಿಗಳು, ಸಾಹುಕಾರರು''

ಮೂರನೆಯ ಸಂದೇಹ- "ವ್ಯಾಪಾರಿಗೆ ಹಣ ಸಂಪಾದಿಸೋದು ಗೊತ್ತು. ರಾಜ್ಯ ಆಳೋದು ಏನು ಗೊತ್ತು?''

ಭಗತ- "ಜನ ನಿಮಗೆ ಕೋರ್ಟಿಗೆ ಹೋಗಬೇಡಿ, ಪಂಚಾಯತೀಲಿ ವ್ಯಾಜ್ಯ ಬಗೆ ಹರಿಸಿಕೊಳ್ಳಿ ಅಂತ ಉಪದೇಶ ಮಾಡ್ತಾರೆ. ಆದರೆ ಹಾಲು ನೀರನ್ನು ಬೇರೆ ಬೇರೆ ಮಾಡಿ ಸರಿಯಾಗಿ ನ್ಯಾಯ ತೀರ್ಮಾನ ಮಾಡಬಲ್ಲ ಪಂಚರು ಎಲ್ಲಿ ಸಿಗ್ತಾರೆ? ಎಲ್ಲರೂ ಮುಖ ನೋಡಿ ಮಣೆ ಹಾಕೋರೇ! ಯಾವನಿಗೆ ವಶೀಲಿ ಇದೆಯೋ ಗೆಲವು ಅವನಿಗೆ; ಯಾವನಿಗೆ ಯಾವ ವಶೀಲಿಯೂ ಇಲ್ಲವೋ ಆ ಬಡಪಾಯಿ ಸತ್ತು ಹಾಳಾಗ್ತಾನೆ. ಕೋರ್ಟಿನಲ್ಲಾದರೋ ಎಲ್ಲವೂ ಕಾಯಿದೆಯ ಪ್ರಕಾರ ನಡೆಯುತ್ತೆ. ಅಲ್ಲಿ ದೊಡ್ಡವರು ಚಿಕ್ಕವರು ಎಲ್ಲರೂ ಸರಿಸಮಾನರೇ. ಅಲ್ಲಿ ಹುಲಿ-ಕುರಿ ಎರಡೂ ಒಂದೇ ಕೊಳದಲ್ಲಿ ನೀರು ಕುಡಿಯುತ್ತವೆ.''

ಎರಡನೆಯ ಸಂದೇಹ- "ಕೋರ್ಟಿನದು ಹೆಸರಿಗಷ್ಟೇ ನ್ಯಾಯ. ಯಾರು ಸುಳ್ಳು ಸಾಕ್ಷಿ ಸೃಷ್ಟಿಸಬಲ್ಲರೋ, ಯಾರಿಗೆ ಕುತಂತ್ರಿಗಳಾದ ವಕೀಲರು ಇರ್ತಾರೆಯೋ ಅವರಿಗೆ ಗೆಲುವಾಗುತ್ತೆ. ಸುಳ್ಳು-ನಿಜ ಅಂತ ಬಿಡಿಸಿ ನೋಡೋರು ಯಾರಿದಾರೆ! ಸುಮ್ಮನೆ ಒಂದು ಹೊರೆ ತೊಂದರೆ ಅಷ್ಟೇ.''

ಭಗತ- "ವಿದೇಶೀಮಾಲನ್ನ ಕೊಳ್ಳಬೇಡಿ ಅಂತ ಬೋಧಿಸ್ತಾರೆ. ಇದು ಬಡವರ ಹೊಟ್ಟೇಮೇಲೆ ಹೊಡೆಯೋ ಮಾತು. ಪೇಟೇಲಿ ಅಗ್ಗದಲ್ಲಿ ಒಳ್ಳೇ ವಸ್ತು ಯಾವುದು ಸಿಗುತ್ತೋ ಅದನ್ನ ನಾವು ಕೊಂಡುಕೋಬೇಕು. ಅದು ಸ್ವದೇಶಿಯಾದರೇನು, ವಿದೇಶಿಯಾದರೇನು? ಕೆಲಸಕ್ಕೆ ಬಾರದ ಸ್ವದೇಶೀ ಮಾಲಿನ ಮೇಲೆ ಸುರಿಯೋಕ್ಕೆ ನಮ್ಮ ಹಣವೇನು ಪುಗಸಟ್ಟೆ ಬರುತ್ತೆಯೆ?''

ಒಂದು ಸಂದೇಹ- "ಹಣ ನಮ್ಮ ದೇಶದಲ್ಲೇ ಇರುತ್ತೋ. ಪರದೇಶದವರ ಕೈಗೆ ಹೋಗೋಲ್ಲವೊ.''

ಇನ್ನೊಂದು ಸಂದೇಹ- "ನಮ್ಮ ಮನೇ ಊಟ ಚೆನ್ನಾಗಿಲ್ಲ ಅಂತ ಪರಜಾತಿಯೋರ ಮನೇಲಿ ಊಟ ಮಾಡೋದೆ?''

ಭಗತ- "ಜನ ಹೇಳ್ತಾರೆ, ಮಕ್ಕಳನ್ನ ಸರಕಾರೀ ಶಾಲೇಗೆ ಕಳಿಸಬೇಡಿ ಅಂತ. ಸರಕಾರೀ ಶಾಲೇಲಿ ಓದದೆ ಹೋಗಿದ್ದರೆ ನಮ್ಮ ಅಣ್ಣತಮ್ಮಂದಿರಿಗೆ ದೊಡ್ಡ ನೌಕರಿ ಹೇಗೆ ಸಿಗ್ತಾ ಇತ್ತಂತೆ? ಅವರು ದೊಡ್ಡ ದೊಡ್ಡ ಕಾರ್ಖಾನೆಗಳನ್ನು ಹೇಗೆ ನಡಸ್ತಿದ್ದರಂತೆ? ವಿದ್ಯೆ ಕಲೀದೇ ಈಗ ಜಗತ್ತಿನಲ್ಲಿ ಬಾಳೋಕ್ಕಾಗೋಲ್ಲ. ಹಿಂದಿನ ಕಾಲದ ತರಹ ವಿದ್ಯೆ ಕಲಿತರೆ ಪಂಚಾಂಗ ನೋಡೋದು, ಪುರಾಣ ಹೇಳೋದರ ಹೊರತು ಬೇರೆ ಇನ್ನೇನಾಗುತ್ತೆ? ಜಾತಕ ಪಂಚಾಂಗ ನೋಡೋ ಜನ ಏನು ರಾಜಕಾರ್ಯ ತಾನೇ ನಡೆಸಾರು?''

ಒಂದು ಸಂದೇಹ- "ನಮಗೆ ರಾಜಕಾರ್ಯಬೇಕಾಗಿಲ್ಲ. ನಾವು ನಮ್ಮ ಬೇಸಾಯ ಮಾಡಿಕೊಂಡಿದೀವಿ; ಯಾರಿಗೂ ಗುಲಾಮರಾಗಿಲ್ಲ.''

ಇನ್ನೊಂದು ಸಂದೇಹ- "ಯಾವ ವಿದ್ಯೆಯಿಂದ ಅಹಂಕಾರ ಬೆಳೆಯುತ್ತೋ ಅದನ್ನ

ಕಲಿಯೋಕ್ಕಿಂತ ಮೂರ್ಖರಾಗಿರೋದು ವಾಸಿ. ಈ ಹೊಸ ವಿದ್ಯೆ ಕಲಿತು ತಾನೇ ಜನ ಸೂಟುಬೂಟು, ಹ್ಯಾಟುಗೀಟು ಹಾಕಿಕೊಳ್ಳೋದು; ತಮ್ಮ ಷೋಕಿಗೋಸ್ಕರ ದೇಶದ ಹಣಾನ ತೊಗೊಂಡು ಹೋಗಿ ವಿದೇಶೀಯರ ಜೇಬಿಗೆ ತುಂಬೋದು."

ಭಗತ್- "ಜನರ ಗಮನ ಈಚೆಗೆ ಭಂಗಿ ಸಾರಾಯಿ ಕಡೆ ಹರಿದಿದೆ. ಅವು ಕೆಟ್ಟ ಚಟ ಅಂತ ಎಲ್ಲರಿಗೂ ಗೊತ್ತು. ಆದರೆ ಅಂಗಡಿ, ಹೆಂಡದಂಗಡಿಗಳಿಂದ ಸರಕಾರಕ್ಕೆ ವರ್ಷಕ್ಕೆ ಕೋಟ್ಯಾಂತರ ರೂಪಾಯಿ ಸಂಪಾದನೆಯಾಗುತ್ತೆ. ಈ ಅಂಗಡಿಗಳಿಗೆ ಹೋಗೋದು ನಿಲ್ಲಿಸೋದರಿಂದ ಜನರ ಚಟ ಬಿಟ್ಟುಹೋಗೋದಾದರೆ ನಿಜಕ್ಕೂ ಒಳ್ಳೇದೆ ! ಅವರು ಅಂಗಡಿಗಳಿಗೆ ಹೋಗದೆ ಇದ್ದರೆ ಹೇಗೋ ಕಳ್ಳತನದಿಂದ, ಒಂದಕ್ಕೆ ಎರಡು ಪಟ್ಟು, ಮೂರು ಪಟ್ಟು ಬೆಲೆ ತೆತ್ತು, ಶಿಕ್ಷೆ ಅನುಭವಿಸೋಕ್ಕೆ ತಯಾರಾಗಿ ತಮ್ಮ ಚಟ ತೀರಿಸ್ಕೋತಾರೆ. ಹೀಗೆ ಸರಕಾರಕ್ಕೂ ನಷ್ಟವಾಗಿ, ಬಡರೈತರಿಗೂ ನಷ್ಟವಾಗೋ ಕೆಲಸಾನ ಏಕೆ ಮಾಡಬೇಕು ? ಇನ್ನು ಕೆಲವರಿಗೆ ಮಾದಕಪದಾರ್ಥಗಳನ್ನ ಸೇವಿಸೋದರಿಂದ ಉಪಯೋಗವಿದೆ. ನಾನೇ ಒಂದು ದಿನ ಅಫೀಮು ತಿನ್ನದೇ ಇದ್ದರೆ ಕೈಕಾಲುಗಂಟುಗಳು ನೋಯುತ್ತವೆ; ಉಸಿರು ಸಿಕ್ಕಿಹಾಕಿಕೊಳ್ಳುತ್ತೆ; ಶೀತವಾಗುತ್ತೆ."

ಒಂದು ಧ್ವನಿ- "ಮದ್ಯ ಕುಡಿಯೋದರಿಂದ ದೇಹದಲ್ಲಿ ಸ್ಫೂರ್ತಿ ಉಕ್ಕುತ್ತೆ."

ಒಂದು ಸಂದೇಹ- "ಸರಕಾರ ಅಧರ್ಮದಿಂದ ಹಣ ಸಂಪಾದಿಸುತ್ತೆ. ಅಧರ್ಮಿಗಳ ರಾಜ್ಯಭಾರದಲ್ಲಿ ಪ್ರಜೆಗಳ ಕಲ್ಯಾಣ ಆಗೋ ಬಗೆ ಹೇಗೆ ?"

ಇನ್ನೊಂದು ಸಂದೇಹ- "ಮೊದಲು ಸಾರಾಯಿ ಕುಡಿಸಿ ಹುಚ್ಚುಹಿಡಿಸಿದರು. ಅದರ ಚಟದಿಂದಾಗಿ ಹಣದ ಗೀಳು ಹತ್ತಿಕೊಂಡಿತು. ಅನ್ನ ಬಟ್ಟೇಗೂ ಆಗಿ, ಹೆಂಡ ಸಾರಾಯಿಗೂ ಮಿಗೋ ಅಷ್ಟು ಮಜೂರಿ ಎಲ್ಲಿ ಸಿಗಬೇಕು. ಹೆಂಡ ಸಾರಾಯಿ ಕುಡೀಬೇಕಾದರೆ ಮಕ್ಕಳು ಮರೀನ ಉಪವಾಸ ಕೆಡವಬೇಕು, ಇಲ್ಲವೇ ಕಳ್ಳತನ ಮಾಡಬೇಕು, ಜೂಜಾಡಬೇಕು, ಅಧರ್ಮದ ಕೆಲಸ ಮಾಡಬೇಕು. ಹೆಂಡದಂಗಡಿ ಅಂದರೆ ಏನು ? ನಮ್ಮ ಗುಲಾಮಗಿರಿಯ ಕಟ್ಟೆ ಅದು !"

## 4

ಚೌಧರಿಯ ಉಪದೇಶ ಕೇಳಲು ಜನ ಕಿಕ್ಕಿರಿಯುತ್ತಿದ್ದರು. ನಿಂತುಕೊಳ್ಳಲು ಸಹ ಸ್ಥಳವಿರುತ್ತಿರಲಿಲ್ಲ. ದಿನದಿನಕ್ಕೆ ಚೌಧರಿಯ ಮರ್ಯಾದೆ ಹೆಚ್ಚುತ್ತ ಹೋಯಿತು. ಅವನ ಮನೆಯಲ್ಲಿ ದಿನವೂ ಊರ ವ್ಯವಹಾರದ, ರಾಷ್ಟ್ರೋದ್ಧಾರದ ಚರ್ಚೆ ನಡೆಯುತ್ತಿತ್ತು. ಈ ವಿಷಯಗಳಲ್ಲಿ ಜನರಿಗೆ ತುಂಬ ಆನಂದಉತ್ಸಾಹಗಳು ದೊರೆಯುತ್ತಿದ್ದವು. ಅವರ ರಾಜಕೀಯ ಜ್ಞಾನ ಹೆಚ್ಚುತ್ತಿತ್ತು. ಅವರು ತಮ್ಮ ಮರ್ಯಾದೆ, ಮಹತ್ವಗಳನ್ನು ಅರಿತುಕೊಳ್ಳಲಾರಂಭಿಸಿದರು. ಅವರಿಗೆ ಅನುಭವವಾಗತೊಡಗಿತು. ದಬ್ಬಾಳಿಕೆ, ಅನ್ಯಾಯಗಳ ವಿರುದ್ಧ ಅವರು

ಪಣತೊಟ್ಟರು. ಮನೆಯ ಹತ್ತಿ, ಮನೆಯ ನೂಲು, ಮನೆಯ ಬಟ್ಟೆ, ಮನೆಯ ಊಟ, ಮನೆಯ ಕೋರ್ಟು-ಕಟ್ಟಲೆ. ಪೊಲೀಸರ ಭಯವಿಲ್ಲ; ಅಮಲಿನ ಪೊಳ್ಳು ಸುಖವಿಲ್ಲ - ಜನ ಸುಖಶಾಂತಿಗಳಲ್ಲಿ ಬಾಳತೊಡಗಿದರು. ಎಷ್ಟೋ ಮಂದಿ ಕುಡಿತವನ್ನು ಬಿಟ್ಟರು. ಹಳ್ಳಿಯಲ್ಲಿ ಸದ್ಭಾವನೆಗಳ ಒಂದು ಅಲೆ ಹರಿಯ ತೊಡಗಿತು.

ಆದರೆ ಭಗತಜೀ ಇಷ್ಟು ಭಾಗ್ಯಶಾಲಿಯಾಗಿರಲಿಲ್ಲ. ದಿನದಿನಕ್ಕೆ ಜನರಿಗೆ ಅವನ ಉಪದೇಶದಲ್ಲಿ ಅರುಚಿ ಬೆಳೆಯುತ್ತಹೋಯಿತು. ಇದು ಎಲ್ಲಿಯವರೆಗೆ ಹೋಯಿತೆಂದರೆ ಸಾಧಾರಣವಾಗಿ ಹಳ್ಳಿಯ ಶಾನುಭೋಗ, ಕಾವಲುಗಾರ, ಸ್ಕೂಲ್ ಮೇಷ್ಟರು ಮುಂತಾದ ಸರಕಾರೀ ನೌಕರರು ಹಾಗೂ ಅವರ ಮಿತ್ರರಷ್ಟೇ ಅವನ ಶ್ರೋತೃವರ್ಗದಲ್ಲಿರುತ್ತಿದ್ದರು. ಒಮ್ಮೊಮ್ಮೆ ದೊಡ್ಡ ದೊಡ್ಡ ಅಧಿಕಾರಿಗಳು ಅವನಲ್ಲಿಗೆ ಬರುತ್ತಿದ್ದರು; ಭಗತನಿಗೆ ಮರ್ಯಾದೆ ತೋರಿಸುತ್ತಿದ್ದರು; ಕೊಂಚ ಹೊತ್ತು ಅವನ ಕಣ್ಣೊರಸಿ ಸಮಾಧಾನ ಮಾಡುತ್ತಿದ್ದರು. ಆದರೆ ಕ್ಷಣಕಾಲದ ಸಮ್ಮಾನ ಇಡೀ ದಿನದ ಅವಮಾನಕ್ಕೆ ಹೇಗೆ ಸರಿಸಮವಾದೀತು ! ಹೋದಲ್ಲೆಲ್ಲಾ ಜನ ಅವನ ಕಡೆ ಬೆರಳು ಮಾಡಿ ತೋರಿಸುತ್ತಿದ್ದರು. ಒಬ್ಬರು ಅವನನ್ನು ಸರಕಾರದ ಹೊಗಳುಭಟ್ಟನೆಂದರೆ ಇನ್ನೊಬ್ಬರು ಪೊಲೀಸರ ಗೂಢಚಾರನೆನ್ನುತ್ತಿದ್ದರು. ಭಗತಜೀ ತನ್ನ ಪ್ರತಿದ್ವಂದ್ವಿಯ ಏಳಿಗೆಯನ್ನು ಹಾಗೂ ಸ್ವತಃ ತನಗಾಗುತ್ತಿದ್ದ ಲೋಕನಿಂದೆಯನ್ನು ಕಂಡು ಹಲ್ಲುಕಿರಿಯುತ್ತಿದ್ದ. ಎಲ್ಲರಿಂದಲೂ ಅವನು ಅಪಮಾನಿತನಾಗಬೇಕಾಗಿಬಂದುದು ಜೀವನದಲ್ಲಿ ಇದೇ ಮೊದಲ ಬಾರಿ. ಯಾವ ಕುಲಗೌರವವನ್ನು ಅವನು ಮೊದಲಿನಿಂದಲೂ ರಕ್ಷಿಸಿಕೊಂಡು ಬಂದಿದ್ದನೋ, ಯಾವುದಕ್ಕಾಗಿ ತನ್ನ ಸರ್ವಸ್ವವನ್ನೂ ಅರ್ಪಣೆ ಮಾಡಿದ್ದನೋ ಅದು ಈಗ ಮಣ್ಣುಪಾಲಾಗಿತ್ತು. ನುಂಗಿಹಾಕುತ್ತಿದ್ದ ಈ ಚಿಂತೆಯಿಂದಾಗಿ ಅವನಿಗೆ ಒಂದು ಕ್ಷಣವಾದರೂ ಶಾಂತಿಯಿರಲಿಲ್ಲ. ನಷ್ಟವಾದ ಮರ್ಯಾದೆಯನ್ನು ಮತ್ತೆ ಪಡೆಯುವುದು ಹೇಗೆ, ತನ್ನ ಪ್ರತಿದ್ವಂದ್ವಿಯನ್ನು ಹೊಸೆದುಹಾಕುವುದು ಹೇಗೆ, ಅವನ ಹೆಮ್ಮೆಯನ್ನು ಮುರಿಯುವುದು ಹೇಗೆ ಎಂಬುದೇ ಭಗತನ ನಿತ್ಯ ಸಮಸ್ಯೆಯಾಯಿತು.

ಕೊನೆಗೆ ಅವನು ಹುಲಿಯನ್ನು ಅದರ ಗುಹೆಯಲ್ಲಿಯೇ ಅಪ್ಪಳಿಸುವುದೆಂದು ನಿಶ್ಚಯಮಾಡಿದ.

## 5

ಒಂದು ದಿನ ಸಂಜೆ. ಚೌಧರಿಯ ಮನೆಯ ಮುಂದೆ ದೊಡ್ಡ ಸಭೆ ಸೇರಿತ್ತು. ಸುತ್ತಮುತ್ತಿನ ಹಳ್ಳಿಯ ರೈತರೆಲ್ಲರೂ ಬಂದಿದ್ದರು. ಸಹಸ್ರಾರು ಜನರ ಗುಂಪು ನೆರೆದಿತ್ತು. ಚೌಧರಿ ಅವರಿಗೆ ಸ್ವರಾಜ್ಯದ ವಿಷಯವಾಗಿ ಉಪದೇಶ ನೀಡುತ್ತಿದ್ದ. ಮತ್ತೆ ಮತ್ತೆ 'ಭಾರತಮಾತಾ ಕೀ ಜೈ' ಎಂದು ಜಯಜಯಕಾರಗಳಾಗುತ್ತಿದ್ದವು. ಒಂದು ಕಡೆ ಹೆಂಗಸರು ಗುಂಪು ಮಾಡಿದ್ದರು. ಚೌಧರಿ ಉಪದೇಶ ಮುಗಿಸಿ ತನ್ನ

ಜಾಗದಲ್ಲಿ ಬಂದು ಕೂತುಕೊಂಡ. ಸ್ವಯಂಸೇವಕರು ಸ್ವರಾಜ್ಯನಿಧಿಗೆ ಚಂದಾ ಕೂಡಿಸಲು ಷುರು ಮಾಡಿದರು. ಅಷ್ಟರಲ್ಲಿ ಎಲ್ಲಿಂದಲೋ ಏನೋ ಭಗತಜೀ ನುಗ್ಗಿಬಂದು ಶ್ರೋತೃಗಳ ಮುಂದೆ ನಿಂತು ಎತ್ತರದ ಧ್ವನಿಯಲ್ಲಿ ಪ್ರಾರಂಭಿಸಿದ-

"ಬಾಂಧವರೇ, ನನ್ನನ್ನು ಇಲ್ಲಿ ಕಂಡು ಆಶ್ಚರ್ಯಪಡಬೇಡಿ. ನಾನು ಸ್ವರಾಜ್ಯದ ವಿರೋಧಿಯಲ್ಲ. ಸ್ವರಾಜ್ಯವನ್ನ ಅವಹೇಳನ ಮಾಡುವಂಥ ನೀಚಪ್ರಾಣಿ ಯಾರು ತಾನೇ ಈ ಜಗತ್ತಿನಲ್ಲಿ ಇದ್ದಾನು! ಆದರೆ ಸ್ವರಾಜ್ಯದ ಪ್ರಾಪ್ತಿಗೆ ಚೌಧರಿ ಯಾವ ಉಪಾಯ ಹೇಳಿಕೊಡ್ತಿದಾನೋ, ಯಾವದನ್ನ ನೀವು ಅನುಸರಿಸ್ತಿದೀರೋ ಅದು ಸರಿಯಾದ ಮಾರ್ಗವಲ್ಲ. ನಮ್ಮ ನಡುವೆ ಒಡಕು ತಿಕ್ಕಾಟಗಳಿದ್ದರೆ ಯಾವ ಪಂಚಾಯಿತಿ ತಾನೇ ಏನನ್ನ ಮಾಡಿಯಾತು ? ಭೋಗವಿಲಾಸಗಳ ಭೂತ ನಮ್ಮ ತಲೇ ಮೇಲೆ ಹತ್ತಿ ಸವಾರಿ ಮಾಡ್ತಿರೋವಾಗ ಅಮಲಿನ ಚಟ ಬಿಡೋದಾದರೂ ಹೇಗೆ ? ಹೆಂಡದಂಗಡಿಗಳ ಬಹಿಷ್ಕಾರ ಹೇಗೆ ಸಾಧ್ಯ ? ಸಿಗರೇಟು, ಸಾಬೂನು, ಬೂಟು, ಬನಿಯನ್ನು, ಮಕಮಲ್ಲುಗಳ ಪಿಂಡ ಕಳೆಯೋದು ಹೇಗೆ ? ಅಧಿಕಾರ ಪ್ರಭಾವಗಳ ಲಾಲಸೆ ನಮಗೆ ಅಂಟಿಕೊಂಡಿರೋವಾಗ ಸರಕಾರೀ ಶಾಲೆಗಳನ್ನ ಬಿಡೋದಾದರೂ ಹೇಗೆ ? ಸ್ವಧರ್ಮಕ್ಕೆ ವಿರೋಧವಾದ ಶಿಕ್ಷಣದಿಂದ ಮುಕ್ತಿ ಹೇಗೆ ಸಾಧ್ಯ ? ಸ್ವರಾಜ್ಯ ಸಾಧನೆಗೆ ಇರೋದು ಅಂದರೆ ಒಂದೇ ಒಂದು ಉಪಾಯ: ಅದೆಂದರೆ ಆತ್ಮಸಂಯಮ. ಇದೊಂದೇ ಮಹೌಷಧಿ ನಿಮ್ಮ ಸಮಸ್ತ ರೋಗಗಳನ್ನೂ ಸಮೂಲವಾಗಿ ಗುಣಪಡಿಸಬಲ್ಲದು. ಆತ್ಮವನ್ನ ಬಲಗೊಳಿಸಿ, ಇಂದ್ರಿಯಗಳನ್ನ ಗೆಲ್ಲಿರಿ. ಮನಸ್ಸನ್ನ ವಶಪಡಿಸಿಕೊಳ್ಳಿ. ನಿಮ್ಮ ನಡುವೆ ಭ್ರಾತೃಭಾವ ಬೆಳೆಯುತ್ತೆ, ಆಗ ವೈಮನಸ್ಯ ಅಳಿಯುತ್ತೆ, ಈರ್ಷ್ಯೆ ದ್ವೇಷಗಳು ನಾಶವಾಗುತ್ತವೆ. ಆಗ ಮನಸ್ಸು ಭೋಗವಿಲಾಸಗಳಿಂದ ಬೇರೆ ಕಡೆ ಹರಿಯುತ್ತೆ, ಕುಡಿತದ ಚಟ ಬಿಡುತ್ತೆ. ಆತ್ಮಬಲವಿಲ್ಲದೆ ಎಂದೂ ಸ್ವರಾಜ್ಯ ಪ್ರಾಪ್ತಿಯಾಗೋಲ್ಲ. ಸ್ವಯಂಸೇವೆ ಪಾಪಗಳೆಲ್ಲಕ್ಕೂ ಮೂಲ. ನಿಮ್ಮನ್ನ ಕೋರ್ಟಿಗೆ ಎಳೆಯೋದು ಅಂದರೆ ಇದೇ; ಸ್ವಧರ್ಮಕ್ಕೆ ವಿರೋಧವಾದ ಶಿಕ್ಷಣಕ್ಕೆ ನಿಮ್ಮನ್ನ ದಾಸರನ್ನಾಗಿ ಮಾಡಿರೋದೂ ಇದೇ. ಈ ಪಿಶಾಚಿಯನ್ನ ನಿಮ್ಮ ಆತ್ಮಬಲದಿಂದ ಹೊಡೆದುಹಾಕಿ; ನಿಮ್ಮ ಆಶೆ ಪೂರ್ತಿಗೊಳ್ಳುತ್ತೆ. ನಾನು ನಲವತ್ತು ವರ್ಷದಿಂದ ಅಫೀಮು ಕುಡೀತಿದೀನಿ ಅಂತ ಎಲ್ಲರಿಗೂ ಗೊತ್ತಿದೆ; ಇವತ್ತಿನಿಂದ ಅಫೀಮನ್ನು ಗೋರಕ್ತ ಅಂತ ಭಾವಿಸ್ತೀನಿ. ಚೌಧರಿಯ ಜೊತೆ ಮೂರು ಪೀಳಿಗೆಯಿಂದ ಹಗೆತನವಿದೆ; ಇವತ್ತಿನಿಂದ ಚೌಧರಿ ನನ್ನ ಸೋದರ. ಇವತ್ತಿನಿಂದ ನಾನಾಗಲಿ ನಮ್ಮ ಮನೆಯವರೇ ಆಗಲಿ ಕೈಮಗ್ಗದ ಬಟ್ಟೆಯ ವಿನಹ ಬೇರೆ ಏನಾದರೂ ತೊಟ್ಟಿದ್ದನ್ನ ಕಂಡರೆ ನಿಮಗೆ ತೋರಿದ ದಂಡ ವಿಧಿಸಿ. ನಾನು ಹೇಳಬೇಕಾಗಿದ್ದದ್ದು ಇಷ್ಟೇ. ಪರಮಾತ್ಮ ನಮ್ಮೆಲ್ಲರ ಇಚ್ಛೆಯನ್ನೂ ಪೂರೈಸಲಿ."

ಹೀಗಂದು ಭಗತಜೀ ಮನೆಯ ಕಡೆ ಹೊರಟ. ಚೌಧರಿ ಓಡೋಡುತ್ತ ಬಂದು ಅವನನ್ನು ಕೊರಳು ಬಳಸಿ ಅಪ್ಪಿಕೊಂಡ. ಮೂರು ಪೀಳಿಗೆಯ ಹಗೆತನ ಕ್ಷಣಮಾತ್ರದಲ್ಲಿ ಹರಿಯಿತು.

ಅವತ್ತಿನಿಂದ ಚೌಧರಿಯೂ ಭಗತನೂ ಜೊತೆಜೊತೆಯಾಗಿ ಉಪದೇಶ

ಮಾಡತೊಡಗಿದರು. ಅವರ ನಡುವೆ ಗಾಢವಾದ ಸ್ನೇಹ ಬೆಳೆಯಿತು. ಅವರಿಬ್ಬರಲ್ಲಿ ಜನ ಯಾರನ್ನು ಹೆಚ್ಚು ಗೌರವಿಸುತ್ತಾರೆಂದು ನಿಶ್ಚಯಿಸುವುದು ಕಷ್ಟ.

ಪೈಪೋಟಿಯೆಂಬುದು ಅವರಿಬ್ಬರ ಹೃದಯಾದೀವಿಗೆಗಳನ್ನೂ ಬೆಳಗಿದ ಬೆಂಕಿಯ ಕಿಡಿಯಾಯಿತು.

# 19. ಚದುರಂಗದ ಆಟಗಾರರು

ವಾಜಿದ್ ಆಲಿ ಶಾಹನ ಕಾಲ ಅದು. ಲಖನೋ ಪಟ್ಟಣ ವಿಲಾಸದಲ್ಲಿ ಮುಳುಗಿತ್ತು ದೊಡ್ಡವರು-ಚಿಕ್ಕವರು, ಸಾಹುಕಾರರು-ಬಡವರು ಅನ್ನದೇ ಎಲ್ಲರೂ ವಿಲಾಸದಲ್ಲಿ ಮಗ್ನರಾಗಿದ್ದರು. ಒಬ್ಬರು ಸಂಗೀತ-ಕುಣಿತಗಳ ಕೂಟ ಏರ್ಪಡಿಸಿದರೆ ಇನ್ನೊಬ್ಬರು ಅಫೀಮಿನ ಅಮಲಿನಲ್ಲಿ ಆನಂದ ಹೀರುತ್ತಿದ್ದರು. ಬದುಕಿನ ಪ್ರತಿಯೊಂದು ರಂಗದಲ್ಲಿಯೂ ಹರ್ಷ ಆನಂದಗಳಿಗೇ ಮಹತ್ವ. ಆಡಳಿತ ಕ್ಷೇತ್ರದಲ್ಲಿ, ಸಾಹಿತ್ಯಕ್ಷೇತ್ರದಲ್ಲಿ, ವಿವಿಧ ಸಾಮಾಜಿಕ ಕ್ಷೇತ್ರಗಳಲ್ಲಿ, ಕಲಾಕೌಶಲ, ಉದ್ಯೋಗ-ವ್ಯವಸಾಯ, ಆಹಾರ-ವ್ಯವಹಾರಗಳಲ್ಲಿ ಹೀಗೆ ಎಲ್ಲೆಲ್ಲೂ ವಿಲಾಸ ವ್ಯಾಪಿಸಿತ್ತು. ಸರಕಾರೀ ನೌಕರರು ಭೋಗವಿಲಾಸಗಳಲ್ಲಿ, ಕವಿಗಳು ಪ್ರೇಮವಿರಹಗಳ ವರ್ಣನೆಗಳಲ್ಲಿ, ಕುಶಲ ಕೆಲಸಗಾರರು ಕಲಾಪತ್ತು, ಕಸೂತಿ ಬಟ್ಟೆಗಳನ್ನು ನೇಯುವುದರಲ್ಲಿ, ಉದ್ಯಮಿಗಳು ಕಾಡಿಗೆ, ಅತ್ತರು, ಹಲ್ಲುಬಣ್ಣ, ಅಂಗಲೇಪನಗಳನ್ನು ತಯಾರಿಸಿ ಮಾರುವುದರಲ್ಲಿ ನಿರತರಾಗಿದ್ದರು. ಎಲ್ಲರ ಕಣ್ಣಿನಲ್ಲಿಯೂ ವಿಲಾಸದ ಮದ ಕವಿದಿತ್ತು. ಜಗತ್ತಿನಲ್ಲಿ ಏನು ನಡೆದಿದೆಯೆಂದು ಯಾರಿಗೂ ತಿಳಿಯದು. ಬುರಲಿ ಹಕ್ಕಿಗಳ ಪಂದ್ಯ ನಡೆದಿದೆ; ಕಾಳಗಕ್ಕೆಂದು ಗೌಜಲಹಕ್ಕಿಗಳ ಜೋಡಿ ಕೂಡಿಸಲಾಗುತ್ತಿದೆ. ಒಂದು ಕಡೆ ಪಗಡೆಯ ಹಾಸು ಹಾಸಿದೆ; ಗರಬಿದ್ದು ಗೆಲುವಿನ ಕೂಗೆದ್ದಿದೆ. ಮತ್ತೊಂದು ಕಡೆ ಚದುರಂಗದ ಘೋರ ಸಂಗ್ರಾಮ ನಡೆದಿದೆ. ದೊರೆಯಿಂದ ಹಿಡಿದು ದರಿದ್ರನವರೆಗೆ ಎಲ್ಲರೂ ಈ ಗುಂಗಿನಲ್ಲಿಯೇ ಮತ್ತರಾಗಿದ್ದಾರೆ. ಎಷ್ಟರ ಮಟ್ಟಿಗೆಂದರೆ ಫಕೀರರಿಗೆ ನಾಲ್ಕು ಕಾಸು ಸಿಕ್ಕಿದರೂ ಸಾಕು, ಅವರು ರೊಟ್ಟಿಯ ಬದಲು ಅಫೀಮು ಕೊಂಡು ತಿನ್ನುತ್ತಾರೆ, ಇಲ್ಲವೇ ಮದ್ಯ ಕುಡಿಯುತ್ತಾರೆ. ಚದುರಂಗ, ಇಸ್ಪೀಟು ಮುಂತಾದ ಆಟಗಳನ್ನು ಆಡುವುದರಿಂದ ಬುದ್ಧಿ ಚುರುಕಾಗುತ್ತದೆ, ವಿಚಾರಶಕ್ತಿ ಬೆಳೆಯುತ್ತದೆ, ತೊಡಕಿನ ಸಮಸ್ಯೆಗಳನ್ನು ಬಗೆಹರಿಸುವ ಅಭ್ಯಾಸ ಬೆಳೆಯುತ್ತದೆ ಎಂಬ ತರ್ಕವನ್ನು ಬಹು ಜೋರಾಗಿ ಮಂಡಿಸಲಾಗುತ್ತದೆ. ಈ ಮನೋಭಾವದ ಜನರಿಂದ ಪ್ರಪಂಚ ಈಗಲೂ ಮುಕ್ತವಾಗಿಲ್ಲ.

ಹೀಗಿರುವಾಗ ಮಿರ್ಜಾ ಸಜ್ಜಾದ್ ಆಲಿ, ಮೀರ್ ರೋಷನ್ ಆಲಿ ತಮ್ಮ ಹೆಚ್ಚಿನ ಸಮಯವನ್ನು ಬುದ್ಧಿಯನ್ನು ತೀವ್ರಗೊಳಿಸಿಕೊಳ್ಳುವುದರಲ್ಲಿ ಕಳೆಯುತ್ತಿದ್ದರೆ ಯಾವ

ವಿಚಾರವಂತನಿಗೆ ತಾನೆ ಅದರಲ್ಲಿ ಅಭ್ಯಂತರವಿರುವುದು ಸಾಧ್ಯ! ಇಬ್ಬರಿಗೂ ಪಿತ್ರಾರ್ಜಿತವಾದ ಜಹಗೀರಿತ್ತು; ಜೀವನೋಪಾಯಕ್ಕೆ ಚಿಂತೆಯಿರಲಿಲ್ಲ. ಮನೆಯಲ್ಲಿ ಕುಳಿತು ಕುಳಿತೇ ಮಜ ಹೊಡೆಯುತ್ತಿದ್ದರು. ಕೊನೆಗೆ ಮಾಡಲಾದರೂ ಬೇರೆ ಏನಿತ್ತು? ಬೆಳಗ್ಗೆ ಇಬ್ಬರು ಮಿತ್ರರೂ ನಾಷ್ಟ ಮುಗಿಸಿ, ಚದುರಂಗದ ಹಾಸು ಬಿಚ್ಚಿ ಕಾಯಿ ಹೂಡುತ್ತಿದ್ದರು. ಆಟದ ತಂತ್ರೋಪಾಯಗಳು ಷುರುವಾಗುತ್ತಿದ್ದವು. ಸರಿ, ಯಾವಾಗ ಮಧ್ಯಾಹ್ನವಾಯಿತು, ಯಾವಾಗ ಅಪರಾಹ್ನವಾಯಿತು, ಯಾವಾಗ ಸಂಜೆಯಾಯಿತು ಎಂಬುದರ ಗೊತ್ತೇ ಹತ್ತುತ್ತಿರಲಿಲ್ಲ! ಊಟ ಸಿದ್ಧವಾಗಿದೆಯೆಂದು ಒಳಗಿನಿಂದ ಮತ್ತೆ ಮತ್ತೆ ಕರೆ ಬರುತ್ತಿತ್ತು. ಇದೋ ಎದ್ದೆವು, ಬಟ್ಟೆ ಹಾಸಿ ಊಟಕ್ಕಿಡಿ ಎಂದು ಇವರು ಕುಳಿತಲ್ಲಿಂದಲೇ ಉತ್ತರ ಕೊಡುತ್ತಿದ್ದರು. ಕೊನೆಗೆ ಏನು ಮಾಡಲೂ ತೋಚದೆ ಅಡಿಗೆಯವನು ಇವರು ಆಟಕ್ಕೆ ಕುಳಿತ ಕೋಣೆಯಲ್ಲಿಯೇ ಊಟವಿಟ್ಟು ಹೋಗುತ್ತಿದ್ದ, ಮಿತ್ರರಿಬ್ಬರೂ ಎರಡೂ ಕೆಲಸಗಳನ್ನೂ ಜೊತೆಜೊತೆಯಾಗಿಯೇ ಮಾಡುತ್ತಿದ್ದರು. ಮಿರ್ಜಾ ಸಜ್ಜಾದ್ ಆಲಿಯ ಮನೆಯಲ್ಲಿ ಹಿರಿಯರಾರೂ ಇರಲಿಲ್ಲ. ಆದ್ದರಿಂದ ಅವನ ಮನೆಯ ದಿವಾನಖಾನೆಯಲ್ಲಿಯೇ ಅವರು ಈ ಜೂಜಾಟಕ್ಕೆ ಸೇರುತ್ತಿದ್ದರು. ಅಂದರೆ ಮಿರ್ಜಾನ ಮನೆಯಲ್ಲಿ ಇತರರಿಗೆ ಅವನ ಈ ವ್ಯವಹಾರದಿಂದ ಸಂತೋಷವಾಗಿತ್ತೆಂದೇನೂ ಅಲ್ಲ. ಮನೆಯವರಂತೂ ಸರಿಯೇ ಸರಿ, ಮೊಹಲ್ಲಾದ ಜನ, ಮನೆಯ ನೌಕರಚಾಕರರು ಕೂಡ ಕಿಡಿಮಾತುಗಳುನ್ನಾಡುತ್ತಿದ್ದರು - ಮಹಾಕೆಟ್ಟ ಆಟ ಇದು, ಮನೆ ಹಾಳುಮಾಡುತ್ತೆ, ದೇವರ ದಯೆಯಿಂದ ಯಾರಿಗೂ ಇದರ ಚಟ ಹಿಡಿಯದಿರಲಿ. ಹಾಗೆ ಚಟ ಹಿಡಿದ ಮನುಷ್ಯ ಮನೆಗೂ ದಂಡ, ಊರಿಗೂ ದಂಡ, ಬಲು ಕೆಟ್ಟ ರೋಗ, ಇತ್ಯಾದಿ. ಮರಿಜಾಸಾಹೇಬನ ಹೆಂಡತಿಗೆ ಈ ಆಟದ ಬಗ್ಗೆ ಎಷ್ಟರ ಮಟ್ಟಿನ ದ್ವೇಷವಿತ್ತೆಂದರೆ ಅವಳು ಬೇಕೆಂದೇ ಅವಕಾಶ ಕಲ್ಪಿಸಿಕೊಂಡು ಗಂಡನನ್ನು ಚುಚ್ಚುತ್ತಿದ್ದಳು. ಆದರೆ ಅವಳಿಗೆ ಅವಕಾಶ ಸಿಗುತ್ತಿದ್ದುದೇ ಅಪರೂಪ. ಅವಳು ಏಳುವ ಹೊತ್ತಿಗಾಗಲೇ ಆಟ ಷುರುವಾಗಿರುತ್ತಿತ್ತು. ಮತ್ತೆ ರಾತ್ರಿ ಅವಳು ಮಲಗಿದ ಮೇಲೆ ಯಾವಾಗಲೋ ಮಿರ್ಜಾ ಒಳ ಮನೆಗೆ ಬರುತ್ತಿದ್ದ. ಸರಿ, ಅವಳು ಆಳುಗಳ ಮೇಲೆ ತನ್ನ ಕೋಪ ತೀರಿಸಿಕೊಳ್ಳುತ್ತಿದ್ದಳು- "ಏನು ಪಾನು ಬೇಕಂತೇನು? ಬಂದು ತೊಗೊಂಡು ಹೋಗಬೇಕಂತೆ ಅನ್ನು." "ಊಟಕ್ಕೆ ಪುರುಸೊತ್ತಿಲ್ಲವಂತೊ? ತೊಗೊಂಡು ಹೋಗಿ ತಲೆಯ ಮೇಲೆ ಸುರಿದು ಬಾ. ಬೇಕಾದರೆ ತಿನ್ನಲಿ, ಬೇಡವಾದರೆ ನಾಯಿಗೆ ಹಾಕಲಿ." ಆದರೆ ಅವಳು ಸಹ ನೇರವಾಗಿ ಗಂಡನಿಗೆ ಏನೂ ಹೇಳುವಂತಿರಲಿಲ್ಲ. ಅವಳಿಗೆ ಮೀರ್‌ಸಾಹೇಬನ ಮೇಲಿದ್ದಷ್ಟು ಕೋಪ ಸ್ವತಃ ಗಂಡನ ಮೇಲಿರಲಿಲ್ಲ. ಅವಳು ಅವನಿಗೆ 'ಮನೆ ಹಾಳ ಮೀರ' ಎಂದೇ ನಾಮಕರಣ ಮಾಡಿಬಿಟ್ಟಿದ್ದಳು. ಪ್ರಾಯಶಃ ಮಿರ್ಜಾಸಾಹೇಬ ತನ್ನ ಮರ್ಯಾದೆ ಉಳಿಸಿಕೊಳ್ಳುವುದಕ್ಕಾಗಿ ತಪ್ಪೆಲ್ಲವನ್ನೂ ಮೀರ್‌ಸಾಹೇಬನ ತಲೆಗೆ ಕಟ್ಟುತ್ತಿದ್ದನೇನೋ!

ಒಂದು ದಿನ ಬೇಗಮಳಿಗೆ ತಲೆ ನೋಯತೊಡಗಿತು. ಅವಳು ಕೆಲಸದ ಹುಡುಗಿಗೆ "ಹೋಗಿ ಮಿರ್ಜಾ ಸಾಹೇಬರನ್ನು ಕರಕೊಂಡು ಬಾ. ಯಾರಾದರೂ ಹಕೀಮರಲ್ಲಿಗೆ ಹೋಗಿ ಔಷಧಿ ತಂದು ಕೊಡಲಿ. ಬೇಗ ಹೋಗು" ಎಂದು ಹೇಳಿ ಕಳಿಸಿದಳು.

ಹುಡುಗಿ ಕರೆಯಲು ಹೋದಾಗ ಮಿರ್ಜಾ "ನಡಿ, ಈಗ ಬಂದೆ" ಎಂದು ಹೇಳಿದ. ಬೇಗವ್‌ಸಾಹೇಬಳಿಗೆ ಕಾವೇರಿತ್ತು. ತಾನು ತಲೆನೋವಿನಿಂದ ಸಾಯುತ್ತಿರುವಾಗ, ಗಂಡನಿಗೆ ಚದುರಂಗವಾಡುತ್ತ ಕುಳಿತಿರುವಷ್ಟು ಸಾಹಸವೇ! ಮುಖ ಕೆಂಪಾಯಿತು. ಹುಡುಗಿಗೆ ಹೇಳಿದಳು- "ಹೋಗಿ ಹೇಳು, ಈಗಲೇ ಬರಬೇಕಂತೆ, ಇಲ್ಲದೇ ಹೋದರೆ ಅವಳು ತಾನೇ ಹಕೀಮರಲ್ಲಿಗೆ ಹೋಗಬೇಕಾಗುತ್ತಂತೆ ಅನ್ನು." ಆಗ ಮಿರ್ಜಾ ಬಲು ಸೊಗಸಾದ ಆಟ ಆಡುತ್ತಿದ್ದ. ಇನ್ನೆರಡು ಶಹಾ ಕಟ್ಟಿದ್ದರೆ ಮೀರ್ ಸಾಹೇಬನಿಗೆ ಸೋಲಾಗುತ್ತಿತ್ತು. "ಅವಳಿಗೇನು ಉಸಿರು ಸಿಕ್ಕಿಹಾಕಿಕೊಂಡಿದೆಯೆ? ಕೊಂಚ ತಾಳೋಕ್ಕೆ ಆಗೋಲ್ಲವಂತೆಯೆ?" ಎಂದು ಸಿಡುಗುಟ್ಟುತ್ತ ಹೇಳಿದ.

ಮೀರ್ ಬಾಯಿಹಾಕಿದ- "ಹೋಗಿ ಕೇಳಿಬನ್ನಿ. ಹೆಂಗಸರ ಪ್ರಕೃತಿ ಬಲು ನಾಜೂಕು."

"ಹೌದೌದು, ಹೋಗ್ತೀನಿ! ಇನ್ನೆರಡು ಶಹಾ ಕಟ್ಟಿದರೆ ನಿಮ್ಮ ಸೋಲಾಗುತ್ತೆ."

"ಸ್ವಾಮಿ, ಆ ಭರವಸೆ ಇಟ್ಟುಕೋಬೇಡಿ. ನಿಮ್ಮ ಕಾಯಿಗಳು ಇದ್ದಿದ್ದಹಾಗೇ ನಿಮಗೆ ಸೋಲಾಗೋ ಅಂಥ ಒಂದು ನಡೆ ಹೊಳೆಯಿದೆ. ಹೋಗಿ ಕೇಳಿ ಬನ್ನಿ, ಯಾಕೆ ಸುಮ್ಮ ಸುಮ್ಮನೆ ಮನೆಯೋರ ಮನಸ್ಸು ನೋಯಿಸ್ತೀರಿ?"

"ಹೀಗೆ ಅಂದದ್ದಕ್ಕೆ ನಿಮ್ಮನ್ನ ಸೋಲಿಸಿಯೇ ಹೋಗ್ತೀನಿ, ನೋಡ್ತಿರಿ."

"ನೀವು ಹೋಗಿ ಕೇಳಿಕೊಂಡು ಬರೋತನಕ ನಾನು ಮುಂದೆ ಆಡೋದೇ ಇಲ್ಲ."

"ಹಕೀಮರ ಹತ್ತಿರ ಹೋಗಲೇಬೇಕಾಗಿಬಂತಲ್ರಿ. ತಲೆನೋವೂ ಇಲ್ಲ. ಮಣ್ಣೂ ಇಲ್ಲ. ಇದೆಲ್ಲಾ ನನ್ನನ್ನ ಗೋಳಾಡಿಸೋಕ್ಕೆ ನೆಪ, ಅಷ್ಟೇ."

"ಏನೇ ಇರಲಿ, ಮನೆಯೋರ ಸೇವೆ ಮಾಡಲೇಬೇಕಾಗುತ್ತೆ."

"ಆಯ್ತು, ಇನ್ನೊಂದು ನಡೆ ನಡೆಸಿ ಹೋಗ್ತೀನಿ."

"ಸಾಧ್ಯವೇ ಇಲ್ಲ. ನೀವು ಹೋಗಿಬರೋವರೆಗೆ ನಾನು ಕಾಯಿಗೆ ಕೈಯೇ ಇಡೋಲ್ಲ."

ಮಿರ್ಜಾ ಸಾಹೇಬ ಗತ್ಯಂತರವಿಲ್ಲದೆ ಒಳಹೋದರೆ ಬೇಗವ್‌ಸಾಹೇಬಳು ನರಳು ನರಳುತ್ತಲೇ ಹುಬ್ಬುಗಂಟಿಕ್ಕಿ ಹೇಳಿದಳು- "ನಿಮಗೆ ಆ ದರಿದ್ರ ಚದುರಂಗದಾಟ ಅಂದರೆ ಅದೆಷ್ಟು ಪ್ರೀತಿ ಅಂತೀನಿ. ಯಾರೇ ಸಾಯಲಿ, ಆಟ ಬಿಟ್ಟೇಳೋ ಲಕ್ಷಣ ಸಹ ತೋರಿಸೋಲ್ಲ. ನಿಮ್ಮಂಥ ಮನುಷ್ಯರೂ ಇದಾರಲ್ಲ, ದೇವರೇ ಕಾಪಾಡಬೇಕು."

"ಏನು ಹೇಳಲಿ, ಮೀರ್‌ಸಾಹೇಬರು ಒಪ್ಪಬೇಕಲ್ಲ. ಬಲು ಕಷ್ಟದಿಂದ ಅವರ ಕೈಯಿಂದ ಬಿಡಿಸಿಕೊಂಡು ಬಂದದ್ದಾಯಿತು."

"ಅವರು ತಮ್ಮ ಹಾಗೆ ಎಲ್ಲರೂ ಪೈಗಳ್ಳರು ಅಂತ ಅಂದುಕೊಂಡಿದಾರೋ ಹೇಗೆ? ಅವರಿಗೂ ಮಕ್ಕಳುಮರಿ ಇದಾರಲ್ಲವೆ? ಅಥವಾ ಎಲ್ಲರನ್ನೂ ಮುಗಿಸಿ ಕೈತೊಳಕೊಂಡಿದಾರೋ?"

"ಮಹಾ ಚಟದ ಮನುಷ್ಯ. ಅವರು ಬಂದಾಗ ವಿಧಿಯಿಲ್ಲದೇ ನಾನೂ ಆಡಬೇಕಾಗುತ್ತೆ."

"ಆಗೋಲ್ಲ ಅಂತ ಹೇಳಿ ಅವರನ್ನ ಯಾಕೆ ಅಟ್ಟಬಾರದು ?"

"ವಯಸ್ಸಿನಲ್ಲಿ ಸಮಾನರು, ಅಂತಸ್ತಿನಲ್ಲಿ ನನಗಿಂತ ಎರಡಂಗುಲ ಹೆಚ್ಚಿಯೇ ಅನ್ನು. ದಾಕ್ಷಿಣ್ಯಕ್ಕೆ ಒಪ್ಪಬೇಕಾಗುತ್ತೆ."

"ಹಾಗಾದರೆ ನಾನೇ ಹೋಗಿ ಛೀಮಾರಿ ಮಾಡಿಬರ್ತೀನಿ. ಕೋಪಿಸಿಕೊಂಡರೆ ಕೋಪಿಸಿಕೊಳ್ಳಲಿ. ಯಾರಿಂದ ಯಾರ ಹೊಟ್ಟೆ ತುಂಬಬೇಕಾಗಿದೆ. 'ರಾಣಿ ಮುನಿಸಿಕೊಂಡರೆ ಅವಳೇ ಮುಂಡೆಯಾದಾಳು' ಅಂತ ಗಾದೆ ಇಲ್ಲವೆ ? ಹೋಗೇ, ಹಿರಿಯಾ. ಹೋಗಿ ಚದುರಂಗದ ಹಾಸು-ಕಾಯಿ ಎತ್ತಿಕೊಂಡು ಬಾ. ಮೀರ್‌ಸಾಹೇಬರಿಗೆ ಹೇಳು, ಯಜಮಾನರು ಈಗ ಆಡೋಲ್ಲವಂತೆ, ತಾವಿನ್ನು ಮನೆಗೆ ಹೋಗಬಹುದಂತೆ ಅಂತ."

"ಸದ್ಯ ಅಂಥ ಯಾವ ಅನರ್ಥಾನೂ ಮಾಡಬೇಡ, ಮಹರಾಯಿತಿ ! ನನಗೆ ಅವಮಾನ ಮಾಡಬೇಕು ಅಂತ ಆಸೆಯೇನು ನಿನಗೆ ! ತಾಳೆ, ಹಿರಿಯಾ, ಎಲ್ಲಿ ಹೋಗ್ತಿದಿ ?"

"ಅವಳನ್ನ ಯಾಕೆ ತಡೀತೀರಿ. ಅವಳನ್ನ ತಡೆದರೆ ನನ್ನ ರಕ್ತ ಕುಡಿದಾಣೆ. ಒಳ್ಳೇದು, ಅವಳನ್ನ ತಡೆದಿರಿ. ನನ್ನನ್ನ ತಡೀರಿ, ನೋಡೋಣ."

ಹೀಗನ್ನುತ್ತ ಬೇಗಮ್‌ಸಾಹೇಬಳು ಕಿಡಿಕಿಡಿಯಾಗಿ ತಾನೇ ದಿವಾನಖಾನಯು ಕಡೆ ಹೊರಟಳು. ಬಡಪಾಯಿ ಮಿರ್ಜಾನ ಮುಖದ ಬಣ್ಣ ಬಿಳಚಿಕೊಂಡಿತು. ಹೆಂಡತಿಗೆ ಗೋಗರೆಯತೊಡಗಿದ- "ದೇವರಾಣೆ, ಹಜರತ್ ಹುಸೇನರ ಆಣೆ. ನೀನಲ್ಲಿ ಹೋದರೆ ನನ್ನ ಹೆಣ ಕಾಣಬೇಕಾಗುತ್ತೆ." ಆದರೆ ಬೇಗಮ್ ಇದೊಂದಕ್ಕೂ ಕಿವಿಗೊಡಲಿಲ್ಲ. ದಿವಾನಖಾನೆಯ ಬಾಗಿಲಿನ ತನಕ ಹೋದಳು. ಆದರೆ ಇದ್ದಕ್ಕಿದ್ದಂತೆ ಪರಪುರುಷನ ಎದುರಿಗೆ ಹೋಗುವಾಗ ಕಾಲುಕಟ್ಟಿದಂತಾಯಿತು. ದಿವಾನಖಾನೆಯೊಳಗಡೆ ಹಣಿಕಿಹಾಕಿದಳು. ಅದೃಷ್ಟಕ್ಕೆ ಕೋಣೆ ಖಾಲಿಯಾಗಿತ್ತು. ಮೀರ್‌ಸಾಹೇಬ ಮೆಲ್ಲಗೆ ಒಂದೆರಡು ಕಾಯಿಗಳನ್ನು ಅದಲುಬದಲುಮಾಡಿ ತನಗೇನೂ ತಿಳಿಯದೆಂಬಂತೆ ಹೊರಗಡೆ ಅತ್ತಿಂದಿತ್ತ ಕಾಲುಹಾಕುತ್ತಿದ್ದ. ಬೇಗಮ್ ದಿವಾನಖಾನೆಗೆ ಬಂದು ಹೂಡಿದ್ದ ಆಟವನ್ನು ಬುಡಮೇಲು ಮಾಡಿದಳು. ಒಂದಿಷ್ಟು ಕಾಯಿಗಳನ್ನು ಮಂಚದ ಕೆಳಗೂ ಮತ್ತೊಂದಿಷ್ಟನ್ನು ಕಿಟಕಿಯಾಚೆಗೂ ಎಸೆದಳು. ದಿವಾನಖಾನೆಯ ಬಾಗಿಲು ಬಡಿದು ಒಳಗಿನಿಂದ ಅಗಳಿ ಹಾಕಿದಳು. ಮೀರ್‌ಸಾಹೇಬ ಬಾಗಿಲ ಹತ್ತಿರವೇ ಇದ್ದ. ಕಾಯಿಗಳು ·

ಹೊರಗೆ ಬಂದು ಬಿದ್ದುದನ್ನು ನೋಡಿದ. ಕೈಬಳೆಗಳ ಸದ್ದೂ ಕಿವಿಗೆ ಬಿತ್ತು. ಬಾಗಿಲು ಬಡಿದಿದ್ದನ್ನು ನೋಡಿದಾಗ ಬೇಗಮ್‌ಸಾಹೇಬಳಿಗೆ ಸಿಟ್ಟುಬಂದಿರುವುದು ಗೊತ್ತಾಯಿತು. ಮೌನವಾಗಿ ಮನೆಯ ದಾರಿ ಹಿಡಿದ.

ಮಿರ್ಜಾ ಹೇಳಿದ- "ಅನರ್ಥ ಮಾಡಿಬಿಟ್ಟೆ."

ಬೇಗಮ್- "ಇನ್ನೊಂದು ಸಲ ಅವನು ಈ ಕಡೆ ತಲೆಹಾಕಲಿ, ನಿಂತ ಕಾಲಲ್ಲಿ ಆಚೆ ಗಟ್ಟೇಸಿ. ಆಟದ ಮೇಲೆ ತೋರಿಸೋ ಪ್ರೀತೀನ ದೇವರ ಮೇಲೆ ತೋರಿಸಿದ್ದಿದ್ದರೆ ಇಷ್ಟು ಹೊತ್ತಿಗೆ ಸಂತನಾಗಿರ್ತಿದ್ದ. ನೀವು ಚದುರಂಗ ಆಡ್ತಿರಿ, ನಾನಿಲ್ಲಿ ಹಿಟ್ಟು ಒಲೆ

ಚಿಂತೇಲಿ ತಲೆ ಚಚ್ಚಿಕೋತೀನಿ. ಈಗಾದರೂ ಹಕೀಮರಲ್ಲಿಗೆ ಹೋಗ್ತೀರೋ ಅಥವಾ ಇನ್ನೂ ಮೀನಮೇಷ ಎಣಿಸ್ತಾ ನಿಂತಿರ್ತೀರೋ?"

ಮಿರ್ಜಾ ಮನೆಬಿಟ್ಟು ಹೊರಬಂದ. ಹಕೀಮರಲ್ಲಿಗೆ ಹೋಗುವ ಬದಲು ನೇರವಾಗಿ ಮೀರ್‌ಸಾಹೇಬನ ಮನೆಗೆ ಬಂದು ನಡೆದುದೆಲ್ಲವನ್ನೂ ವಿವರಿಸಿದ. ಮೀರ್‌ಸಾಹೇಬರು ಹೇಳಿದರು- "ಕಾಯಿಗಳು ಹೊರಗೆ ಹಾರಾಡಿದ್ದನ್ನ ನೋಡಿದಾಗಲೇ ನನಗೆ ಅರ್ಥವಾಯಿತು. ತಕ್ಷಣ ಕಾಲಿಗೆ ಬುದ್ಧಿ ಹೇಳಿದೆ. ಬಲು ಕೋಪದ ಸ್ವಭಾವ ಅಂತ ಕಾಣುತ್ತೆ! ಆದರೆ ನೀವು ಹೀಗೆ ಆಕೇನ ತಲೇಮೇಲೆ ಕೂರಿಸಿಕೊಂಡಿರೋದು ಸರಿ ಅಂತ ಅನ್ನಿಸೋಲ್ಲ. ನೀವು ಹೊರಗೆ ಏನು ಮಾಡ್ತೀರಿ ಅನ್ನೋದನ್ನ ಕಟ್ಟಿಕೊಂಡು ಆಕೇಗೆ ಏನಾಗಬೇಕಾಗಿದೆ? ಮನೆ. ಕಾರಬಾರು ನಡಸೋದು ಆಕೆಯ ಕೆಲಸ. ಬಾಕಿ ವಿಷಯಕ್ಕೂ ಆಕೇಗೂ ಏನು ಸಂಬಂಧ?"

"ಅದಿರಲಿ. ಇನ್ನು ಮೇಲೆ ನಾವೆಲ್ಲಿ ಆಟಕ್ಕೆ ಸೇರೋದು ಅಂತ ಹೇಳಿ."

"ಅದಕ್ಕೆ ಯಾಕೆ ವ್ಯಸನ? ಇಷ್ಟು ದೊಡ್ಡ ಮನೆ ಇದೆ. ಇಲ್ಲೇ ಸೇರಿದರಾಯಿತು."

"ಆದರೆ ಬೇಗಮ್‌ಸಾಹೇಬಳನ್ನ ಒಪ್ಪಿಸೋದು ಹೇಗೆ? ಮನೇಲಿ ಕೂತು ಆಡಿದಾಗಲೇ ಅಷ್ಟು ಹಗರಣ ಮಾಡಿದಳು. ಇನ್ನು ಇಲ್ಲಿ ಸೇರೋದು ಗೊತ್ತಾದರೆ ಜೀವ ಸಹಿತ ಬಿಡತಾಳೆಯೆ?"

"ಬಾಯಿಗೆ ಬಂದ ಹಾಗೆ ಹರಟಲಿ ಬಿಡಿ. ನಾಲ್ಕಾರು ದಿನದಲ್ಲಿ ಎಲ್ಲಾ ಸರಿಹೋಗುತ್ತೆ ಆದರೆ ಇಷ್ಟುಮಾಡಿ, ಇವತ್ತಿನಿಂದ ನೀವು ಸ್ವಲ್ಪ ಬಿಗುಮಾನದಲ್ಲಿರಿ."

## 2

ಮೀರ್‌ಸಾಹೇಬನ ಹೆಂಡತಿಗ ಯಾವುದೋ ಅಜ್ಞಾತ ಕಾರಣದಿಂದಾಗಿ ಅವನು ಮನೆಯಿಂದ ದೂರವಿರುವುದೇ ವಾಸಿ ಅನ್ನಿಸಿತ್ತು. ಹೀಗಾಗಿ ಅವಳು ಎಂದೂ ಅವನ ಚದುರಂಗದ ವ್ಯಾಮೋಹದ ಬಗ್ಗೆ ಯೋಚಿಸುವ ಗೋಜಿಗೇ ಹೋಗಿರಲಿಲ್ಲ. ಒಮ್ಮೊಮ್ಮೆ ಮೀರ್‌ಸಾಹೇಬ ಮನೆಗೆ ಬರುವುದು ಹೊತ್ತಾದಾಗ ಅವನಿಗೆ ನೆನಪು ಮಾಡಿಕೊಂಡುತ್ತಿದ್ದಳು. ಈ ಕಾರಣದಿಂದಾಗಿ ಮೀರ್‌ಸಾಹೇಬ ತನ್ನ ಹೆಂಡತಿ ತುಂಬ ಗಂಭೀರೆ, ವಿನಯವಂತೆ ಎಂಬ ಭ್ರಮೆಯಲ್ಲಿದ್ದ. ಆದರೆ ದಿವಾನಖಾನೆಯಲ್ಲಿ ಆಟದ ಹಾಸು ಹಾಸಿ, ಮೀರ್‌ಸಾಹೇಬ ಇಡೀ ದಿನ ಮನೆಯಲ್ಲೇ ಇರತೊಡಗಿದಾಗ ಅವಳಿಗೆ ಕಷ್ಟಕ್ಕಿಟ್ಟುಕೊಂಡಿತು. ಅವಳ ಸ್ವಾತಂತ್ರ್ಯಕ್ಕೆ ಅಡ್ಡಿಯಾಗಿ, ದಿನವಿಡೀ ಅವಳು ಬಾಗಿಲ ಬಳಿ ಹಣಿಕಿಹಾಕುವ ಪರಿಸ್ಥಿತಿ ಒದಗಿತು.

ಈ ಕಡೆ ನೌಕರರಲ್ಲಿಯೂ ಪಿಸುಮಾತಿಗೆ ಷುರುವಾಯಿತು. ಇದುವರೆಗೆ ಅವರು ಇಡೀ ದಿನ ಕೂತುಕೂತೇ ನೊಣ ಹೊಡೆಯುತ್ತಿದ್ದರು. ಯಾರು ಮನೆಗೆ ಬರಲಿ, ಹೋಗಲಿ, ಅದಕ್ಕೂ ಅವರಿಗೂ ಸಂಬಂಧವಿರುತ್ತಿರಲಿಲ್ಲ. ಈಗ ಇಪ್ಪತ್ತುನಾಲ್ಕು ಗಂಟೆಯೂ ದಬ್ಬಾಳಿಕೆ ಷುರುವಾಯಿತು. ಒಮ್ಮೆ ನೀರು ತರಲು ಅಪ್ಪಣೆಯಾದರೆ

ಇನ್ನೊಮ್ಮೆ ಮಿಠಾಯಿ ತರಲು ಅಪ್ಪಣೆಯಾಗುತ್ತಿತ್ತು. ಹುಕ್ಕವಂತೂ ಪ್ರೇಮಿಗಳ ಹೃದಯದಂತೆ ಸದಾಕಾಲ ಉರಿಯುತ್ತಿರುತ್ತಿತ್ತು. ಅವರು ಬೇಗಮ್‌ಸಾಹೇಬಳಿಗೆ ಹೋಗಿ ಹೇಳುತ್ತಿದ್ದರು- "ಹುಜೂರ್, ಯಜಮಾನರ ಚದುರಂಗದಾಟದಿಂದ ನಮ್ಮ ಜೀವಕ್ಕೆ ಪೇಚಾಟವಾಗಿದೆ! ಇಡೀ ದಿನ ಓಡಾಡಿ ಓಡಾಡಿ ಕಾಲು ತೂತುಬೀಳ್ತಿದೆ. ಬೆಳಗ್ಗೆ ಕೂತು ಸಂಜೀಗೆ ಮುಗಿಸೋದು ಇದೆಂಥ ಆಟ? ಇರಲಿ, ನಮ್ಮದೇನೂ ಅಭ್ಯಂತರವಿಲ್ಲ. ಹುಜೂರರ ಗುಲಾಮರು ನಾವು. ಏನು ಅಪ್ಪಣೆಯಾದರೆ ಅದನ್ನ ನಡಸೇ ನಡಸ್ತೇವೆ. ಆದರೆ ಇದು ಮಹಾ ಹಾಳು ಆಟ. ಇದನ್ನ ಆಡಿದವರು ಯಾರೂ ಊರ್ಜಿತವಾಗಿಲ್ಲ. ಒಂದಲ್ಲ ಒಂದು ಗಂಡಾಂತರ ಮನೇಗೆ ಬಡೀದೇ ಇರೋಲ್ಲ. ಎಷ್ಟರಮಟ್ಟಿಗೆ ಅಂದರೆ, ಒಬ್ಬರಿಂದಾಗಿ ಇಡೀ ಮೊಹಲ್ಲಾಕ್ಕೆ ಮೊಹಲ್ಲವೇ ಹಾಳಾದ್ದನ್ನ ಜನ ಕಣ್ಣಾರೆ ನೋಡಿದಾರೆ. ಮೊಹಲ್ಲಾದಲ್ಲಿ ಎಲ್ಲೆಲ್ಲೂ ಇದರದ್ದೇ ಚರ್ಚೆ. ಹುಜೂರರ ಉಪ್ಪುಂಡು ಬದುಕಿದೀವಿ. ದಣಿಗಳ ಬಗ್ಗೆ ಯಾರಾದರೂ ಕೆಟ್ಟದ್ದಾಡಿದರೆ ಕೇಳೋಕ್ಕೆ ದುಃಖವಾಗುತ್ತೆ. ಆದರೆ ಏನು ಮಾಡೋದು?"

ಇದನ್ನ ಕೇಳಿ ಬೇಗಮ್ ಹೇಳುತ್ತಿದ್ದಳು- "ನನಗೆ ಸಹ ಅದು ಸ್ವಲ್ಪವೂ ಇಷ್ಟವಿಲ್ಲ. ಆದರೆ ಅವರು ಯಾರ ಮಾತನ್ನೂ ಕೇಳೋಲ್ಲ, ಏನು ಮಾಡೋದು ಹೇಳಿ?"

ಆ ಮೊಹಲ್ಲಾದಲ್ಲಿದ್ದ ಹಿಂದಿನ ಕಾಲದವರು ನಾಲ್ಕಾರು ಮಂದಿ ತಮ್ಮತಮ್ಮಲ್ಲೇ ಬಗೆಬಗೆಯ ಅಮಂಗಳಗಳನ್ನು ಕಲ್ಪಿಸಿಕೊಳ್ಳತೊಡಗಿದರು- "ಇನ್ನು ಕ್ಷೇಮವಿಲ್ಲ. ಶ್ರೀಮಂತರೇ ಹೀಗಾದರೆ ದೇವರೇ ದೇಶಾನ ಕಾಪಾಡಬೇಕು. ಚದುರಂಗದ ಕೈಯಲ್ಲಿ ಈ ಬಾದಶಾಹಗಿರಿ ನಾಶವಾಗೋದು ಖಂಡಿತ. ಯಾಕೋ ಲಕ್ಷಣ ಚೆನ್ನಾಗಿಲ್ಲ."

ರಾಜ್ಯದಲ್ಲಿ ಹಾಹಾಕಾರವೆದ್ದಿತ್ತು. ಹಾಡಹಗಲಲ್ಲಿಯೇ ಜನರ ಲೂಟಿಯಾಗುತ್ತಿತ್ತು. ಅವರ ದೂರಿಗೆ ಯಾರೂ ಕಿವಿಗೊಡುವವರಿರಲಿಲ್ಲ. ಗ್ರಾಮಾಂತರದ ಸಂಪತ್ತೆಲ್ಲವನ್ನೂ ಲಖನೋ ಪಟ್ಟಣ ಹೀರುತ್ತಿತ್ತು. ಅದೆಲ್ಲವೂ ವೇಶ್ಯೆಯರ ಮೇಲೆ, ನಕಲಿವೇಷದವರ ಮೇಲೆ ಹಾಗೂ ಇತರ ವಿಲಾಸಗಳ ಪೂರೈಕೆಯ ಮೇಲೆ ಉಡಾಯಿಸಿ ಹೋಗುತ್ತಿತ್ತು. ಪರಂಗೀ ಕಂಪನಿಯಲ್ಲಿನ ಸಾಲ ದಿನದಿನಕ್ಕೂ ಊದುತ್ತ ಬೆಳೆಯುತ್ತಿತ್ತು. ರಾಜ್ಯದಲ್ಲಿ ಸುವ್ಯವಸ್ಥೆಯಿಲ್ಲದ ಕಾರಣ ತೆರಿಗೆಯೂ ಸರಿಯಾಗಿ ವಸೂಲಾಗುತ್ತಿರಲಿಲ್ಲ. ಬ್ರಿಟಿಷ್ ರೆಸಿಡೆಂಟ್ ಮತ್ತೆ ಮತ್ತೆ ಎಚ್ಚರಿಕೆ ಕೊಡುತ್ತಿದ್ದ. ಆದರೆ ಜನ ವಿಲಾಸದ ಮತ್ತಿನಲ್ಲಿ ನಾಶವಾಗುತ್ತಿದ್ದರು.

ಮೀರ್‌ಸಾಹೇಬನ ದಿವಾನಖಾನೆಯಲ್ಲಿ ಆಟಕ್ಕೆ ಸೇರಲು ಶುರುವಾಗಿ ಎಷ್ಟೋ ತಿಂಗಳುಗಳು ಕಳೆದಿದ್ದವು. ದಿನವೂ ಆಟದ ಹೊಸ ಹೊಸ ನಕ್ಷೆಗಳನ್ನು ಬಿಡಿಸುತ್ತಿದ್ದರು; ಹೊಸ ಹೊಸ ಕೋಟೆ ಕಟ್ಟುತ್ತಿದ್ದರು. ದಿನವೂ ಹೊಸ ಹೊಸ ವ್ಯೂಹದ ರಚನೆಯಾಗುತ್ತಿತ್ತು; ಒಮ್ಮೊಮ್ಮೆ ಆಟದ ನಡುವೆ ಜಗಳವೂ ಆಗುತ್ತಿತ್ತು. ಒಬ್ಬರನ್ನೊಬ್ಬರು ನೀನು-ತಾನು ಎಂದು ಕರೆಯುವ ಸ್ಥಿತಿಯೂ ಬರುತ್ತಿತ್ತು. ಆದರೆ ಮತ್ತೆ ಬೇಗನೆ ಇಬ್ಬರು ಮಿತ್ರರೂ ಒಂದಾಗುತ್ತಿದ್ದರು. ಒಂದೊಂದು ಸಲ ಆಟ ಬಿಟ್ಟುಹೋಗುತ್ತಿದ್ದುದೂ ಉಂಟು. ಆಗ ಮಿರ್ಜಾ ಸಿಟ್ಟಿನಿಂದ ಎದ್ದು ಮನೆಗೆ ಹೊರಟುಹೋಗುತ್ತಿದ್ದ. ಮೀರ್ ಮನೆಯೊಳಗೆ ಹೋಗಿ ಕೂರುತ್ತಿದ್ದ. ಆದರೆ ಆ

ರಾತ್ರಿಯ ನಿದ್ರೆಯೊಡನೆ ಮನಸ್ಸಿನ ಮಾಲಿನ್ಯವೆಲ್ಲವೂ ಕಳೆದುಹೋಗುತ್ತಿತ್ತು. ಬೆಳಗಾದೊಡನೆಯೇ ಮತ್ತೆ ಮಿತ್ರರಿಬ್ಬರೂ ಬಂದು ದಿವಾನಖಾನೆಯಲ್ಲಿ ಸೇರುತ್ತಿದ್ದರು.

ಒಂದು ದಿನ ಇಬ್ಬರು ಮಿತ್ರರು ಚದುರಂಗದ ಕೊಚ್ಚೆಯಲ್ಲಿ ಮುಳುಗುಹಾಕುತ್ತಿದ್ದರು. ಅಷ್ಟರಲ್ಲಿ ಬಾದಶಹರ ಸೇನಾಧಿಕಾರಿಯೊಬ್ಬ ಕುದುರೆ ಹತ್ತಿ ಮೀರ್‌ಸಾಹೇಬನ ಹೆಸರು ವಿಚಾರಿಸಿಕೊಂಡು ಬಂದ. ಮೀರ್‌ಸಾಹೇಬನ ಪ್ರಜ್ಞೆ ಹಾರಿಹೋಯಿತು! ಇದು ಯಾವ ಗಂಡಾಂತರ ಮೈಮೇಲೆ ಎರಗಿಬಂತು? ಯಾತಕ್ಕಾಗಿ ಈ ಶೋಧನೆ? ಯಾಕೋ ಇದು ಕ್ಷೇಮದ ಸೂಚನೆಯಲ್ಲ! ಮೀರ್‌ಸಾಹೇಬ ಮನೆಯ ಬಾಗಿಲು ಮುಚ್ಚಿ "ಮನೇಲಿಲ್ಲ ಅಂತ ಹೇಳಿಬಿಡು' ಎಂದು ಆಳಿಗೆ ಅಪ್ಪಣೆ ಮಾಡಿದ.

ಸವಾರ ಕೇಳಿದ- "ಮನೇಲಿಲ್ಲದೇ ಹೋದರೆ ಮತ್ತೆಲ್ಲಿದಾರೆ?"

ಆಳು- "ನಾನು ಕಾಣೆ. ಏನು ಕೆಲಸವಿತ್ತು?"

"ಏನು ಕೆಲಸವಿತ್ತು ಅಂತ ನಿನಗೇನು ಹೇಳೋದು? ಹುಜೂರರ ಕಡೆಯಿಂದ ಕರೆ ಬಂದಿದೆ. ಪ್ರಾಯಶಃ ಫೌಜಿನ ಭರ್ತಿಗೆ ಶಿಪಾಯಿಗಳು ಬೇಕಾಗಿದಾರೆ. ಇವರದೇನು ಜಹಗೀರದಾರಿಕೆಯೋ ಹುಡುಗಾಟವೋ! ಸೈನ್ಯಕ್ಕೆ ಸೇರಿ ಯುದ್ಧಕ್ಕೆ ಹೋಗಬೇಕಾಗಿ ಬಂದಾಗ ಕಷ್ಟ ಅಂದರೇನು ಅನ್ನೋದು ಗೊತ್ತಾಗುತ್ತೆ!"

"ಒಳ್ಳೇದು, ತಾವು ಹೊರಡಿ. ಯಜಮಾನರು ಬಂದಮೇಲೆ ಸಮಾಚಾರ ತಿಳಿಸ್ತೀನಿ."

"ಇದು ತಿಳಿಸೋ ಸಮಾಚಾರ ಅಲ್ಲ. ನಾಳೆ ನಾನೇ ಖುದ್ದಾಗಿ ಬರ್ತೀನಿ. ಜೊತೇಲಿ ಕರಕೊಂಡು ಬಾ ಅಂತ ಹುಜೂರರ ಅಪ್ಪಣೆಯಾಗಿದೆ."

ಸವಾರ ಹೊರಟುಹೋದ. ಮೀರ್‌ಸಾಹೇಬನ ಜೀವ ನಡುಗತೊಡಗಿತು. ಮಿರ್ಜಾಜಿಯನ್ನು ಕೇಳಿದ- "ಹೇಳಿ ಸ್ವಾಮಿ, ಮುಂದೇನು ಗತಿ?"

ಮಿರ್ಜಾ- "ಬಲು ಕಷ್ಟಕ್ಕಿಟ್ಟುಕೊಂಡಿತು. ನನಗೂ ಕರೆ ಬರುತ್ತೋ ಏನೋ."

ಮೀರ್- "ಆ ಪಾಪಿ ಮತ್ತೆ ನಾಳೆ ಬರ್ತೀನಿ ಅಂತ ಹೇಳಿಹೋಗಿದಾನೆ."

"ಇದು ಗಂಡಾಂತರ ಅಲ್ಲದೆ ಮತ್ತೇನು! ಯುದ್ಧಕ್ಕೆ ಹೋಗಬೇಕಾಗಿಬಂದರೆ ಬದುಕಿದ್ರೂ ಸತ್ತ ಹಾಗೆ."

"ಒಂದೇ ಒಂದು ಉಪಾಯವಿದೆ. ಅದೇಂದರೆ ಮನೇಗೆ ಬಂದಾಗ ಸಿಗದೇಹೋಗೋದು. ನಾಳೆಯಿಂದ ಗೋಮತೀನದಿಯ ದಂಡೆಯ ಮೇಲೆ ಯಾವುದಾದರೊಂದು ಪಾಳು ಮನೇಲಿ ಸೇರೋಣ. ಅಲ್ಲಿದ್ದರೆ ಯಾರಿಗೆ ತಾನೇ ಸುದ್ದಿ ತಿಳಿಯುತ್ತೆ? ಸಾಹೇಬರು ಬಂದ ದಾರೀಲಿ ಹಿಂದಿರುಗಿ ಹೋಗ್ತಾರೆ."

"ಭಲೇ, ಸರಿಯಾಗಿ ಯೋಚಿಸಿದಿರಿ! ಇದು ಬಿಟ್ರೆ ಬೇರೆ ದಾರಿಯೇ ಇಲ್ಲ."

ಈ ಕಡೆ ಮೀರ್‌ಸಾಹೇಬನ ಹೆಂಡತಿ ಆ ಕುದುರೆಸವಾರನಿಗೆ ಹೇಳುತ್ತಿದ್ದಳು- "ನೀನು ಅವರನ್ನ ಚೆನ್ನಾಗಿ ತೊಲಗಿಸಿದೆ!" ಅದಕ್ಕೆ ಅವನಂದ- "ಇಂಥ ಮೂರ್ಖರನ್ನ ಬೆರಳಲ್ಲಿ ಕುಣಿಸಬಲ್ಲೆ. ಚದುರಂಗದಾಟ ಇವರ

ಧೈರ್ಯಬುದ್ಧಿಗಳನ್ನೆಲ್ಲಾ ಮೇದುಬಿಟ್ಟಿದೆ. ಇನ್ನು ಅವರು ಮರೆತು ಸಹ ಈ ಮನೇಲಿರೋಲ್ಲ."

## 3

ಮಾರನೆಯ ದಿನದಿಂದ ಇಬ್ಬರೂ ಮಿತ್ರರೂ ಬೆಳಕು ಹರಿಯುವ ಮೊದಲೇ ಮನೆಬಿಟ್ಟು ಹೊರಡುತ್ತಿದ್ದರು. ಕಂಕುಳಲ್ಲಿ ಒಂದು ಸಣ್ಣ ಜಮಖಾನೆ ಸಿಕ್ಕಿಸಿಕೊಂಡು, ಡಬ್ಬದಲ್ಲಿ ಎಲೆ ಅಡಿಕೆ ತುಂಬಿಕೊಂಡು, ಗೋಮತೀ ನದಿಯ ಆಚೆದಂಡೆಯ ಮೇಲಿದ್ದ, ಪ್ರಾಯಶಃ ನವಾಬ್ ಆಸಫಊದ್ದೌಲನೋ ಏನೋ ಕಟ್ಟಿಸಿದ್ದ ಪಾಳುಬಿದ್ದ ಮಸೀದಿಗೆ ಹೋಗುತ್ತಿದ್ದರು. ದಾರಿಯಲ್ಲಿ ಚಿಲುಮೆ, ತಂಬಾಕು, ಅಫೀಮುಗಳನ್ನು ಕೊಂಡು, ಮಸೀದಿ ತಲುಪಿದ ಮೇಲೆ ನೆಲಕ್ಕೆ ಜಮಖಾನ ಹಾಸಿ, ಹುಕ್ಕಾ ತುಂಬಿ ಚದುರಂಗವಾಡಲು ಕೂರುತ್ತಿದ್ದರು. ಮತ್ತೆ ಅವರಿಗೆ ಇಹಪರಗಳ ಚಿಂತೆಯೆಂದೂ ಇರುತ್ತಿರಲಿಲ್ಲ. ಆಟದಲ್ಲಿ ಬಳಸುವ 'ಕಿಶ್ತ್' 'ಶಹಾ' ಮುಂತಾದ ಒಂದೆರಡು ಶಬ್ದಗಳ ವಿನಹ ಅವರ ಬಾಯಿಂದ ಬೇರೆ ಮಾತೇ ಹೊರಡುತ್ತಿರಲಿಲ್ಲ. ಯಾವ ಯೋಗಿಗೇ ಆಗಲಿ ಇಂತಹ ಏಕಾಗ್ರಸಮಾಧಿ ಸಾಧ್ಯವಿರಲಿಲ್ಲ. ಮಧ್ಯಾಹ್ನ ಹಸಿವು ಕಾಣಿಸಿಕೊಂಡಾಗ ಇಬ್ಬರು ಮಿತ್ರರೂ ಯಾವುದಾದರೊಂದು ರೊಟ್ಟಿಅಂಗಡಿಗೆ ನುಗ್ಗಿ ಉಂಡು ಬರುತ್ತಿದ್ದರು. ಒಂದು ಚಿಲುಮೆ ಹುಕ್ಕಾ ಕುಡಿದು ಮತ್ತೆ ಸಂಗ್ರಾಮಕ್ಕಿಳಿಯುತ್ತಿದ್ದರು. ಒಮ್ಮೊಮ್ಮೆ ಅವರಿಗೆ ಊಟದ ಯೋಚನೆಯೂ ಇರುತ್ತಿರಲಿಲ್ಲ.

ಈ ಕಡೆ ರಾಜ್ಯದ ರಾಜಕೀಯ ಪರಿಸ್ಥಿತಿ ಭಯಂಕರವಾಗುತ್ತಹೋಯಿತು. ಕಂಪನಿಯ ಫೌಜು ಲಖನೋ ಕಡೆ ಸಾಗಿಬರುತ್ತಿತ್ತು. ಪಟ್ಟಣದಲ್ಲಿ ಕೋಲಾಹಲವೆದ್ದಿತ್ತು. ಜನ ಮಕ್ಕಳುಮರಿ ಕಟ್ಟಿಕೊಂಡು ಹಳ್ಳಿಗಳಿಗೆ ಓಡುತ್ತಿದ್ದರು. ಆದರೆ ನಮ್ಮ ಆಟಗಾರರಿಗೆ ಮಾತ್ರ ಅದರ ಯಾವ ಚಿಂತೆಯೂ ಇರಲಿಲ್ಲ. ಅವರು ಮನೆಬಿಟ್ಟು ಬರುತ್ತಿದ್ದುದು ಗಲ್ಲಿಗಳ ಮುಖಾಂತರ. ಎಲ್ಲಿ ಯಾವನಾದರೂ ಬಾದಶಹರ ಸೈನಿಕನ ಕಣ್ಣಿಗೆ ಬಿದ್ದರೆ ಕೂಲಿ ಮಾಡಬೇಕಾಗಿಬರುತ್ತದೆಯೋ ಎಂಬ ಭಯ ಅವರಿಗೆ. ಸಾವಿರಾರು ರೂಪಾಯಿಯ ವಾರ್ಷಿಕ ವರಮಾನವಿದ್ದ ಜಹಗೀರನ್ನು ಬಿಟ್ಟಿ ಕರಗಿಸುವ ಆಸೆ ಅವರದ್ದು.

ಒಂದು ದಿನ ಮಿತ್ರರಿಬ್ಬರೂ ಪಾಳುಮಸೀದಿಯಲ್ಲಿ ಕುಳಿತು ಚದುರಂಗವಾಡುತ್ತಿದ್ದರು. ಮಿರ್ಜಾನ ಆಟ ಸ್ವಲ್ಪ ದುರ್ಬಲವಾಗಿತ್ತು. ಮೀರ್‌ಸಾಹೇಬ ಒಂದರ ಮೇಲೊಂದರಂತೆ ಶಹಾ ಕಟ್ಟುತ್ತಿದ್ದ. ಅಷ್ಟರಲ್ಲಿ ದೂರದಲ್ಲಿ ಕಂಪನಿಯ ಸೈನಿಕರು ಹೋಗುತ್ತಿರುವುದು ಕಾಣಿಸಿತು. ಲಖನೋ ಪಟ್ಟಣದ ಮೇಲೆ ಅಧಿಕಾರ ಸ್ಥಾಪಿಸಲು ಬರುತ್ತಿದ್ದ ಪರಂಗಿಯವರ ಫೌಜು ಅದು.

ಮೀರ್‌ಸಾಹೇಬ ಹೇಳಿದ- "ಕಂಪನಿ ಫೌಜು ಬರ್ತಿದೆ. ದೇವರೇ ಕಾಪಾಡಬೇಕು."

"ಬಂದರೆ ಬರಲಿ, ಬಿಡಿ. ನೀವು ಶಹದಿಂದ ಬದುಕಿಕೊಳ್ಳಿ. ಇದೋ ಶಹಾ."

"ಅದೇನು ಅಂತ ಸ್ವಲ್ಪ ನೋಡಬೇಕು. ಇಲ್ಲಿ ಮರೇಲಿ ನಿಂತುಕೊಳ್ಳೋಣ."

"ನೋಡೋರಂತೆ, ಅವಸರವೇನು ? ಇದೋ ಮತ್ತೆ ಶಹಾ."

"ಫಿರಂಗಿಗಳೂ ಇವೆ. ಸುಮಾರು ಐದು ಸಾವಿರ ಜನ ಇರಬಹುದೇನೋ. ಎಂಥೆಂಥ ಹುಡುಗರೆಲ್ಲಾ ಇದಾರೆ. ಕೆಂಪು ಕೋತಿ ತರಹದ ಮುಖ. ಅವರ ಮುಖ ನೋಡಿದರೇ ಹೆದರಿಕೆಯಾಗುತ್ತೆ."

"ಸ್ವಾಮಿ, ಇಲ್ಲದ ನೆಪ ತೆಗೀಬೇಡಿ. ಈ ಮೋಸ ಬೇರೆಯೋರ ಹತ್ತಿರ ಆಗಲಿ. ಇದೋ ಶಹಾ."

"ನೀವೂ ವಿಚಿತ್ರ ಮನುಷ್ಯರು ಕಣ್ರೀ. ಅಲ್ಲಿ ಪಟ್ಟಣಕ್ಕೆ ಗಂಡಾಂತರ ಬಂದಿದೆ. ನಿಮಗೆ ಶಹಾದ್ದೇ ಯೋಚನೆ ! ಪಟ್ಟಣ ಉರುಳಿತು ಅಂದರೆ ಮನೆ ಹೇಗೆ ನಡೆಯುತ್ತೆ ಅಂತ ಏನಾದರೂ ಯೋಚನೆ ಮಾಡಿದೀರಾ ?"

"ಮನೆ ನಡಸೋ ಕಾಲ ಬಂದಾಗ ಅದನ್ನ ನೋಡಿಕೊಳ್ಳೋಣಂತೆ. ಇದೋ ಮತ್ತೊಂದು ಶಹಾ ಕಟ್ಟಿದೆ. ನಿಮ್ಮ ರಾಜ ಸೋತ."

ಫೌಜು ಹೊರಟುಹೋಯಿತು. ಸುಮಾರು ಹತ್ತು ಗಂಟೆಯ ಸಮಯ. ಮತ್ತೆ ಆಟ ಷುರುವಾಯಿತು.

ಮಿರ್ಜಾ ಹೇಳಿದ- "ಇವತ್ತು ಊಟಕ್ಕೆ ಏನು ಏರ್ಪಾಡು ?"

"ಸ್ವಾಮಿ, ಇವತ್ತು 'ರೋಜಾ', ಉಪವಾಸದ ದಿನ. ಏನು ನಿಮಗೆ ಹೆಚ್ಚು ಹಸಿವೆನ್ನಿಸುತ್ತೋ ಹೇಗೆ ?"

"ಇಲ್ಲ, ಪಟ್ಟಣದಲ್ಲಿ ಏನಾಗ್ತಿದೆಯೋ ಗೊತ್ತಿಲ್ಲ."

"ಪಟ್ಟಣದಲ್ಲಿ ಏನೂ ಆಗ್ತಿರೋಲ್ಲ. ಜನ ಊಟ ಮುಗಿಸಿ ಆರಾಮವಾಗಿ ಮಲಗಿರ್ತಾರೆ. ಹುಜೂರರೂ ನವಾಬಸಾಹೇಬರುಗಳೂ ಮಜಾ ಹೊಡೀತಿರ್ತಾರೆ."

ಭೂಪತಿಗಳಿಬ್ಬರೂ ಮತ್ತೆ ಆಟಕ್ಕೆ ಕುಳಿತಾಗ ಮೂರು ಗಂಟೆ ಹೊಡೆದಿತ್ತು. ಈ ಸಲವೂ ಮಿರ್ಜಾನ ಆಟ ದುರ್ಬಲವಾಗಿತ್ತು. ಊರ ಗಂಟೆ ಹೊಡೆಯುವಾಗ ಫೌಜು ಹಿಂದಿರುಗುತ್ತಿರುವ ಸಪ್ಪಳ ಕೇಳಿಸಿತು. ನವಾಬ್ ವಾಜಿದ್ ಆಲಿ ಶಾಹ ಕೈಸೆರೆಯಾಗಿದ್ದ. ಕಂಪನಿಯ ಸೈನ್ಯ ಅವನನ್ನು ಯಾವುದೋ ಅಜ್ಞಾತಸ್ಥಾನಕ್ಕೆ ಕರೆದೊಯ್ಯುತ್ತಿತ್ತು. ಪಟ್ಟಣದಲ್ಲಿ ಹೊಡೆದಾಟ-ಬಡಿದಾಟ, ಸದ್ದುಗದ್ದಲ ಒಂದೂ ಇರಲಿಲ್ಲ. ಒಂದು ಹನಿ ರಕ್ತ ಸಹ ನೆಲಕ್ಕೆ ಬಿದ್ದಿರಲಿಲ್ಲ. ಇದುವರೆಗೆ ಯಾವ ಸ್ವತಂತ್ರ ದೇಶದ ರಾಜನೂ ಒಂದು ತೊಟ್ಟು ರಕ್ತವೂ ಹರಿಯದಂತೆ ಇಷ್ಟು ಶಾಂತಿಯಿಂದ ಪರಾಜಿತನಾಗಿರಲಿಲ್ಲ. ಇದು ದೇವಗಣಕ್ಕೆ ಪ್ರಸನ್ನವಾಗುವಂತಹ ಅಹಿಂಸೆಯಾಗಿರಲಿಲ್ಲ; ತೀರಾ ಕೆಟ್ಟ ಹೇಡಿಗಳು ಸಹ ಕಣ್ಣೀರಿಡುವಂತಹ ಹೇಡಿತನವಾಗಿತ್ತು. ವಿಶಾಲ ದೇಶವಾದ ಅವಧದ ನವಾಬ ಬಂದಿಯಾಗಿ ಹೊರಟಿದ್ದ; ಲಖನೋ ಭೋಗನಿದ್ರೆಯ ಮತ್ತಿನಲ್ಲಿ ಮುಳುಗಿತ್ತು. ರಾಜನೈತಿಕ ಅಧಃಪತನದ ಚರಮಸೀಮೆಯೆಂದರೆ ಇದು.

ಮಿರ್ಜಾ ಹೇಳಿದ- "ನವಾಬಸಾಹೇಬರನ್ನು ಆಕ್ರಮಣಕಾರರು ಕೈಸೆರೆಹಿಡಿದಿದ್ದಾರೆ."

ಮೀರ್- "ಇರಬಹುದು. ಇದೋ ಶಹಾ ಅಂದೆ. ನಿಮ್ಮ ರಾಜ ಕಟ್ಟಿಗೆ ಸಿಕ್ಕಿದೆ."

"ಸ್ವಾಮಿ, ಸ್ವಲ್ಪ ತಾಳಿ. ಈಗ ಈ ಕಡೆ ಮನಸ್ಸಾಗ್ತಿಲ್ಲ. ಬಡಪಾಯಿ ನವಾಬರು ಈಗ ರಕ್ತದ ಕಣ್ಣೀರು ಸುಸ್ತಿದಾರೆ ಅಂತ ಅನ್ನಿಸುತ್ತೆ."

"ಸುರಿಸಲೇಬೇಕು. ಈ ಭೋಗ ಆವರ ಹಣೇಲಿ ಎಲ್ಲಿ ಬರೆದಿರಬೇಕು. ಇದೋ ಶಹಾ ಕೊಟ್ಟೆ !"

"ಯಾರ ಬದುಕೂ ಒಂದೇ ತರಹ ಇರೋಲ್ಲ. ಎಂಥ ಸಂಕಟದ ಸನ್ನಿವೇಶ."

"ಹೌದು, ಅದೇನೋ ನಿಜ-ಇದು ತೊಗೊಳ್ಳಿ ಮತ್ತೆ ಶಹಾ. ಈ ಶಹದಿಂದ ನಿಮ್ಮ ರಾಜ ಸತ್ತ. ತಪ್ಪಿಸಿಕೊಳ್ಳೋ ಹಾಗೇ ಇಲ್ಲ."

ದೇವರಾಣೆಯಾಗಿಯೂ ನೀವು ಮಹಾ ನಿಷ್ಕರುಣಿ ಕಣ್ರೀ. ಅಷ್ಟು ದೊಡ್ಡ ವಿಪತ್ತನ್ನು ಕಂಡರೂ ನಿಮಗೆ ದುಃಖವಾಗೋಲ್ಲವಲ್ಲ. ಅಯ್ಯೋ ಬಡಪಾಯಿ ವಾಜಿದ್ ಆಲಿ ಶಾಹ !"

"ಮೊದಲು ನಿಮ್ಮ ಚದುರಂಗದ ಬಾದಶಹರನ್ನು ಉಳಿಸಿಕೊಳ್ಳಿ. ಆಮೇಲೆ ನವಾಬ ಸಾಹೇಬರನ್ನ ಉಳಿಸೋರಂತೆ. ಇದೋ ಶಹಾ ಕಟ್ಟಿದೆ; ನಿಮ್ಮ ರಾಜನಿಗೆ ಶಹವಾಯಿತು. ಕೊಡಿ ಕೈಯ !"

ಬಾದಶಹನನ್ನು ಕರೆದೊಯ್ಯುತ್ತಿದ್ದ ಸೇನೆ ಅಲ್ಲಿ ಮುಂದೆಯೇ ಹಾದುಹೋಯಿತು. ಅದು ಹೋದೊಡನೆಯೇ ಮಿರ್ಜಾ ಮತ್ತೆ ಆಟಕ್ಕೆ ಷುರುಮಾಡಿದ. ಸೋಲಿನ ನೋವು ಬಲು ಕೆಟ್ಟದು. ಮೀರ್‌ಸಾಹೇಬ ಹೇಳಿದ- "ಬನ್ನಿ, ನವಾಬ ಸಾಹೇಬರ ಸೋಲಿಗೆ ಒಂದು ಚರಮಗೀತೆ ಹೇಳೋಣವಂತೆ." ಆದರೆ ಮಿರ್ಜಾನ ರಾಜಭಕ್ತಿಯೆಲ್ಲವೂ ಅವನ ಸ್ವಂತದ ಸೋಲಿನಲ್ಲಿ ಲುಪ್ತವಾಗಿಹೋಗಿತ್ತು. ಮತ್ತೆ ಆಡಿ ತನ್ನ ಸೋಲಿಗೆ ಮುಯ್ಯಿ ತೀರಿಸಿಕೊಳ್ಳಲು ಧೈರ್ಯ ಸಾಲದಾಗಿತ್ತು.

## 4

ಸಂಜೆಯಾಯಿತು. ಪಾಳುಮಸೀದಿಯಲ್ಲಿ ಬಾವಲಿಗಳು ಕಿರಚತೊಡಗಿದವು. ಅವಾಬೀಲ್ ಹಕ್ಕಿಗಳು ಹೊರಗಿನಿಂದ ಹಾರಿಬಂದು ತಮ್ಮ ತಮ್ಮ ಗೂಡು ಸೇರಿಕೊಂಡವು. ಆದರೂ ಈ ಆಟಗಾರರಿಬ್ಬರೂ ರಕ್ತಪಿಪಾಸುಗಳಾದ ಯೋಧರಿಬ್ಬರು ಪರಸ್ಪರ ಕಾದಾಡುತ್ತಿರುವರೇನೋ ಎಂಬಂತೆ ಪಟ್ಟುಹಿಡಿದು ಆಡುತ್ತಿದ್ದರು. ಮಿರ್ಜಾ ಒಂದೇ ಸಮನೆ ಮೂರು ಆಟ ಸೋತಿದ್ದ. ಈ ನಾಲ್ಕನೆಯ ಆಟದ ರಂಗು ಸಹ ಅಷ್ಟೇನೂ ಚೆನ್ನಾಗಿರಲಿಲ್ಲ. ಅವನು ಮತ್ತೆ ಮತ್ತೆ ಗೆಲ್ಲುವ ದೃಢನಿಶ್ಚಯ ಮಾಡಿಕೊಂಡು ಜಾಗರೂಕತೆಯಿಂದ ಆಡುತ್ತಿದ್ದ. ಆದರೆ ಒಂದಲ್ಲ ಒಂದು ನಡೆ ತಪ್ಪಿ ಅದರಿಂದ ಆಟ ಹಾಳಾಗುತ್ತತ್ತು. ಪ್ರತಿ ಸಲವೂ ಸೋಲಿನ ಜೊತೆಗೇ ಸೇಡಿನ ಭಾವನೆಯೂ ಉಗ್ರವಾಗುತ್ತಿತ್ತು. ಅತ್ತ ಮೀರ್‌ಸಾಹೇಬ

ಯಾವದೋ ಗುಪ್ತಧನ ಸಿಕ್ಕಿತೇನೋ ಎಂಬಂತೆ ಉತ್ಸಾಹದ ಜೋರಿನಲ್ಲಿ ಹಾಡುತ್ತ ಹಾಸ್ಯಮಾಡುತ್ತಿದ್ದ. ಅದನ್ನು ಕೇಳಿ ಮಿರ್ಜಾ ಒಳಗೊಳಗೇ ಕಿಡಿಕಿಡಿಯಾದರೂ ಸೋಲಿನಿಂದಾದ ಅವಮಾನವನ್ನು ತೋರಗೊಡದಿರಲೆಂದು ಮೀರ್ ಸಾಹೇಬನ ಪ್ರಶಂಸೆ ಮಾಡುತ್ತಿದ್ದ. ಆದರೆ ಆಟ ದುರ್ಬಲವಾಗುತ್ತ ಹೋದಂತೆಲ್ಲಾ ಅವನ ಧೈರ್ಯವೂ ಕುಂದತೊಡಗಿತು. ಕೊನೆಗೆ ಮಾತುಮಾತಿಗೆ ಸಿಡುಗುಟ್ಟತೊಡಗಿದ- "ಸ್ವಾಮಿ, ನೀವು ಒಂದು ಸಲ ನಡಸಿದ್ದನ್ನ ಮತ್ತೆ ಬದಲಾಯಿಸಬೇಡಿ" "ಇದೇನಿದು ? ಕಾಯಿ ನಡಸಿದಿರಿ, ಮತ್ತೆ ಅದನ್ನ ಬದಲಾಯಿಸಿದಿರಿ." "ಏನು ನಡಸೋದಿದ್ದರೂ ಒಂದೇ ಸಲ ನಡಸಿಬಿಡಿ." "ಕಾಯನ್ನ ಯಾಕೆ ಮುಟ್ತೀರಿ." "ಕಾಯಿ ಮೇಲಿಂದ ಕೈ ತೆಗೀರಿ" "ಏನು ನಡಸಬೇಕು ಅಂತ ಹೊಳೆಯೋವರೆಗೂ ಕಾಯಿ ಮುಟ್ಟೋಕ್ಕೆ ಹೋಗಬೇಡಿ." "ಒಂದೊಂದು ಕಾಯಿ ನಡಸೋಕ್ಕೂ ಅರ್ಧ ಗಂಟೆ ತೊಗೋತೀರಿ." "ಇದು ನಿಯಮಕ್ಕೆ ವಿರುದ್ಧ." "ಒಂದು ಕಾಯಿ ನಡಸೋಕ್ಕೆ ಐದು ನಿಮಿಷಕ್ಕಿಂತ ಹೆಚ್ಚು ತೊಗೊಂಡೋರು ಸೋತರು ಅಂತ ಲೆಕ್ಕ." "ಮತ್ತೆ ನಡೆ ಬದಲಾಯಿಸಿದ್ರಿ !" "ಮಾತಾಡದೆ ಆ ಕಾಯನ್ನ ಅಲ್ಲಿಡ್ರಿ."

ಮೀರ್‌ಸಾಹೇಬನ 'ವಜೀರ' ಸೋಲುವುದರಲ್ಲಿದ್ದ. ಅವನಂದ- "ನಾನು ಯಾವಾಗ ಕಾಯಿ ನಡಸಿದೆ ?"

"ನೀವು ಕಾಯಿ ನಡಸಿ ಆಗಿದೆ. ಕಾಯನ್ನ ಅಲ್ಲೇ ಇಡಿ, ಅದೇ ಮನೇಲಿ."

"ಆ ಮನೇಲಿ ಯಾಕೆ ಇಡಲಿ. ನಾನು ಕಾಯಿ ಮೇಲಿಂದ ಕೈ ತೆಗೆದೇ ಇಲ್ಲ."

"ನೀವು ಪ್ರಪಂಚ ಮುಳುಗೋ ತನಕ ಕಾಯಿ ಮೇಲಿಂದ ಕೈತೆಗೀದೇ ಇಟ್ಟುಕೊಂಡಿದ್ದರೆ ಕಾಯಿ ನಡಸಿಲ್ಲ ಅಂತಾನೆ ? 'ವಜೀರ' ಸೋಲೋದು ಕಂಡ ತಕ್ಷಣ ಭಂಡಾಟಕ್ಕೆ ಷುರು ಮಾಡಿದಿರಿ."

"ಭಂಡಾಟ ಆಡೋರು ನೀವು. ಸೋಲು-ಗೆಲುವು ಅದೃಷ್ಟದ ಮಾತು. ಭಂಡಾಟದಿಂದ ಗೆಲ್ಲೋಕ್ಕೆ ಆಗುತ್ತ್ಯೆ ?"

"ಈ ಆಟದಲ್ಲಂತೂ ನಿಮ್ಮ ಸೋಲಾಯಿತೋ ?"

"ನನಗೇಕೆ ಸೋಲಾಯಿತು ?"

"ನೀವು ಕಾಯನ್ನ ಅದು ಮೊದಲು ಯಾವ ಮನೇಲಿತ್ತೊ ಅಲ್ಲೇ ಇಡಿ."

"ಅಲ್ಲಿ ಯಾಕೆ ಇಡಲಿ. ಇಡೋಲ್ಲ."

"ಯಾಕಿಡೋಲ್ಲ ನೋಡ್ತೀನಿ. ಇಡಲೇಬೇಕು."

ಜಗಳ ಬೆಳೆಯುತ್ತ ಹೋಯಿತು. ಇಬ್ಬರೂ ತಮ್ಮ ತಮ್ಮ ಪಟ್ಟು ಹಿಡಿದು ಕುಳಿತರು. ಇಬ್ಬರಲ್ಲಿ ಯಾರೂ ಸೋಲರು. ಕೊನೆಗೆ ಅಪ್ರಾಸಂಗಿಕವಾದ ಮಾತಿಗೆ ಷುರುವಾಯಿತು.

ಮಿರ್ಜಾ ಹೇಳಿದ- "ನಿಮ್ಮ ಮನೆತನದಲ್ಲಿ ಯಾರಾದರೂ ಚದುರಂಗದಾಟ ಆಡಿದ್ದಿದ್ದರೆ ಇದರ ಕಾಯಿದೆ ಗೊತ್ತಿರ್ತಿತ್ತು. ನಿಮ್ಮೋರೆಲ್ಲಾ ಯಾವಾಗಲೂ ಹುಲ್ಲು ಕೊಯ್ತಿದ್ದೋರು, ನೀವೇನು ಚದುರಂಗ ಆಡೀರಿ. ಶ್ರೀಮಂತಿಕೆ ಅನ್ನೋದು ಬೇರೆಯೇ ಆಗುತ್ತೆ. ಜಹಗೀರು ಸಿಕ್ಕಿಬಿಟ್ಟ ಮಾತ್ರಕ್ಕೆ ಯಾರೂ ಶ್ರೀಮಂತರಾಗೋಲ್ಲ."

ಮೀರ್- "ಏನಂದಿರಿ ? ಹುಲ್ಲು ಕೊಯ್ತಿದ್ದದ್ದು ನಿಮ್ಮ ಅಪ್ಪ. ನಮ್ಮ ಮನೆತನದಲ್ಲಿ ಪೀಳಿಗೆಪೀಳಿಗೆಗಳಿಂದ ಚದುರಂಗ ಆಡಿಕೊಂಡು ಬಂದಿದಾರೆ."

ಮಿರ್ಜಾ- "ಅರೆ ಹೋಗ್ರಿ ! ಘಾಜಿಯುದ್ದೀನಿ ಹೈದರರ ಮನೇಲಿ ಅಡಿಗೆ ಮಾಡ ಮಾಡ್ತಾನೆ ನಿಮ್ಮ ಮನೆತನದವರು ಆಯುಸ್ಸು ಸವೆಸಿದರು. ಇವತ್ತು ಶ್ರೀಮಂತರಾಗೋಕ್ಕೆ ಹೊರಟಿದೀರಿ. ಶ್ರೀಮಂತಿಕೆ ಹುಡುಗಾಟದ ಮಾತಲ್ಲ."

ಮೀರ್- "ನಿಮ್ಮ ಹಿರಿಯರ ಮುಖಕ್ಕೆ ನೀವೇ ಯಾಕೆ ಕಪ್ಪು ಬಳೀತೀರಿ-ಅವರೇ ಅಡಿಗೆಯವರಾಗಿದ್ರೂ ಆಗಿದ್ದಿರಬಹುದು. ನಮ್ಮ ಮನೆತನದವರು ಯಾವಾಗಲೂ ಬಾದಶಹರ ಜೊತೆ ಒಂದೇ ಜಮಖಾನದ ಮೇಲೆ ಕೂತು ಊಟ ಮಾಡಿಕೊಂಡು ಬಂದಿದ್ದಾರೆ."

ಮಿರ್ಜಾ- "ಹೋಗೋ ಲೇ ಬೇವಾರ್ಸಿ, ತಲಾತರಟಿ ಮಾತಾಡಬೇಡ."

ಮೀರ್- "ನಾಲಿಗೇನ ಸ್ವಲ್ಪ ಹತೋಟಿಲಿಡಿ. ಇಲ್ಲದೇ ಹೋದರೆ ನೋಡೋರಂತೆ. ಏನಾಗುತ್ತೆ ಅಂತ. ನನಗೆ ಅಂಥ ಮಾತೆಲ್ಲಾ ಕೇಳಿ ಅಭ್ಯಾಸವಿಲ್ಲ. ನಮ್ಮಲ್ಲಿ ದುರುಗುಟ್ಟಿ ನೋಡಿದೋರಿಗೆ ಕಣ್ಣು ಕಿತ್ತುಹಾಕಿದೀವಿ. ಇದೆಯೇನು ಧೈರ್ಯ ?"

ಮಿರ್ಜಾ- "ನೀವು ನನ್ನ ಧೈರ್ಯ ಪರೀಕ್ಷಿಸಬೇಕು ಅಂತೀರೋ, ಹಾಗಾದರೆ ಆಗಿಬಿಡಲಿ ಒಂದು ಕೈ !"

ಮೀರ್- "ನಿಮಗೆ ಯಾರು ಹೆದರ್ತಾರೆ !"

ಮಿತ್ರರಿಬ್ಬರೂ ಸೊಂಟದಿಂದ ಕತ್ತಿ ಸೆಳೆದರು. ನವಾಬರ ಕಾಲ ಅದು. ಎಲ್ಲರೂ ಕತ್ತಿ, ಕಠಾರಿಗಳನ್ನು ಸಿಕ್ಕಿಸಿಕೊಂಡೇ ಓಡಾಡುತ್ತಿದ್ದರು. ಅವರಿಬ್ಬರೂ ವಿಲಾಸಿಗಳು, ಹೇಡಿಗಳಲ್ಲ. ಅವರಲ್ಲಿ ರಾಜನೈತಿಕ ಭಾವನೆಗಳು ಅಧಃಪತನವಾಗಿತ್ತು. ಬಾದಶಹನಿಗಾಗಿ, ಬಾದಶಹಗಿರಿಗಾಗಿ ಯಾಕೆ ಕಾದು ಸತ್ತಾರು ! ಅವರಲ್ಲಿ ವೈಯಕ್ತಿಕ ಶೌರ್ಯಕ್ಕೇನೂ ಕೊರತೆಯಿರಲಿಲ್ಲ. ಇಬ್ಬರೂ ವರಸೆ ಹಾಕಿ ನಿಂತರು, ಕತ್ತಿಗಳು ಥಳಥಳಿಸಿದವು, ಕತ್ತಿಯ ಹೊಡೆತದ ಶಬ್ದ ಕೇಳತೊಡಗಿತು. ಇಬ್ಬರೂ ಏಟು ತಿಂದು ಕೆಳಬಿದ್ದರು. ಇಬ್ಬರೂ ತಳಮಳಿಸುತ್ತ ಪ್ರಾಣಬಿಟ್ಟರು. ತಮ್ಮ ಬಾದಶಹನಿಗಾಗಿ ಅವರ ಕಣ್ಣಿಂದ ಒಂದು ಹನಿ ನೀರು ಸಹ ಉದುರಿರಲಿಲ್ಲ, ಆದರೆ ಅದೇ ಚದುರಂಗದ ವಜೀರನನ್ನು ರಕ್ಷಿಸಿಕೊಳ್ಳಲು ಕತ್ತಲೆ ಕವಿಯುತ್ತಿತ್ತು. ಚದುರಂಗದ ಹಾಸು ಹಾಸಿಯೇ ಇತ್ತು. ಎರಡೂ ಕಡೆಯ ಬಾದಶಹರು ತಮ್ಮ ತಮ್ಮ ಸಿಂಹಾಸನಗಳ ಮೇಲೆ ಕುಳಿತು ಈ ವೀರರಿಬ್ಬರ ಸಾವಿಗೆ ಗೋಳಿಡುತ್ತಿರುವಂತೆ ತೋರುತ್ತಿತ್ತು.

ಎಲ್ಲೆಲ್ಲೂ ಮೌನ ಕವಿದಿತ್ತು. ಪಾಳುಮಸೀದಿಯ ಬಾಗಿಲ ಕಮಾನುಗಳು, ಕೆಳಗುರುಳಿದ ಗೋಡೆಗಳು, ಧೂಳು ಹಿಡಿದ ಗೋಪುರಗಳು ಇವರ ಹೆಣಗಳನ್ನು ನೋಡಿ ಪಶ್ಚಾತ್ತಾಪಪಡುತ್ತಿದ್ದವು.

# 20. ಸವಾಸೇರು ಗೋದಿ

ಒಂದು ಹಳ್ಳಿಯಲ್ಲಿ ಶಂಕರನೆಂಬ ಒಬ್ಬ ರೈತನಿದ್ದ. ಕೊಂಚವಾದರೂ ಕಪಟವರಿಯದ ಬಡವ ಅವನು. ತಾನಾಯಿತು, ತನ್ನ ಕೆಲಸವಾಯಿತು. ಅವನು ಯಾರಿಂದಲೂ ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ; ಯಾರಿಗೂ ಏನನ್ನೂ ಕೊಡುತ್ತಲೂ ಇರಲಿಲ್ಲ. ಮೋಸವೆಂದರೆ ಏನೆಂಬುದನ್ನು ಅವನು ಕಾಣ; ವಂಚನೆಯ ಪ್ರಪಂಚದ ಸೋಂಕು ಸಹ ಅವನಿಗಿರಲಿಲ್ಲ. ಠಕ್ಕವಿದ್ಯೆಯನ್ನು ಅವನು ಅರಿಯ. ಊಟ ಸಿಕ್ಕಿದರೆ ಉಣ್ಣುವುದು, ಸಿಗದಿದ್ದರೆ ಹುರಿಗಡಲೆಯ ಮೇಲೆ ಕಾಲಹಾಕುವುದು. ಅದೂ ಸಿಗದಿದ್ದರೆ ನೀರು ಕುಡಿದು ದೇವರ ಹೆಸರು ಹೇಳಿ ಮಲಗುವುದು. ಆದರೆ ಯಾರಾದರೂ ಅತಿಥಿಗಳು ಮನೆಬಾಗಿಲಿಗೆ ಬಂದಾಗ ಅವನು ತನ್ನ ಈ ನಿವೃತ್ತಿಮಾರ್ಗವನ್ನು ತೊರೆಯಬೇಕಾಗುತ್ತಿತ್ತು. ಅದರಲ್ಲೂ ವಿಶೇಷವಾಗಿ ಸಾಧುಸಂತರು ಪಾದಬೆಳಸಿದಾಗ ಅವನು ಅನಿವಾರ್ಯವಾಗಿ ಪ್ರಾಪಂಚಿಕ ಮಾರ್ಗಕ್ಕೆ ಶರಣಾಗಬೇಕಾಗುತ್ತಿತ್ತು. ತಾನಾದರೆ ಹೊಟ್ಟೆಗಿಲ್ಲದೆ ಮಲಗಬಹುದು ನಿಜ, ಆದರೆ ಸಾಧುಗಳಿಗೆ ಹೊಟ್ಟೆಗೆ ಹಾಕದೆ ಹೇಗೆ ಮಲಗಿಸುವುದು !

ಒಂದು ದಿನ ಸಂಜೆ ಒಬ್ಬ ಸಾಧುಮಹಾತ್ಮ ಅವನ ಮನೆಯ ಮುಂದೆ ಬಂದು ಬಿಡಾರ ಹೂಡಿದ. ತೇಜಸ್ವಿಯಾದ ಮೂರ್ತಿ, ಕತ್ತಿನಲ್ಲಿ ಪೀತಾಂಬರ, ತಲೆಯಲ್ಲಿ ಜಟೆ, ಕೈಯಲ್ಲಿ ಹಿತ್ತಾಳೆಯ ಕಮಂಡಲು, ಕಾಲಿನಲ್ಲಿ ಪಾದುಕೆ, ಕಣ್ಣಿಗೆ ಕನ್ನಡಕ-ಅವನ ವೇಷಭೂಷಣ ಸಂಪೂರ್ಣವಾಗಿ ಶ್ರೀಮಂತರ ಮಹಲುಗಳಲ್ಲಿ ತಪಸ್ಸು ಮಾಡುತ್ತ, ಮೋಟಾರುಕಾರಿನಲ್ಲಿ ಕುಳಿತು ದೇವಸ್ಥಾನದ ಪ್ರದಕ್ಷಿಣೆ ಹಾಕುವ, ಯೋಗಸಿದ್ಧಿಯ ಪ್ರಾಪ್ತಿಗಾಗಿ ರುಚಿಕರವಾದ ಭೋಜನ ಮಾಡುವ ಸಾಧುಮಹಾತ್ಮರದಂತೆಯೇ ಇತ್ತು. ಶಂಕರನ ಮನೆಯಲ್ಲಿ ಜವೆಗೋದಿಯ ಹಿಟ್ಟಿತ್ತು. ಅದರಿಂದ ಮಾಡಿದ ರೊಟ್ಟಿಯನ್ನು ಸಾಧುಮಹಾತ್ಮನಿಗೆ ಹೇಗೆ ಬಡಿಸುವುದು ? ಹಿಂದಿನ ಕಾಲದಲ್ಲಿ ಜವೆಗೋದಿಗೆ ಎಷ್ಟೇ ಮಹತ್ವವಿದ್ದಿರಲಿ, ಈ ವರ್ತಮಾನಯುಗದಲ್ಲಿ ಅದರ ಅಡಿಗೆ ಸಿದ್ಧಪುರುಷರಿಗೆ ಅರಗುವಂತಹುದಲ್ಲ. ಸಾಧುವಿಗೆ ಏನು ಊಟಕ್ಕಿಕ್ಕುವುದೆಂದು .ಶಂಕರನಿಗೆ ತುಂಬ ಚಿಂತೆಗಿಟ್ಟುಕೊಂಡಿತು. ಕೊನೆಗೆ ಎಲ್ಲಿಂದಾದರೂ ಗೋದಿಯ ಹಿಟ್ಟನ್ನು ಸಾಲ ತರುವುದೆಂದು ನಿಶ್ಚಯಿಸಿದ. ಆದರೆ ಇಡಿ ಹಳ್ಳಿಯಲ್ಲೆಲ್ಲೂ ಗೋದಿಯ ಹಿಟ್ಟು ಸಿಗಲಿಲ್ಲ. ಹಳ್ಳಿಯಲ್ಲಿದ್ದವರೆಲ್ಲರೂ ಮನುಷ್ಯರೇ; ದೇವತೆಗಳು ಯಾರೂ ಇರಲಿಲ್ಲ.

ಅಂದಮೇಲೆ ದೇವತೆಗಳ ಊಟದ ವಸ್ತು ಹೇಗೆ ಸಿಗಬೇಕು! ಅದೃಷ್ಟವಶಾತ್ ಹಳ್ಳಿಯ ವಿಪ್ರಮಹಾಶಯನ ಮನೆಯಲ್ಲಿ ಕೊಂಚ ಸಿಕ್ಕಿತು. ಅವನಿಂದ ಸವಾಸೇರು ಗೋದಿ ಸಾಲ ತಂದು ಹೆಂಡತಿಗೆ ಬೀಸಲು ಹೇಳಿದ. ಸಾಧುಮಹಾತ್ಮ ಊಟ ಮಾಡಿ, ನಿಡಿದಾಗಿ ಆಕಳಿಸಿ ಮಲಗಿದ. ಬೆಳಗಿನಲ್ಲಿ ಆಶೀರ್ವಾದ ಮಾಡಿ ತನ್ನ ದಾರಿ ಹಿಡಿದು ಹೊರಟ.

ಗೋದಿ ಸಾಲ ಕೊಟ್ಟಿದ್ದ ಬ್ರಾಹ್ಮಣ ವರ್ಷದಲ್ಲಿ ಎರಡು ಸಲ ಕಣಕ್ಕೆ ಬಂದು ಮಾಮೂಲು ಪಡೆದು ಹೋಗುತ್ತಿದ್ದ. 'ಸವಾಸೇರು ಗೋದಿಯನ್ನು ಏನೆಂದು ವಾಪಸು ಕೊಡುವುದು ? ಮಾಮೂಲಿನ ಪಂಚೇರಿಗೆ ಬದಲು ಸ್ವಲ್ಪ ಹೆಚ್ಚಾಗಿಯೇ ಧಾನ್ಯ ಅಳೆದುಕೊಟ್ಟರೆ ಸರಿ. ಅವನಿಗೂ ಅರ್ಥವಾಗುತ್ತೆ, ನನಗೂ ಅರ್ಥವಾಗುತ್ತೆ' ಎಂದು ಶಂಕರ ತನಗೆ ತಾನೇ ಅಂದುಕೊಂಡ. ಚೈತ್ರಮಾಸದಲ್ಲಿ ಬ್ರಾಹ್ಮಣ ತನ್ನ ಮಾಮೂಲು ಪಡೆಯಲು ಬಂದಾಗ ಶಂಕರ ಅವನಿಗೆ ಒಂದೂವರೆ ಪಂಚೇರಿನಷ್ಟು ಗೋದಿ ಕೊಟ್ಟು, ತಾನು ಋಣಮುಕ್ತನಾದೆನೆಂದುಕೊಂಡ. ಅದರ ಚರ್ಚೆಗೆ ಹೋಗಲಿಲ್ಲ. ಬ್ರಾಹ್ಮಣ ಸಹ ಮತ್ತೆಂದೂ ತಾನು ಕೊಟ್ಟಿದ್ದ ಸವಾಸೇರು ಗೋದಿಯನ್ನು ಕೇಳಲಿಲ್ಲ. ಆ ಸವಾಸೇರು ಗೋದಿಯನ್ನು ತೀರಿಸಲು ತಾನು ಇನ್ನೊಂದು ಜನ್ಮವೆತ್ತಬೇಕಾಗುವುದೆಂದು ಸರಳ ಸ್ವಭಾವದ ಶಂಕರನಿಗೆ ಹೇಗೆ ತಿಳಿಯಬೇಕು ?

ಏಳು ವರ್ಷ ಕಳೆಯಿತು. ಬ್ರಾಹ್ಮಣ ಬ್ರಾಹ್ಮಣನಾಗಿದ್ದವನು ಹಣವಂತನಾಗಿ ಲೇವಾದೇವಿಗೆ ತೊಡಗಿದ; ಶಂಕರ ರೈತನಾಗಿದ್ದವನು ಕೂಲಿಯಾದ. ಶಂಕರನ ತಮ್ಮ ಮಂಗಳ ಅವನಿಂದ ಬೇರೆಯಾದ. ಒಟ್ಟಾಗಿದ್ದು ಇಬ್ಬರೂ ರೈತರಾಗಿದ್ದರು; ಬೇರೆಬೇರೆಯಾಗಿ ಕೂಲಿಗಳಾದರು. ದ್ವೇಷದ ಬೆಂಕಿ ಹೊತ್ತಿ ಉರಿಯಲು ಆಸ್ಪದ ಕೊಡಕೂಡದೆಂದು ಶಂಕರ ಬಯಸಿದ್ದ; ಆದರೆ ಪರಿಸ್ಥಿತಿ ಅವನನ್ನು ಅಸಹಾಯನನ್ನಾಗಿ ಮಾಡಿತ್ತು. ಮನೆಯಲ್ಲಿ ಎರಡು ಒಲೆ ಉರಿಯಲು ಷುರುವಾದ ದಿನದಿಂದ ಅಣ್ಣತಮ್ಮಂದಿರು ಶತ್ರುಗಳಾಗುತ್ತಾರೆ. ಒಬ್ಬ ಅತ್ತಾಗ ಇನ್ನೊಬ್ಬ ನಗುತ್ತಾನೆ; ಒಬ್ಬನ ಮನೆಯಲ್ಲಿ ಸಾವಾದರೆ ಇನ್ನೊಬ್ಬನ ಮನೆಯಲ್ಲಿ ಗುಲಾಬಿ ಅರಳುತ್ತದೆ. ಪ್ರೇಮದ ಬಂಧನ, ರಕ್ತದ ಬಂಧನ, ಹಾಲಿನ ಬಂಧನ ಅವತ್ತು ಹರಿದುಹೋಗುತ್ತದೆ. ಶಂಕರ ಭಗೀರಥಪ್ರಯತ್ನ ಮಾಡಿ ಕುಲಗೌರವದ ವೃಕ್ಷ ನೆಟ್ಟಿದ್ದ; ಅದಕ್ಕೆ ರಕ್ತವೆರೆದು ಬೆಳಸಿದ್ದ. ಆದರೆ ಈಗ ಅದರ ಬೇರೇ ಕಿತ್ತುಬಂದುದನ್ನು ನೋಡಿದಾಗ ಅವನ ಹೃದಯ ಚೂರುಚೂರಾಯಿತು. ವಾರ ಕಾಲ ಅವನು ಅನ್ನದ ಮುಖ ನೋಡಲಿಲ್ಲ. ಇಡೀ ದಿನ ಜ್ಯೇಷ್ಠಮಾಸದ ಬಿಸಿಲಿನ ಬೇಗೆಯಲ್ಲಿ ಕೆಲಸ ಮಾಡುವುದು, ರಾತ್ರಿ ಮುಖ ಮುಚ್ಚಿಕೊಂಡು ಮಲಗುವುದು. ಈ ಭೀಷಣ ವೇದನೆ, ಈ ದುಸ್ಸಹವಾದ ಕಷ್ಟ ಅವನ ರಕ್ತವನ್ನು ಇಂಗಿಸಿತು, ಮೈಯ ಮಾಂಸಮಜ್ಜೆಗಳೆಲ್ಲವೂ ತೊಳೆದುಹೋದವು. ಕಾಹಿಲೆ ಬಿದ್ದ; ತಿಂಗಳುಗಟ್ಟಲೆ ಮಂಚಬಿಟ್ಟೇಳಲಿಲ್ಲ. ಇನ್ನು ಜೀವನದ ನಿರ್ವಹಣೆ ನಡೆಯುವುದೆಂತು ? ಐದು ಬೀಘಾ ಜಮೀನಿನಲ್ಲಿ ಅರ್ಧ ಮಾತ್ರ ಉಳಿಯಿತು; ಒಂದು ಎತ್ತು ಉಳಿಯಿತು. ಇನ್ನು ಏನು ಸಾಗುವಳಿ

ಮಾಡುವುದು, ಮಣ್ಣು! ಕೊನೆಕೊನೆಗೆ ಪರಿಸ್ಥಿತಿ ಎಲ್ಲಿಗೆ ಬಂತೆಂದರೆ ಬೇಸಾಯ ಕೇವಲ ಮರ್ಯಾದೆಯ ರಕ್ಷಣೆಯ ಸಾಧನವಾಗಿ ಉಳಿಯಿತು; ಉದರಭರಣೆಯ ಭಾರ ಕೂಲಿಗೆಲಸದ ಮೇಲೆ ಬಿದ್ದಿತು.

## 2

ಏಳು ವರ್ಷ ಕಳೆಯಿತು. ಒಂದು ದಿನ ಶಂಕರ ಕೂಲಿಗೆಲಸ ಮುಗಿಸಿ ಹಿಂದಿರುಗುತ್ತಿರುವಾಗ ದಾರಿಯಲ್ಲಿ ಬ್ರಾಹ್ಮಣ ಎದುರಾದ. "ನಾಳೆ ಬಂದು ನಿನ್ನ ಕಾಳುಕಡ್ಡಿ ಲೆಕ್ಕ ತೀರಿಸಿ ಬಿಡೋ, ಶಂಕರ. ನಿನ್ನ ಕಡೆಯ ಐದೂವರೆ ಮಣ ಗೋದಿ ಎಷ್ಟು ದಿನದಿಂದ ಬಾಕಿಯಿದೆ, ನೀನು ವಾಪಸು ಕೊಡೋ ಲಕ್ಷಣವೇ ತೋರಿಸ್ತಿಲ್ಲ! ಏನು ನುಂಗಿಹಾಕೋಣ ಅಂತ ಮನಸ್ಸೋ ಹೇಗೆ?"

ಶಂಕರ ಚಕಿತನಾಗಿ ಕೇಳಿದ- "ಐದೂವರೆ ಮಣ ಬಾಕಿಯಾಗೋದಕ್ಕೆ ನಿಮ್ಮಿಂದ ಅದ್ಯಾವಾಗ ಗೋದಿ ಸಾಲ ತೊಗೊಂಡಿದ್ದೆ. ನಾನು ಯಾರಿಂದಾನೂ ಒಂದು ಚಟಾಕು ಧಾನ್ಯವಾಗಲೀ, ಒಂದು ಕಾಸು ಸಾಲವಾಗಲಿ ತೊಗೋಳೋನಲ್ಲ ಅನ್ನೋದು ಮರೆತು ಬಿಟ್ಟಿರಾ?"

ಬ್ರಾಹ್ಮಣ- "ಈ ನಿಯತ್ತಿನಿಂದಾಗಿಯೇ ತಿನ್ನೋಕ್ಕಿಲ್ಲದ ಹಾಗೆ ಆಗಿರೋದು!"

ಹೀಗಂದು ಬ್ರಾಹ್ಮಣ ಅವತ್ತಿಗೆ ಏಳು ವರ್ಷ ಹಿಂದೆ ಶಂಕರನಿಗೆ ಕೊಟ್ಟಿದ್ದ ಸವಾಸೇರು ಗೋದಿಯ ವಿಷಯವೆತ್ತಿದ. ಅದನ್ನು ಕೇಳಿ ಶಂಕರ ಅವಾಕ್ಕಾದ. ಅಯ್ಯೋ ದೇವರೇ, ಇವನು ನನಗೆ ಅದೇನು ಕೆಲಸ ಮಾಡಿಕೊಟ್ಟ ಅಂತ ಇವನಿಗೆ ನಾನು ಎಷ್ಟು ಸಲ ಸುಗ್ಗಿಯ ಮಾಮೂಲು ಕೊಟ್ಟಿದೀನಿ. ಜಾತ-ಪಂಚಾಂಗ ನೋಡೋಕ್ಕೆ ಅಂತಾನೋ, ಲಗ್ನ ಮುಹೂರ್ತ ಕಟ್ಟೋಕ್ಕೆ ಅಂತಾನೋ ಇವನು ಮನೆಬಾಗಿಲಿಗೆ ಬಂದಾಗಲೆಲ್ಲಾ ದಕ್ಷಿಣೆ ತೊಗೊಳ್ಳದೇ ಹೋಗಿಲ್ಲ. ಇಷ್ಟು ಸ್ವಾರ್ಥವೇ! ಮೊಟ್ಟೆಗೆ ಕಾವು ಕೊಟ್ಟು ಮರಿಮಾಡಿದ ಹಾಗೆ ಸವಾಸೇರು ಗೋದಿಯಿಂದ ಇವತ್ತು ಈ ಪಿಶಾಚೀನ ಹುಟ್ಟಿಸಿ ನಿಲ್ಲಿಸಿದಾನಲ್ಲ. ಇದು ನನ್ನನ್ನ ತಿಂದು ಮುಗಿಸದೇ ಬಿಡೋಲ್ಲ. ಇಷ್ಟು ವರ್ಷದಲ್ಲಿ ಒಂದು ಸಲವಾದರೂ ಕೇಳಿದ್ದಿದ್ದರೆ ಅಳೆದುಕೊಟ್ಟುಬಿಡ್ತಿದ್ದೆ. ಈ ನಿಯತ್ತು ತೋರಿಸೋದಕ್ಕೋಸ್ಕರವೇ ಇವನು ಇದುವರೆಗೆ ಸುಮ್ಮನಿದ್ದನೋ ಹೇಗೆ!

ಶಂಕರ ಹೇಳಿದ- "ಅಯ್ನೋರೆ, ಸಾಲದ ಬಾಬತ್ತಿಗೆ ಅಂತ ಹೆಸರು ಹೇಳಿ ನಾನು ಆ ಧಾನ್ಯಾನ ವಾಪಸು ಕೊಟ್ಟಿಲ್ಲ ನಿಜ. ಆದರೆ ಎಷ್ಟೋ ಸಲ ನೀವು ಕಣಕ್ಕೆ ಬಂದಾಗ ಸೇರು, ಎರಡು ಸೇರು ಕೊಟ್ಟಿದೀನಿ. ಈಗ ನೀವು ಐದೂವರೆ ಮಣ ಗೋದಿ ತಾ ಅಂದರೆ ಎಲ್ಲಿಂದ ತರಲಿ?"

ಬ್ರಾಹ್ಮಣ- "ಬರೆದಿಟ್ಟಿದ್ದು ಲೆಕ್ಕ. ನೀನು ಒಂದು ಸೇರಿನ ಜಾಗದಲ್ಲಿ ಐದು ಸೇರೇ ಕೊಟ್ಟಿರು, ನೀನು ಕೊಟ್ಟಿದ್ದಕ್ಕೆ ಲೆಕ್ಕವಿಲ್ಲ. ಖಾತೇಲಿ ನಿನ್ನ ಹೆಸರಿನಲ್ಲಿ ಐದೂವರೆ ಮಣ ಬರೆದಿದೆ, ಯಾರ ಹತ್ತಿರ ಬೇಕಾದರೂ ಲೆಕ್ಕಾಚಾರ ಮಾಡಿಸು. ಕೊಟ್ಟರೆ

ಖಾತೆಯಿಂದ ನಿನ್ನ ಹೆಸರು ಹೊಡೆದುಹಾಕ್ತೀನಿ, ಇಲ್ಲದೇ ಹೋದರೆ ಅದು ಬೆಳೀತಾ ಹೋಗುತ್ತೆ."

ಶಂಕರ- "ಬಡವನ್ನ ಯಾಕೆ ಸತಾಯಿಸ್ತೀರಿ. ನನಗೆ ಊಟಕ್ಕೆ ದಿಕ್ಕಿಲ್ಲ. ಇಷ್ಟು ಗೋದೀನ ಎಲ್ಲಿಂದ ಭಿಕ್ಷೆ ಬೇಡಿ ತಂದುಕೊಡಲಿ ಹೇಳಿ."

ಬ್ರಾಹ್ಮಣ- "ಎಲ್ಲಿಂದ ಬೇಕಾದರೂ ತಂದುಕೊಡು. ನಾನಂತೂ ಒಂದು ಚಟಾಕನ್ನೂ ಬಿಡೋನಲ್ಲ. ಇಲ್ಲಿ ತೀರಿಸದೆ ಹೋದರೆ ದೇವರ ಮುಂದಾದರೂ ತೀರಿಸ್ತೀ ತಾನೆ ?"

ಶಂಕರ ನಡುಗಿಹೋದ. ನಾವು ಓದುಬರೆಹ ಕಲಿತವರಾದರೆ 'ಒಳ್ಳೇದು, ದೇವರ ಮುಂದೇನೇ ತೊಗೊಳ್ಳೋವಂತೆ. ಅಲ್ಲಿಯ ತೂಕ ಇಲ್ಲಿದಕ್ಕಿಂತ ಹೆಚ್ಚೇನೂ ಆಗೋಲ್ಲವಲ್ಲ' ಅಂತ ಅಂದುಬಿಡ್ತಿದ್ದೆವು. ಕೊಟ್ಟದ್ದಕ್ಕೆ ಯಾವ ಪ್ರಮಾಣವೂ ಇಲ್ಲದಿರೋವಾಗ ಇನ್ನೇನು ಚಿಂತೆ ! ಆದರೆ ಶಂಕರ ಅಷ್ಟು ತರ್ಕ ಬಲ್ಲವನೂ ಅಲ್ಲ; ವ್ಯವಹಾರಚತುರನೂ ಅಲ್ಲ. ಮೊದಲೇ ಸಾಲ, ಅದರಲ್ಲೂ ಬ್ರಾಹ್ಮಣನದು. ಖಾತೆಯಲ್ಲಿ ಹೆಸರು ಉಳಿಯಿತೆಂದರೆ ತಾನು ಸೀದಾ ನರಕಕ್ಕೆ ಹೋಗಬೇಕಾಗುತ್ತದೆ. ಆ ಯೋಚನೆಗೆ ಶಂಕರನ ಮೈ ನಡುಗಿತು. ಅವನಂದ- "ಸ್ವಾಮಿ, ನಿಮ್ಮದು ಎಷ್ಟೇ ಇರಲಿ, ಇಲ್ಲೇ ಕೊಡ್ತೀನಿ. ದೇವರ ಮುಂದೇಕೆ ಕೊಡಲಿ. ಈ ಜನ್ಮದಲ್ಲಿ ಅನುಭವಿಸುತ್ತಿರೋದೇ ಸಾಕು, ಇನ್ನು ಬರೋ ಜನ್ಮದಲ್ಲೂ ಯಾಕೆ ಕೇಡು ತಂದುಕೊಳ್ಳಲಿ. ಆದರೆ ಇದು ನಿಯತ್ತಲ್ಲ. ಸಾಸಿವೆಯಷ್ಟಿದ್ದದ್ದನ್ನ ಗುಡ್ಡದಷ್ಟು ಮಾಡಿದೀರಿ. ಬ್ರಾಹ್ಮಣರಾಗಿ ನೀವು ಹೀಗೆ ಮಾಡಬಾರದಾಗಿತ್ತು. ಆ ಗಳಿಗೇಲೇ ತಗಾದೆ ಮಾಡಿ ಇಸಕೊಂಡಿದ್ದರೆ ಇವತ್ತು ನನ್ನ ತಲೆಮೇಲೆ ಇಷ್ಟು ದೊಡ್ಡ ಭಾರ ಬೀಳ್ತಿರಲಿಲ್ಲ, ನಾನಂತೂ ಕೊಟ್ಟುಬಿಡ್ತೀನಿ. ಆದರೆ ದೇವರ ಮುಂದೆ ನೀವು ಜವಾಬು ಕೊಡಬೇಕಾಗುತ್ತೆ."

ಬ್ರಾಹ್ಮಣ- "ಅಲ್ಲಿಯ ಭಯ ನಿನಗಿರಬಹುದು, ನನಗೇಕೆ ? ಅಲ್ಲಿರೋರೆಲ್ಲಾ ನಮ್ಮ ಬಂಧುಬಳಗವೇ, ಋಷಿಮುನಿಗಳೆಲ್ಲರೂ ಬ್ರಾಹ್ಮಣರು, ದೇವತೆಗಳೆಲ್ಲಾ ಬ್ರಾಹ್ಮಣರು. ಅಲ್ಲಿ ಏನೇ ಆಗಲಿ ನಾನು ನೋಡ್ಕೋತೀನಿ. ಹ್ಞೂ, ಹೇಳು, ಯಾವಾಗ ಕೊಡ್ತಿ."

ಶಂಕರ- "ನನ್ನ ಹತ್ತಿರವೇನು ಗೋದಿ ಕೊಳೀತಾ ಕೂತಿದೆಯೆ ? ಯಾರದ್ದಾದರೂ ಕೈಕಾಲು ಕಟ್ಟಿ ತರೋವರೆಗೆ ಹೇಗೆ ಕೊಡೋಕ್ಕಾಗುತ್ತೆ ?"

ಬ್ರಾಹ್ಮಣ- "ಇದನ್ನ ನಾನು ಒಪ್ಪೋಲ್ಲ. ಏಳು ವರ್ಷವಾಯಿತು, ಇನ್ನು ಒಂದು ದಿನವೂ ದಾಕ್ಷಿಣ್ಯ ತೋರಿಸೋಕ್ಕಾಗೋಲ್ಲ. ಗೋದಿ ಕೊಡೋಕ್ಕಾಗದೇ ಹೋದರೆ ಸಾಲಪತ್ರ ಬರೆದುಕೊಡು."

ಶಂಕರ- "ನಾನಂತೂ ಕೊಡಲೇಬೇಕು. ಬೇಕಾದರೆ ಗೋದಿ ತೊಗೊಳ್ಳಿ, ಇಲ್ಲವೇ ಪತ್ರ ಬರೆಸಿಕೊಳ್ಳಿ. ಏನು ಬೆಲೆ ಹಿಡೀತೀರಿ ?"

ಬ್ರಾಹ್ಮಣ- "ಬಜಾರಿನ ಬೆಲೆ ಐದು ಸೇರಿದೆ. ನಿನಗೆ ಅಂತ ಐದೂಕಾಲು ಸೇರಿನ ಹಾಗೆ ಹಿಡೀತೀನಿ."

ಶಂಕರ- "ಹೇಗೂ ಕೊಡ್ತಿದೀನಿ. ಅಂದಮೇಲೆ ಬಜಾರಿನ ಬೆಲೇಲೇ ಕೊಡ್ತೀನಿ. ಒಂದು ಪಾವಿನ ರಿಯಾಯಿತಿ ಪಡೆದು ಪಾಪ ಯಾಕೆ ಕಟ್ಕೊಳ್ಳಲಿ."

ಲೆಕ್ಕ ಹಾಕಿದಾಗ ಗೋದಿಯ ಬೆಲೆ ಅರವತ್ತು ರೂಪಾಯಿ ಆಯಿತು. ಆ ಹಣಕ್ಕೆ ಸಾಲಪತ್ರ ಬರೆದದ್ದಾಯಿತು. ಬಡ್ಡಿಯ ದರ ಶೇಕಡಾ ಮೂರರಂತೆ. ಒಂದು ವರ್ಷದೊಳಗೆ ತೀರಿಸಿದರೆ ಶೇಕಡಾ ಎರಡೂವರೆ. ಎಂಟಾಣೆ ಸ್ಟಾಂಪು ಖರ್ಚು, ಒಂದು ರೂಪಾಯಿ ಪತ್ರ ಬರೆದು ಖರ್ಚು ಶಂಕರನೇ ತೆರಬೇಕಾಯಿತು.

ಹಳ್ಳಿಯವರೆಲ್ಲರೂ ಬ್ರಾಹ್ಮಣನನ್ನು ಬೈದರು, ಆದರೆ ಅವನ ಮುಖದ ಮೇಲಲ್ಲ. ಸಾಲ ಕೊಡುವ ಸಾಹುಕಾರ ಎಲ್ಲರಿಗೂ ಬೇಕಾಗುತ್ತಾನೆ. ಅವನಿಗೆ ಕೆಟ್ಟವನಾಗುವುದೆ !

## 3

ಶಂಕರ ಒಂದು ವರ್ಷದವರೆಗೆ ಕಠಿಣ ತಪಸ್ಸು ಮಾಡಿದ. ವಾಯಿದೆಗೆ ಮೊದಲೇ ಸಾಲ ತೀರಿಸುವುದೆಂದು ಅವನು ಶಪಥಮಾಡಿದ್ದ. ಮನೆಯಲ್ಲಿ ಮಧ್ಯಾಹ್ನಕ್ಕೆ ಮೊದಲು ಒಲೆ ಹಚ್ಚುತ್ತಿರಲಿಲ್ಲ. ಹುರಿಗಡಲೆಯ ಮೇಲೆಯೇ ಕಾಲ ತಳ್ಳುತ್ತಿದ್ದುದು ಈಗ ಅದೂ ನಿಂತಿತು. ಮಕ್ಕಳಿಗೆಂದಷ್ಟೇ ರಾತ್ರಿ ಒಂದಿಷ್ಟು ರೊಟ್ಟಿ ಸುಡುವುದಾಯಿತು. ಶಂಕರ ದಿನವೂ ಒಂದು ಬಿಲ್ಲೆಯ ತಂಬಾಕು ಕುಡಿಯುವ ಅಭ್ಯಾಸವಿಟ್ಟುಕೊಂಡಿದ್ದ. ಬಿಡಲು ಸಾಧ್ಯವಾಗದಿದ್ದ ಒಂದೇ ಒಂದು ಚಟವೆಂದರೆ ಅದು. ಈಗ ಆ ಚಟವೂ ಈ ಕಠಿಣ ವ್ರತಕ್ಕೆ ಆಹುತಿಯಾಯಿತು. ಚಿಲುಮೆಯನ್ನು ಒಡೆದುಹಾಕಿದ, ಹುಕ್ಕವನ್ನು ಮುರಿದ, ಪಾತ್ರೆಯನ್ನು ಪುಡಿಪುಡಿ ಮಾಡಿದ. ಅವನು ಉಡುತ್ತಿದ್ದ ಬಟ್ಟೆ ಮೊದಲೇ ತ್ಯಾಗದ ಚರಮಸೀಮೆಯನ್ನು ಮುಟ್ಟಿತ್ತು. ಈಗಂತೂ ಅದು ಪ್ರಕೃತಿಯ ನ್ಯೂನತಮ ರೇಖೆಯೊಡನೆ ಒಂದುಗೂಡಿತು. ಶಿಶಿರಮಾಸದ ಮೂಳೆ ಕೊರೆಯುವ ಚಳಿಯನ್ನು ಅವನು ಬೆಂಕಿ ಕಾಯಿಸಿ ಕಳೆದ. ಈ ಧ್ರುವಸಂಕಲ್ಪ ಆಸೆ ಮೀರಿ ಫಲ ಕೊಟ್ಟಿತ್ತು. ವರ್ಷದ ಕೊನೆಯಲ್ಲಿ ಅವನ ಹತ್ತಿರ ಅರವತ್ತು ರೂಪಾಯಿ ಕೂಡಿತು. ಬ್ರಾಹ್ಮಣನಿಗೆ ಆ ಹಣವನ್ನು ಕೊಟ್ಟು 'ಸ್ವಾಮಿ, ಬಾಕಿಯನ್ನು ಬೇಗನೆ ನಿಮ್ಮ ಮುಂದೆ ತಂದು ಅರ್ಪಿಸುತ್ತೇನೆ' ಎನ್ನುವುದು ಎಂದು ಯೋಚಿಸಿದ. ಇನ್ನು ಹದಿನೈದು ರೂಪಾಯಿಯ ಮಾತು. ಬ್ರಾಹ್ಮಣ ಅದಕ್ಕೆ ಒಪ್ಪದೇ ಏನು ?

ಶಂಕರ ಹಣ ಕೊಂಡುಹೋಗಿ ಬ್ರಾಹ್ಮಣನ ಚರಣಕಮಲಗಳಲ್ಲಿ ಅರ್ಪಿಸಿದ. ಬ್ರಾಹ್ಮಣ ಆಶ್ಚರ್ಯದಿಂದ ಕೇಳಿದ- "ಏನು, ಯಾರಿಂದಲಾದರೂ ಸಾಲ ತೊಗೊಂಡೆಯಾ ?"

ಶಂಕರ- "ಇಲ್ಲ. ಸ್ವಾಮಿ, ನಿಮ್ಮ ಆಶೀರ್ವಾದದಿಂದ ಕೂಲಿ ಚೆನ್ನಾಗಿ ಸಿಕ್ಕಿತು."

ಬ್ರಾಹ್ಮಣ- "ಇದೇನಿದು, ಅರವತ್ತೇ ರೂಪಾಯಿ ?"

ಶಂಕರ- "ಹೌದು ಸ್ವಾಮಿ. ಇಷ್ಟನ್ನ ಈಗ ತೊಗೊಳ್ಳಿ. ಉಳಿದದ್ದನ್ನ ಎರಡು ಮೂರು ತಿಂಗಳಲ್ಲಿ ಕೊಟ್ಟುಬಿಡ್ತೀನಿ. ದಯವಿಟ್ಟು ನನ್ನನ್ನು ಋಣಮುಕ್ತನನ್ನಾಗಿ ಮಾಡಿ."

ಬ್ರಾಹ್ಮಣ- "ನನ್ನ ಸಾಲಾನ ಕೊನೇ ಕವಡೇ ತನಕ ತೀರಿಸಿದ ಮೇಲೆಯೇ ನೀನು ಋಣಮುಕ್ತನಾಗೋದು. ಹೋಗಿ ಉಳಿದ ಹದಿನೈದು ರೂಪಾಯಿ ತಂದುಕೊಡು."

ಶಂಕರ- "ಸ್ವಾಮಿ, ಇಷ್ಟು ದಯೆ ತೋರಿಸಿ. ಈಗ ಒಪ್ಪೊತ್ತಿನ ಕೂಳಿಗೂ ದಿಕ್ಕಿಲ್ಲದ ಹಾಗಾಗಿದೆ. ಹಳ್ಳೀಲೆ ಇದ್ದರೆ ಎಂದಾದರೂ ನಿಮ್ಮ ಬಾಕಿ ಕೊಟ್ಟೇ ಕೊಡ್ತೀನಿ."

ಬ್ರಾಹ್ಮಣ- "ನನಗೆ ಈ ಗೋಳೆಲ್ಲಾ ಬೇಕಾಗಿಲ್ಲ. ನನಗೆ ಹೆಚ್ಚು ಮಾತಾಡೋದಕ್ಕೂ ಬರೋದಿಲ್ಲ. ನೀನು ಪೂರ್ತಿ ಹಣಸಂದಾಯ ಮಾಡದೇ ಹೋದರೆ ಇವತ್ತಿನಿಂದ ಶೇಕಡಾ ಮೂರೂವರೆ ಬಡ್ಡಿ ಬೀಳುತ್ತೆ. ನಿನ್ನ ಹಣ ಬೇಕಾದರೆ ನಿಮ್ಮ ಮನೇಲಿ ಇಟ್ಟಕೋ, ಇಲ್ಲವೇ ಬಿಟ್ಟುಹೋಗು."

ಶಂಕರ- "ಒಳ್ಳೇದು, ತಂದಿರೋ ಅಷ್ಟನ್ನ ಇಟ್ಟಕೊಳ್ಳಿ. ನಾನು ಬರ್ತೀನಿ. ಎಲ್ಲಿಂದಾದರೂ ಹದಿನೈದು ರೂಪಾಯಿ ಎತ್ತೋ ದಾರಿ ನೋಡ್ತೀನಿ."

ಶಂಕರ ಹಳ್ಳಿಗೆ ಹಳ್ಳಿಯನ್ನೇ ಸೋಸಿದ. ಆದರೆ ಯಾರೂ ಹಣ ಕೊಡಲಿಲ್ಲ. ಕೊಡದೇ ಇರಲು ಕಾರಣ ಅವರಿಗೆ ಶಂಕರನಲ್ಲಿ ವಿಶ್ವಾಸವಿರಲಿಲ್ಲವೆಂದಲ್ಲ. ಆದರೆ ಬ್ರಾಹ್ಮಣನ ಬೇಟೆಯನ್ನು ಕೆಣಕಲು ಯಾರಿಗೂ ಧೈರ್ಯವಿರಲಿಲ್ಲ.

## 4

ಕ್ರಿಯೆಗೆ ತಕ್ಕ ಪ್ರತಿಕ್ರಿಯೆ ನೈಸರ್ಗಿಕ ನಿಯಮ. ವರ್ಷಕಾಲ ತಪಸ್ಸು ಮಾಡಿಯೂ ಋಣಮುಕ್ತನಾಗಲು ಅಸಫಲನಾದಾಗ ಶಂಕರನ ಸಂಯಮ ನಿರಾಶೆಯ ರೂಪ ತಾಳಿತು. ಇಷ್ಟು ಕಷ್ಟ ಸಹಿಸಿಯೂ ವರ್ಷಕ್ಕೆ ಅರವತ್ತು ರೂಪಾಯಿಗಿಂತ ಹೆಚ್ಚು ಕೂಡಲಿಲ್ಲವೆಂದ ಮೇಲೆ ಇದರ ಎರಡರಷ್ಟು ಹಣವನ್ನು ಹೇಗೆ ಕೂಡಿಸುವುದು ? ಋಣಭಾರವನ್ನ ಹೊರಲೇಬೇಕಾಗಿರುವಾಗ, ಮಣ ಒಂದಾದರೇನು, ಒಂದೂಕಾಲಾದರೇನು ? ಶಂಕರನ ಉತ್ಸಾಹ ಕುಂದಿತು, ಕೆಲಸದ ಬಗ್ಗೆ ಜುಗುಪ್ಸೆ ಹುಟ್ಟಿತು. ಆಸೆಯಿದ್ದಲ್ಲಿ ಉತ್ಸಾಹ ಹುಟ್ಟುತ್ತದೆ; ಆಸೆಯೇ ತೇಜಸ್ಸು, ಆಸೆಯೇ ಬಲ, ಆಸೆಯೇ ಜೀವನ, ಆಸೆಯೇ ಪ್ರಪಂಚದ ಸಂಚಾಲಕಶಕ್ತಿ. ಶಂಕರ ಆಶಾಹೀನನಾದ, ಉದಾಸೀನನಾದ. ವರ್ಷಕಾಲದಿಂದ ಮುಂದೂಡಿಕೊಂಡು ಬಂದಿದ್ದ ಆವಶ್ಯಕತೆಗಳು ಮನೆಬಾಗಿಲಲ್ಲಿ ನಿಂತು ಕೈಚಾಚುವ ಭಿಕ್ಷುಕನಂತಿರಲಿಲ್ಲ; ಎದೆಯ ಮೇಲೆ ಕುಳಿತು ಆಹುತಿ ತೆಗದುಕೊಳ್ಳದೇ ಬಿಡೆನೆನ್ನುವ ಪಿಶಾಚಿಯಂತಿದವು. ಬಟ್ಟೆಗೆ ತೇಪೆ ಹಾಕುವುದಕ್ಕೂ ಒಂದು ಮಿತಿ ಇದೆ. ಈಗ ಶಂಕರ ಕೂಲಿಯ ಹಣ ಸಂದಾಯವಾದಾಗ ಅದನ್ನ ಕೂಡಿಹಾಕುವುದನ್ನು ಬಿಟ್ಟು. ಬದಲು ಒಮ್ಮೆ ಬಟ್ಟೆ ತಂದ; ಇನ್ನೊಮ್ಮೆ ಊಟದ ಸಾಮಾನು ತಂದ. ಮೊದಲು ತಂಬಾಕೊಂದನ್ನೇ ಕುಡಿಯುತ್ತಿದ್ದವನು ಈಗ ಗಾಂಜಾ ಚರಸ್ಸುಗಳ ಚಟ ಅಂಟಿಸಿಕೊಂಡ. ಈಗ ಬ್ರಾಹ್ಮಣನಿಗೆ ಹಣ ಸಲ್ಲಿಸಬೇಕೆಂಬ ಚಿಂತೆ ಯಾವುದೂ ಇರಲಿಲ್ಲ. ತನ್ನ ಮೇಲೆ ಯಾರದ್ದೂ ಒಂದು ಕಾಸೂ ಋಣವಿಲ್ಲವೆಂಬಂತೆ ಇದ್ದುಬಿಟ್ಟ.

ಮೊದಲು ಚಳಿಜ್ವರವಿದ್ದರೂ ಕೆಲಸಕ್ಕೆ ಹೋಗುತ್ತಿದ್ದವನು ಈಗ ಕೆಲಸದಿಂದ ತಪ್ಪಿಸಿಕೊಳ್ಳಲು ನೆಪ ಹುಡುಕುತ್ತಿದ್ದ.

ಹೀಗೆ ಮೂರು ವರ್ಷ ಕಳೆಯಿತು. ಬ್ರಾಹ್ಮಣ ಸಾಲದ ಪಾವತಿಗೆ ಒಮ್ಮೆಯಾದರೂ ತಗಾದೆ ಮಾಡಲಿಲ್ಲ. ಚತುರನಾದ ಬೇಟೆಗಾರನಂತೆ ಒಳ್ಳೆಯ ಗುರಿಗೆ ಹೊಂಚುಹಾಕುತ್ತಿದ್ದ. ಹೊತ್ತಿಗೆ ಮೊದಲೇ ಬೇಟೆಯನು ಭಯಬೀಳಿಸುವುದು ಆತನ ನೀತಿಗೆ ವಿರುದ್ಧವಾಗಿತ್ತು.

ಒಂದು ದಿನ ಬ್ರಾಹ್ಮಣ ಶಂಕರನನ್ನು ಕರೆದು ಲೆಕ್ಕ ತೋರಿಸಿದ. ಜಮಾಮಾಡಿದ್ದ ಅರವತ್ತು ರೂಪಾಯಿ ಕಳೆದರೆ ಶಂಕರನಿಂದ ನೂರಿಪ್ಪತ್ತು ರೂಪಾಯಿ ಬಾಕಿ ಬರುವುದಿತ್ತು.

ಶಂಕರ- "ಇಷ್ಟು ಹಣಾನ ಈ ಜನ್ಮದಲ್ಲಂತೂ ತೀರಿಸೋದು ಸಾಧ್ಯವಿಲ್ಲ; ಏನಿದ್ದರೂ ಮುಂದಿನ ಜನ್ಮದಲ್ಲೇ."

ಬ್ರಾಹ್ಮಣ- "ನಾನು ಇದೇ ಜನ್ಮದಲ್ಲೇ ತೊಗೋತೀನಿ. ಅಸಲು ಅಲ್ಲವಾದರೂ ಬಡ್ಡೀನಂತೂ ಕೊಡಲೇಬೇಕು."

ಶಂಕರ- "ಒಂದು ಎತ್ತಿದೆ, ಅದನ್ನ ತೊಗೊಳ್ಳಿ. ಒಂದು ಜೋಪಡಿಯಿದೆ, ಅದನ್ನೂ ತೊಗೊಳ್ಳಿ. ಇನ್ನು ಏನು ಉಳೀತು ?"

ಬ್ರಾಹ್ಮಣ- "ಎತ್ತು ಕಟ್ಟಿಕೊಂಡು ನಾನೇನು ಮಾಡಲಿ ? ನನಗೆ ಕೊಡೋಕ್ಕೆ ನಿನ್ನ ಹತ್ತಿರ ಬೇರೆ ಬೇಕಾದಷ್ಟಿದೆ."

ಶಂಕರ- "ಇನ್ನೇನಿದೆ ಸ್ವಾಮಿ ?"

ಬ್ರಾಹ್ಮಣ- "ಇನ್ನೇನಿಲ್ಲದಿದ್ದರೂ ಬೇಡ. ನೀನೇ ಇದಿ ! ನೀನು ಒಂದಲ್ಲ ಒಂದು ಕಡೆ ಜೀತ ಮಾಡೋಕ್ಕೆ ಹೋಗ್ತಿ ತಾನೆ ? ನಾನೂ ಬೇಸಾಯಕ್ಕೆ ಜೀತದಾಳನ್ನು ಇಟ್ಟುಕೊಳ್ಳಲೇಬೇಕು. ಬಡ್ಡೀ ಕಡೆಗೆ ಅಂತ ನೀನು ನನ್ನ ಹತ್ತಿರಾನೇ ಕೆಲಸಮಾಡು. ಯಾವಾಗ ಅನುಕೂಲವಾಗುತ್ತೋ ಆಗ ಅಸಲನ್ನೂ ತೀರಿಸು. ನಿಜ ಹೇಳಬೇಕು ಅಂದರೆ ನನ್ನ ಸಾಲ ತೀರಿಸೋವರೆಗೂ ನೀನು ಇನ್ನೆಲ್ಲೂ ಕೆಲಸಕ್ಕೆ ಹೋಗೋ ಹಾಗಿಲ್ಲ ! ನಿನ್ನ ಮೇಲೆ ನಂಬಿಕೆ ಇಟ್ಟು ಇಷ್ಟು ದೊಡ್ಡ ಗಂಟನ್ನ ಬಿಟ್ಟಿರೋಕ್ಕೆ ನಿನ್ನ ಹತ್ತಿರ ಏನು ಆಸ್ತಿ ಇದೆ ? ನೀನು ತಿಂಗಳುತಿಂಗಳಿಗೆ ಬಡ್ಡಿ ಕೊಡ್ತಾ ಹೋಗ್ತಿ ಅಂತ ಜಾಮೀನಾಗೋರು ಯಾರಿದಾರೆ ? ಹೊರಗೆ ಸಂಪಾದನೆ ಮಾಡಿಯೂ ನೀನು ಬಡ್ಡಿ ಕೊಡದಿರೋವಾಗ, ಅಸಲಿನದು ಏನು ನಂಬಿಕೆ ?"

ಶಂಕರ- "ಬಡ್ಡೀ ಕಡೆಗೆ ಅಂತ ನಿಮ್ಮ ಜೀತಮಾಡಿದರೆ ಹೊಟ್ಟೆಪಾಡಿನ ಗತಿ ಏನು ?

ಬ್ರಾಹ್ಮಣ- "ನಿನ್ನ ಹೆಂಡತಿಮಕ್ಕಳೇನು ಕಾಲು ಮುರಿದುಕೊಂಡು ಕೂತಿದಾರೆಯೆ ? ನಾನು ಇರೋತನಕ ಬೆಳಗಿನ ಊಟಕ್ಕೆ ಅಂತ ಅರ್ಧಸೇರು ಜವೆಗೋದಿ ಕೊಡ್ತೀನಿ. ಹೊದಿಯೋಕ್ಕೆ ವರ್ಷಕ್ಕೆ ಒಂದು ಕಂಬಳಿ ಸಿಗುತ್ತೆ. ಒಂದು ಅಂಗೀನೂ ಹೊಲಿಸಿಕೊಡ್ತೀನಿ. ಇನ್ನೇನು ಬೇಕಂತೆ ? ಬೇರೆ ಕಡೆಯಾದರೆ ನಿನಗೆ ದಿನಕ್ಕೆ ಎಂಟಾಣೆ ಸಿಗತ್ತೆ ನಿಜ. ಆದರೆ ನಾನು ಅದನ್ನ ಕೊಡಬೇಕು ಅನ್ನೋದೇನಿಲ್ಲ.

ಸಾಲದ ಪಾವತಿಗೆ ಅಂತ ನಿನ್ನನ್ನ ಜೀತಕ್ಕೆ ಇಟ್ಟುಕೋತಿದೀನಿ."

ಶಂಕರ ಕೊಂಚ ಹೊತ್ತು ಗಾಢವಾದ ಯೋಚನೆಯಲ್ಲಿ ಮುಳುಗಿದ್ದ ಹೇಳಿದ- "ಸ್ವಾಮಿ, ಇದು ಇಡೀ ಜೀವಮಾನದ ಗುಲಾಮಗಿರಿಯಾಯ್ತಲ್ಲ!?

ಬ್ರಾಹ್ಮಣ- "ಗುಲಾಮಗಿರಿ ಅಂದುಕೊ, ಕೂಲಿಗೆಲಸ ಅಂದುಕೊ, ನನ್ನ ಸಾಲ ತೀರೋವರೆಗೂ ನಾನು ನಿನ್ನನ್ನ ಬಿಡೋಲ್ಲ. ನೀನು ಓಡಿಹೋದರೆ ನಿನ್ನ ಮಗ ತೀರಿಸ್ತಾನೆ. ಯಾರೂ ಇಲ್ಲದೇ ಹೋಗಿದ್ದಿದ್ದರೆ ಅದು ಬೇರೆ ಮಾತು."

ಈ ನಿರ್ಣಯದ ಮುಂದೆ ಯಾವ ಅಪೀಲೂ ಇರಲಿಲ್ಲ. ಯಾರು ತಾನೇ ಒಬ್ಬ ಕೂಲಿಯಾಳಿಗೆ ಜಾಮೀನಾದಾರು? ಶಂಕರನಿಗೆ ಯಾವ ಆಸರೆಯೂ ಇರಲಿಲ್ಲ. ಓಡಿಹೋಗುವುದಾದರೂ ಎಲ್ಲಿಗೆ? ಶಂಕರ ಮಾರನೆಯ ದಿನದಿಂದ ಬ್ರಾಹ್ಮಣನಲ್ಲಿ ಕೆಲಸಕ್ಕೆ ಆರಂಭಿಸಿದ. ಸವಾಸೇರು ಗೋದಿಯ ಸಾಲದಿಂದಾಗಿ ಜೀವಮಾನಪೂರ್ತಿ ಕಾಲಿಗೆ ಗುಲಾಮಗಿರಿಯ ಬೇಡಿ ತೊಡಬೇಕಾಯಿತು. ಆ ದುರ್ಭಾಗ್ಯನಿಗೆ ಇದೆಲ್ಲವೂ ತನ್ನ ಪೂರ್ವಜನ್ಮದ ಸಂಸ್ಕಾರವೆಂಬ ಒಂದು ವಿಚಾರ ಮಾತ್ರ ಸಮಾಧಾನ ಕೊಡುತ್ತಿತ್ತು. ಅವನ ಹೆಂಡತಿ ತಾನಾ ಎಂದೂ ಮಾಡದಿದ್ದ ಕೆಲಸಗಳನ್ನೆಲ್ಲಾ ಮಾಡಬೇಕಾಗುತ್ತಿತ್ತು. ಮಕ್ಕಳು ಕಾಳುಕಾಳಿಗೆ ಕಣ್ಣುಕಣ್ಣು ಬಿಡುವಂತಾಯಿತು. ಇದನ್ನೆಲ್ಲಾ ದೂರದಿಂದ ಸುಮ್ಮನೆ ನೋಡುತ್ತಿರುವುದರ ಹೊರತು ಶಂಕರ ಬೇರೆ ಏನೂ ಮಾಡುವಂತಿರಲಿಲ್ಲ. ಆ ಸವಾಸೇರು ಗೋದಿಯ ಭಾರ ಯಾವುದು ದೈವಶಾಪದಂತೆ ಯಾವಜ್ಜೀವವೂ ಅವನ ತಲೆಯಿಂದ ಇಳಿಯಲಿಲ್ಲ.

## 5

ಶಂಕರ ಬ್ರಾಹ್ಮಣನಲ್ಲಿ ಇಪ್ಪತ್ತು ವರ್ಷ ಕಾಲ ಗುಲಾಮಗಿರಿ ಮಾಡಿ ಈ ದುಸ್ತಾರ ಪ್ರಪಂಚದಿಂದ ಬಿಡುಗಡೆ ಹೊಂದಿದ. ಸಾಯುವಾಗ ಇನ್ನೂ ಅವನ ತಲೆಯ ಮೇಲೆ ನೂರಿಪ್ಪತ್ತು ರೂಪಾಯಿ ಹೇರಿಕೊಂಡಿತ್ತು. ಈ ಕಾರಣದಿಂದಾಗಿ ಆ ಬಡವ ದೇವರ ಆಸ್ಥಾನದಲ್ಲಿ ಕಷ್ಟಪಡುವುದು ಬ್ರಾಹ್ಮಣನಿಗೆ ಸರಿತೋರಲಿಲ್ಲ. ಅವನು ಅಷ್ಟು ನಿರ್ದಯಿಯೂ ಅನ್ಯಾಯಿಯೂ ಆಗಿರಲಿಲ್ಲ! ಬ್ರಾಹ್ಮಣ ಶಂಕರನ ಹರೆಯದ ಮಗನನ್ನು ಹಿಡಿದ. ಇವತ್ತಿನವರೆಗೂ ಶಂಕರನ ಮಗ ಬ್ರಾಹ್ಮಣನ ಮನೆಯಲ್ಲಿ ಜೀತಮಾಡಿಕೊಂಡಿದ್ದಾನೆ. ಅವನ ಉದ್ಧಾರ ಆಗುವುದೆಂದು? ಆಗುವುದೋ ಇಲ್ಲವೋ? - ಎಂಬುದನ್ನು ದೇವರೇ ಬಲ್ಲ.

ಓದುಗರೇ! ಈ ಕಥೆಯನ್ನು ಕಲ್ಪನೆಯೆಂದುಕೊಳ್ಳಬೇಡಿ. ಇದು ನಿಜವಾಗಿ ನಡೆದ ಸಂಗತಿ. ಇಂಥ ಶಂಕರ, ಇಂಥ ಬ್ರಾಹ್ಮಣರು ಪ್ರಪಂಚದಲ್ಲಿ ಈಗಲೂ ಇಲ್ಲದೇ ಇಲ್ಲ.

# 21. ಸಮರಯಾತ್ರೆ

ಇವತ್ತು ಬೆಳಗಿನಿಂದಲೇ ಹಳ್ಳಿಯಲ್ಲಿ ಸಡಗರವೋ ಸಡಗರ. ಜೋಪಡಿಗಳು ನಗುತ್ತಿರುವಂತೆ ಕಾಣುತ್ತಿದ್ದವು. ಇವತ್ತು ಸತ್ಯಾಗ್ರಹಿಗಳ ತಂಡ ಹಳ್ಳಿಗೆ ಬರುವುದಿದೆ. ಕೋದಯಿ ಚೌಧರಿಯ ಮನೆಯ ಮುಂದೆ ಚಪ್ಪರ ಹಾಕಿದೆ. ಹಿಟ್ಟು, ತುಪ್ಪ, ತರಕಾರಿ, ಹಾಲು, ಮೊಸರನ್ನು ಒಟ್ಟುಮಾಡುತ್ತಿದ್ದಾರೆ. ಎಲ್ಲರ ಮುಖದ ಮೇಲೆಯೂ ಉತ್ಸಾಹವಿದೆ, ಸಾಹಸವಿದೆ, ಆನಂದವಿದೆ. ಸಾಹೇಬರುಗಳು ಸರ್ಕೀಟಿನ ಮೇಲೆ ಒಂದು ಹಳ್ಳಿಯಲ್ಲಿ ಬೀಡುಬಿಟ್ಟಾಗ ಪಾಪು ಹಾಲಿಗಾಗಿ ಮುಖ ಮರೆಸಿಕೊಂಡು ಅಲೆಯುತ್ತಿದ್ದ ಗೌಳಿಗ ಬಿಂದಾ ಇವತ್ತು ಗೌಳಿಗಿತ್ತಿಗೆ ಹೇಳಿ ಎರಡು ಮಡಕೆ ಹಾಲು ಮೊಸರನ್ನು ಕೂಡಿಸಿ ತಂದಿಟ್ಟು ಹೋಗಿದ್ದಾನೆ. ಮನೆಬಿಟ್ಟು ಓಡಿಹೋಗುತ್ತಿದ್ದ ಕುಂಬಾರ ಮಣ್ಣಿನ ಪಾತ್ರೆಗಳ ರಾಶಿ ಹಾಕಿದ್ದಾನೆ. ಹಳ್ಳಿಯ ಕಸಮುಸುರೆಯವರೆಲ್ಲರೂ ತಾವೇತಾವಾಗಿ ಓಡಿಬರುತ್ತಿದ್ದಾರೆ. ಹಳ್ಳಿಯಲ್ಲಿ ಯಾರಿಗಾದರೂ ದುಃಖವಾಗಿರುವುದಾದರೆ ಅದು ಮುದಿ ನೋಹರಳಿಗೆ ಮಾತ್ರ. ಅವಳು ತನ್ನ ಜೋಪಡಿಯ ಮುಂದೆ ಕುಳಿತುಕೊಂಡು ತನ್ನ ಎಪ್ಪತ್ತೈದು ವರ್ಷಗಳ ಮುಪ್ಪಿನ, ಸುಕ್ಕುಗಟ್ಟಿದ ಕಣ್ಣುಗಳಿಂದ ಈ ವಿಜೃಂಭಣೆಯನ್ನು ನೋಡಿ ಪಶ್ಚಾತ್ತಾಪಪಡುತ್ತಿದ್ದಾಳೆ. ಕೋದಯಿಯ ಬಾಗಿಲಿಗೆ ಹೋಗಿ 'ತೊಗೋ, ಇದು ನನ್ನ ಕಾಣಿಕೆ' ಎಂದುಕೊಡಲು ಅವಳಲ್ಲಿ ಏನಿದೆ? ಕಾಳುಕಾಳಿಗೆ ಕಣ್ಣುಕಣ್ಣು ಬಿಡುವ ಕಡು ಬಡವಿ ಅವಳು.

ಆದರೆ ನೋಹರಿ ಒಳ್ಳೆಯ ದಿನಗಳನ್ನೂ ನೋಡಿದ್ದಾಳೆ. ಹಿಂದೊಂದು ದಿನ ಅವಳ ಬಳಿ ಧನ, ಜನ ಎಲ್ಲವೂ ಇತ್ತು. ಹಳ್ಳಿಯಲ್ಲಿ ಅವಳದೇ ರಾಜ್ಯವಾಗಿತ್ತು. ಅವಳು ಕೋದಯಿಯನ್ನು ಯಾವಾಗಲೂ ಕೆಳಗೊತ್ತಿಟ್ಟಿದ್ದಳು. ಹೆಂಗಸಾದರೂ ಗಂಡಸಿನಂತೆ ಬಾಳಿದ್ದಳು. ಗಂಡ ಮನೆಯಲ್ಲಿ ಮಲಗುತ್ತಿದ್ದ; ಅವಳು ಮಲಗಲು ತೋಟಕ್ಕೆ ಹೋಗುತ್ತಿದ್ದಳು. ಕೋರ್ಟುಕಚೇರಿಗಳ ಓಡಾಟ ಸಹ ಅವಳದ್ದೇ. ಕೊಡುವುದು-ತೊಗೊಳ್ಳುವುದು ಎಲ್ಲವೂ ಅವಳ ಕೈಯಲ್ಲಿಯೇ. ಆದರೆ ಈಗ ವಿಧಿ ಅದೆಲ್ಲವನ್ನೂ ಅವಳಿಂದ ಕಸಿದುಕೊಂಡಿತ್ತು. ಧನ ಉಳಿಯಲಿಲ್ಲ; ಜನ ಉಳಿಯಲಿಲ್ಲ. ಈಗ ಅವಳಿಗಾಗಿ ಅಳಲು ಅವಳ ಹೊರತು ಬೇರೆ ಯಾರೂ ಇರಲಿಲ್ಲ. ಕಣ್ಣು ಕಾಣಿಸುತ್ತಿರಲಿಲ್ಲ; ಕಿವಿ ಕೇಳಿಸುತ್ತಿರಲಿಲ್ಲ; ಕುಳಿತಲ್ಲಿಂದ ಅಲುಗಾಡುವುದು ಕಷ್ಟವಾಗುತ್ತಿತ್ತು. ಹೇಗೋ ಬದುಕಿನ ದಿನಗಳನ್ನು

ಮುಗಿಸುತ್ತಿದ್ದಳು. ಆ ಕಡೆ ಕೋದಯಿಯ ಅದೃಷ್ಟ ಖುಲಾಯಿಸಿತ್ತು. ಇವತ್ತಿನ ಕೂಟ ಸಹ ಕೋದಯಿಯ ಬಾಗಿಲಲ್ಲೇ ಸೇರುತ್ತಿದೆ. ನೋಹರಿಯನ್ನು ಈಗ ಕೇಳುವವರಾರು ? ಇದನ್ನು ಯೋಚಿಸಿದಾಗ ಅವಳ ಹೃದಯ ಕಲ್ಲಿನಿಂದ ಜಜ್ಜಿದಂತಾಯಿತು. ಅಯ್ಯೋ, ದೇವರು ಅವಳನ್ನು ಹೀಗೆ ಅಂಗಹೀನನ್ನಾಗಿ ಮಾಡದೆ ಹೋಗಿದ್ದಿದ್ದರೆ ಇವತ್ತು ಜೋಪಡಿಯನ್ನು ಗುಡಿಸಿ ಸಾರಿಸುತ್ತಿದ್ದಳು. ಬಾಗಿಲ ಮುಂದೆ ವಾದ್ಯ ಮೊಳಗುತ್ತಿರುತ್ತಿತ್ತು. ಒಲೆಯ ಮೇಲೆ ಬಾಣಲೆ ಏರಿಸಿ ಪೂರಿ ಕರಿಸುತ್ತಿದ್ದಳು. ಆ ಜನ ತಿಂದು ಮುಗಿಸಿದ ಮೇಲೆ ಅವರಿಗೆ ಕೈತುಂಬ ಹಣವನ್ನು ಕಾಣಿಕೆ ಕೊಟ್ಟು ಕಳಿಸುತ್ತಿದ್ದಳು.

ಮಹಾತ್ಮಾಜಿಯವರ ದರ್ಶನ ಮಾಡಲು ತನ್ನ ಮುದಿ ಗಂಡನನ್ನೂ ಕರೆದುಕೊಂಡು ಅಲ್ಲಿಂದ ಇಪ್ಪತ್ತು ಕೋಸು ದೂರ ನಡೆದುಹೋಗಿದ್ದು ಆ ಹಿಂದಿನ ದಿನದ ನೆನಪಾಯಿತು ಅವಳಿಗೆ. ಆ ಉತ್ಸಾಹ, ಆ ಸಾತ್ವಿಕ ಪ್ರೇಮ, ಆ ಶ್ರದ್ಧೆ ಅವಳ ಎದೆಯಲ್ಲಿ ಆಕಾಶದ ಕೆಂಧೂಳಿನಿಂದ ತುಂಬಿದ ಮೋಡದಂತೆ ಕಿಕ್ಕಿರಿಯತೊಡಗಿತು.

ಕೋದಯಿ ಬಂದು ತನ್ನ ಬೊಚ್ಚುಬಾಯಿ ತೆಗೆದು ಹೇಳಿದ- "ಇವತ್ತು ಮಹಾತ್ಮಾಜಿಯವರ ತಂಡ ಬರ್ತಿದೆ. ಅತ್ತಿಗೆ, ನೀನೂ ಏನಾದರೂ ಕೊಡಬೇಕು."

ಕಣ್ಣು ಕಠಾರಿಮಾಡಿ ನೋಹರಿ ಚೌಧರಿಯನ್ನು ನೋಡಿದಳು. ನಿರ್ದಯಿ, ನನ್ನ ಎದೆ ಉರಿಸಲು ಬಂದಿದ್ದಾನೆ. ನನಗೆ ಅಪಮಾನ ಮಾಡಬಯಸುತ್ತಾನೆ. ನೋಹರಿ ಗತ್ತಿನಿಂದ ಹೇಳಿದಳು- "ಕೊಡೋದೇನಿದ್ದರೂ ಅವರಿಗೆ ಕೊಡ್ತೀನಿ. ಅದನ್ನ ನಿನಗೆ ಯಾಕೆ ತೋರಿಸಲಿ ?"

ಕೋದಯಿ ನಗುತ್ತ ಹೇಳಿದ- "ನಾನು ನಿಜವಾಗಿ ಯಾರಿಗೂ ಹೇಳೋಲ್ಲ, ಅತ್ತಿಗೆ. ಆ ಹಳೇ ಮಣ್ಣಿನ ಕುಡಿಕೇನ ತೆಗಿ ! ಇನ್ನು ಯಾವತ್ತಿಗೆ ಅಂತ ಅದನ್ನ ಇಟ್ಟಿದಿ. ಉಳಿದವರು ಯಾರೂ ಏನೂ ಕೊಡಲಿಲ್ಲ. ಹಳ್ಳಿಯ ಮರ್ಯಾದೆ ಉಳಿಯೋ ಬಗೆ ಹೇಗೆ ?"

ನೋಹರಿ ಕಠೋರವಾದರೂ ದೈನ್ಯ ತುಂಬಿದ ದನಿಯಲ್ಲಿ ಹೇಳಿದಳು- "ಉರೀತಿರೋ ಗಾಯಕ್ಕೆ ಉಪ್ಪು ಚಿಮುಕಿಸಬೇಡ, ಮೈದುನ. ದೇವರು ಕೊಟ್ಟಿದ್ದಿದ್ದರೆ ನಿನ್ನ ಕೈಯಲ್ಲಿ ಹೇಳಿಸಿಕೋಬೇಕಾಗಿತ್ತೆ. ಹಿಂದೊಂದು ದಿನ ಇದೇ ಬಾಗಿಲಿಗೆ ಸಾಧುಸಂತರು, ಜೋಗಿಜಂಗಮರು, ಈ ಪ್ರಾಂತರ ದೊರೆಗಳು, ಅಧಿಕಾರಿಗಳು ಬರ್ತಿದ್ದರು. ಆದರೆ ಕಾಲ ಒಂದೇ ತರಹ ಇರೋದಿಲ್ಲ."

ಕೋದಯಿಗೆ ನಾಚಿಕೆಯಾಯಿತು. ಅವನ ಮುಖದ ಮೇಲಿನ ಸುಕ್ಕು ಅದುರ ತೊಡಗಿತು. ಅವನಂದ- "ನೀನು ಮಾತುಮಾತಿಗೆ ಕೋಪಿಸಿಕೊಂಡುಬಿಡ್ತಿ, ಅತ್ತಿಗೆ. ಆಮೇಲೆ ನೀನು 'ನನ್ನನ್ನು ಯಾರೂ ಏನೂ ಕೇಳಲಿಲ್ಲ' ಅನ್ನಬಾರದು ಅಂತ ನಾನು ಬಂದು ಕೇಳಿದ್ದು."

ಹೀಗಂದು ಕೋದಯಿ ಹೊರಟುಹೋದ. ನೋಹರಿ ಅಲ್ಲೇ ಕುಳಿತು ಅವನು ಹೋದ ದಾರಿಯನ್ನೇ ನೋಡುತ್ತಿದ್ದಳು. ಅವನ ವ್ಯಂಗ್ಯ ಅವಳ ಮುಂದೆ ಸರ್ಪದಂತೆ ಕುಳಿತಿರುವಂತೆ ಭಾಸವಾಯಿತು.

## 2

ನೋಹರಿ ಇನ್ನೂ ಅಲ್ಲೇ ಕುಳಿರುವಾಗಲೇ 'ಸತ್ಯಾಗ್ರಹಿಗಳ ತಂಡ ಬಂತು' ಎಂದು ಕೂಗೆದ್ದಿತು. ಪಶ್ಚಿಮದ ಕಡೆ ಪೃಥ್ವಿಯೇ ಆ ಸತ್ಯಾಗ್ರಹಿಗಳ ಸ್ವಾಗತಕ್ಕೆಂದು ರಜತರತ್ನಗಳನ್ನು ಮಳೆಗರೆಯುತ್ತಿದೆಯೋ ಎಂಬಂತೆ ಧೂಳೇಳುತ್ತಿರುವುದು ಕಾಣಿಸುತ್ತಿತ್ತು. ಹಳ್ಳಿಯ ಸ್ತ್ರೀಪುರುಷರೆಲ್ಲರೂ ತಮ್ಮ ಕೆಲಸ ಬಿಟ್ಟು ಅವರನ್ನು ಸ್ವಾಗತಿಸಲು ಹೊರಟರು. ಮರುಕ್ಷಣ ತ್ರಿವರ್ಣಧ್ವಜ ಗಾಳಿಯಲ್ಲಿ ಹಾರಾಡುತ್ತಿರುವುದು ಕಾಣಿಸಿತು. ಅದನ್ನು ನೋಡಿದರೆ ಸ್ವರಾಜ್ಯ ಎತ್ತರದ ಆಸನದಲ್ಲಿ ಕುಳಿತು ಎಲ್ಲರಿಗೂ ಆಶೀರ್ವಾದ ಮಾಡುತ್ತಿದೆಯೋ ಎಂಬಂತಿತ್ತು.

ಹೆಂಗಸರು ಮಂಗಳಗಾನ ಹಾಡಲಾರಂಭಿಸಿದರು. ಕೊಂಚ ಹೊತ್ತಿನಲ್ಲಿ ಸತ್ಯಾಗ್ರಹಿಗಳ ದಳ ಸ್ಪಷ್ಟವಾಗಿ ಕಾಣಿಸತೊಡಗಿತು. ಇಬ್ಬಿಬ್ಬರ ಪಂಕ್ತಿ. ಪ್ರತಿಯೊಬ್ಬರ ಮೈಮೇಲೂ ಖದ್ದರಿನ ಜುಬ್ಬವಿತ್ತು, ತಲೆಯ ಮೇಲೆ ಗಾಂಧೀ ಟೋಪಿ, ಬಗಲಲ್ಲಿ ಚೀಲ, ಕೈಗಳು ಸ್ವರಾಜ್ಯದ ಆಲಿಂಗನಕ್ಕೆ ಸಿದ್ಧವಾಗರುವಂತೆ ತೆರವಾಗಿದ್ದವು. ಹಿಂದೆಯೇ ಅವರ ಕಂಠ ಧ್ವನಿ ಕೇಳಿಬರತೊಡಗಿತು. ಅವರ ಗಂಡುಕಂಠದಿಂದ ರಾಷ್ಟ್ರೀಯ ಗಾನ ಹೊರಹೊಮ್ಮುತ್ತಿತ್ತು. ಆಳವಾದ ಬಿಸಿಯೆದೆಗಳಲ್ಲಿ ಸ್ಫೂರ್ತಿ ತುಂಬುವಂತಹ ಗಾನ:

> ಹಿಂದೊಮ್ಮೆ ಜಗದ ತಲೆಮಣಿಯಾಗಿ ಮೆರೆದಿತ್ತು ಈ ನಮ್ಮ ನಾಡು !
> ಈಗ ನಾಚಿಗೇಡು ! ಯಾರಿಗೂ ಬೇಡ ಈ ನಾಯಿಪಾಡು !
> ಹಿಂದೊಮ್ಮೆ ಆತ್ಮಗೌರವಕ್ಕಾಗಿ ಪ್ರಾಣಪಣವೊಡ್ಡಿತ್ತು ಈ ನಮ್ಮ ನಾಡು,
> ಈಗ ನಾಚಿಕೆಗೇಡು ! ಯಾರಿಗೂ ಬೇಡ ಈ ನಾಯಿಪಾಡು !

ಹಳ್ಳಿಯ ಜನ ಮುಂದೆ ಹೋಗಿ ಯಾತ್ರಿಗಳಿಗೆ ಸ್ವಾಗತ ಬಯಸಿದರು. ಆ ಬಡಪಾಯಿಗಳ ತಲೆ ಧೂಳಿನಿಂದ ತುಂಬಿತ್ತು. ತುಟಿ ಒಣಗಿತ್ತು, ಮುಖ ಕಪ್ಪಿಟ್ಟಿತು. ಆದರೆ ಕಣ್ಣುಗಳು ಮಾತ್ರ ಸ್ವಾತಂತ್ರ್ಯದ ಜ್ಯೋತಿಯಂತೆ ಬೆಳಗುತ್ತಿದ್ದವು.

ಹೆಂಗಸರು ಹಾಡುತ್ತಿದ್ದರು, ಹುಡುಗರು ಕುಣಿಯುತ್ತಿದ್ದರು. ಗಂಡಸರು ತಮ್ಮ ಅಂಗವಸ್ತ್ರದಿಂದ ಯಾತ್ರಿಗಳಿಗೆ ಗಾಳಿಹಾಕುತ್ತಿದ್ದರು. ಈ ಸಡಗರದಲ್ಲಿ ಊರುಗೋಲು ಹಿಡಿದುಕೊಂಡು ಎಲ್ಲರ ಹಿಂದೆ, ಆಶೀರ್ವಾದವೇ ಜೀವವೆತ್ತಿ ಬಂದಂತೆ ನಿಂತಿದ್ದ ನೋಹರಿಯ ಕಡೆ ಯಾರ ಗಮನವೂ ಹೋಗಲಿಲ್ಲ. ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತು. ತಾನು ಯಾವಳೋ ರಾಣಿಯೇನೋ, ಇಡೀ ಹಳ್ಳಿಯೇ ತನ್ನದೇನೋ, ಆ ಹುಡುಗರೆಲ್ಲರೂ ತನ್ನ ಮಕ್ಕಳೇ ಏನೋ ಎಂಬಂತೆ ಅವಳ ಮುಖದಲ್ಲಿ ಹೆಮ್ಮೆ ಮಿಂಚುತ್ತಿತ್ತು. ಹಿಂದೆಂದೂ ಅವಳ ಮನಸ್ಸು ಅಂತಹ ಶಕ್ತಿ, ವಿಕಾಸ, ಉತ್ಥಾನಗಳ ಅನುಭವವನ್ನು ಸವಿದಿರಲಿಲ್ಲ.

ಇದ್ದಕ್ಕಿದ್ದಂತೆ ನೋಹರಿ ಊರುಗೋಲನ್ನೆಸೆದು, ಗುಂಪು ಸೀಳಿಕೊಂಡು

ಯಾತ್ರಿಗಳ ಮುಂದೆ ಬಂದು ನಿಂತುಕೊಂಡಳು. ಊರುಗೋಲಿನ ಜೊತೆಗೇ ಅವಳು ತನ್ನ ಮುಪ್ಪು, ದುಃಖಗಳ ಭಾರವನ್ನೂ ತೊರೆದಂತೆ ಕಂಡಳು. ಒಂದು ಕ್ಷಣ ಆ ಸ್ವಾತಂತ್ರ್ಯ ಸೈನಿಕರೆಲ್ಲರ ಶಕ್ತಿಯನ್ನೂ ತನ್ನೊಳಗೇ ತುಂಬಿಕೊಳ್ಳುವವಳಂತೆ ಅವರ ಕಡೆ ಪ್ರೀತಿಯಿಂದ ನೋಡುತ್ತಿದ್ದಳು. ಆಮೇಲೆ ಇದ್ದಕ್ಕಿದ್ದಂತೆ ಯಾವಳೋ ಸುಂದರಿ ನವಯೌವನ, ಪ್ರೇಮ, ಉಲ್ಲಾಸಗಳ ಮದದಿಂದ ಹುಚ್ಚಾದಂತೆ ಕುಣಿಯಲಾರಂಭಿಸಿದಳು. ಜನ ಎರಡೆರಡು ಹೆಜ್ಜೆ ಹಿಂದೆಸರಿದರು. ಅಂಗಳ ಸಿದ್ಧವಾಯಿತು. ಆ ಅಂಗಳದಲ್ಲಿ ಮುದುಕಿ ತನ್ನ ಹಿಂದಿನ ನೃತ್ಯಕೌಶಲವನ್ನು ತೋರಿಸತೊಡಗಿದಳು. ಆ ಅಲೌಕಿಕ ಆನಂದದ ಪ್ರವಾಹದಲ್ಲಿ ಅವಳು ತನ್ನೆಲ್ಲ ದುಃಖಸಂತಾಪಗಳನ್ನೂ ಮರೆತಳು. ಸದಾ ವಾತ ಕೆರಳಿರುತ್ತಿದ್ದ ಜೀರ್ಣವಾದ ಅವಳ ಅಂಗಾಂಗಗಳಲ್ಲಿ ಇಷ್ಟೊಂದು ಚುರುಕು, ಬಳುಕು, ಚಟುವಟಿಕೆಗಳು ಎಲ್ಲಿಂದ ಬಂದವೋ ತಿಳಿಯದು. ಮೊದಲು ಕೊಂಚ ಹೊತ್ತು ಹುಡುಗರು ಕೋತಿಯ ಕುಣಿತ ನೋಡುವವರಂತೆ ಅವಳ ಕಡೆ ತಮಾಷೆಯಿಂದ ನೋಡುತ್ತಿದ್ದರು. ಆಮೇಲೆ ಪ್ರೀತಿಯ ಆ ಪಾವನ ಪ್ರವಾಹ ಎಲ್ಲರನ್ನೂ ಹುಚ್ಚರನ್ನಾಗಿ ಮಾಡಿತು. ಇಡೀ ಪ್ರಕೃತಿಯೇ ಒಂದು ವಿರಾಟ ವ್ಯಾಪಕನೃತ್ಯದ ಮಡಿಲಲ್ಲಿ ಆಡುತ್ತಿರುವಂತೆ ಅವರಿಗೆ ಭಾಸವಾಯಿತು.

ಕೋದಯಿ ಹೇಳಿದ- "ಸಾಕುಮಾಡು, ಅತ್ತಿಗೆ. ಸಾಕುಮಾಡು." ನೋಹರಿ ಕುಣಿಯುತ್ತಿರುವಂತೆಯೇ ಹೇಳಿದಳು- "ಯಾಕೆ ನಿಂತಿದಿ. ಬಾ, ನೀನು ಹೇಗೆ ಕುಣೀತಿ ಅಂತ ನೋಡೋಣ."

ಕೋದಯಿ ಹೇಳಿದ- "ಈ ಮುಪ್ಪಿನಲ್ಲಿ ನಾನೇನು ಕುಣಿದೇನು ?"

ನೋಹರಿ ಕೊಂಚ ತಡೆದು ಹೇಳಿದಳು- "ಏನು, ಇವತ್ತೂ ನೀನು ಮುದುಕನೆ ? ನನ್ನ ಮುಪ್ಪಂತೂ ಓಡಿಹೋಯಿತು. ಈ ವೀರರನ್ನ ನೋಡಿಯೂ ನಿನ್ನೆದೆ ಹಿಗ್ಗೋಲ್ಲವೆ ? ನಮ್ಮ ದುಃಖ ನೋವುಗಳನ್ನು ಕಳೆಯೋದಕ್ಕೆ ಅಂತಾನೇ ಇವರು ಪಣತೊಟ್ಟಿದಾರೆ. ಈ ಕೈಗಳಿಂದಲೇ ಆಳರಸರ ಬಿಟ್ಟಿ ಜೀತ ಮಾಡಿದೀನಿ, ಈ ಕಿವಿಗಳಿಂದಲೇ ಅವರ ಬೆದರಿಕೆ ಬೈಗಳಗಳನ್ನ ಕೇಳಿದೀನಿ. ಇನ್ನು ಅವರ ಜೋರು ಜುಲುಮೆ ಕೊನೆಗೊಳ್ಳುತ್ತೆ. ನಾನೂ ನೀನೂ ಮುದಿಯಾಗೋಣ ಅಂದರೇನು ? ನಮ್ಮನ್ನ ಹೊಟ್ಟೆಯ ಬೆಂಕಿ ಸುಡ್ತಿದೆ. ಪ್ರಮಾಣವಾಗಿ ಹೇಳು, ಇಲ್ಲಿ ಇಷ್ಟು ಜನ ಇದಾರಲ್ಲ, ಕಳೆದ ಆರು ತಿಂಗಳಿಂದ ಇವರಲ್ಲಿ ಯಾರಾದರೂ ಹೊಟ್ಟೆ ತುಂಬ ರೊಟ್ಟಿ ತಿಂದಿದಾರೆಯೋ ? ಯಾರಿಗಾದರೂ ಕನಿಷ್ಠ ಮೂಸೋದಕ್ಕಾದರೂ ತುಪ್ಪ ಸಿಕ್ಕಿದೆಯೆ ? ಯಾರಾದರೂ ಪೂರ್ತಿ ನಿದ್ರೆ ಮಾಡಿದಾರೆಯೆ ? ಮೂರು ರೂಪಾಯಿ ಕಂದಾಯ ಕೊಡ್ತಿದ್ದ ಜಮೀನಿಗೆ ಈಗ ಒಂಬತ್ತು ಹತ್ತು ರೂಪಾಯಿ ಕೊಡಬೇಕಾಗಿದೆ. ಭೂಮೀಲೇನು ಚಿನ್ನ ಬೆಳೆಯುತ್ತೆಯೆ ? ಕೆಲಸ ಮಾಡಿ ಮಾಡಿ ಎದೆ ಒಡೆದುಹೋಯಿತು. ಇಷ್ಟನ್ನೆಲ್ಲಾ ಸಹಿಸಿಕೊಂಡೂ ನಾವಿನ್ನೂ ಬದುಕಿದೀವಿ. ಬೇರೆ ಜನರಾಗಿದ್ದರೆ ಕೊಲ್ತಿದ್ದರು ಇಲ್ಲವೇ ಸಾಯ್ತಿದ್ದರು. ಪುಣ್ಯಕ್ಕೆ ಮಹಾತ್ಮಾಜಿಯವರೂ ಅವರ ಹಿಂಬಾಲಕರೂ ಬಡವರ ದುಃಖಾನ ಅರ್ಥಮಾಡಿಕೊಂಡಿದಾರೆ, ನಮ್ಮ

ಉದ್ಧಾರಕ್ಕೆ ಪ್ರಯತ್ನಿಪಡ್ತಿದಾರೆ, ಉಳಿದೋರೆಲ್ಲ ನಮ್ಮನ್ನ ಹಿಂಡಿ ನಮ್ಮ ರಕ್ತ ಹೀರೋದನ್ನ ಬಲ್ಲರು, ಅಷ್ಟೇ.''

ಸತ್ಯಾಗ್ರಹಿಗಳ ಮುಖ ಬೆಳಗಿತು, ಎದೆ ಅರಳಿತು, ಧ್ವನಿ ಪ್ರೀತಿಯಿಂದ ತುಂಬಿ ಹಾಡಾಗಿ ಮೊಳಗಿತು:

ಹಿಂದೊಮ್ಮೆ ಸ್ಪರ್ಶಮಣಿಯಾಗಿ ಮೆರೆದಿತ್ತು ಈ ನಾಡ ಒಂದೊಂದು ಕಲ್ಲು
ಈಗ, ಅಯ್ಯೋ, ನಮ್ಮಂಥ ನಿರ್ಗತಿಕರಿಲ್ಲ, ಬೇರೆ ಇನ್ನೆಲ್ಲು!

## 3

ಕೋದಯಿಯ ಮನೆಯ ಮುಂದೆ ಪಂಜುಗಳು ಬೆಳಗುತ್ತಿದ್ದವು. ಸುತ್ತಮುತ್ತಿನ ಅನೇಕ ಹಳ್ಳಿಗಳ ಜನ ಅಲ್ಲಿ ನೆರೆದಿದ್ದರು. ಸತ್ಯಾಗ್ರಹಿಗಳಿಗೆ ಭೋಜನವಾದ ಮೇಲೆ ಸಭೆ ಷುರುವಾಯಿತು. ದಳದ ನಾಯಕ ಎದ್ದುನಿಂತು ಹೇಳಿದ-

"ಅಣ್ಣತಮ್ಮಂದಿರೇ, ಇವತ್ತು ನೀವು ನಮ್ಮಗಳಿಗೆ ಆದರ ಸತ್ಕಾರ ಮಾಡಿದೀರಿ. ಇಂಥ ವಿಶ್ವಾಸವಿರುವಾಗ ನಮ್ಮ ಕೈಬೇಡಿ ಬೇಗನೆ ತೊಳೆದುಹೋಗಿತ್ತೆ ಅಂತ ಭರವಸೆ ಹುಟ್ಟುತ್ತೆ. ನಾನು ಪೂರ್ವ ಪಶ್ಚಿಮಗಳ ಅನೇಕ ದೇಶಗಳನ್ನ ನೋಡಿದೀನಿ. ನಿಮ್ಮಲ್ಲಿ ಕಾಣುವಂಥ ಸರಳತೆ, ಪ್ರಾಮಾಣಿಕತೆ, ಶ್ರಮ, ಧರ್ಮಬುದ್ಧಿಗಳು ಪ್ರಪಂಚದಲ್ಲಿ ಬೇರೆ ಯಾವ ದೇಶದಲ್ಲೂ ಇಲ್ಲ ಅಂತ ಅನುಭವದಿಂದ ಹೇಳಬಲ್ಲೆ. ಇನ್ನೂ ಮುಂದೆ ಹೋಗಿ, ನೀವು ಮನುಷ್ಯರಲ್ಲ, ದೇವತೆಗಳು ಅಂತಾನೂ ಹೇಳಬಲ್ಲೆ. ನಿಮಗೆ ಭೋಗವಿಲಾಸಗಳ ಚಟವಿಲ್ಲ, ಕುಡಿತದ ಚಟವಿಲ್ಲ. ಕೆಲಸ ಮಾಡೋದು, ಇದ್ದಷ್ಟರಲ್ಲಿ ತೃಪ್ತಿಪಡೋದು-ಇದು ನಿಮ್ಮ ಆದರ್ಶವಾಗಿದೆ. ಆದರೆ ನಿಮ್ಮ ಆದರ್ಶ, ನಿಮ್ಮ ಸರಳ ಸ್ವಭಾವಗಳೇ ನಿಮ್ಮ ಹಕ್ಕಿಗೆ ಧಕ್ಕೆಯುನ್ನುಂಟುಮಾಡಿವೆ. ತಪ್ಪು ತಿಳೀಬೇಡಿ, ನೀವು ಈ ಪ್ರಪಂಚದಲ್ಲಿರೋದಕ್ಕೆ ಯೋಗ್ಯರಲ್ಲ. ನಿಮಗೆ ಸ್ವರ್ಗದಲ್ಲಿ ಎಲ್ಲಾದರೂ ಸ್ಥಾನ ಸಿಗಬೇಕಾಗಿತ್ತು. ಮಳೆಗಾಲದಲ್ಲಿ ನಾಲೆಯ ನೀರು ಏರೋ ಹಾಗೆ ಜಮೀನಿನ ಕಂದಾಯ ಏರ್ತಿದೆ. ನೀವು ಅದನ್ನ ಖಂಡಿಸೋಲ್ಲ. ಸರಕಾರೀ ಅಧಿಕಾರಿಗಳೂ ದಣಿಗಳೂ ನಿಮ್ಮನ್ನ ಕೊಳ್ಳೆಹೊಡೀತಿದಾರೆ. ನೀವು ಮಾತ್ರ ಅದಕ್ಕೆ ತುಟಿಪಿಟಕ್ ಅನ್ನೋಲ್ಲ. ಇದರ ಫಲವಾಗಿ ಜನ ನಿಮ್ಮನ್ನ ಎರಡೂ ಕೈಯಿಂದ ಲೂಟಿ ಹೊಡೀತಿದಾರೆ. ಅದು ನಿಮಗೆ ಗೊತ್ತು ಸಹ ಇಲ್ಲ. ನಿಮ್ಮ ಕೈಯಿಂದ ಕಸುಬುಗಳೆಲ್ಲಾ ಕಳಚಿಹೋಗ್ತಿವೆ. ನಿಮ್ಮ ಸರ್ವನಾಶವಾಗ್ತಿದೆ. ಆದರೆ ನೀವು ಮಾತ್ರ ಕಣ್ಣು ಬಿಟ್ಟು ಸಹ ನೋಡೋಲ್ಲ. ಹಿಂದೆ ಲಕ್ಷಾಂತರ ಜನ ನೂಲು ತೆಗೆದು, ಬಟ್ಟೆ ನೇಯ್ದು ಜೀವನ ಮಾಡ್ತಿದ್ದರು. ಈಗ ಎಲ್ಲಾ ಬಟ್ಟೆಯೂ ವಿದೇಶದಿಂದ ಬರುತ್ತೆ. ಇಲ್ಲಿ ಉಪ್ಪು ತಯಾರಿಸೋದು ಅಪರಾಧವಾಗಿದೆ. ಇಡೀ ಪ್ರಪಂಚಕ್ಕೆ ಇನ್ನೂರು ವರ್ಷಕ್ಕೆ ಸಾಕಾಗೋ ಅಷ್ಟು ಉಪ್ಪು ನಿಮ್ಮ ದೇಶದಲ್ಲಿದೆ. ಆದರೂ ನೀವು ಮಾತ್ರ ಬರಿಯ ಉಪ್ಪಿಗಾಗಿ ವರ್ಷಕ್ಕೆ ಏಳು ಕೋಟಿ ರೂಪಾಯಿ ತೆರ್ತಿದೀರಿ. ನಿಮ್ಮ

ಬಂಜರುಭೂಮೀಲಿ, ನಿಮ್ಮ ಕೆರೆಕುಂಟೇಲಿ ಉಪ್ಪು ತುಂಬಿದೆ. ಸರಕಾರ ನಿಮಗೆ ಅದನ್ನ ಮುಟ್ಟಬ್ಗೊಡಿಸೋಲ್ಲ. ಪ್ರಾಯಶಃ ಇನ್ನು ಕೆಲವೇ ದಿನಗಳಲ್ಲಿ ಸರಕಾರ ನಿಮ್ಮ ಬಾವಿಗೂ ತೆರಿಗೆ ಹಾಕಬಹುದು. ನೀವು ಎಲ್ಲಿಯವರೆಗೆ ಈ ಅನ್ಯಾಯಾನ ಸಹಿಸ್ತಾ ಕೂತಿರ್ತೀರಿ ಹೇಳಿ."

ಗುಂಪಿನಲ್ಲಿ ಯಾರೋ ಕೂಗಿದರು- "ನಮ್ಮ ಕೈಯಲ್ಲಿ ಏನಾಗುತ್ತೆ?"

ನಾಯಕ- "ಇದೇ ನಿಮ್ಮ ಭ್ರಮೆ. ಇಷ್ಟು ದೊಡ್ಡ ದೇಶಾನ ನಿಮಗೆ ವಹಿಸಿಕೊಡಲಾಗಿದೆ. ಈ ದೊಡ್ಡ ದೊಡ್ಡ ಫೌಜಿಗೆ, ಈ ಸರಕಾರೀ ಅಧಿಕಾರಿಗಳಿಗೆ ಮಾಲಿಕರು ನೀವೇ. ಆದರೂ ನೀವು ಹಸಿವಿನಿಂದ ಸಾಯ್ತೀರಿ; ಅನ್ಯಾಯಾನ ಸಹಿಸ್ತೀರಿ. ಯಾಕೆ ಅಂದರೆ ನಿಮ್ಮ ಶಕ್ತಿ ಎಷ್ಟು ಅಂತ ನಿಮಗೇ ಗೊತ್ತಿಲ್ಲ. ಇಷ್ಟನ್ನ ಚೆನ್ನಾಗಿ ತಿಳಕೊಳ್ಳಿ: ಪ್ರಪಂಚದಲ್ಲಿ ಯಾವನು ತನ್ನನ್ನು ತಾನು ರಕ್ಷಿಸಿಕೊಳ್ಳಲಾರನೋ ಅವನು ಯಾವಾಗಲೂ ಸ್ವಾರ್ಥಿಗಳಿಗೂ ಅನ್ಯಾಯಿಗಳಿಗೂ ಬೇಟೆಯಾಗ್ತಾನೆ. ಇವತ್ತಿನ ದಿನ ಜಗತ್ತಿನಲ್ಲಿಯೇ ಅತ್ಯಂತ ದೊಡ್ಡವರಾದ ವ್ಯಕ್ತಿ ನಿಮ್ಮ ಉದ್ಧಾರಕ್ಕಾಗಿ ತಮ್ಮ ಪ್ರಾಣಾನ ಪಣವಾಗಿ ಒಡ್ಡಿದ್ದಾರೆ; ಸಾವಿರಾರು ಮಂದಿ ಯುವಕರು ನಿಮ್ಮ ದುಃಖವನ್ನ ಕೊನೆಗಾಣಿಸೋಕ್ಕೆ ತಮ್ಮ ಪ್ರಾಣಾನ ಅಂಗೈಯಲ್ಲಿಟ್ಟು ನಡೆದಿದಾರೆ. ಯಾರು ನಿಮ್ಮನ್ನ ಅಸಹಾಯರೆಂದು ತಿಳಿದು ಎರಡೂ ಕೈಯಿಂದ ಲೂಟಿ ಹೊಡೀತಿದಾರೋ ಅವರಿಗೆ ತಮ್ಮ ಬಾಯಿಂದ ಬೇಟೆ ಕಳಚಿಬೀಳೋದು ಇಷ್ಟವಿಲ್ಲ. ಅವರು ನಿಮ್ಮ ಈ ಸಿಪಾಯಿಗಳ ಸಂಗಡ ಸಾಧ್ಯವಿದ್ದಷ್ಟೂ ಕಠಿಣವಾಗಿ ನಡೆದುಕೊಳ್ತಿದಾರೆ. ಆದರೆ ನೀವು ಎಲ್ಲಾನ್ನೂ ಸಹಿಸಿಕೊಳ್ಳೋಕೆ ಸಿದ್ಧರಾಗಿದೀವಿ. ನೀವು ನಮಗೆ ಸ್ವಲ್ಪ ಸಹಾಯ ಮಾಡೋಕ್ಕಾಗುತ್ಯೆ ಅಂತ ಯೋಚಿಸಿ ನೋಡಿ. ಗಂಡಸರಂತೆ ಎದ್ದುನಿಂತು ನಿಮ್ಮನ್ನ ನೀವು ಅನ್ಯಾಯದಿಂದ ಪಾರುಮಾಡಿಕೊಳ್ತೀರಾ? ಇಲ್ಲರೇ ಹೇಡಿಗಳಂತೆ ಹಣೆಬರೆಹಾನ ಬೈತಾ ಕೂತಿರ್ತೀರಾ? ಇಂಥ ಅವಕಾಶ ಮತ್ತೆ ಬರದೇ ಹೋಗಬಹುದು. ಅದು ಈ ಹೊತ್ತು ಕೈತಪ್ಪಿತು ಅಂದರೆ ನೀವು ಸದಾ ಕಾಲ ಕೈ ಹಿಸುಕ್ಕೊತಾ ಇರಬೇಕಾಗುತ್ತೆ. ನಾವು ಸತ್ಯನ್ಯಾಯಗಳಿಗಾಗಿ ಹೋರಾಡ್ತಿದೀವಿ. ಆದ್ದರಿಂದ ಸತ್ಯನ್ಯಾಯಗಳ ಆಯುಧಗಳಿಂದಲೇ ನಾವು ಹೋರಾಡಬೇಕಾಗುತ್ತೆ. ಹಿಂಸೆ ಕ್ರೋಧಗಳನ್ನು ಹೃದಯದಿಂದ ತೊರೆದು, ದೇವರ ಮೇಲೆ ಅಚಲ ವಿಶ್ವಾಸವಿಟ್ಟು ಧರ್ಮಕ್ಕಾಗಿ ಎಲ್ಲವನ್ನೂ ಸಹಿಸಿಕೊಳ್ಳುವಂತಹ ವೀರರ ಅವಶ್ಯಕತೆ ನಮಗಿದೆ. ಹೇಳಿ, ನೀವು ನಮಗೆ ನೆರವಾಗ್ತೀರಾ?"

ಯಾರೂ ಮುಂದೆ ಬರಲಿಲ್ಲ, ಮೌನ ಕವಿದಿತ್ತು.

## 4

ಇದ್ದಕ್ಕಿದ್ದಂತೆ ಕೂಗೆದ್ದಿತು- "ಪೋಲೀಸ್! ಪೋಲೀಸ್! ಪೋಲೀಸಿನೋರು ಬಂದರು!"

ಪೋಲೀಸ್ ಇನ್ಸ್‌ಪೆಕ್ಟರ್ ಪ್ಯಾದೆಗಳ ಒಂದು ದಳದೊಡನೆ ಬಂದು ಮುಂದೆ ನಿಂತುಕೊಂಡ. ಜನರ ಕಣ್ಣಿನಲ್ಲಿ ಭಯ ಕಾಣಿಸಿಕೊಂಡಿತು, ಎದೆ ಬಡಿಯುತೊಡಗಿತು. ಅವರು ಪೋಲೀಸರ ಕಡೆ ನೋಡಿ ಅಡಗಿಕೊಳ್ಳಲು ಬಿಲ ಹುಡುಕುವವರಂತೆ ಓಡಿದರು.

ಇನ್ಸ್‌ಪೆಕ್ಟರ್ ಅಪ್ಪಣೆ ಮಾಡಿದ- "ಹೊಡೆದೋಡಿಸಿ ಈ ಬದಮಾಶರನ್ನ !"

ಪ್ಯಾದೆಗಳು ಕೈಯಿನ ಲಾಠಿ ಸರಿಮಾಡಿಕೊಂಡರು. ಅವರಿನ್ನೂ ಯಾರ ಮೇಲಾದರೂ ಕೈಮಾಡುವ ಮೊದಲೇ ಜನರೆಲ್ಲರೂ ಚೆಲ್ಲಾಪಿಲ್ಲಿಯಾದರು. ಕೆಲವರು ಈ ಕಡೆ, ಕೆಲವರು ಆ ಕಡೆ ಓಡಿದರು, ಗದ್ದಲವೆದ್ದಿತು. ಹತ್ತು ನಿಮಿಷದಲ್ಲಿ ಅಲ್ಲಿದ್ದ ಜನರಲ್ಲಿ ಒಬ್ಬರಾದರೂ ಉಳಿದಿರಲಿಲ್ಲ. ಸತ್ಯಾಗ್ರಹಿಗಳ ನಾಯಕನಿನ್ನೂ ತನ್ನ ಸ್ಥಾನದಲ್ಲಿಯೇ ನಿಂತಿದ್ದ; ಅವನ ಹಿಂದೆ ಸತ್ಯಾಗ್ರಹಿಗಳ ತಂಡ ಕುಳಿತಿತ್ತು. ಕೋದಯಿ ಚೌಧರಿಯೊಬ್ಬ ಮಾತ್ರ ನಾಯಕನ ಹತ್ತಿರ ಕುಳಿತು ನೆಲದ ಕಡೆ ನೆಟ್ಟ ಕಣ್ಣುಗಳಿಂದ ದೃಷ್ಟಿಸಿ ನೋಡುತ್ತಿದ್ದ.

ಇನ್ಸ್‌ಪೆಕ್ಟರ್ ಕೋದಯಿಯ ಕಡೆ ಬಿರುಸಾಗಿ ನೋಡುತ್ತ ಹೇಳಿದ- "ಏನಲೇ ಕೋದ್ಯಾ, ಈ ಬದಮಾಶರಿಗೆ ಇಲ್ಲಿ ಯಾಕೆ ಇಳಕೊಳ್ಳೋಕೆ ಬಿಟ್ಟೆಯೋ ?"

ಕೋದಯಿ ಕೆಂಗಣ್ಣಿಂದ ಇನ್ಸ್‌ಪೆಕ್ಟರನ ಕಡೆ ನೋಡಿ, ತನ್ನ ಕೋಪವನ್ನು ವಿಷದಂತೆ ನುಂಗಿಕೊಂಡ. ಅವನಿಗೆ ಇವತ್ತು ಸಂಸಾರದ ರಗಳೆಯಿಲ್ಲದೇ ಹೋಗಿದ್ದಿದ್ದರೆ, ಕೊಡಕೊಳ್ಳುವುದಿಲ್ಲದೇ ಹೋಗಿದ್ದಿದ್ದರೆ ಇನ್ಸ್‌ಪೆಕ್ಟರನಿಗೆ ಮುಖ ಮುರಿಯುವಂತೆ ಜವಾಬುಕೊಡುತ್ತಿದ್ದ. ಯಾವ ಸಂಸಾರಕ್ಕಾಗಿ ಅವನು ಬದುಕಿನ ಅರವತ್ತು ವರ್ಷಗಳನ್ನು ಹೋಮ ಮಾಡಿದ್ದನೋ ಅದು ಈ ಹೊತ್ತು ಅವನ ಎದೆಯೊಳಗೆ ವಿಷಸರ್ಪದಂತೆ ಸುರುಳಿ ಸುತ್ತಿ ಕುಳಿತಿತ್ತು.

ಕೋದಯಿಯಿನ್ನೂ ಉತ್ತರ ಕೊಡುವ ಮೊದಲೇ ನೋಹರಿ ಹಿಂದಿನಿಂದ ಬಂದು ಹೇಳಿದಳು- "ಏನು ಕೆಂಪುರುಮಾಲು ಸುತ್ತಿದಿ ಅಂತ ನಿನ್ನ ನಾಲಿಗೆ ತಿರುಚಿದೆಯೇನು ? 'ಕೋದ್ಯಾ' 'ಕೋದ್ಯಾ' ಅನ್ನೋಕ್ಕೆ ಕೋದಯಿ ಏನು ನಿಮ್ಮ ಮನೆ ಆಳೆ ? ನಮ್ಮ ಹಣ ತಿಂದು ನಮ್ಮನ್ನೇ ಬೆದರಿಸ್ತೀಯಲ್ಲ, ನಾಚಿಕೆಯಾಗೋಲ್ಲವೆ ?"

ನೋಹರಿ ಈಗ ನಡುಹಗಲ ಬಿಸಿಲಿನಂತೆ ಕಂಪಿಸುತ್ತಿದ್ದಳು. ಇನ್ಸ್‌ಪೆಕ್ಟರ್ ಒಂದು ಕ್ಷಣ ಸ್ತಬ್ಧನಾದ. ಆಮೇಲೆ ಕೊಂಚ ಯೋಚಿಸಿ, ಹೆಂಗಸಿನ ಜೊತೆ ವಾದಕ್ಕಿಳಿಯುವುದು ತನ್ನ ಮರ್ಯಾದೆಗೆ ತಕ್ಕುದಲ್ಲವೆಂದು ತಿಳಿದು ಕೋದಯಿಗೆ ಹೇಳಿದ- "ಇವಳ್ಯಾರೋ ಕೋದಯಿ, ಈ ಸೈತಾನನ ಚಿಕ್ಕವ್ವ ? ದೇವರ ಮೇಲೆ ಭಯವಿಲ್ಲದೇ ಹೋಗಿದ್ದಿದ್ದರೆ ಇವಳ ನಾಲಿಗೆ ಕಿತ್ತುಹಾಕ್ತಿದ್ದೆ."

ದೊಣ್ಣೆಯೂರಿಕೊಂಡು ನಿಂತ ಮುದುಕಿ ಇನ್ಸ್‌ಪೆಕ್ಟರನ ಕಡೆ ದುರುಗುಟ್ಟಿ ನೋಡುತ್ತ ಹೇಳಿದಳು- "ದೇವರ ಹೆಸರು ತೊಗೊಂಡು ದೇವರಿಗೆ ಯಾಕೆ ಅಪಮಾನ ಮಾಡ್ತಿ ! ನಿನ್ನ ದೇವರು ಅಂದರೆ ನೀನು ಯಾರ ಎಕ್ಕಡ ನೆಕ್ತೀಯೋ ಆ ಆಫೀಸರು ! ನೀನು ಮೊಳಕಾಲುದ್ದ ನೀರಿನಲ್ಲಿ ಮುಳುಗಿ ಸಾಯಬೇಕಾಗಿತ್ತು.

ಇಲ್ಲಿ ಬಂದಿರೋ ಜನ ಯಾರು ಅಂತ ನಿನಗೆ ಗೊತ್ತೇನು ? ನಮ್ಮಂಥ ಬಡವರ ಉದ್ಧಾರಕ್ಕೆ ತಮ್ಮ ಪ್ರಾಣಾನ ಸಹ ಹೋಮ ಮಾಡೋಕ್ಕೆ ತಯಾರಾಗಿರೋರು ಅವರು. ನೀನು ಅವರನ್ನ ಬದಮಾಶರು ಅಂತೀಯಲ್ಲ ! ಲಂಚ ತಿನ್ನೋನು, ಜೂಜು ಆಡಿಸೋನು, ಕಳ್ಳತನ ಮಾಡಿಸೋನು, ದರೋಡೆ ಹೊಡಿಸೋನು, ಒಳ್ಳೆಯೋರನ್ನ ಕಷ್ಟದಲ್ಲಿ ಸಿಕ್ಕಿಸಿ ಕೈ ಬಿಸಿಮಾಡಿಕೊಳ್ಳೋನು, ನಿಮ್ಮ ದೇವತೆಗಳ ಎಕ್ಕಡಾನ ಮೂಗಿನಿಂದ ಮೂಗಿನಿಂದ ತಿಕ್ಕೋನು ನೀನು. ನೀನು ಇವರನ್ನ ಬದಮಾಶರು ಅಂತೀಯಾ ?"

ನೋಹರಿಯ ಬಿರುನುಡಿಯನ್ನು ಕೇಳಿ ಇಲ್ಲಿ ಅಲ್ಲಿ ಅವಿತುಕೊಂಡಿದ್ದ ಹಲವರು ಮತ್ತೆ ಗುಂಪುಗೂಡಿದರು. ಗುಂಪು ದೊಡ್ಡದಾಗುತ್ತಿದ್ದುದನ್ನು ನೋಡಿದ ಇನ್ಸ್‌ಪೆಕ್ಟರ್ ತನ್ನ ಹಂಟರ್ ತೆಗೆದು ಒಮ್ಮೆ ಅವರ ಮೇಲೆ ಬಾರಿಸಿದ. ಜನ ಮತ್ತೆ ಚದುರಿದರು. ಹಂಟರಿನ ಏಟೊಂದು ನೋಹರಿಯ ಮೇಲೆಯೂ ಬಿತ್ತು. ಬೆಂಕಿಯ ಕೆಂಡ ಇಡೀ ಬೆನ್ನನ್ನೊಮ್ಮೆ ಸವರಿಕೊಂಡು ಹೋದಂತೆ ಅವಳಿಗೆ ಅನ್ನಿಸಿತು. ಕಣ್ಣುಗತ್ತಲೆ ಕವಿಯಲು ಕಿರಚಿದಳು- "ಯಾಕೆ ಓಡ್ತೀರೋ, ಹುಡುಗರಾ ? ಇಲ್ಲೇನು ಸಂತರ್ಪಣೆ ಅಂತ ಬಂದಿದ್ದಿರಾ ? ಕುಣಿತ, ತಮಾಷೆ ನಡೀತಿತ್ತೆ ? ನಿಮ್ಮ ಹೇಡಿತನದಿಂದಾಗಿ ಈ ಪೋಲೀಸಿನೋರು ಹುಲಿಗಳಾಗಿದಾರೆ. ಎಲ್ಲಿಯವರೆಗೆ ಅಂತ ಈ ಹೊಡೆತ-ಬಡಿತ, ಬೈಗಳ-ಬೆದರಿಕೆಗಳನ್ನ ಸಹಿಸಿಕೊಂಡಿರ್ತೀರಿ ?"

ಪ್ಯಾದೆಗಳಲ್ಲೊಬ್ಬ ಮುದುಕಿಯ ಕತ್ತಿಗೆ ಕೈಹಾಕಿ ಜೋರಾಗಿ ನೂಕಿದ. ಮುದುಕಿ ಎರಡು ಮೂರು ಹೆಜ್ಜೆ ದೂರದಲ್ಲಿ ಬೋರಲಾಗಿ ಬೀಳುವುದರಲ್ಲಿದ್ದಳು. ಅಷ್ಟರಲ್ಲಿ ಕೋದಯಿ ಮುಂದೆ ನುಗ್ಗಿ ಅವಳನ್ನು ಹಿಡಿದುಕೊಂಡು ಹೇಳಿದ- "ಒಬ್ಬ ಬಡಪಾಯಿ ಮೇಲೆ ಇಷ್ಟೊಂದು ದರ್ಪ ತೋರಿಸ್ತೀರಾ ? ಗುಲಾಮಗಿರಿಯಿಂದಾಗಿ ನಿಮ್ಮ ಗಂಡಸುತನಾನೂ ಕಳಕೊಂಡಿರಾ ? ಹೆಂಗಸರು ಮುದುಕರ ಮೇಲೆ, ನಿಃಶಸ್ತ್ರರಾದವರ ಮೇಲೆ ಕೈಮಾಡೋದು ಗಂಡಸುತನವಲ್ಲ."

ನೋಹರಿ ನೆಲದ ಮೇಲೆ ಬಿದ್ದುಕೊಂಡೇ ಹೇಳಿದಳು- "ಗಂಡಸರಾಗಿದ್ದಿದ್ದರೆ ಗುಲಾಮರಾಗಿ ಯಾಕೆ ಇರ್ತಿದ್ದರು ? ದೇವರೇ, ಮನುಷ್ಯ ಇಷ್ಟರಮಟ್ಟಿಗೆ ನಿಷ್ಕರುಣೆಯಾಗೋದುಂಟೆ ? ಪರಂಗೀ ಜನ ಹೀಗೆ ಕಠಿಣವಾಗಿ ವರ್ತಿಸಿದರೆ ಅದೇನೋ ಸರಿ. ರಾಜ್ಯ ಅವರದ್ದು. ನೀವಾದರೋ ಅವರ ಆಳುಗಳು. ನಿಮಗೇನೂ ರಾಜ್ಯ ಸಿಗೋಲ್ಲ. ನಿಮಗೆ ಏನಿದ್ದರೂ ಎಂಜಲಿಂದಲೇ ಖುಷಿ. ಯಾರಾದರೂ ಸಂಬಳ ಕೊಡ್ತಾ ಇದ್ದರೆ ಕುತ್ತಿಗೆ ಕತ್ತರಿಸೋಕ್ಕೂ ಹೇಸೋಲ್ಲ ನೀವುಗಳು."

ಈಗ ಇನ್ಸ್‌ಪೆಕ್ಟರ್ ಸತ್ಯಾಗ್ರಹಿಗಳ ನಾಯಕನನ್ನು ಗದರಿಸತೊಡಗಿದ- "ನೀನು ಯಾರ ಅಪ್ಪಣೆ ಪಡೆದು ಈ ಹಳ್ಳಿಗೆ ಬಂದೆ ?"

ನಾಯಕ ಶಾಂತಿಯಿಂದ ಹೇಳಿದ- "ದೇವರ ಅಪ್ಪಣೆಯಿಂದ."

ಇನ್ಸ್‌ಪೆಕ್ಟರ್- "ನೀನು ಜನರ ಶಾಂತಿಗೆ ಭಂಗ ತರ್ತಿದಿ."

ನಾಯಕ- "ಜನಕ್ಕೆ ಅವರ ಸ್ಥಿತಿ ಎಂಥಾದ್ದು ಅಂತ ಹೇಳೋದು ಶಾಂತಿಗೆ ಭಂಗ ತರೋದಾದರೆ, ಹೌದು, ನಾನು ಶಾಂತಿಗೆ ಭಂಗ ತರ್ತಿದೀನಿ."

ಓಡಿಹೋಗುತ್ತಿದ್ದವರ ಕಾಲುಗಳು ಮತ್ತೊಮ್ಮೆ ನಿಂತವು. ಕೋದಯಿ ಅವರ ಕಡೆ ನಿರಾಶೆಯ ದೃಷ್ಟಿಯಿಂದ ನೋಡಿ ಹೇಳಿದ- "ಅಣ್ಣತಮ್ಮಂದಿರೇ, ಇವತ್ತು ಇಲ್ಲಿ ಎಷ್ಟೋ ಹಳ್ಳಿಗಳ ಜನ ಬಂದು ಸೇರಿದೀರಿ. ಇನ್ಸ್‌ಪೆಕ್ಟರ್ ಸಾಹೇಬ ನಮಗೆ ಮಾಡಿರೋ ಅವಮಾನನ ಸಹಿಸಿಕೊಂಡು ನೀವುಗಳು ಆರಾಮವಾಗಿ ನಿದ್ದೆಮಾಡಬಲ್ಲಿರಾ? ಯಾರಿಗೆ ಈ ದೂರು ಹೇಳಿಕೊಳ್ಳೋಣ? ಅಧಿಕಾರಿಗಳು ನಮ್ಮ ದೂರು ಕೇಳ್ತಾರೆಯೆ? ಖಂಡಿತಾ ಇಲ್ಲ. ಇವತ್ತು ಇವರು ನಮ್ಮನ್ನ ಕೊಂದುಹಾಕಿದರೂ ಕೇಳೋರಿಲ್ಲ. ನಮಗಿರೋ ಗೌರವ, ಮಾನಮರ್ಯಾದೆ ಅಂದರೆ ಇಷ್ಟೇ. ಇಂಥ ಬದುಕಿಗೆ 'ಥೂ' ಅಂತ ಉಗೀಬೇಕು."

ಹರಿಯುತ್ತಿರುವ ನೀರು ಒಡ್ಡಿಗೆ ಸಿಕ್ಕಿ ನಿಲ್ಲುವಂತೆ ಜನರ ಗುಂಪು ಸ್ಥಿರವಾಗಿ ನಿಂತಿತು. ಅವರ ಎದೆಯನ್ನು ಮುಸುಕಿದ್ದ ಭಯದ ಹೊಗೆ ಇದ್ದಕ್ಕಿದ್ದಂತೆ ಚದುರಿತು. ಅವರ ಮುಖ ಕಠೋರವಾಯಿತು. ಅವರ ಕೆರಳಿದ ಕಣ್ಣನ್ನು ನೋಡಿದ ಇನ್ಸ್‌ಪೆಕ್ಟರ್ ತಕ್ಷಣ ಕುದುರೆ ಹತ್ತಿ ಕೋದಯಿಯನ್ನು ಬಂಧಿಸುವಂತೆ ಅಪ್ಪಣೆ ಮಾಡಿದ. ಇಬ್ಬರು ಸಿಪಾಯಿಗಳು ಮುಂದೆ ಬಂದು ಕೋದಯಿಯ ಕೈಹಿಡಿದುಕೊಂಡರು. ಕೋದಯಿ ಹೇಳಿದ- "ಯಾಕೆ ಗಾಬರಿಯಾಗ್ತೀರಿ? ನಾನೆಲ್ಲೂ ಓಡಿಹೋಗೋಲ್ಲ. ಎಲ್ಲಿ ಕರಕೊಂಡು ಹೋಗ್ತೀರೋ ಕರಕೊಂಡು ನಡೀರಿ."

ಕೋದಯಿ ಆ ಸಿಪಾಯಿಗಳ ಜೊತೆ ಹೊರಡುವುದಕ್ಕಿಲ್ಲ, ಅವನ ಹರೆಯದ ಮಕ್ಕಳಿಬ್ಬರು ಕೆಲವಾರು ಜನರ ಸಮೇತ ಬಂದು ಸಿಪಾಯಿಗಳ ಕಡೆ ನುಗ್ಗಿ ಕೋದಯಿಯನ್ನು ಅವರ ಕೈಯಿಂದ ಬಿಡಿಸಿಕೊಂಡರು. ಜನರೆಲ್ಲರೂ ಭಯಂಕರ ಆವೇಶದಲ್ಲಿ ಮುನ್ನುಗ್ಗಿ ಪೋಲೀಸರ ಸುತ್ತ ಮುತ್ತಿಕೊಂಡರು.

ಇನ್ಸ್‌ಪೆಕ್ಟರ್ ಹೇಳಿದ- "ನೀವು ಇಲ್ಲಿಂದ ಜಾಗ ಬಿಟ್ಟು ಹೊರಡಿ. ಇಲ್ಲದೇ ಹೋದರೆ ಗುಂಡು ಹಾರಿಸ್ತೀನಿ." ಗುಂಪು ಈ ಬೆದರಿಕೆಗೆ ಉತ್ತರವಾಗಿ 'ಭಾರತ ಮಾತಾಕಿ ಜೈ' ಎಂದು ಕೂಗಿ ಒಂದೊಂದು, ಎರಡೆರಡು ಹೆಜ್ಜೆ ಮುಂದೆ ಸರಿದರು.

ಇನ್ಸ್‌ಪೆಕ್ಟರ್ ನೋಡಿದ. ಇನ್ನು ಪ್ರಾಣ ಉಳಿಯುವ ಲಕ್ಷಣ ಕಾಣಲಿಲ್ಲ. ಈಗ ಅವನು ನಮ್ರತೆಯಿಂದ ಹೇಳಿದ- "ನಾಯಕರೇ, ಈ ಜನ ಪಿತೂರಿಗೆ ತೊಡಗಿದಾರೆ. ಇದರ ಪರಿಣಾಮ ಒಳ್ಳೇದಾಗೋಲ್ಲ."

ನಾಯಕ ಹೇಳಿದ- "ನಮ್ಮಲ್ಲಿ ಒಬ್ಬ ಮನುಷ್ಯ ಇಲ್ಲಿ ಇರೋವರೆಗೂ ನಿಮ್ಮ ಮೇಲೆ ಯಾರೂ ಕೈಮಾಡೋಲ್ಲ. ನಿಮ್ಮ ಮೇಲೆ ನಮಗೇನೂ ವೈರವಿಲ್ಲ. ನಾವೂ ನೀವೂ ಒಂದೇ ಕಾಲ ತುಳಿತಕ್ಕೆ ಸಿಕ್ಕಿದೀವಿ. ನಾವೂ ನೀವೂ ಎರಡು ವಿರೋಧ ದಳಗಳಲ್ಲಿರೋದು ದುರದೃಷ್ಟದ ಸಂಗತಿ."

ಹೀಗೆನ್ನುತ್ತ ನಾಯಕ ಹಳ್ಳಿಯವರಿಗೆ ಸಮಜಾಯಿಷಿ ಹೇಳಿದ- "ಬಂಧುಗಳೇ, ನಿಮಗಾಗಲೇ ಈ ಮಾತನ್ನ ಹೇಳಿದೀನಿ. ಇದು ನ್ಯಾಯಧರ್ಮಗಳ ಹೋರಾಟ. ನಾವು ನ್ಯಾಯಧರ್ಮಗಳ ಆಯುಧದಿಂದಲೇ ಹೋರಾಡಬೇಕಾಗಿದೆ. ನಾವು ನಮ್ಮ ಅಣ್ಣತಮ್ಮಂದಿರೊಡನೆ ಹೋರಾಡಕೂಡದು. ಯಾರೊಡನೆಯೂ ಹೋರಾಡಬೇಕಾಗಿಲ್ಲ. ಇನ್ಸ್‌ಪೆಕ್ಟರ್ ಜಾಗದಲ್ಲಿ ಯಾವನಾದರೂ ಪರಂಗಿಯವನು

ಇದ್ದಿದ್ದರೂ ನಾವು ಅವನಿಗೆ ರಕ್ಷಣೆ ಕೊಡ್ತಿದ್ದೆವು. ಇನ್ಸ್‌ಪೆಕ್ಟರ್ ಕೋದಯಿ ಚೌಧರಿಯನ್ನ ಸೆರೆಹಿಡಿದಿದಾರೆ. ಇದು ಚೌಧರಿಯ ಅದೃಷ್ಟ ಅಂತ ನಾನು ತಿಳೀತೀನಿ. ಸ್ವಾತಂತ್ರ್ಯಸಂಗ್ರಾಮದಲ್ಲಿ ಸಜಾ ಪಡೆಯುವ ಜನ ಧನ್ಯರು. ಇದರಲ್ಲಿ ಗಾಬರಿಯಾಗೋಕ್ಕೆ ಅಥವಾ ಕೋಪಿಸಿಕೊಳ್ಳೋಕ್ಕೆ ಏನೂ ಇಲ್ಲ. ನೀವುಗಳು ಹಿಂದೆ ಸರೀರಿ. ಪೋಲೀಸರಿಗೆ ಹೋಗೋಕ್ಕೆ ಬಿಡಿ.''

ಇನ್ಸ್‌ಪೆಕ್ಟರನೂ ಸಿಪಾಯಿಗಳೂ ಕೋದಯಿಯನ್ನು ಕರೆದುಕೊಂಡು ಹೊರಟರು.

ಜನ ಜಯಜಯಕಾರ ಮಾಡಿದರು- ''ಭಾರತ ಮಾತಾಕಿ ಜೈ.''

ಕೋದಯಿ ಉತ್ತರ ಕೊಟ್ಟ- ''ರಾವ್ ರಾವ್, ಬಂಧುಗಳೇ, ರಾವ್ ರಾವ್. ಪಟ್ಟುಹಿಡಿದು ಹೋರಾಡಿ. ಗಾಬರಿಪಡೋ ಕಾರಣವಿಲ್ಲ. ದೇವರು ಎಲ್ಲರಿಗೂ ದಣಿಯಾಗಿದಾನೆ.''

ಅವನ ಇಬ್ಬರು ಮಕ್ಕಳೂ ಕಣ್ಣಲ್ಲಿ ನೀರು ತುಂಬಿಕೊಂಡು ಕಾತರದಿಂದ ಕೇಳಿದರು- ''ನಮಗೇನು ಅಪ್ಪಣೆ, ಅಪ್ಪ ?''

ಕೋದಯಿ ಅವರಿಗೆ ಉತ್ತೇಜನ ಕೊಡುತ್ತ ಹೇಳಿದ- ''ದೇವರ ಮೇಲೆ ನಂಬಿಕೆ ಬಿಡಬೇಡಿ. ಗಂಡಸರಂತೆ ಕೆಲಸ ಮಾಡಿ. ಎಲ್ಲ ಕೆಟ್ಟದಕ್ಕೆ ಮೂಲ ಅಂದರೆ ಭಯ. ಅದನ್ನ ಮನಸ್ಸಿನಿಂದ ಕಿತ್ತುಹಾಕಿ. ಆಗ ಯಾರೂ ನಿಮಗೇನೂ ಮಾಡೋಕ್ಕಾಗೋಲ್ಲ. ಸತ್ಯಕ್ಕೆ ಎಂದೂ ಸೋಲಿಲ್ಲ.''

ಇವತ್ತು ಪೋಲೀಸ್ ಸಿಪಾಯಿಗಳ ನಡುವೆ ಅನುಭವಿಸಿದಂತಹ ನಿರ್ಭಯತೆಯನ್ನು ಕೋದಯಿ ಹಿಂದೆಂದೂ ಅನುಭವಿಸಿರಲಿಲ್ಲ. ಸೆರೆಮನೆ, ಗಲ್ಲಿನ ಶಿಕ್ಷೆ ಈಗ ಅವನಿಗೆ ಭಯ ಹುಟ್ಟಿಸುವ ವಿಷಯಗಳಾಗಿರಲಿಲ್ಲ; ಗೌರವದ ವಿಷಯವಾಗಿತ್ತು. ಸತ್ಯದ ಪ್ರತ್ಯಕ್ಷ ರೂಪವನ್ನು ಇವತ್ತು ಅವನು ಮೊದಲ ಬಾರಿಗೆ ಕಂಡಿದ್ದ. ತಾನು ಅದನ್ನು ಕವಚದಂತೆ ರಕ್ಷಣೆ ಮಾಡುತ್ತಿದ್ದೇನೆ ಎಂದು ಅವನಿಗೆ ಅನ್ನಿಸಿತು.

## 5

ಹಳ್ಳಿಯವರಿಗೆ ಕೋದಯಿಯನ್ನು ಹಿಡಿದುಕೊಂಡು ಹೋದುದು ನಾಚಿಕೆಯನ್ನುಂಟು ಮಾಡಿತ್ತು. ತಮ್ಮ ಕಣ್ಣಮುಂದೆಯೇ ತಮ್ಮ ನಾಯಕನನ್ನು ಹೀಗೆ ಹಿಡಿದುಕೊಂಡು ಹೋದಾಗ ಅವರು ಏನೂ ಮಾಡಲಾಗದೆ ಹೋಗಿದ್ದರು. ಈಗ ಅವರು ಮುಖ ತೋರಿಸುವುದಾದರೂ ಹೇಗೆ ? ಪ್ರತಿಯೊಬ್ಬ ಹಳ್ಳಿಯವನ ಮುಖದ ಮೇಲೆಯೂ ಆಳವಾದ ವೇದನೆ ತುಳುಕುತ್ತಿತ್ತು. ಹಳ್ಳಿಗೆ ಹಳ್ಳಿಯೇ ಲೂಟಿಯಾಯಿತೇನೋ ಅನಿಸುತ್ತಿತ್ತು.

ಇದ್ದಕ್ಕಿದ್ದಂತೆ ನೋಹರಿ ಅರಚಿದಳು- ''ಈಗ ನಿಂತುಕೊಂಡು ಎಲ್ಲರೂ ಏನು ಪಶ್ಚಾತ್ತಾಪಪಡ್ತಿದೀರಿ ! ನಮ್ಮ ದುರ್ದಶೇನ ನೋಡಿದಿರಿ ತಾನೆ ? ಅಥವಾ ಇನ್ನೂ

ಏನಾದರೂ ಬಾಕಿ ಇದೆಯೊ? ನಮ್ಮನ್ನ ಇವರು ಆಳ್ತಿರೋದು ಕಾನೂನಿನಿಂದಲ್ಲ, ಲಾಠಿಯಿಂದ ಅಂತ ಇವತ್ತು ತಿಳೀತಲ್ಲವೆ? ಇಂತಹ ದುರ್ದಶೇಲೂ ತುಟಿಪಿಟಕ್ಕೆನ್ನದೇ ಇರುವಷ್ಟು ನಾಚಿಕೆ ಗೇಡಿಗಳು ನಾವು. ನಾವು ಇಷ್ಟು ಸ್ವಾರ್ಥಿಗಳೂ ಹೇಡಿಗಳೂ ಆಗಿರೋದರಿಂದಲೇ ಆ ಇನ್ಸ್‌ಪೆಕ್ಟರಿಗೆ ನನ್ನನ್ನ ಚಾಟಿಯಿಂದ ಹೊಡೆಯೋ ಅಷ್ಟು ಧೈರ್ಯ ಬಂತು. ನೀವು ಗುಲಾಮರಾಗಿರೋವರೆಗೆ ಅವನ ಊಳಿಗ ಮಾಡಿಕೊಂಡಿರ್ತೀರಿ; ನಿಮಗೆ ಹಿಂಡಿ ಮೇವು ಸಿಕ್ತಿರುತ್ತೆ. ಆದರೆ ಯಾವತ್ತು ನೀವು ಮುಖ ತಿರುಗಿಸ್ತೀರೋ ಅವತ್ತೆ ಏಟುಬೀಳೋಕ್ಕೆ ಷುರುವಾಗುತ್ತೆ. ಎಲ್ಲೀವರೆಗೆ ಹೀಗೆ ಏಟು ತಿನ್ನುತ್ತಾ ಇರ್ತೀರಿ? ಎಲ್ಲೀವರೆಗೆ ಹೀಗೆ ಹೆಣಗಳ ತರ ಬಿದ್ದುಕೊಂಡಿದ್ದು ಹದ್ದುಗಳಿಂದ ಕಿತ್ತು ತಿನ್ನಿಸಿಕೊಳ್ತೀರಿ? ನೀವೂ ಎಚ್ಚರವಾಗಿ ಬದುಕಿರಿ, ನಿಮಗೂ ಮಾನಮರ್ಯಾದೆ, ಗುರಿ, ಗಮನ ಇದೆ ಅಂತ ತೋರಿಸಿ. ಮರ್ಯಾದೆಯೇ ಇಲ್ಲದ ಮೇಲೆ ಬೇಸಾಯಮಾಡಿ ಯಾಕೆ ತಾನೇ ಹಣ ಸಂಪಾದಿಸಬೇಕು? ಯಾಕೆ ತಾನೆ ಬದುಕಿರಬೇಕು? ನಿಮ್ಮ ಮಕ್ಕಳುಮರಿ ಹೀಗೇ ಏಟು ತಿನ್ನಲಿ, ಹೀಗೇ ತುಳಿಸಿಕೊಳ್ಳಲಿ ಅಂತ ಬದುಕಿದೀರಾ? ಬಿಡಿ ಈ ಹೇಡಿತನಾನ! ಕೊನೆಗೊಂದು ದಿನ ಮಂಚದ ಮೇಲೆ ಬಿದ್ದುಕೊಂಡಿದ್ದ ಹಾಗೇ ಸಾಯ್ತೀರಿ. ಅಂದಮೇಲೆ ಈ ಧರ್ಮಯುದ್ಧದಲ್ಲಿ ಧುಮುಕಿ ವೀರರಂತೆ ಯಾಕೆ ಸಾಯಬಾರದು? ನಾನಂತೂ ಮುದಿ ಹೆಂಗಸು. ಇನ್ನೇನು ಮಾಡೋಕ್ಕೆ ಆಗದೇ ಹೋದರೂ ಈ ಜನ ಮಲಗೋ ಕಡೆ ಗುಡಿಸ್ತೀನಿ, ಇವರಿಗೆ ಗಾಳಿ ಹಾಕ್ತೀನಿ."

ಕೋದಯಿಯ ಹಿರಿಯ ಮಗ ಮೈಕೂ ಹೇಳಿದ- "ನಾನಿನ್ನೂ ಬದುಕಿರೋವಾಗಲೇ ನೀನು ಹೋಗಬೇಕೆ, ಚಿಕ್ಕಪ್ಪ? ನಮ್ಮ ಜೀವನಕ್ಕೆ ಧಿಕ್ಕಾರ. ನಿನ್ನ ಮಕ್ಕಳು ನಾವಿನ್ನೂ ಬದುಕಿದೀವಿ. ನಾನು ಹೋಗ್ತೀನಿ. ಬೇಸಾಯಾನ ಗಂಗ ನೋಡಿಕೋತಾನೆ."

ಗಂಗಾ ಮೈಕೂನ ತಮ್ಮ ಅವನಂದ- "ಅಣ್ಣ, ನೀನು ಅನ್ಯಾಯ ಮಾಡ್ತಿವಿ. ನಾನಿರೋವಾಗ ನೀನು ಹೋಗೋಣ ಅಂದರೆ ಏನು. ನೀನಿತ್ತೂ ಅಂದರೆ ಸಂಸಾರಾನ ನೋಡಿಕೋತಿ. ನನ್ನ ಕೈಯಲ್ಲಿ ಅದು ಹರಿಯೋಲ್ಲ. ನಾನು ಹೋಗ್ತೀನಿ ಬಿಡು."

ಮೈಕೂ- "ಇದನ್ನ ಚಿಕ್ಕಪ್ಪನ ತೀರ್ಮಾನಕ್ಕೆ ಬಿಡೋಣ. ಇಲ್ಲದೇ ಹೋದರೆ ನಮ್ಮಿಬ್ಬರ ನಡುವೆ ಜಗಳವಾಗುತ್ತೆ. ಚಿಕ್ಕಪ್ಪ ಯಾರಿಗೆ ಅಪ್ಪಣೆ ಕೊಡ್ತಾಳೋ ಅವರು ಹೋಗೋಣ."

ನೋಹರಿ ಹೆಮ್ಮೆಯಿಂದ ನಗುತ್ತ ಹೇಳಿದಳು- "ನನಗೆ ಯಾರು ಲಂಚ ಕೊಡ್ತಾರೋ ಅವರನ್ನ ಗೆಲ್ಲಿಸ್ತೀನಿ."

ಮೈಕೂ- "ಏನು ನಿನ್ನ ಕಚೇರೀಲೂ ಅದೇ ಲಂಚದ ಬಾಬತ್ತೇಯೆ, ಚಿಕ್ಕಪ್ಪ? ಇಲ್ಲಾದರೂ ನಿಯತ್ತಿನಿಂದ ನ್ಯಾಯ ತೀರ್ಮಾನವಾಗುತ್ತೆ ಅಂತಿದ್ದೆ."

ನೋಹರಿ- "ಇರಲಿ ಬಿಡು, ಸಾಯೋ ಹೊತ್ತಿನಲ್ಲಿ ರಾಜ್ಯಭಾರ ಸಿಕ್ಕಿದೆ. ಒಂದಿಷ್ಟು ಸಂಪಾದನೆ ಮಾಡಿಕೋತೀನಿ."

ಗಂಗಾ ನಗುತ್ತ ಹೇಳಿದ- "ನಾನು ನಿನಗೆ ಲಂಚ ಕೊಡ್ತೀನಿ, ಚಿಕ್ಕಪ್ಪ. ಇನ್ನೊಂದು

ಸಲ ಪೇಟೇಗೆ ಹೋದಾಗ ನಿನಗೆ ಮೂಡಲ ಕಡೆ ತಂಬಾಕಿನ ಎಲೆ ತಂದುಕೊಡ್ತೀನಿ."

ನೋಹರಿ- "ಸರಿ ಹಾಗಾದರೆ, ನೀನೇ ಗೆದ್ದೆ. ನೀನೇ ಹೋಗೋನು."

ಮೈಕೂ- "ಚಿಕ್ಕವ್ವ ಇದು ನ್ಯಾಯುವಲ್ಲ."

ನೋಹರಿ- "ಕಕ್ಷಿ-ಪ್ರತಿಕಕ್ಷಿ ಇಬ್ಬರೂ ಕೋರ್ಟಿನ ಫೈಸಲನ್ನು ಎಂದಾದರೂ ಸರಿ ಅಂತ ಒಪ್ಪಿಕೊಂಡಿದಾರಾ ನೀನು ಒಪ್ಪಿಕೊಳ್ಳೋಕೆ ?"

ಗಂಗ ನೋಹರಿಯ ಕಾಲಿಗೆ ಅಡ್ಡಬಿದ್ದ; ಆಮೇಲೆ ಅಣ್ಣನನ್ನು ಅಪ್ಪಿಕೊಂಡು ಹೇಳಿದ- "ನಾನು ಹೋಗ್ತಿದೀನಿ ಅಂತ ನಾಳೆ ಅಪ್ಪಂಗ ಸುದ್ದಿ ಕಳಿಸಿಬಿಡು."

ಇಷ್ಟರಲ್ಲಿ ಒಬ್ಬಾತ ಹೇಳಿದ- "ನನ್ನ ಹೆಸರು ಬರಕೊಳ್ಳಣ್ಣ, ಸೇವಾರಾಮ."

ಎಲ್ಲರೂ ಜಯಘೋಷ ಮಾಡಿದರು. ಸೇವಾರಾಮ ಬಂದು ನಾಯಕನ ಹತ್ತಿರ ನಿಂತುಕೊಂಡ.

ಇನ್ನೊಂದು ಧ್ವನಿ ಕೇಳಿಬಂತು- "ನನ್ನ ಹೆಸರು ಬರಕೊಳ್ಳಿ, ಭಜನಸಿಂಹ."

ಎಲ್ಲರೂ ಜಯಘೋಷ ಮಾಡಿದರು. ಭಜನಸಿಂಹ ಹೋಗಿ ನಾಯಕನ ಹತ್ತಿರ ನಿಂತುಕೊಂಡ.

ಭಜನಸಿಂಹ ಹತ್ತಾರು ಹಳ್ಳಿಗಳಲ್ಲಿ ಪೈಲ್ವಾನಿಕೆಗೆ ಹೆಸರುವಾಸಿಯಾಗಿದ್ದ. ಅವನು ತನ್ನ ಅಗಲವಾದ ಎದೆಯನ್ನು ಹಿಗ್ಗಿಸಿ, ತಲೆಯೆತ್ತಿ, ನಾಯಕನ ಹತ್ತಿರ ನಿಂತಾಗ ಆ ಚಪ್ಪರದ ಕೆಳಗೆ ಒಂದು ಹೊಸ ಜೀವನವೇ ಉದಯವಾಯಿತೇನೋ ಎಂಬಂತಾಯಿತು.

ಇದ್ದಕ್ಕಿದ್ದಂತೆ ಮೂರನೆಯ ಧ್ವನಿ ಕೇಳಿಬಂತು- "ನನ್ನ ಹೆಸರು ಬರಕೊಳ್ಳಿ. ಘೂರೇ."

ಘೂರೇ ಊರಿನ ಕಾವಲುಗಾರ. ಜನ ತಲೆಯೆತ್ತಿ ಅವನ ಕಡೆ ನೋಡಿದರು. ಅವನು ತನ್ನ ಹೆಸರನ್ನು ಬರೆಸುವನೆಂದು ತಕ್ಷಣ ಯಾರಿಗೂ ನಂಬಿಕೆಯಾಗಲಿಲ್ಲ.

ಘೂರೇ ಹೇಳಿದ- "ನಿಮಗೆ ಆದದ್ದೇ ನನಗೂ ಆಗಿದೆ. ಇಪ್ಪತ್ತು ವರ್ಷ ಗುಲಾಮಗಿರಿ ಮಾಡಿ ಬೇಜಾರಾಗಿದೆ."

ಇನ್ನೂ ಒಂದು ಧ್ವನಿ ಕೇಳಿಸಿತು- "ನನ್ನ ಹೆಸರು ಬರಕೊಳ್ಳಿ, ಕಾಲೇಖಾನ್" ಅವನು ಜಮೀನುದಾರನ ಸ್ವಂತದ ಆಳು. ಮಹಾ ಬಲಾಢ್ಯ, ದುಷ್ಟ. ಜನರಿಗೆ ಇದ್ದಿದ್ದೂ ಆಶ್ಚರ್ಯವಾಯಿತು.

ಮೈಕೂ ವ್ಯಂಗ್ಯವಾಗಿ ಹೇಳಿದ- "ನಾವು ಲೂಟಿಮಾಡಿ ಮನೆ ತುಂಬಿಕೊಳ್ಳೋಕೆ ಹೊರಟಿದೀವಿ ಅಂತ ಅಂದುಕೊಂಡೆಯಾಪ್ಪ?

ಕಾಳೇಖಾನ್ ಗಂಭೀರನಾಗಿ ಹೇಳಿದ- "ದಾರಿ ತಪ್ಪಿರೋ ಮನುಷ್ಯನ್ನ ಎಂದೆಂದಿಗೂ ಒಳ್ಳೇ ದಾರಿಗೆ ಬರೋಕ್ಕೆ ಬಿಡೋಲ್ವೇನಣ್ಣ? ಇಲ್ಲೀ ತನಕ ಯಾರ ಉಪ್ಪು ತಿಂದಿದ್ದೆನೋ ಅವನ ಅಪ್ಪಣೆ ಪಾಲಿಸ್ತಿದ್ದೆ. ನಿಮ್ಮಗಳ ಲೂಟಿ ಮಾಡಿ ಮಾಡಿ ಅವನ ಮನೆ ತುಂಬಿಸ್ತಿದ್ದೆ. ನಾನು ದೊಡ್ಡ ಮೋಸದಲ್ಲಿ ಸಿಕ್ಕಿಬಿದ್ದಿದ್ದೆ ಅಂತ ಈಗ ನನಗೆ ಗೊತ್ತಾಗಿದೆ. ನೀವು ಅಣ್ಣ ತಮ್ಮಂದಿರನ್ನೆಲ್ಲಾ ತುಂಬಾ ಸತಾಯಿಸಿದೀನಿ. ನನ್ನನ್ನು ಮಾಫ ಮಾಡಿಬಿಡಿ."

ಈ ಐವರು ಹೊಸ ಸತ್ಯಾಗ್ರಹಿಗಳೂ ನಿಜವಾಗಿಯೂ ಸ್ವರಾಜ್ಯ ಸಂಪಾದಿಸಿದವರಂತೆ ಪರಸ್ಪರ ಅಪ್ಪಿಕೊಳ್ಳುತ್ತಿದ್ದರು, ಕುಣಿಯುತ್ತಿದ್ದರು, ಕೂಗಾಡುತ್ತಿದ್ದರು. ವಾಸ್ತವವಾಗಿ ಅವರಿಗೆ ಸ್ವರಾಜ್ಯ ಸಿಕ್ಕಿತ್ತು. ಸ್ವರಾಜ್ಯವೆಂಬುದು ಮನೋವೃತ್ತಿ ಮಾತ್ರ. ಪರಾಧೀನತೆಯ ಬಂಧನವನ್ನು ಮನಸ್ಸಿನಿಂದ ತೊಡೆದು ಹಾಕಿದೊಡನೆಯೆ ನಮಗೆ ಸ್ವರಾಜ್ಯ ಸಿಕ್ಕಿದಂತೆ ಅನಿಸುತ್ತದೆ. ಭಯವೆಂಬುದು ಪರಾಧೀನತೆ; ನಿರ್ಭಯತೆಯಾದರೋ ಸ್ವರಾಜ್ಯ. ಒಗ್ಗಟ್ಟು ಶಿಸ್ತುಗಳು ಗೌರವದ ವಿಷಯಗಳು.

ಆ ಹೊಸ ಸತ್ಯಾಗ್ರಹಿಗಳನ್ನುದ್ದೇಶಿಸಿ ನಾಯಕ ಹೇಳಿದ- "ಮಿತ್ರರೇ, ಇವತ್ತು ನೀವು ಸ್ವಾತಂತ್ರ್ಯ ಸಿಪಾಯಿಗಳೊಡನೆ ಬಂದು ಸೇರಿದಿರಿ. ಅದಕ್ಕೆ ನಿಮಗೆ ನನ್ನ ಅಭಿನಂದನೆಗಳು. ನಾವು ಎಂತಹ ಹೋರಾಟಕ್ಕೆ ಹೊರಟಿದ್ದೀವೆಂದು ನಿಮಗೆ ಗೊತ್ತಿದೆ. ನಿಮ್ಮ ಮೇಲೆ ಬಗೆಬಗೆಯ ಅತ್ಯಾಚಾರಗಳಾಗುತ್ತಿವೆ. ಆದರೆ ನೆನಪಿಡಿ: ಇವತ್ತು ನೀವು ಲೋಭ ಮೋಹಗಳನ್ನು ಹಾತೊರೆದಂತೆಯೇ ಹಿಂಸೆ ಕ್ರೋಧಗಳನ್ನೂ ತೊರೆದುಬಿಡಿ. ನಾವು ಧರ್ಮ ಸಂಗ್ರಾಮಕ್ಕೆ ಹೊರಟಿದ್ದೇವೆ. ನಾವು ಧರ್ಮದ ದಾರಿಯಲ್ಲೇ ನಡೆಯಬೇಕು. ನೀವು ಇದಕ್ಕೆ ಸಿದ್ಧರೆ ?"

ಐವರೂ ಒಕ್ಕೊರಲಿನಿಂದ ಹೇಳಿದರು- "ಓಹೋ ಸಿದ್ಧ !"

ನಾಯಕ ಅವರನ್ನು ಆಶೀರ್ವದಿಸಿದ- "ದೇವರು ನಿಮಗೆ ನೆರವಾಗಲಿ !"

## 6

ಆ ಮನೋಹರವಾದ ತೊಂಬಣ್ಣದ ಬೆಳಗು ಉಲ್ಲಾಸದಿಂದ ತೂಳಿದಂತಿತ್ತು. ಗಾಳಿಯ ಮೃದುವಾದ ಬೀಸಿನಲ್ಲಿ, ಬೆಳಕಿನ ಮೃದುವಾಗಿ ಕಿರಣಗಳಲ್ಲಿ ಉಲ್ಲಾಸ ಬೆರೆತಿತ್ತು. ಜನ ಹುಚ್ಚರಂತಾಗಿದ್ದರು. ಸ್ವಾತಂತ್ರ್ಯದೇವಿ ಅವರನ್ನು ತನ್ನೆಡೆಗೆ ಕೈಮಾಡಿ ಕರೆಯುತ್ತಿದ್ದಾಳೆಯೋ ಎನ್ನುವಂತಿತ್ತು. ಅದೇ ಗದ್ದೆ, ಅದೇ ಕಣ, ಅದೇ ತೋಟ, ಅದೇ ಗಂಡಸರು ಹೆಂಗಸರು. ಆದರೆ ಇವತ್ತಿನ ಬೆಳಗಿನಲ್ಲಿದ್ದ ಆಶೀರ್ವಾದ, ವರದಾನ, ಭವ್ಯತೆಗಳು ಹಿಂದೆಂದೂ ಇರಲಿಲ್ಲ. ಅದೇ ಗದ್ದೆ, ಅದೇ ಕಣ, ಅದೇ ತೋಟ, ಅದೇ ಗಂಡಸರು ಹೆಂಗಸರು. ಅವರಲ್ಲಿ ಇವತ್ತು ಒಂದು ಹೊಸ ಲೋಕೋತ್ತರದ ಕಳೆ ಎದ್ದು ಕಾಣುತ್ತಿತ್ತು.

ಸೂರ್ಯ ಹುಟ್ಟುವ ಮೊದಲೇ ಸಾವಿರಾರು ಜನರ ಗುಂಪು ಸೇರಿತ್ತು. ಸತ್ಯಾಗ್ರಹಿಗಳ ದಳ ಹೊರಡುವಾಗ ಜನರ ಮತ್ತೇರಿದ ಧ್ವನಿಯಿಂದ ಆಕಾಶದಲ್ಲಿ ಗುಂಜನವಾಗ ತೊಡಗಿತು. ಹೊಸ ಸತ್ಯಾಗ್ರಹಿಗಳ ಬೀಳ್ಕೊಡಿಗೆ; ಅವರ ಹೆಂಡತಿಯರ ಕಾತರತೆ ತುಂಬಿದ ಧೈರ್ಯ, ತಂದೆತಾಯಿಯರ ಆರ್ದ್ರತೆ ಬೆರೆತ ಗರ್ವ, ಸತ್ಯಾಗ್ರಹಿಗಳ ಹೊರಡುವಿಕೆಯ ದೃಶ್ಯ ಜನರನ್ನು ಮತ್ತರನ್ನಾಗಿ ಮಾಡಿತು.

ಇದ್ದಕ್ಕಿದ್ದಂತೆ ನೋಹರಿ ಕೋಲೂರಿಕೊಂಡು ಬಂದು ನಿಂತುಕೊಂಡಳು.

ಮೈಕೂ ಹೇಳಿದ- "ಚಿಕ್ಕವ್ವ, ನಮಗೆ ಆಶೀರ್ವಾದ ಮಾಡು."

ನೋಹರಿ ಹೇಳಿದಳು- "ನಾನೂ ನಿಮ್ಮ ಜೊತೆ ಬರ್ತೀನಿ, ಮಗೂ. ಎಷ್ಟು ಆಶೀರ್ವಾದ ಬೇಕೋ ಅಷ್ಟು ತೊಗೊಳ್ಳೋವಂತೆ"

ಅಲ್ಲಿದ್ದವರೆಲ್ಲಾ ಒಕ್ಕೊರಲಿನಿಂದ ಹೇಳಿದರು- "ಚಿಕ್ಕವ್ವ, ನೀನು ಹೊರಟುಹೋದರೆ ಇಲ್ಲಿ ಯಾರಿರ್ತಾರೆ ?"

ನೋಹರಿ ಹರಕೆ ತುಂಬಿದ ಧ್ವನಿಯಲ್ಲಿ ಹೇಳಿದಳು- "ಈಗಂತೂ ನಾನು ಹೋಗೋ ದಿನವೇ ಕಣಪ್ಪಾ, ಇವತ್ತು ಹೋಗದೇ ಇದ್ದರೆ ನಾಲ್ಕಾರು ತಿಂಗಳು ಬಿಟ್ಟು ಹೋಗೇ ಹೋಗ್ತೀನಿ ! ಈಗ ಹೊರಟಿದ್ದಾದರೆ ಬದುಕು ಸಫಲವಾಗುತ್ತೆ. ನಾಲ್ಕಾರು ತಿಂಗಳು ಬಿಟ್ಟು ಬಿದ್ದುಕೊಂಡಿರೋ ಹಾಗೇ ಹೋದರೆ ಮನಸ್ಸಿನ ಆಸೆ ಮನಸ್ಸಿನಲ್ಲೇ ಉಳಕೊಳ್ಳುತ್ತೆ. ಇಷ್ಟೊಂದು ಜನ ಹುಡುಗರಿದಾರೆ. ಅವರುಗಳ ಸೇವೆಯಿಂದ ನನಗೆ ಮುಕ್ತಿ ದೊರೆಯುತ್ತೆ. ನಮ್ಮಗಳಿಗೂ ಒಳ್ಳೇಕಾಲ ಬರಲಿ, ನಾನು ಬದುಕಿರೋವಾಗಲೇ ನಿಮ್ಮ ಸುಖಾನ ನೋಡೋ ಹಾಗೆ ದೇವರು ಮಾಡಿಸಲಿ."

ಹೀಗನ್ನುತ್ತ ನೋಹರಿ ಎಲ್ಲರನ್ನೂ ಹರಿಸಿ, ನಾಯಕನ ಹತ್ತಿರ ಹೋಗಿ ನಿಂತು ಕೊಂಡಳು.

ಜನ ನಿಂತು ನೋಡುತ್ತಿದ್ದರು; ತಂಡ ಹಾಡುತ್ತ ಮುಂದೆ ಹೋಯಿತು:

> ಹಿಂದೊಮ್ಮೆ ಜಗದ ತಲೆಮಣಿಯಾಗಿ ಮೆರೆದಿತ್ತು ಈ ನಮ್ಮ ನಾಡು.
> ಈಗ ನಾಚಿಕೆಗೇಡು ! ಯಾರಿಗೂ ಬೇಡ ಈ ನಮ್ಮ ನಾಯಿಪಾಡು !

ನೋಹರಿಯು ಹೆಜ್ಜೆ ಭೂಮಿಯ ಮೇಲಿರಲಿಲ್ಲ. ಅವಳಿಗೆ ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಹೋಗುತ್ತಿದ್ದೇನೆಯೋ ಎಂದನಿಸುತ್ತಿತ್ತು.

# 22 ಸುಜಾನ ಭಗತ್

ಸರಳ ಸ್ವಭಾವದ ರೈತಜನ ಹಣ ಕೈಗೆ ಬಂದೊಡನೆಯೇ ಧರ್ಮ ಕೀರ್ತಿಗಳ ಕಡೆ ತಿರುಗುತ್ತಾರೆ. 'ದೇವತೆ' ಗಳಂತೆ ಅವರು ತಮ್ಮ ಸ್ವಂತದ ಭೋಗವಿಲಾಸಗಳತ್ತ ಮನಸ್ಸು ಓಡಿಸುವುದಿಲ್ಲ. ಸುಜಾನನ ಗದ್ದೆಯಲ್ಲಿ ಕಳೆದ ಕೆಲವು ವರ್ಷಗಳಿಂದ ಬಂಗಾರ ಮಳೆಗರೆಯುತ್ತಿತ್ತು. ಹಳ್ಳಿಯ ರೈತರೆಲ್ಲರೂ ಶ್ರಮಪಟ್ಟು ದುಡಿಯುತ್ತಿದ್ದರು, ನಿಜ. ಆದರೆ ಸುಜಾನನ ಚಂದ್ರಬಲ ಚೆನ್ನಾಗಿತ್ತು. ಬಂಜರುಭೂಮಿಯಲ್ಲಿ ಕಾಳು ಬಿತ್ತಿದ್ದರೂ ಅಷ್ಟೋ ಇಷ್ಟೋ ಬೆಳೆ ಬರುತ್ತಿತ್ತು. ಅವನು ಮೂರು ವರ್ಷಗಳ ಕಾಲ ಒಂದೇ ಸಮನೆ ಕಬ್ಬು ಹಾಕಿದ. ಬೆಲ್ಲದ ಬೆಲೆಯೂ ಏರಿತ್ತು. ಸುಮಾರು ಎರಡೂ ಎರಡೂವರೆ ಸಾವಿರ ರೂಪಾಯಿ ಕೈಗೆ ಬಂತು. ಸರಿ, ಮನಸ್ಸು ಧರ್ಮದ ಕಡೆಗೆ ಹರಿಯಿತು. ಸಾಧುಸಂತರಿಗೆ ಆದರ ಸತ್ಕಾರಗಳಾಗತೊಡಗಿದವು. ಮನೆಯ ಅಂಗಳದಲ್ಲಿ ಗೋಸಾಯಿಗಳ ಅಗ್ನಿಕುಂಡ ಉರಿಯತೊಡಗಿತು. ಕಂದಾಯ ಅಧಿಕಾರಿ ಊರಿಗೆ ಬಂದರೆ ಸುಜಾನ ಮಹತೋನ ಪಡಸಾಲೆಯಲ್ಲಿಯೇ ಬೀಡುಬಿಡುತ್ತಿದ್ದ. ಆ ವಿಭಾಗದ ಹೆಡ್‌ಕಾನ್‌ಸ್ಟೇಬಲ್, ಇನ್ಸ್‌ಪೆಕ್ಟರ್, ವಿದ್ಯಾ ಇಲಾಖೆಯ ಅಧಿಕಾರಿ-ಹೀಗೆ ಒಬ್ಬರಲ್ಲ ಒಬ್ಬರು ಆ ಪಡಸಾಲೆಯಲ್ಲಿ ಇದ್ದೇ ಇರುತ್ತಿದ್ದರು. ಮಹತೋನ ಸಂತೋಷಕ್ಕೆ ಪಾರವೇ ಇಲ್ಲ. ಧನ್ಯವಂತ ! ಅವನ ಮನೆಯಲ್ಲಿ ಈಗ ಇಷ್ಟೆಲ್ಲ ದೊಡ್ಡ ಅಧಿಕಾರಿಗಳು ಬಂದಿರುತ್ತಾರೆ. ಯಾವ ಅಧಿಕಾರಿಗಳ ಮುಂದೆ ಅವನಿಗೆ ಬಾಯಿ ತೆರೆಯುವುದು ಸಹ ಕಷ್ಟವಾಗುತ್ತಿತ್ತೋ ಈಗ ಅವರ ಬಾಯಿ 'ಮಹತೋ' 'ಮಹತೋ'* ಎಂದು ಅವನನ್ನು ಕರೆಯುವುದರಲ್ಲೇ ಕೂಗುತ್ತಿದೆ. ಸುಜಾನಾನ ಮನೆಯಲ್ಲಿ ಒಮ್ಮೊಮ್ಮೆ ಭಜನ-ಕೀರ್ತನೆಗಳೂ ನಡೆಯುತ್ತಿದ್ದವು. ಒಬ್ಬ ಸಾಧುವಂತೂ ಸಮಯ ಕಾದು ಹಳ್ಳಿಯಲ್ಲೇ ಬಂದು ತಳವೂರಿದ. ಗಾಂಜಾ ಅಫೀಮುಗಳು ಹೊಗೆಯಾಡತೊಡಗಿದವು. ಡೋಲು ಬಂತು, ತಾಳ ಬಂತು. ಕೀರ್ತನೆ ನಡೆಯತೊಡಗಿತು. ಇವೆಲ್ಲರೂ ಸುಜಾನನ ಪೌರುಷದ ಫಲ. ಮನೆಯಲ್ಲಿ ಸೇರುಗಟ್ಟಲೆ ಹಾಲು ಕರೆಯುತ್ತಿತ್ತು. ಆದರೆ ಸುಜಾನನ ಗಂಟಲಿಗೆ ಒಂದು ತೊಟ್ಟು

---

*ಹಳ್ಳಿಯ ಯಜಮಾನ.

ಬಿದ್ದರೆ ಇಟ್ಟ ಆಣೆ. ಅದರ ರುಚಿ ಕಾಣುತ್ತಿದ್ದವರೆಂದರೆ ಅಧಿಕಾರಿಗಳು, ಇಲ್ಲವೇ ಸಾಧುಸಂತರು. ಹಾಲು ತುಪ್ಪ ಕಟ್ಟಿಕೊಂಡು ಬಡ ರೈತ ಏನು ಮಾಡಬೇಕು! ಅವನಿಗೆ ರೊಟ್ಟಿ, ಸೊಪ್ಪಿನ ಪಲ್ಯವಿದ್ದರೆ ಆಯಿತು. ಸುಜಾನನ ವಿನಯಕ್ಕೆ ಈಗ ಕೊನೆಮೊದಲಿರಲಿಲ್ಲ. ಕೈಗೆ ಹಣ ಬಂದು ಇವನು ಗರ್ವಿಷ್ಠನಾದವನೆಂದು ಯಾರೂ ಅನ್ನದಿರಲೆಂದು ಅವನು ಅವರ ಮುಂದೆ ಸದಾ ತಲೆತಗ್ಗಿಸಿಕೊಂಡೇ ಇರುತ್ತಿದ್ದ. ಹಳ್ಳಿಯಲ್ಲಿ ಒಟ್ಟು ಇದ್ದುದೇ ಮೂರು ಬಾವಿ. ಎಷ್ಟೋ ಗದ್ದೆಗಳಿಗೆ ನೀರು ಮುಟ್ಟುತ್ತಲೇ ಇರಲಿಲ್ಲ. ಇದರಿಂದಾಗಿ ಬೆಳೆ ಹಾಳಾಗುತ್ತಿತ್ತು. ಸುಜಾನ ಇನ್ನೊಂದು ಬಾವಿ ತೋಡಿಸಿದ. ಬಾವಿಗೆ 'ಮದುವೆಯ ಸಂಸ್ಕಾರ'ವಾಯಿತು. ಯಜ್ಞ, ಬ್ರಹ್ಮಭೋಜನಗಳು ನಡೆದವು. ಬಾವಿಯಲ್ಲಿ ಮೊದಲ ಸಲ ಏತ ಎತ್ತಿದಾಗ ಸುಜಾನನಿಗೆ ನಾಲ್ಕೂ ಪುರುಷಾರ್ಥಗಳ ಪ್ರಾಪ್ತಿಯಾದಂತಾಯಿತು. ಹಳ್ಳಿಯಲ್ಲಿ ಬೇರೆ ಯಾರೂ ಮಾಡದಿದ್ದ ಕೆಲಸವನ್ನು ಅವನು ತನ್ನ ತಂದೆತಾತಂದಿರ ಪುಣ್ಯದ ಪ್ರಭಾವದಿಂದ ಮಾಡಿ ತೋರಿಸಿದ್ದ.

ಒಂದು ದಿನ ಗಯೆಗೆ ಹೊರಟಿದ ಕೆಲವು ಯಾತ್ರಿಕರು ಹಾವಳಿಗೆ ಬಂದರು. ಸುಜಾನನ ಮನೆಯಲ್ಲಿ ಅವರಿಗೆ ಊಟದ ಏರ್ಪಾಡಾಯಿತು. ಬಹಳ ದಿನದಿಂದ ಸುಜಾನನಿಗೆ ಗಯಾ ಯಾತ್ರೆ ಮಾಡುವ ಇಚ್ಛೆಯಿತ್ತು. ಆಗ ಅದಕ್ಕೆ ಒಳ್ಳೆಯ ಅವಕಾಶ ಸಿಕ್ಕಿದುದನ್ನು ನೋಡಿ ಅವನೂ ಯಾತ್ರೆಗೆ ಹೊರಡಲು ಸಿದ್ಧನಾದ.

ಹೆಂಡತಿ ಬುಲಾಕಿ ಹೇಳಿದಳು- "ಈಗ ಬೇಡ, ಬಿಡಿ. ಮುಂದಿನ ವರ್ಷ ಹೋಗೋಣಂತೆ."

ಸುಜಾನ ಗಂಭೀರನಾಗಿ ಹೇಳಿದ- "ಮುಂದಿನ ವರ್ಷ ಏನಾಗುತ್ತೋ ಏನೋ ಯಾರು ಬಲ್ಲರು? ಪುಣ್ಯಕಾರ್ಯದಲ್ಲಿ ಮೀನಮೇಷ ಎಣಿಸೋದು ಸರಿಯಲ್ಲ. ಈ ಜೀವದ್ದೇನು ಭರವಸೆ?"

ಬುಲಾಕಿ- "ಕೈ ಬರಿದಾಗಿಬಿಡುತ್ತೆ."

ಸುಜಾನ- "ದೇವರು ಮನಸ್ಸು ಮಾಡಿದರೆ ಮತ್ತೆ ಕೈ ತುಂಬುತ್ತೆ. ಕೊಡೋ ದೇವರಿಗೆ ಏನು ಕಡಿಮೆಯಾಗಿದೆ."

ಬುಲಾಕಿ ಇದಕ್ಕೆ ಏನು ಉತ್ತರ ಕೊಟ್ಟಾಳು! ಒಳ್ಳೆಯ ಕೆಲಸಕ್ಕೆ ಅಡ್ಡಿ ಬಂದು ಯಾಕೆ ದುರ್ಗತಿ ತಂದುಕೊಳ್ಳಬೇಕು. ಮಾರನೆಯ ಬೆಳಗ್ಗೆ ಗಂಡಹೆಂಡಿರು ಗಯಾಯಾತ್ರೆಗೆ ಹೊರಟರು. ಅಲ್ಲಿಂದ ಬಂದಮೇಲೆ ಯಜ್ಞ, ಬ್ರಹ್ಮಭೋಜನಗಳ ಏರ್ಪಾಡಾಯಿತು. ಕುಲಸ್ಥರೆಲ್ಲರಿಗೂ ಹೇಳಿಕೆ ಹೋಯಿತು. ಹನ್ನೊಂದು ಹಳ್ಳಿಗಳಲ್ಲಿ ಆಮಂತ್ರಣದ ಅಡಿಕೆ ಹಂಚಿದ್ದಾಯಿತು. ಎಲ್ಲರೂ 'ವಹವ್ವಾ' ಅನ್ನುವಷ್ಟು ವೈಭವದಿಂದ ಸಮಾರಂಭ ನಡೆಯಿತು. ದೇವರು ದುಡ್ಡು ಕೊಡುವಾಗ ಜೊತೆಗೆ ಇಂಥ ಮನಸ್ಸನ್ನೂ ಕೊಡಬೇಕು ಎಂದು ಎಲ್ಲರೂ ಹೊಗಳತೊಡಗಿದರು. ಮನುಷ್ಯನಿಗೆ ಜಂಬ ಅನ್ನೋದು ಲವಲೇಶವೂ ಇಲ್ಲ. ಸ್ವತಃ ತಾನೇ ಎಲೆ ಎತ್ತಿಕೊಂಡು ಓಡಾಡ್ತಿದ್ದ. ಕುಲದ ಹೆಸರು ಮೆರೆಸಿದ. ಆದರೆ ಇಂಥ ಮಕ್ಕಳಾಗಬೇಕು. ಅಪ್ಪ ಸತ್ತಾಗ ಮನೇಲಿ ಕೂಳಿಗೆ ದಿಕ್ಕಿರಲಿಲ್ಲ. ಈಗ ಲಕ್ಷ್ಮಿ ಮಂಡಿ ಮುರೀತೋ

ಅನ್ನೋಹಾಗೆ ಇವನ ಮನೇಲಿ ಬಂದು ತಳ ಊರಿದಾಳೆ.

"ಎಲ್ಲೋ ಹೂತಿಟ್ಟ ಹಣ ಸಿಕ್ಕಿರಬೇಕು" -ಆಗದವನೊಬ್ಬ ಹೇಳಿದ.

ನಾಲ್ಕೂ ಕಡೆಯಿಂದ ಅವನ ಮೇಲೆ ಬೈಗಳ ಮಳೆಗರೆಯಿತು- "ಹೌದೌದು, ನಿಮ್ಮಪ್ಪ, ನಿಮ್ಮಜ್ಜ ಗಂಟುಬಿಟ್ಟು ಹೋಗಿದ್ದರಲ್ಲ, ಅದೇ ಅವನ ಕೈಗೆ ಸಿಕ್ಕಿದ್ದು! ಅಣ್ಣಯ್ಯಾ, ಇದು ಧರ್ಮದ ಸಂಪಾದನೆ. ನೀನೂ ಎದೆ ಮುರಿಕೊಂಡು ಕೆಲಸಮಾಡ್ತಿ. ಆದರೆ ಈ ತರಹ ಕಬ್ಬು ಯಾಕೆ ಬೆಳೆಯೋಲ್ಲ, ಫಸಲು ಯಾಕೆ ಬರೋಲ್ಲ? ದೇವರು ಮನುಷ್ಯನ ಹೃದಯ ನೋಡ್ತಾನೆ. ಯಾರು ಖರ್ಚು ಮಾಡೋಕ್ಕೆ ತಯಾರಾಗಿದಾರೋ ಅವರಿಗೆ ಹಣ ಕೊಡ್ತಾನೆ".

## 2

ಸುಜಾನ 'ಮಹತೋ' ಸುಜಾನ 'ಭಗತ'*ನಾದ. ಭಗತರ ಆಚಾರವಿಚಾರಗಳೇ ಬೇರೆ ಬಗೆಯಾಗಿರುತ್ತವೆ. ಅವರು ಸ್ನಾನ ಮಾಡದೆ ಏನನ್ನೂ ತಿನ್ನುವುದಿಲ್ಲ. ಹೊಳೆಯಿಂದ ದೂರವಿದ್ದು, ದಿನವೂ ಸ್ನಾನ ಮಾಡಿ ಮಧ್ಯಾಹ್ನದ ಹೊತ್ತಿಗೆ ಮನೆಗೆ ಹಿಂದಿರುಗಲಾಗದಿದ್ದರೆ ಹಬ್ಬಹರಿದಿನಗಳಲ್ಲಾದರೂ ಅವರು ತಪ್ಪದೇ ಹೊಳೆಯ ಸ್ನಾನ ಮಾಡಬೇಕು. ಅವರ ಮನೆಗಳಲ್ಲಿ ಭಜನೆ ಕೀರ್ತನೆ ಆಗಿಯೇ ತೀರಬೇಕು. ಪೂಜೆ ಅರ್ಚನೆಗಳು ಅವರಿಗೆ ಅನಿವಾರ್ಯ. ಊಟ ತಿಂಡಿಗಳ ವಿಷಯಗಳಲ್ಲಿಯೂ ಅವರು ಬಹಳ ನೇಮದಿಂದಿರಬೇಕಾಗುತ್ತದೆ. ಎಲ್ಲಕ್ಕಿಂತ ಮುಖ್ಯವಾದುದೆಂದರೆ ಅವರು ಸುಳ್ಳನ್ನು ತ್ಯಜಿಸಬೇಕು. ಭಗತರು ಸುಳ್ಳು ಹೇಳುವಂತಿಲ್ಲ. ಸಾಧಾರಣ ಜನಕ್ಕೆ ಸುಳ್ಳಿಗೆ ಒಂದು ಶಿಕ್ಷೆಯಾದರೆ ಭಗತರಿಗೆ ಲಕ್ಷಶಿಕ್ಷೆಗಿಂದ ಕಡಿಮೆ ಸಿಗುವುದಿಲ್ಲ. ಅಜ್ಞಾನದ ಅವಸ್ಥೆಯಲ್ಲಿ ಎಷ್ಟೋ ಅಪರಾಧಗಳು ಕ್ಷಮ್ಯವೆನಿಸಿಕೊಳ್ಳುತ್ತವೆ. ಭಗತರಿಗೆ ಕ್ಷಮೆಯೂ ಇಲ್ಲ; ಪ್ರಾಯಶ್ಚಿತ್ತವೂ ಇಲ್ಲ. ಇದ್ದರೆ ಸಹ ಅವು ಬಹು ಕಠಿಣವಾದವು. ಈಗ ಸುಜಾನನಿಗೂ ಭಗತರ ನೇಮಗಳನ್ನೇ ಪಾಲಿಸಬೇಕಾಯಿತು. ಇದುವರೆಗೆ ಅವನ ಬದುಕು ಕೂಲಿಯ ಬದುಕಾಗಿತ್ತು. ಆ ಬದುಕಿನ ಯಾವ ಆದರ್ಶಗಳಾಗಲೀ ನೇಮಗಳಾಗಲೀ ಅವನ ಮುಂದಿರಲಿಲ್ಲ. ಈಗ ಅವನ ಬದುಕಿನಲ್ಲಿ ವಿಚಾರದ ಉದಯವಾಯಿತು; ಅವರ ದಾರಿ ಮುಳ್ಳಿನಿಂದ ತುಂಬಿತ್ತು. ಹಿಂದೆ ಅವನ ಜೀವನದ ಒಂದೇ ಲಕ್ಷ್ಯವೆಂದರೆ ಸ್ವಾರ್ಥ ಸೇವೆಯಾಗಿತ್ತು. ಅವನು ಯಾವ ಪರಿಸ್ಥಿತಿಯನ್ನು ತೂಗಬೇಕಾದರೂ ಅದೇ ತಕ್ಕಡಿಯಿಂದಲೇ. ಈಗ ಅವನು ಅವುಗಳನ್ನು ಔಚಿತ್ಯದ ತಕ್ಕಡಿಯಲ್ಲಿ ತೂಗತೊಡಗಿದ. ಅರ್ಥಾತ್ ಅವನು ಜಡ ಜಗತ್ತನ್ನು ಬಿಟ್ಟು ಚೇತನದ ಜಗತ್ತನ್ನು ಪ್ರವೇಶಿಸಿದನೆಂದು ಅನ್ನಬಹುದು. ಅವನು ಕೊಂಚ ಲೇವಾದೇವಿ ಇಟ್ಟುಕೊಂಡಿದ್ದ. ಆದರೆ ಈಗ ಬಡ್ಡಿ ತೆಗೆದುಕೊಳ್ಳುವುದರಿಂದ ಅವನಿಗೆ ಆತ್ಮಗ್ಲಾನಿಯಾದಂತಾಯಿತು. ಹಾಲು ಕರೆಯುವ ಹೊತ್ತಿನಲ್ಲಿ ಅವನಿಗೆ ಕರುವಿನ ನೆನಪಾಗುತ್ತಿತ್ತು - ಕರುವಿಗೆ ಹಾಲಿಲ್ಲದೆ ಹೋಗಿ ಅದರ ರೋಮರೋಮವೂ

* 'ಭಕ್ತ' ಪದದ ತದ್ಭವ.

ದುಃಖಿಸುವಂತಾಗಬಾರದು ಎಂದು ಯೋಚಿಸುತ್ತಿದ್ದ. ಅವನು ಹಳ್ಳಿಯ ಮುಖಂಡ. ಎಷ್ಟೋ ಮೊಕದ್ದಮೆಗಳಲ್ಲಿ ಸುಳ್ಳು ಸಾಕ್ಷ್ಯ ಹೊಂದಿಸಿದ್ದ; ಎಷ್ಟೋ ಮಂದಿಯಿಂದ ತಪ್ಪು ದಂಡ ಪಡೆದು ವ್ಯವಹಾರವನ್ನು ಅಲ್ಲಿಗೇ ಮುಗಿಸಿದ್ದ. ಈಗ ಅಂತಹದನ್ನು ಕಂಡರೆ ಅಸಹ್ಯ ಹುಟ್ಟುತ್ತಿತ್ತು. ಸುಳ್ಳಿನ ಪ್ರಪಂಚದಿಂದ ಮೈಲಿ ದೂರ ಓಡುತ್ತಿದ್ದ. ಮೊದಲಾಗಿದ್ದರೆ ಕೂಲಿಗಳಿಂದ ಎಷ್ಟು ಹೆಚ್ಚು ಸಾಧ್ಯವೋ ಅಷ್ಟು ಕೆಲಸ ತೆಗೆದುಕೊಂಡು, ಎಷ್ಟು ಕಡಿಮೆಯಾದರೆ ಅಷ್ಟು ಮಜೂರಿ ಕೊಡುವ ಮನಸ್ಸಾಗುತ್ತಿತ್ತು. ಈಗ ಅವನಿಗೆ ಕೆಲಸಕ್ಕಿಂತ ಹೆಚ್ಚಾಗಿ ಕೂಲಿಗಳ ಮಜೂರಿಯದೇ ಚಿಂತೆ-ಪಾಪ, ಮಜೂರಿಗಾಗಿ ಆ ಬಡಪಾಯಿಗಳ ರೋಮರೋಮವೂ ದುಃಖಿಸಬಾರದು. ಅವನು ಮಾತುಮಾತಿಗೆ 'ಯಾರ ರೋಮರೋಮವೂ ದುಃಖಿಸಬಾರದು' ಅನ್ನುತ್ತಿದ್ದ. ಅವನ ಇಬ್ಬರು ಮಕ್ಕಳು ಅವನನ್ನು ಸದಾ ಆ ಮಾತಿಗೆ ಹಾಸ್ಯ ಮಾಡುತ್ತಿದ್ದರು. ಬುಲಾಕಿ ಸಹ ಅವನೊಬ್ಬ ಪಕ್ಕಾ ಭಗತನೆಂಬಂತೆ, ಮನೆಯ ಹಿತಾಹಿತಗಳ ವಿಷಯದಲ್ಲಿ ಅವನಿಂದ ಯಾವ ಪ್ರಯೋಜನವೂ ಇಲ್ಲವೆನ್ನುವಂತೆ ಕಾಣುತ್ತಿದ್ದಳು. ಚೇತನದ ಜಗತ್ತಿಗೆ ಬಂದು ಸುಜಾನ ಪಕ್ಕಾ ಭಗತನಾಗಿಬಿಟ್ಟ.

ಕೊಂಚಕೊಂಚವಾಗಿ ಸುಜಾನನ ಕೈಯಿಂದ ಅಧಿಕಾರ ಕಳೆದುಹೋಗುತ್ತ ಬಂದಿತು. ಯಾವ ಗದ್ದೆಯಲ್ಲಿ ಏನು ಬಿತ್ತಬೇಕು, ಯಾರಿಗೆ ಏನು ಕೊಡಬೇಕು, ಯಾರಿಂದ ಏನು ಪಡೆಯಬೇಕು, ಯಾವ ಸಾಮಾನನ್ನು ಯಾವ ಬೆಲೆಗೆ ಮಾರಬೇಕು ಎಂಬೆಲ್ಲ ಮಹತ್ವಪೂರ್ಣ ವಿಷಯಗಳಲ್ಲಿಯೂ ಅವರು ಭಗತನ ಸಲಹೆ ಕೇಳುತ್ತಿರಲಿಲ್ಲ. ಭಗತನ ಹತ್ತಿರ ಮನೆಯವರ್‍ಯಾರೂ ಹೋಗಿಬರುವುದು ಸಹ ಕಾಣುತ್ತಿರಲಿಲ್ಲ. ಮಕ್ಕಳಿಬ್ಬರೂ ಅಥವಾ ಸ್ವಯಂ ಬುಲಾಕಿ ಸಹ ದೂರದಿಂದಲೇ ಕೆಲಸ ಮುಗಿಸುತ್ತಿದ್ದರು. ಇಡೀ ಹಳ್ಳಿಯಲ್ಲಿ ಸುಜಾನನ ಮರ್ಯಾದೆ ಹೆಚ್ಚುತ್ತ ಹೋದರೆ ಮನೆಯಲ್ಲಿ ಮಾತ್ರ ಅದು ಇಳಿಯುತ್ತ ಹೋಯಿತು. ಮಕ್ಕಳು ಈಗ ಅವನನ್ನು ತುಂಬ ಆದರಿಸುತ್ತಿದ್ದರು. ಅವನು ಕೈಯಿಂದ ಮಂಚ ಎತ್ತುವುದನ್ನು ನೋಡಿದಾಗ ತಾವೇ ಮುಂಚೆ ನುಗ್ಗಿ ಅದನ್ನು ಎತ್ತಿ ತರುತ್ತಿದ್ದರು. ಅವನು ಸ್ವತಃ ಚಿಲುಮೆ ತುಂಬಿಕೊಳ್ಳಲು ಬಿಡುತ್ತಿರಲಿಲ್ಲ. ಅವನು ತನ್ನ ಪಂಚೆ ಒಗೆದುಕೊಳ್ಳಹೋದರೆ ಬೇಡವೆನ್ನುತ್ತಿದ್ದರು. ಆದರೆ ಅಧಿಕಾರ ಮಾತ್ರ ಅವನ ಕೈಯಲ್ಲಿರಲಿಲ್ಲ. ಅವನು ಈಗ ಮನೆಯ ಯಜಮಾನನಾಗಿರಲಿಲ್ಲ; ಗುಡಿಯ ದೇವರಾಗಿದ್ದ.

## 3

ಒಂದು ದಿನ ಬುಲಾಕಿ ಒರಳಲ್ಲಿ ಬೇಳೆ ಕುಟ್ಟುತ್ತಿದ್ದಳು. ಭಿಕ್ಷುಕನೊಬ್ಬ ಬಾಗಿಲ ಬಳಿ ಬಂದು ಅರಚತೊಡಗಿದ. ಬೇಳೆ ಕುಟ್ಟಿ ಮುಗಿಸಿ ಅವನಿಗೆ ಭಿಕ್ಷೆ ಹಾಕುವುದೆಂದು ಅವಳು ಯೋಚಿಸಿದಳು.

ಅಷ್ಟರಲ್ಲಿ ಹಿರಿಯ ಮಗ ಭೋಲಾ ಬಂದು ಹೇಳಿದ- "ಬಾಗಿಲಲ್ಲಿ ಯಾವನೋ ಸಾಧು ಕೊರಳು ಹರಕೊತಿದಾನೆ ಕಣವ್ವಾ. ಏನಾದರೂ ಕೊಟ್ಟು ಕಳಿಸು. ಇಲ್ಲವಾದರೆ ಅವನ ರೋಮರೋಮವೂ ದುಃಖಿಸುತ್ತೆ!"

ಬುಲಾಕಿ ಉದಾಸೀನದಿಂದ ಉತ್ತರ ಕೊಟ್ಟಳು- "ಏನು ಭಗತರ ಕಾಲಿಗೆ ಮದರಂಗಿ ಬಳಿದಿದೆಯೆ, ಅವರೇ ಹೋಗಿ ಭಿಕ್ಷೆ ಹಾಕಬಾರದು ಅನ್ನೋಕ್ಕೆ? ನನಗೇನು ನಾಲ್ಕು ಕೈಯಿದೆಯೆ ? ಇಡೀ ದಿನ ಒಂದರ ಮೇಲೊಂದು ಕೆಲಸ ಸಾಲಾಗಿ ಕೂತಿರುತ್ತೆ. ಯಾರ ಯಾರ ಸುಖಾನ ಅಂತ ನಾನು ನೋಡಲಿ ಹೇಳು."

"ಸರ್ವನಾಶ ಮಾಡೋಕ್ಕೆ ಹೊರಟಿದಾರೆ. ಈಗ ತಾನೇ ಮಹಂಗೂ ತನ್ನ ಪಾಲಿನ ಗುತ್ತಿಗೆ ಕೊಡೋಕ್ಕೆ ಬಂದಿದ್ದ. ಲೆಕ್ಕದ ಪ್ರಕಾರ ಏಳು ಮಣ ಕೊಡಬೇಕು. ಅಳೆದರೆ ಆರೂಮುಕ್ಕಾಲು ಮಣವಾಯಿತು. ಇನ್ನು ಹತ್ತು ಸೇರು ತಾ ಅಂತ ನಾನಂದೆ. ಅದಕ್ಕೆ ಅಪ್ಪ 'ಅದನ್ನ ತರೋಕ್ಕೆ ಈಗ ಅಷ್ಟು ದೂರ ಎಲ್ಲಿ ಹೋಗ್ತಾನೆ, ರಸೀತಿ ಬರೆದು ಕೊಡು. ಇಲ್ಲದೇ ಹೋದರೆ ಅವನ ರೋಮರೋಮವೂ ದುಃಖಿಸುತ್ತೆ' ಅಂದರು. ನಾನು ಪೂರ್ತಿ ರಸೀತಿ ಬರಕೊಡಲಿಲ್ಲ. ಹತ್ತು ಸೇರು ಬಾಕಿ ಇದೆ ಅಂತ ಬರೆದೆ."

"ಒಳ್ಳೇದು ಮಾಡಿದೆ. ಒದರಲಿ ಬಿಡು. ಒಂದು ನಾಲ್ಕು ಸಲ ಅವಮಾನವಾದರೆ ಅವರೇ ಮಾತಾಡೋದು ನಿಲ್ಲಿಸ್ತಾರೆ."

"ದಿನಾಲೂ ಒಂದಲ್ಲ ಒಂದು ತಪ್ಪು ತೆಗೀತಾ ಇರ್ತಾರೆ. ಸಾವಿರ ಸಲ ಹೇಳಿದೀನಿ, ಮನೆವಾರ್ತೇಲಿ ಬಾಯಿಹಾಕಿಕೊಂಡು ಬರಬೇಡಿ ಅಂತ. ಆದರೆ ಅವರಿಗೆ ಸುಮ್ಮನಿರೋಕ್ಕೆ ಆಗೋದೇ ಇಲ್ಲ."

"ಇವರು ಹೀಗಾಗ್ತಾರೆ ಅಂತ ಗೊತ್ತಿದ್ದಿದ್ದರೆ ನಾನು ಗುರುಮಂತ್ರ ತೊಗೊಳ್ಳೋಕೆ ಬಿಡ್ತಿರಲಿಲ್ಲ."

"ಏನು ಭಗತರಾದದ್ದು ? ಇಹಪರ ಎರಡಕ್ಕೂ ಇಲ್ಲದ ಹಾಗೆ ಆದರು. ಇಡೀ ದಿನ ಪೂಜೆ ಜಪದಲ್ಲೇ ಕಳೀತಾರೆ. ಕೈಯಲ್ಲಿ ಹರಿಯೋಲ್ಲವೇನೋ ಅನ್ನೋಕ್ಕೆ ಇನ್ನೂ ಅಷ್ಟು ಮುದುಕರಾಗಿಲ್ಲ."

ಬುಲಾಕಿ ಇದನ್ನೊಪ್ಪಲಿಲ್ಲ- "ಭೋಲಾ, ಇದು ಅನ್ಯಾಯದ ಮಾತು. ಹಾರೆ ಗುದ್ದಲಿ ಹಿಡಿದು ಈಗ ಅವರಿಗೆ ಕೆಲಸ ಮಾಡೋಕ್ಕಾಗೋಲ್ಲ, ನಿಜ. ಆದರೆ ಸಣ್ಣದೋ ಪುಟ್ಟದೋ ಒಂದಲ್ಲ ಒಂದು ಮಾಡ್ತಾನೇ ಇರ್ತಾರೆ. ಎತ್ತುಗಳಿಗೆ ಮೇವು-ನೀರು ಕೊಡ್ತಾರೆ, ಹಾಲು ಕರೀತಾರೆ. ಕೈಯಲ್ಲಿ ಇನ್ನೂ ಏನು ಹರಿಯುತ್ತೋ ಅದು ಮಾಡ್ತಾರೆ"

ಭಿಕ್ಷುಕನಿನ್ನೂ ನಿಂತು ಅರಚುತ್ತಲೇ ಇದ್ದ. ಮನೆಯೊಳಗಿನಿಂದ ಯಾರೂ ಏನನ್ನೂ ತಾರದಿದ್ದುದನ್ನು ನೋಡಿ ಸುಜಾನ ಎದ್ದು ಒಳಹೋಗಿ ಬಿರುಸಾಗಿ ಹೇಳಿದ.- "ಬಾಗಿಲಲ್ಲಿ ಒಂದು ಗಂಟೆಯಿಂದ ನಿಂತುಕೊಂಡು ಭಿಕ್ಷೆ ಬೇಡ್ತಿದ್ದರೂ ನಿಮಗೆ ಕೇಳಿಸೋಲ್ಲವೇನು ? ನಮ್ಮ ಕೆಲಸ ಮಾಡೋದು ಇಡೀ ದಿನ ಇದ್ದೇ ಇರುತ್ತೆ, ಒಂದು ಕ್ಷಣ ದೇವರ ಕೆಲಸ ಮಾಡೋದೂ ಇಟ್ಟುಕೊಳ್ಳಿ."

ಬುಲಾಕಿ- "ದೇವರ ಕೆಲಸ ಮಾಡೋಕ್ಕೆ ನೀವು ಇದ್ದೇ ಇದೀರಲ್ಲ. ಮನೆಗೆಲಸಾನ

ಏನು ದೇವರು ಬಂದು ಮಾಡಿಕೊಡ್ತಾನೆಯೆ ?"

ಸುಜಾನ- "ಹಿಟ್ಟೆಲ್ಲಿದೆ ಹೇಳು, ನಾನೇ ತೊಗೊಂಡು ಹೋಗಿ ಹಾಕಿ ಬರ್ತೀನಿ. ನೀನು ರಾಣಿ ಹಾಗೆ ಕೂತಿರೋವಂತೆ."

ಬುಲಾಕಿ- "ಹಿಟ್ಟನ್ನ ನಾನು ಕಷ್ಟಪಟ್ಟು ಬೀಸಿದೀನಿ. ಕಾಳು ಕೊಡಿ. ಈ ತಲೆ ಬೋಳಿಸಿಕೊಂಡು ಬಂದೋರಿಗೆ ಕೊಡೋಕ್ಕೆ ಅಂತ ನಾನು ಅರ್ಧ ರಾತ್ರೀಲೆದ್ದು ಕಾಳು ಬೀಸಲಾರೆ."

ಸುಜಾನ ಉಗ್ರಾಣಕ್ಕೆ ಹೋಗಿ ಒಂದು ಚಿಕ್ಕ ಬುಟ್ಟಿಯಲ್ಲಿ ಜೋಳ ತುಂಬಿಕೊಂಡು ಬಂದ. ಅದು ಸೇರಿಗೇನೂ ಕಡಿಮೆಯಿರಲಿಲ್ಲ. ಸುಜಾನ ಬೇಕೆಂದೇ ಬುಲಾಕಿ ಭೋಲರನ್ನು ಚುಡಾಯಿಸಲೆಂದು ಭಿಕ್ಷೆಯ ನೇಮವನ್ನು ಮುರಿದಿದ್ದ. ಮೇಲೆ ಬುಟ್ಟಿಯಲ್ಲಿ ತುಂಬ ಜೋಳವಿಲ್ಲವೆಂದು ತೋರಿಸಲು ಅದನ್ನು ಎರಡೇ ಬೆರಳಿನಲ್ಲಿ ಹಿಡಿದುಕೊಂಡಿದ್ದ. ಬೆರಳಿನಿಂದ ಆ ಭಾರ ತಡೆಯಲಾಗುತ್ತಿರಲಿಲ್ಲ. ಕೈ ನಡುಗುತ್ತಿತ್ತು, ಒಂದು ಕ್ಷಣ ಹೆಚ್ಚು ಕೈಯಲ್ಲಿದ್ದಿದ್ದರೂ ಬುಟ್ಟಿ ಕೆಳಗೆ ಬೀಳುವ ಸಂಭವವಿತ್ತು. ಆದ್ದರಿಂದ ಅವನು ಬೇಗ ಬೇಗ ಕಾಲು ಹಾಕುತ್ತಿದ್ದ. ಅದನ್ನು ನೋಡಿದ ಭೋಲಾ ಇದ್ದಕ್ಕಿದ್ದಂತೆ ಎದ್ದು ಅವನ ಕೈಯಿಂದ ಬುಟ್ಟಿಯನ್ನು ಕಿತ್ತುಕೊಂಡು ಹುಬ್ಬುಗಂಟಿಕ್ಕಿ ಹೇಳಿದ- "ಇದೇನು ಬಿಟ್ಟಿ ಬಂದಿಲ್ಲ. ಲೂಟಿ ಹೊಡಕೊಂಡು ಹೋಗೋಕ್ಕೆ. ಎದೆ ಮುರಕೊಂಡು ಕೆಲಸ ಮಾಡ್ತೀವಿ. ಆಗಲೇ ಮನೆ ಕಾಳು ಕಾಣೋದು."

ಸುಜಾನ ನಾಚಿಕೆಯಿಂದ ಹೇಳಿದ- "ನಾನು ಸಹ ಸುಮ್ಮನೆ ಏನು ಕೂತಿರೋಲ್ಲವಲ್ಲ."

"ಭಿಕ್ಷೇನ ಭಿಕ್ಷೆ ಹಾಗೆ ಕೊಡಬೇಕು. ಭಿಕ್ಷೆ ಕೊಡೋದು ಅಂದರೆ ಕೊಳ್ಳೆ ಹೊಡಸಿಕೊಳ್ಳೋದಲ್ಲ. ಮನೆ ಮರ್ಯಾದೆ ಉಳಕೊಂಡು ಬರಲಿ ಅಂತ ನಾವು ಒಪ್ಪೊತ್ತು ಉಂಡು ಕಾಲ ಕಳೀತೀವಿ. ನಿಮಗೆ ಕೊಳ್ಳೆ ಹೊಡಸಿಕೊಳ್ಳೋದು ಅಂದರೆ ಸಂತೋಷ. ಮನೇಲಿ ಏನಿದೆ, ಏನಿಲ್ಲ ಅಂತ ನಿಮಗೇನು ಗೊತ್ತು ?"

ಸುಜಾನ ಇದಕ್ಕೆ ಏನೂ ಉತ್ತರ ಕೊಡಲಿಲ್ಲ. ಹೊರಬಂದು ಭಿಕ್ಷುಕನಿಗೆ "ಬಾಬಾ, ಮುಂದಕ್ಕೆ ಹೋಗಿಬಿಟ್ಟು ಬಾಪ್ಪ. ಈಗ ಯಾರಿಗೂ ಕೈ ಬಿಡುವಿಲ್ಲ" ಎಂದು ಹೇಳಿ, ಹೋಗಿ ಮರದ ಕೆಳಗೆ ಕೂತುಕೊಂಡು ಯೋಚನೆ ಮಾಡತೊಡಗಿದ. ನನ್ನ ಮನೆಯಲ್ಲಿ ನನಗೇ ಈ ಅನಾದರವೆ! ನಾನೇನೂ ಅಂಗಹೀನನಲ್ಲ; ಕೈಕಾಲು ಸೋತಿಲ್ಲ; ಒಂದಲ್ಲ ಒಂದು ಮನೆಗೆಲಸ ಮಾಡುತ್ತಲೇ ಇರುತ್ತೇನೆ. ಆದರೂ ಈ ಅನಾದರವೆ! ಈ ಮನೆ ಕಟ್ಟಿದವನು ನಾನು; ಈ ಎಲ್ಲ ಮಹಿಮೆ ನನ್ನ ಶ್ರಮದ ಫಲ. ಆದರೂ ಈಗ ಈ ಮನೆಯಲ್ಲಿ ನನ್ನದೇನೂ ಅಧಿಕಾರ ಉಳಿಯಲಿಲ್ಲವಲ್ಲ. ಈಗ ನಾನು ಮನೆಬಾಗಿಲ ನಾಯಿ. ಬಿದ್ದುಕೊಂಡಿರುವುದು, ಮನೆಯಾಕೆ ಏನು ಒಣರೊಟ್ಟಿ ಕೊಡುತ್ತಾಳೋ ಅದನ್ನ ತಿಂದು ಹೊಟ್ಟೆ ತುಂಬಿಕೊಳ್ಳುವುದು. ಥೂ! ಇಂಥ ಬಾಳಿಗೆ ಧಿಕ್ಕಾರ! ಸುಜಾನ ಹೀಗೆ ಮನೆಯಲ್ಲಿರುವುದು ಸಾಧ್ಯವಿಲ್ಲ. ಸಂಜೆಯಾಗಿತ್ತು. ಭೋಲನ ತಮ್ಮ ಶಂಕರ ಚಿಪ್ಪಿನ ಹುಕ್ಕಾ ತುಂಬಿ ತಂದು ಕೊಟ್ಟ, ಸುಜಾನ ಅದನ್ನ ಸೇದದೆ ಹಾಗೆಯೇ ಗೋಡೆಗೆ ಒರಗಿಸಿಟ್ಟ. ಅದರಲ್ಲಿನ ತಂಬಾಕು

ಮೆಲ್ಲಮೆಲ್ಲಗೆ ಉರಿದುಹೋಯಿತು. ಸ್ವಲ್ಪ ಹೊತ್ತಿನ ಮೇಲೆ ಭೋಲಾ ಬಂದು ಬಾಗಿಲ ಹತ್ತಿರ ಮಂಚ ಹಾಕಿದ. ಮರದ ಕೆಳಗೆ ಕುಳಿತಿದ್ದ ಸುಜಾನ ಜಾಗ ಬಿಟ್ಟೇಳಲಿಲ್ಲ.

ಇನ್ನೂ ಕೊಂಚ ಹೊತ್ತು ಸರಿಯಿತು. ಊಟ ಸಿದ್ಧವಾಯಿತು. ಭೋಲಾ ಊಟಕ್ಕೆ ಕರೆಯಲು ಬಂದ. ಸುಜಾನ ಹೊಟ್ಟೆ ಹಸಿವಿಲ್ಲವೆಂದು ಹೇಳಿಬಿಟ್ಟ. ಎಷ್ಟೇ ಪುಸಲಾಯಿಸಿದರೂ ಏಳಲಿಲ್ಲ. ಆಗ ಬುಲಾಕಿ ಬಂದು ಕೇಳಿದಳು- "ಊಟ ಯಾಕೆ ಬೇಡ ? ಮೈ ಚೆನ್ನಾಗಿದೆ ತಾನೆ ?"

ಸುಜಾನನ ಕೋಪ ಮಕ್ಕಳಿಗಿಂತ ಹೆಚ್ಚಾಗಿ ಬುಲಾಕಿಯ ಮೇಲಿತ್ತು. ಇವಳೂ ಮಕ್ಕಳ ಜೊತೆ ಶರೀಕಾಗಿದ್ದಾಳೆ. ಭೋಲಾ ತನ್ನ ಕೈಯಿಂದ ಕಾಳು ಕಿತ್ತುಕೊಂಡಾಗ ಇವಳು ನೋಡುತ್ತಲೇ ಕೂತಿದ್ದಳಲ್ಲವೆ ? ಕೊಟ್ಟರೆ ಕೊಡಲಿ ಬಿಡು ಅಂತ ಅವಳ ಬಾಯಿಂದ ಬರಲಿಲ್ಲ. ನಾನು ಎಷ್ಟು ಕಷ್ಟದಿಂದ ಈ ಸಂಸಾರ ಕಟ್ಟಿದೆನೆಂದು ಹುಡುಗರಂತೂ ಕಾಣರು. ಆದರೆ ಇವಳು ಕಾಣಳೆ ? ಹಗಲು ರಾತ್ರಿಯೆನ್ನದೇ ದುಡಿದಿದ್ದೀನಿ. ಭಾದ್ರಪದದ ಕತ್ತಲ ರಾತ್ರಿಯಲ್ಲಿ ಜೋಪಡಿ ಹಾಕಿಕೊಂಡು ಜೋಳದ ಹೊಲ ಕಾದಿದ್ದೀನಿ. ಜ್ಯೇಷ್ಠ ವೈಶಾಖಗಳಲ್ಲಿ ನಡುಹಗಲು ಉಸಿರೂ ಆಡದೆ ಕೆಲಸ ಮಾಡಿದೀನಿ. ಈಗ ನನ್ನ ಮನೇಲೀ ನನಗೊಂದು ಭಿಕ್ಷೆ ಕೊಡುವ ಅಧಿಕಾರವೂ ಇಲ್ಲವೆ ? ಅಷ್ಟೊಂದು ಭಿಕ್ಷೆ ಕೊಡಬಾರದಾದರೂ ಇವರು ಬಾಯಿ ಮುಚ್ಚಿಕೊಂಡು ಸುಮ್ಮನಿರಬೇಕಾಗಿತ್ತು - ನಾನು ಮನೆಗೆ ಬೆಂಕಿ ಒಟ್ಟಿದರೂ ಸರಿಯೇ ! ಕಾಯಿದೆಯ ಪ್ರಕಾರ ನನ್ನದೂ ಪಾಲಿದೆ. ನನ್ನ ಪಾಲನ್ನು ನಾನು ತಿನ್ನೋಲ್ಲ ! ಇನ್ನೊಬ್ಬರಿಗೆ ಕೊಡ್ತೀನಿ. ಅದರಲ್ಲಿ ಯಾರ ಅಪ್ಪನದೇನು ಹಕ್ಕಂತೆ ! ಈಗ ಪುಸಲಾಯಿಸಿಕೊಂಡು ಬರ್ತಾಳೆ. ಗಂಡನಿಂದ ಹೊಡೆತ ತಿನ್ನದ ಹೆಂಡತಿ ಅದು ಯಾವಳು ಈ ಹಳ್ಳೀಲಿದಾಳೆ ? ನಾನು ಇವಳನ್ನ ಯಾವಾಗಲೂ ಒಂದು ಹೂವಿನ ದಂಡೆಯಿಂದ ಸಹ ಮುಟ್ಟಿಲ್ಲ; ಎಂದೂ ದುರಗುಟ್ಟಿಕೊಂಡು ಸಹ ನೋಡಿಲ್ಲ. ಹಣಕಾಸಿನ ವ್ಯವಹಾರ, ಕೊಳ್ಳೋದು-ಕೊಡೋದು ಎಲ್ಲಾನೂ ಇವಳ ಕೈಗೇ ಬಿಟ್ಟಿದ್ದೆ. ಈಗ ಗಂಟುಮಾಡಿದಾಳೆ ಅಂತ ನನ್ನ ಮೇಲೆ ಗತ್ತು ತೋರಸ್ತಾಳೆ. ಈಗ ಇವಳಿಗೆ ಮಗ ಮೆಚ್ಚು; ನಾನು ದರೋಡೆಗಾರ, ಮೈಗಳ್ಳ, ಮನೆಹಾಳ, ಮೂರ್ಖ. ನಾನು ಇದಕ್ಕೆಲ್ಲಾ ಸೊಪ್ಪು ಹಾಕೋನಲ್ಲ. ಮಕ್ಕಳಾಗೋಕ್ಕೆ ಮುಂಚೆ ಇವಳು ಕಾಹಿಲೆ ಬಿದ್ದಿದ್ದಾಗ ಮಡಿಲಲ್ಲಿ ಎತ್ತಿಕೊಂಡು ವೈದ್ಯರ ಹತ್ತಿರ ಕರಕೊಂಡು ಹೋಗಿದ್ದೆ. ಇವತ್ತು ಅವರು ಮಕ್ಕಳು, ಇವಳು ತಾಯಿ. ನಾನು ಹೊರಗಿನವನು. ಮನೇಗೂ ನನಗೂ ಏನು ಸಂಬಂಧ.

ಸುಜಾನ ಹೇಳಿದ- "ಇನ್ನು ನಾನು ಉಂಡೂ ತಿಂದೂ ಏನು ಮಾಡಬೇಕಾಗಿದೆ. ನೇಗಿಲು ಕಟ್ಟಿ ಉಳೋಕ್ಕಾಗೋಲ್ಲ. ಗುದ್ದಲಿ ಪಿಕಾಶಿ ಹಿಡಿದು ಕೆಲಸ ಮಾಡೋಕಾಗೋಲ್ಲ. ನನಗೆ ಊಟ ಹಾಕಿ ಅನ್ನ ಯಾಕೆ ದಂಡಮಾಡ್ತಿ ? ಇಡು, ಮಕ್ಕಳೇ ಇನ್ನೊಂದು ಸಲ ಊಟ ಮಾಡಲಿ."

ಬುಲಾಕಿ- "ನೀವಂತೂ ಸ್ವಲ್ಪದಕ್ಕೆಲ್ಲಾ ಕೋಪಿಸಿಕೋತೀರಿ. ವಯಸ್ಸಾದ ಮೇಲೆ

ಮನುಷ್ಯರ ಬುದ್ಧಿ ಹತೋಟೀಲಿರೋಲ್ಲ ಅನ್ನೋ ಮಾತು ನಿಜ. ಅಷ್ಟೊಂದು ಭಿಕ್ಷೆ ಹಾಕಬೇಡಿ ಅಂತ ತಾನೇ ಅಂದದ್ದು. ಅಥವಾ ಇನ್ನೇನಾದರೂ ಹೇಳಿದನೋ.''

ಸುಜಾನ- ''ಪಾಪ! ಅಷ್ಟೇ ಅವನು ಹೇಳಿದ್ದು. ಮೇಲೆ ಅವನು ಒಂದೆರಡು ಏಟೂ ಕೊಟ್ಟಿದ್ದರೆ ನಿನಗೆ ಸಂತೋಷವಾಗ್ತಿತ್ತೇನೋ. ಯಾಕೆ, ಅದೇ ಆಸೆಯಾಗಿದ್ದರೆ ತೀರಿಸಿಕೊ. ಭೋಲಾ ಊಟ ಮಾಡಿ ಮುಗಿಸಿರಬೇಕು. ಕರಿ ಅವನನ್ನ. ಅವನನ್ನ ಯಾಕೆ ಕರೀಬೇಕು. ನೀನೇ ಒಂದೆರಡು ಬಿಗಿ. ಅದೊಂದು ಬಾಕಿಯಿದೆ. ಅದನ್ನೂ ತೀರಿಸಿಕೊ.''

ಬುಲಾಕಿ- ''ಅಲ್ಲದೆ ಇನ್ನೇನು ? ಹೆಂಗಸು ಇರಬೇಕಾದ್ದೇ ಹಾಗೆ. ನನ್ನಂಥ ಸರಳ ಸ್ವಭಾವದ ಹೆಂಡತಿ ಸಿಕ್ಕಿರೋದು ನಿಮ್ಮ ಪುಣ್ಯ. ಹೇಗೇ ಅಂದರೆ ಹಾಗೆ ಕುಣಿಸಬಹುದು. ಸರಿಯಾಗಿ ಬಾಯಿಮಾಡೋಳು ಸಿಕ್ಕಿದ್ದಿದ್ದರೆ ಒಂದು ದಿನ ಕೂಡ ನಿಭಾಯಿಸೋಕ್ಕೆ ಆಗ್ತಿರಲಿಲ್ಲ.''

ಸುಜಾನ- ''ಹೌದು, ನಾನೂ ಅದನ್ನೇ ಹೇಳ್ತಿದೀನಿ. ನೀನು ಹಿಂದೆಯೂ ದೇವತೆಯಾಗಿದ್ದೆ. ಈಗಲೂ ದೇವತೆಯಾಗಿದಿ. ನಾನು ರಾಕ್ಷಸನಾಗಿದ್ದವನು ಈಗ ದೈತ್ಯನಾಗಿದೀನಿ. ಮಕ್ಕಳು ಸಂಪಾದಿಸ್ತಾರೆ, ಅವರನ್ನ ಅನ್ನೋಕ್ಕೆ ಆಗೋಲ್ಲ; ನನ್ನನ್ನ ಅಂತಿ. ಈಗ ನನ್ನಿಂದ ಆಗಬೇಕಾದ್ದು ಏನಿದೆ ?''

ಬುಲಾಕಿ- ''ನೀವು ಜಗಳ ತೆಗೀಬೇಕು ಅಂತ ನಿಶ್ಚಯಿಸಿದೀರಿ. ನಾಲ್ಕು ಜನ ನಮ್ಮನ್ನ ನೋಡಿ ನಗೋ ಹಾಗೆ ಆಗದಿರಲಿ ಅಂತ ನಾನು ಜಗಳ ತಪ್ಪಿಸೋಕ್ಕೆ ನೋಡ್ತಿದೀನಿ. ಮರ್ಯಾದೆಯಿಂದ ಎದ್ದು ಬಂದು ಊಟ ಮಾಡಿ; ಇಲ್ಲ ಅಂದರೆ ನಾನೂ ಹೋಗಿ ಮಲಕ್ಕೋತೀನಿ.''

ಸುಜಾನ- ''ನೀನು ಯಾಕೆ ಹಸಿಕೊಂಡು ಮಲಕ್ಕೋಬೇಕು ? ನಿನ್ನ ಮಕ್ಕಳು ದುಡಿದು ತಂದ ಅನ್ನ. ನಾನು ತಾನೇ ಹೊರಗಿನೋನು.''

ಬುಲಾಕಿ- ''ಮಕ್ಕಳು ನಿಮ್ಮವೇ ಅಲ್ಲವೆ ?''

ಸುಜಾನ- ''ಅಲ್ಲ, ನನಗೆ ಇಂಥ ಮಕ್ಕಳು ಸಾಕಾದವು. ಇನ್ಯಾರಿಗೋ ಹುಟ್ಟಿದವರಿರಬೇಕು. ನನ್ನ ಮಕ್ಕಳಾಗಿದ್ದರೆ ಈ ದುರ್ಗತಿ ಬರ್ತಿತ್ತೆ ?''

ಬುಲಾಕಿ- ''ನೀವು ಕೆಟ್ಟ ಮಾತಾಡಿದರೆ ನಾನೂ ಸರಿಯಾಗೇ ಆಡ್ತೀನಿ, ನೋಡಿ. ಗಂಡಸರು ತಿಳಿವಳಿಕಸ್ಥರು ಅಂತ ಜನ ಹೇಳೋದು ಕೇಳಿದ್ದೆ. ನೀವು ಯಾಕೋ ಬಲು ವಿಚಿತ್ರ. ಮನುಷ್ಯ ಸಮಯ ನೋಡಿಕೊಂಡು ಕೆಲಸ ಮಾಡಬೇಕು. ಈಗ ಹೆಸರಿಗೆ ಯಜಮಾನರು ಅನ್ನಿಸಿಕೊಂಡು ಮಕ್ಕಳು ಏನು ಹೇಳ್ತಾರೋ ಅದನ್ನ ಮಾಡಿಕೊಂಡಿರೋದರಲ್ಲಿ ನನ್ನ ನಿಮ್ಮ ಏಳಿಗೆ ಇದೆ. ನನಗೆ ಇದು ಅರ್ಥವಾಗಿದೆ, ನಿಮಗೆ ಯಾಕೆ ಅರ್ಥವಾಗೋಲ್ಲ. ಮನೇಲಿ ಯಾರು ಸಂಪಾದಿಸ್ತಾರೋ ಅವರದ್ದೇ ರಾಜ್ಯಭಾರ - ಇದು ಲೋಕಾರೂಢಿ. ನಾನು ಮಕ್ಕಳನ್ನು ಕೇಳದೆ ಏನನ್ನೂ ಮಾಡೋಲ್ಲ; ನೀವು ಯಾಕೆ ಮನಸ್ಸಿಗೆ ಬಂದಹಾಗೆ ಮಾಡ್ತೀರಿ ? ತುಂಡು ರೊಟ್ಟಿ ತಿಂದು ದೇವರ ಹೆಸರು ಜಪಿಸಿಕೊಂಡು ಯಾಕೆ ಆರಾಮಾಗಿರಬಾರದು ? ಏಳಿ, ಊಟ ಮಾಡಿ ಏಳಿ.''

ಸುಜಾನ- "ಈಗ ನಾನು ಬಾಗಿಲ ನಾಯಿ ಏನು ?"

ಬುಲಾಕಿ- "ಹೇಳೋ ಅಷ್ಟನ್ನ ಹೇಳಿಬಿಟ್ಟದೀನಿ. ಇನ್ನು ನಿಮಗೆ ಬೇಕಾದ ಹಾಗೆ ಮಾಡಿಕೊಳ್ಳಿ."

ಸುಜಾನ ಏಳಲಿಲ್ಲ. ಬುಲಾಕಿ ಸೋತು ಹೊರಟುಹೋದಳು.

ಸುಜಾನನ ಮುಂದೆ ಈಗ ಒಂದು ಹೊಸ ಪ್ರಶ್ನೆ ಎದ್ದಿತ್ತು. ಬಹಳ ದಿನದಿಂದ ಅವನು ಮನೆಯ ಯಜಮಾನನಾಗಿದ್ದ. ಈಗಲೂ ಹಾಗೆಯೇ ಅಂದುಕೊಂಡಿದ್ದ. ಆದರೆ ಪರಿಸ್ಥಿತಿ ಎಷ್ಟೊಂದು ಬದಲಾಗಿತ್ತು. ಅದು ಅವನಿಗೆ ತಿಳಿದೇ ಇರಲಿಲ್ಲ. ಮಕ್ಕಳು ಅವನ ಸೇವೆ ಮಾಡುತ್ತಿದ್ದುದು, ಗೌರವ ತೋರಿಸುತ್ತಿದ್ದುದು ಅವನಲ್ಲಿ ಭ್ರಮೆಯನ್ನುಂಟುಮಾಡಿತ್ತು. ಮಕ್ಕಳು ಅವನ ಮುಂದೆ ಚಿಲುಮೆ ಸೇದುತ್ತಿರಲಿಲ್ಲ; ಮಂಚದ ಮೇಲೆ ಕೂತುಕೊಳ್ಳುತ್ತಿರಲಿಲ್ಲ-ಇವೆಲ್ಲವೂ ತಾನು ಮನೆಯ ಯಜಮಾನನೆಂಬುದಕ್ಕೆ ಪ್ರಮಾಣವಲ್ಲವೆ? ಅದು ಪ್ರಮಾಣವಲ್ಲ. ಕೇವಲ ಭಕ್ತಿಯೆಂದು ಸುಜಾನನಿಗೆ ಇವತ್ತು ಮನವರಿಕೆಯಾಯಿತು. ಈ ಭಕ್ತಿಗೆ ಪ್ರತಿಯಾಗಿ ಅವನು ತನ್ನ ಅಧಿಕಾರ ಬಿಟ್ಟುಕೊಡುವನೆ? ಎಂದಿಗೂ ಇಲ್ಲ. ಇದುವರೆಗೆ ಯಾವ ಮನೆಯಲ್ಲಿ ಅಧಿಕಾರ ಮಾಡಿಕೊಂಡಿದ್ದನೋ ಅದೇ ಮನೆಯಲ್ಲಿ ಪರಾಧೀನನಾಗಿರುವುದು ಸಾಧ್ಯವಿಲ್ಲ. ಅವನಿಗೆ ಭಕ್ತಿ ಬೇಕಾಗಿರಲಿಲ್ಲ; ಅವನು ಭಕ್ತಿಗೆ ಹಸಿದಿರಲಿಲ್ಲ. ಅವನಿಗೆ ಅಧಿಕಾರ ಬೇಕಾಗಿತ್ತು. ಅವನು ಈ ಮನೆಯಲ್ಲಿ ಇನ್ನೊಬ್ಬರ ಅಧಿಕಾರವನ್ನು ನೋಡುತ್ತ ಕೂಡಲಾರ. ಗುಡಿಯ ಪೂಜಾರಿಯಾಗಿ ಇರಲಾರ.

ರಾತ್ರಿ ಇನ್ನು ಎಷ್ಟು ಜಾವ ಉಳಿದಿತ್ತೋ ತಿಳಿಯದು. ಸುಜಾನ ಎದ್ದು ಕುಡುಗೋಲಿನಿಂದ ಎತ್ತುಗಳಿಗೆ ಮೇವು ಕತ್ತರಿಸಲು ಷುರುಮಾಡಿದ. ಇಡೀ ಹಳ್ಳಿಯೇ ಮಲಗಿತ್ತು. ಆದರೆ ಸುಜಾನ ಜೋಳದ ಕಡ್ಡಿ ಕತ್ತರಿಸುತ್ತಿದ್ದ. ಅವನು ಜೀವನದಲ್ಲಿಯೇ ಎಂದೂ ಅಷ್ಟು ಶ್ರಮಪಟ್ಟಿರಲಿಲ್ಲ. ಅವನು ಕೆಲಸ ಮಾಡುವುದನ್ನು ಬಿಟ್ಟಾಗಿನಿಂದ ಮೇವಿಗೆ ಎಂದೂ ತಾಪತ್ರಯವೇ. ಭೋಲನೂ ಮೇವು ಕತ್ತರಿಸುತ್ತಿದ್ದ; ಶಂಕರನೂ ಕತ್ತರಿಸುತ್ತಿದ್ದ. ಆದರೆ ಮೇವು ಸಾಕಾಗುತ್ತಿರಲಿಲ್ಲ. ಮೇವು ಕತ್ತರಿಸುವುದು ಹೇಗೆಂದು ಇವತ್ತು ಈ ಹೈಕಳಿಗೆ ತೋರಿಸಬೇಕು ! ಸುಜಾನನ ಮುಂದೆ ಮೇವಿನ ಗುಡ್ಡವೇ ನಿಂತಿತ್ತು. ಎರಕಕ್ಕೆ ಹಾಕಿದ್ದುದ್ದೇನೋ ಎಂಬಂತೆ ಒಂದೊಂದು ತುಂಡೂ ಒಂದೇ ತರಹ ಸಣ್ಣಗೆ, ಸುಂದರವಾಗಿತ್ತು.

ಇನ್ನೂ ಮಬ್ಬುಗತ್ತಲಾಗಿರುವಾಗಲೇ ಬುಲಾಕಿ ಎದ್ದಳು; ಮೇವಿನ ರಾಶಿಯನ್ನು ನೋಡಿ ದಂಗುಬಡಿದುಹೋದಳು. ಅವಳಂದಳು- "ಏನು, ಭೋಲಾ ಇಡೀ ರಾತ್ರಿ ಮೇವು ಕತ್ತರಿಸ್ತಾ ಇದ್ದನೆ? ಎಷ್ಟು ಸಲ ಹೇಳ್ತೀನಿ, 'ಮಗೂ, ಆರೋಗ್ಯ ನೋಡಿಕೋ, ಆರೋಗ್ಯ ಇದ್ದರೆ ತಾನೇ ಪ್ರಪಂಚ' ಅಂತ. ಆದರೆ ಒಪ್ಪೋಲ್ಲ. ರಾತ್ರಿಯೆಲ್ಲಾ ನಿದ್ರೇನೇ ಮಾಡಿಲ್ಲ."

ಸುಜಾನ ಭಗತ ರಾಗವಾಗಿ ಹೇಳಿದ- "ಪಾಪ, ಅವನು ಎಲ್ಲಿ ಮಲಕ್ಕೋತಾನೆ ? ಯಾವಾಗ ನೋಡಿದರೂ ಕೆಲಸಾನೇ ಮಾಡ್ತಿರ್ತಾನೆ. ಅವನ ಹಾಗೆ ದುಡಿಯೋರು ಪ್ರಪಂಚದಲ್ಲಿ ಬೇರೆ ಯಾರಾದರೂ ಇದಾರೆಯೆ ?"

ಅಷ್ಟರಲ್ಲಿ ಭೋಲಾ ಕಣ್ಣುಜ್ಜಿಕೊಳ್ಳುತ್ತ ಹೊರಬಂದ. ಅವನಿಗೂ ಆ ಮೇವಿನ ರಾಶಿಯನ್ನು ನೋಡಿ ಆಶ್ಚರ್ಯವಾಯಿತು. ತಾಯಿಯನ್ನು ಕೇಳಿದ- "ಏನು, ಶಂಕರ ಇವತ್ತು ನಡುರಾತ್ರಿ ಎದ್ದಿದ್ದನೆ ?"

ಬುಲಾಕಿ- "ಅವನು ಬಿದ್ದುಕೊಂಡು ಮಲಗಿದಾನೆ. ನೀನು ಕತ್ತರಿಸಿದ್ದು ಅಂತ ನಾನು ಅಂದುಕೊಂಡಿದ್ದೆ."

ಭೋಲಾ- "ನನಗಂತೂ ಬೆಳಗ್ಗೆ ಬೇಗ ಏಳೋಕ್ಕೆ ಆಗೋಲ್ಲ. ಇಡೀ ದಿನ ಎಷ್ಟು ಬೇಕಾದರೂ ಕೆಲಸ ಮಾಡ್ತೀನಿ. ರಾತ್ರಿ ಮಲಗಿದ ಮೇಲೆ ಮತ್ತೆ ಏಳೋಕ್ಕಾಗೋಲ್ಲ."

ಬುಲಾಕಿ- "ಹಾಗಾದರೇನು, ನಿಮ್ಮ ತಂದೆ ಕತ್ತರಿಸಿದರೆ ?"

ಭೋಲಾ- "ಹೌದು, ರಾತ್ರಿಯೆಲ್ಲಾ ಮಲಗಲಿಲ್ಲ ಅಂತ ತೋರುತ್ತೆ. ನಾನೂ ನೀನೂ ದೊಡ್ಡ ತಪ್ಪು ಮಾಡಿದೆವು. ಅರೆ, ಅವರು ನೇಗಿಲು ತೊಗೊಂಡು ಹೊರಟಿದಾರೆ. ಏನು ಪ್ರಾಣ ಗೀಣ ಕೊಡಬೇಕು ಅಂತ ಇದಾರೋ ಹೇಗೆ ?"

ಬುಲಾಕಿ- "ಅವರು ಯಾವಾಗಲೂ ಕೋಪಿಷ್ಠರೇ. ಈಗ ಯಾರ ಮಾತನ್ನಾದರೂ ಕೇಳೋದುಂಟೆ ?"

ಭೋಲಾ- "ಶಂಕರನ್ನ ಎಬ್ಬಿಸು. ನಾನೂ ಬೇಗ ಮುಖ ತೊಳಕೊಂಡು ನೇಗಿಲು ತೊಗೊಂಡು ಹೋಗ್ತೀನಿ."

ಭೋಲಾ ನೇಗಿಲು ತೆಗೆದುಕೊಂಡು ಇತರ ರೈತರೊಂದಿಗೆ ಗದ್ದೆ ತಲುಪುವ ಹೊತ್ತಿಗೆ ಸುಜಾನ ಅರ್ಧ ಗದ್ದೆಯನ್ನು ಉತ್ತು ಮುಗಿಸಿದ್ದ. ಭೋಲಾ ಮಾತಿಲ್ಲದೆ ಕೆಲಸಕ್ಕೆ ಆರಂಭಿಸಿದ. ಅವನಿಗೆ ಅಪ್ಪನ ಜೊತೆ ಮಾತಾಡುವ ಸಾಹಸವಾಗಲಿಲ್ಲ.

ಮಧ್ಯಾಹ್ನವಾಯಿತು. ರೈತರೆಲ್ಲರೂ ನೇಗಿಲನ್ನು ಬದಿಗಿಟ್ಟರು. ಆದರೆ ಸುಜಾನ ಭಗತ ಮಾತ್ರ ತನ್ನ ಕೆಲಸದಲ್ಲಿ ಮಗ್ನನಾಗಿದ್ದ. ಭೋಲಾ ಸುಸ್ತಾಗಿದ್ದ. ಹೂಡು ಬಿಚ್ಚಲು ಅವನಿಗೆ ಮತ್ತೆ ಮತ್ತೆ ಮನಸ್ಸಾಗುತ್ತಿತ್ತು. ಆದರೆ ಭಯದಿಂದಾಗಿ ಏನನ್ನು ಹೇಳಲೂ ಬಾಯಿ ಬರುತ್ತಿರಲಿಲ್ಲ. ಅಪ್ಪನಿಗೆ ಇಷ್ಟು ಶ್ರಮಪಡುವುದು ಹೇಗೆ ಸಾಧ್ಯವೆಂದು ಅವನಿಗೆ ಆಶ್ಚರ್ಯವೋ ಆಶ್ಚರ್ಯ.

ಕೊನೆಗೆ ಅಂಜು ಅಂಜುತ್ತಲೇ ಹೇಳಿದ- "ಅಪ್ಪ, ಹೊತ್ತು ನೆತ್ತಿಗೆ ಬಂತು. ಹೂಡು ಬಿಚ್ಚೋಣವೆ ?"

ಸುಜಾನ- "ಹ್ಞೂ, ಬಿಚ್ಚು. ನೀನು ಎತ್ತುಗಳನ್ನು ಹೊಡಕೊಂಡು ಹೋಗು. ನಾನು ಕುಂಟೆ ಹೊಡೆದು ಬರ್ತೀನಿ."

ಭೋಲಾ- "ಬಿಡಿ, ನಾನು ಸಂಜೆ ಬಂದು ಹೊಡೀತೀನಿ."

ಸುಜಾನ- "ನೀನೇನು ಹೊಡೀತಿ ? ಕಾಣೋಲ್ಲವೆ, ಜಮೀನು ಬಟ್ಟಲ ಹಾಗೆ ಹಳ್ಳವಾಗಿದೆ. ಅದಕ್ಕೇ ಹೊಲದ ಮಧ್ಯದಲ್ಲಿ ನೀರು ನಿಲ್ಲೋದು. ಈ ಜಮೀನಿನಲ್ಲಿ ಬೀಜಕ್ಕೆ ಇಪ್ಪತ್ತು ಮಣ ಬೆಳೀತಿತ್ತು. ನೀವುಗಳು ಇದನ್ನ ಹಾಳುಮಾಡಿ ಹಾಕಿದೀರಿ."

ಎತ್ತುಗಳನ್ನು ಬಿಚ್ಚಿದ್ದಾಯಿತು. ಭೋಲಾ ಎತ್ತುಗಳೊಡನೆ ಮನೆಗೆ ಹೊರಟ. ಆದರೆ ಸುಜಾನಿನ್ನೂ ಕುಂಟೆ ಹೊಡೆಯುತ್ತಲೇ ಇದ್ದ. ಅರ್ಧ ಗಂಟೆಯ ನಂತರ ಕುಂಟೆ ಹೊಡೆಯುವುದನ್ನು ಮುಗಿಸಿ ಆರಾಮ ಮಾಡುವ ಬದಲು ಅವನು

ಎತ್ತುಗಳ ಮೈ ನೇವರಿಸತೊಡಗಿದ. ಅವುಗಳ ಬೆನ್ನಿನ ಮೇಲೆ ಕೈಯಾಡಿಸಿದ, ಕಾಲು ಒತ್ತಿದ, ಬಾಲ ನೇವರಿಸಿದ. ಎತ್ತುಗಳು ಬಾಲ ನಿಗರಿಸಿ ನಿಂತವು. ಸುಜಾನನ ಮಡಿಲಿನಲ್ಲಿ ತಲೆಯಿಟ್ಟಾಗ ಅವಕ್ಕೆ ವರ್ಣಿಸಲಾರದಷ್ಟು ಸುಖ ಸಿಗುತ್ತಿತ್ತು. ಎಷ್ಟೋ ದಿನಗಳ ನಂತರ ಇವತ್ತು ಅವಕ್ಕೆ ಆ ಆನಂದ ದೊರೆತಿತ್ತು. ಅವುಗಳ ಕಣ್ಣಿನಲ್ಲಿ ಕೃತಜ್ಞತೆ ತುಂಬಿತ್ತು. ನಿನ್ನ ಜೊತೆಯಾದರೆ ಹಗಲೂ ರಾತ್ರಿ ಕೆಲಸ ಮಾಡಲು ಸಿದ್ಧ ಎಂದು ಅವು ಹೇಳುತ್ತಿವೆಯೋ ಎನ್ನುವಂತಿತ್ತು.

ಇತರ ರೈತರುಗಳಂತೆ ಭೋಲಾ ಇನ್ನೂ ವಿಶ್ರಮಿಸಿಕೊಳ್ಳುತ್ತಿರುವಾಗಲೇ ಸುಜಾನ ಮತ್ತೆ ನೇಗಿಲೆತ್ತಿಕೊಂಡು ಗದ್ದೆಯ ಕಡೆ ಹೊರಟ. ಎತ್ತುಗಳೆರಡೂ ಗದ್ದೆ ತಲಪಲು ಸ್ವತಃ ಅವಕ್ಕೇ ಅವಸರವೇನೋ ಎಂಬಂತೆ ಉಲ್ಲಾಸ ತುಂಬಿ ಓಡುತ್ತಿದ್ದವು.

ಗುಡಿಸಲಲ್ಲಿ ಮಲಗಿದ್ದ ಭೋಲಾ ಅಪ್ಪ ನೇಗಿಲು ಹಿಡಿದು ಹೊರಟಿದುದನ್ನು ಕಂಡ. ಆದರೆ ಅವನಿಗೆ ಏಳುವುದಾಗಲಿಲ್ಲ. ಅವನ ಧೈರ್ಯ ಕುಂದಿತು. ಅವನೆಂದೂ ಇಷ್ಟು ಶ್ರಮಪಟ್ಟವನಲ್ಲ. ಕಟ್ಟಿ ಬೆಳಸಿದ ಸಂಸಾರ ಅವನ ಕೈಗೆ ಬಂದಿತ್ತು. ಅದನ್ನು ಇದ್ದದ್ದು ಇದ್ದಂತೆಯೇ ನಡೆಸುತ್ತಿದ್ದ. ಇಷ್ಟೆಲ್ಲಾ ಬೆಲೆ ತೆತ್ತು ಅವನು ಮನೆಯ ಯಜಮಾನನಾಗಲು ಇಷ್ಟಪಡುತ್ತಿರಲಿಲ್ಲ. ಯೌವನದಲ್ಲಿರುವವರಿಗೆ ಹತ್ತಾರು ಹವ್ಯಾಸ. ಅವರಿಗೆ ನಗಾಡಲು ಸಮಯ ಬೇಕು. ಹಾಡು-ಭಜನೆಗಳಿಗೆ ಸಮಯ ಬೇಕು. ಪಕ್ಕದ ಹಳ್ಳಿಯಲ್ಲಿ ಕುಸ್ತಿ ನಡೆದಾಗ ಈ ಹಳ್ಳಿಯ ಯುವಕರು ಹೋಗದಿರುವುದು ಹೇಗೆ ಸಾಧ್ಯ ? ಯಾವದೋ ಹಳ್ಳಿಯಿಂದ ದಿಬ್ಬಣ ಬಂದಿದೆ, ಹಾಡು-ಕುಣಿತ ನಡೆಯುತ್ತಿದೆ. ಯುವಕರು ಅದರಲ್ಲಿ ಭಾಗಿಗಳಾಗುವ ಸಂತೋಷವನ್ನು ಕಳೆದುಕೊಂಡಾರೆ ? ಮುದುಕರಿಗೆಂದರೆ ಈ ಅಡ್ಡಿ ಆತಂಕಗಳಿಲ್ಲ. ಅವರಿಗೂ ಹಾಡು-ಕುಣಿತಕ್ಕೂ ಸಂಬಂಧವಿಲ್ಲ; ಆಟ ತಮಾಷೆಗಳ ಬಯಕೆ ಇಲ್ಲ. ಅವರಿಗೆ ತಾವಾಯಿತು. ತಮ್ಮ ಕೆಲಸವಾಯಿತು.

ಬುಲಾಕಿ ಹೇಳಿದಳು- "ಭೋಲಾ, ನಿಮ್ಮಪ್ಪ ಮತ್ತೆ ನೇಗಿಲು ತೊಗೊಂಡು ಹೊರಟರು."

ಭೋಲಾ- "ಹೋಗಲಿ ಬಿಡಮ್ಮ. ನನ್ನಿಂದಂತೂ ಸಾಧ್ಯವಿಲ್ಲ."

## 4

ಸುಜಾನ ಭಗತನ ಈ ಹೊಸ ಉತ್ಸಾಹವನ್ನು ಕುರಿತು ಹಳ್ಳಿಯಲ್ಲಿ ಟೀಕೆ ಟಿಪ್ಪಣಿಗಳಾದವು: ಇವನ ಭಗತತನವೆಲ್ಲಾ ಹೋದ ಹಾಗೆ ಆಯ್ತಲ್ಲ. ನಟನೆ ಮಾಡ್ತಿದ್ದ, ಮಾಯೆಯಲ್ಲಿ ಸಿಕ್ಕಿಬಿದ್ದಿದ್ದ. ಮನುಷ್ಯನೇ ಅವನು, ಭೂತ !

ಆದರೆ ಭಗತನ ಮನೆಬಾಗಿಲಿನಲ್ಲಿ ಈಗ ಮತ್ತೆ ಸಾಧುಸಂತರು ಕೂತಿರುವುದು ಕಾಣುತ್ತದೆ. ಅವರ ಆದರ ಸನ್ಮಾನಗಳಾಗುತ್ತವೆ. ಈ ಸಲ ಅವನ ಗದ್ದೆಯಲ್ಲಿ ಚಿನ್ನ ಬೆಳೆಯಿತು. ಉಗ್ರಾಣದಲ್ಲಿ ಕಾಳು ತುಂಬಲು ಜಾಗವಿಲ್ಲ. ಕಷ್ಟದಿಂದ ಐದು ಮಣ

ಬೆಳೆಯುತ್ತಿದ್ದ ಗದ್ದೆಯಲ್ಲಿ ಈ ಸಲ ಹತ್ತು ಮಣ ಬೆಳೆ ಬಂದಿದೆ.

ಚೈತ್ರ ಮಾಸ. ಕಣಕಣಗಳಲ್ಲಿ ಸತ್ಯಯುಗದ ರಾಜ್ಯಭಾರ ನಡೆದಿತ್ತು. ಎಲ್ಲೆಲ್ಲೂ ಧಾನ್ಯದ ರಾಶಿ ಎದ್ದುಕಾಣುತ್ತಿದೆ. ರೈತರಿಗೂ ಒಂದು ಸ್ವಲ್ಪ ಹೊತ್ತು ತಮ್ಮ ಬದುಕು ಸಫಲವಾಯಿತೆಂದು ಅನ್ನಿಸುವುದು, ಅವರ ಹೃದಯ ಹೆಮ್ಮೆಯಿಂದ ಕುಣಿದಾಡುವುದು ಈಗಲೇ. ಸುಜಾನ ಭಗತ ಧಾನ್ಯವನ್ನು ಕುಕ್ಕೆಯಲ್ಲಿ ತುಂಬಿ ಕೊಡುತ್ತಿದ್ದ. ಮಕ್ಕಳಿಬ್ಬರೂ ಅದನ್ನು ತೆಗೆದುಕೊಂಡುಹೋಗಿ ಸುರಿದುಬರುತ್ತಿದ್ದರು. ಅದೆಷ್ಟು ಜನ ಭಿಕ್ಷುಕರೂ ಹೊಗಳುಭಟ್ಟರೂ ಭಗತನನ್ನು ಮುತ್ತಿದ್ದರು. ಅವರ ನಡುವೆ ಈಗ್ಗೆ ಎಂಟು ತಿಂಗಳ ಹಿಂದೆ ಅವನ ಮನೆಬಾಗಿಲಿನಿಂದ ನಿರಾಶನಾಗಿ ಹಿಂದಿರುಗಿಹೋಗಿದ್ದ ಆ ಭಿಕ್ಷುಕನೂ ಇದ್ದ.

ಇದ್ದಕ್ಕಿದ್ದಂತೆ ಭಗತ ಭಿಕ್ಷುಕನನ್ನು ಕೇಳಿದ- "ಏನಪ್ಪ, ಇವತ್ತು ಎಲ್ಲೆಲ್ಲಿ ಸುತ್ತು ಹಾಕಿ ಬಂದೆ ?"

ಭಿಕ್ಷುಕ- "ಇವತ್ತಿನ್ನೂ ಎಲ್ಲೂ ಹೋಗಿಲ್ಲ, ಭಗತ್‌ಜೀ. ನಿಮ್ಮದೇ ಬೋಣಿ."

ಭಗತ- "ಒಳ್ಳೇದು ನಿನ್ನ ಮುಂದೆ ಈ ರಾಶಿ ಇದೆ. ಎಷ್ಟು ಹೊತ್ತುಕೊಂಡು ಹೋಗೋಕ್ಕೆ ಆಗುತ್ತೋ ಅಷ್ಟು ತೊಗೊಂಡು ಹೋಗು."

ಆಸೆಯಿಂದ ರಾಶಿಯ ಕಡೆ ನೋಡುತ್ತ ಭಿಕ್ಷುಕ ಹೇಳಿದ- "ಕೈಯೆತ್ತಿ ನೀವು ಎಷ್ಟು ಕೊಟ್ಟರೆ ಅಷ್ಟು ತೊಗೊಂಡು ಹೋಗ್ತೀನಿ."

ಭಗತ- "ಇಲ್ಲ, ಇಲ್ಲ. ನೀನು ಎಷ್ಟು ತೊಗೊಂಡು ಹೋಗಬಲ್ಲೆಯೋ ಅಷ್ಟು ತೊಗೊ."

ಭಿಕ್ಷುಕನ ಹತ್ತಿರ ಒಂದು ಹಚ್ಚಡವಿತ್ತು. "ಅವನು ಸುಮಾರು ಹತ್ತು ಸೇರಿನಷ್ಟು ಧಾನ್ಯವನ್ನು ಅದರಲ್ಲಿ ತುಂಬಿ ಎತ್ತಲು ಹೋದ. ಸಂಕೋಚದಿಂದಾಗಿ ಇನ್ನೂ ಹೆಚ್ಚು ತುಂಬಿಕೊಳ್ಳಲು ಅವನಿಗೆ ಧೈರ್ಯವಾಗಲಿಲ್ಲ.

ಭಗತ ಅವನ ಮನಸ್ಸಿನ ಭಾವನೆಯನ್ನು ಅರ್ಥಮಾಡಿಕೊಂಡು ಆಶ್ವಾಸನೆ ನೀಡುತ್ತ ಹೇಳಿದ- "ಇಷ್ಟೆಯೇ ? ಇಷ್ಟನ್ನ ಒಬ್ಬ ಹುಡುಗ ಎತ್ತಿಕೊಂಡು ಹೋಗಬಲ್ಲ."

ಭಿಕ್ಷುಕ ಭೋಲನ ಕಡೆ ಅನುಮಾನದಿಂದ ನೋಡುತ್ತ ಹೇಳಿದ- "ಇಷ್ಟಾದರೆ ನನಗೆ ಬೇಕಾದಷ್ಟು."

ಭಗತ- "ಇಲ್ಲ. ನೀನು ಸಂಕೋಚಪಡ್ತಾ ಇದ್ದಿ. ಇನ್ನೂ ತುಂಬಿಕೊ."

ಭಿಕ್ಷುಕ ಇನ್ನೊಂದು ಪಂಚೇರಿನಷ್ಟು ಧಾನ್ಯ ತುಂಬಿಕೊಂಡು ಮತ್ತೆ ಭೋಲನ ಕಡೆ ಶಂಕೆಯಿಂದ ನೋಡತೊಡಗಿದ.

ಭಗತ- "ಅವನ ಕಡೆ ಏನು ನೋಡ್ತಿ. ನಾನು ಹೇಳಿದ್ದಾಗೆ ಮಾಡು. ನಿನ್ನ ಕೈಲಿ ಎಷ್ಟು ಹೊರೋಕ್ಕಾಗುತ್ತೋ ಅಷ್ಟು ತೊಗೊ."

ಧಾನ್ಯ ತುಂಬಿಕೊಂಡಾದ ಮೇಲೆ ಭೋಲಾ ಗಂಟನ್ನು ಹೊತ್ತುಕೊಂಡು ಹೋಗಲು ಬಿಡದೆ ಇದ್ದರೆ ಎಷ್ಟು ಕೆಟ್ಟನಿಸುತ್ತದೆಂದು ಭಿಕ್ಷುಕ ಅಂಜಿದ. ಉಳಿದ ಭಿಕ್ಷುಕರಿಗೆ ತನ್ನನ್ನು ಹಾಸ್ಯ ಮಾಡಲು ಅವಕಾಶವಾಗುತ್ತದೆ. ಇವನಿಗೆ ಎಷ್ಟು ದುರಾ-

ಎಂದು ಎಲ್ಲರೂ ಆಡಿಕೊಳ್ಳುತ್ತಾರೆ. ಭಿಕ್ಷುಕನಿಗೆ ಇನ್ನೂ ಹೆಚ್ಚು ಧಾನ್ಯ ತುಂಬಿಕೊಳ್ಳಲು ಧೈರ್ಯವಾಗಲಿಲ್ಲ.

ಆಗ ಸುಜಾನ ಎದ್ದು ಬಂದು ಹಚ್ಚಡ ಹಿಡಿಯುವಷ್ಟು ಧಾನ್ಯ ತುಂಬಿ ಗಂಟು ಹಾಕಿದ- "ಇದನ್ನ ಎತ್ತಿಕೊಂಡು ಹೋಗು."

"ಸ್ವಾಮಿ. ನನ್ನ ಕೈಯಲ್ಲಿ ಇಷ್ಟು ಹೊರೋಕ್ಕಾಗೋಲ್ಲ."

"ಅರೆ, ಇಷ್ಟನ್ನ ಹೊರೋಕ್ಕಾಗೋಲ್ಲವೆ? ಹೆಚ್ಚೆಂದರೆ ಒಂದು ಮಣ ಇದ್ದೀತು. ಸ್ವಲ್ಪ ಬಲ ಬಿಟ್ಟು ಎತ್ತು, ನೋಡೋಣ. ಆಗುತ್ತೆಯೋ ಇಲ್ಲವೋ."

ಭಿಕ್ಷುಕ ಗಂಟನ್ನು ಅಜಮಾಯಿಷಿಮಾಡಿ ನೋಡಿದ. ಭಾರವಾಗಿತ್ತು. ಅದನ್ನು ಇದ್ದಲ್ಲಿಂದ ಸರಿಸುವುದೂ ಕಷ್ಟವಾಗಿತ್ತು- "ಭಗತ್‌ಜೀ, ಇದನ್ನ ನನ್ನ ಕೈಲಿ ಎತ್ತೋಕ್ಕಾಗೋಲ್ಲ."

ಭಗತ- "ಒಳ್ಳೇದು, ನಿನ್ನದು ಯಾವ ಹಳ್ಳಿ?"

ಭಿಕ್ಷುಕ- "ಇಲ್ಲಿಗೆ ತುಂಬ ದೂರ ಭಗತ್‌ಜೀ. ಅಮೋಲಾ ಅಂತ ಹೆಸರು ಕೇಳಿರಬಹುದು."

ಭಗತ್- "ಒಳ್ಳೇದು, ನೀನು ಮುಂದೆ ಮುಂದೆ ನಡಿ. ನಾನು ತಂದು ತಲಪಸ್ತೀನಿ."

ಹೀಗಂದು ಸುಜಾನ ಜೋರಾಗಿ ಬಲಬಿಟ್ಟು ಗಂಟನ್ನು ಎತ್ತಿದ, ತಲೆಯ ಮೇಲಿಟ್ಟು ಕೊಂಡು ಭಿಕ್ಷುಕನ ಹಿಂದೆ ನಡೆದ. ಅಲ್ಲಿದ್ದವರು ಭಗತನ ಶಕ್ತಿಯನ್ನು ಕಂಡು ಚಕಿತರಾದರು. ಈಗ ಭಗತ ಯಾವ ಅಮಲಿನಲ್ಲಿದ್ದನೆಂದು ಅವರೇನು ಬಲ್ಲರು? ಎಂಟು ತಿಂಗಳಕಾಲ ಎಡೆಬಿಡದೆ ಶ್ರಮಪಟ್ಟಿದುದಕ್ಕೆ ಇವತ್ತು ಫಲ ಸಿಕ್ಕಿತ್ತು. ಅವನು ಕಳೆದು ಹೋಗಿದ್ದ ಅಧಿಕಾರವನ್ನು ಮತ್ತೆ ಪಡೆದಿದ್ದ. ಬಾಳೆಗಿಡವನ್ನು ಸಹ ಕತ್ತರಿಸಲಾಗದ ಕತ್ತಿ ಸಾಣೆ ಹಿಡಿದರೆ ಲೋಹವನ್ನೂ ಕತ್ತರಿಸಬಲ್ಲದು. ಮನುಷ್ಯನ ಜೀವನದಲ್ಲಿ ಛಲ ಬಹಳ ಮಹತ್ವದ ವಸ್ತು. ಛಲವಿದ್ದವನು ಮುದುಕನಾದರೂ ಯುವಕನೇ. ಛಲವಿಲ್ಲದವನು ಯುವಕನಾದರೂ ಸತ್ತಕೂಟವೇ! ಸುಜಾನ ಭಗತನಲ್ಲಿ ಛಲವಿತ್ತು. ಅದು ಅವನಿಗೆ ಅಮಾನುಷ ಶಕ್ತಿ ಕೊಟ್ಟಿತ್ತು. ಹೋಗುವಾಗ ಸುಜಾನ ಭಗತ ಭೋಲನ ಕಡೆ ಗರ್ವದಿಂದ ನೋಡುತ್ತ ಹೇಳಿದ- "ಈ ಭಿಕ್ಷುಕರಲ್ಲಿ ಯಾರೂ ಬರಿಗೈಯಲ್ಲಿ ಹೋಗೋಕ್ಕೆ ಬಿಡಬೇಡ."

ಭೋಲಾ ತಲೆ ತಗ್ಗಿಸಿಕೊಂಡು ನಿಂತಿದ್ದ. ಅವನಿಗೆ ಏನನ್ನೂ ಹೇಳುವ ಸಾಹಸವಾಗಲಿಲ್ಲ. ಮುದಿ ತಂದೆ ಅವನನ್ನು ಸೋಲಿಸಿಬಿಟ್ಟಿದ್ದ.

●

